# ಶಿಶುವೈದ್ಯ ಸಂಜೀವನೀ.

ಚರಕ, ಸುಶ್ರುತಾದಿ ಸಂಹಿತೆಗಳ ಆಧಾರದಿಂದ
ತರೀಕೆರೆ ರಾ. ಸೂ. ವೆಂಕಟಕೃಷ್ಣಯ್ಯನವರಿಂದ
ರಚಿಸಲ್ಪಟ್ಟು

ಇದರ ವಿಶಿಷ್ಟ ಹಕ್ಕನ್ನೂ ಪಡೆದಿರುವ
ಬಿ. ಆರ್. ಗೋವಿಂದರಾಜುಲು
ನಾಯುಡುಯವರು ಮತ್ತು
ಬೆಂಗಳೂರು ಸಿಟಿ—ಚಿಕ್ಕಪೇಟೆ
ಕಳಾನಿಧಿ ಬುಕ್‌ಡಿಪೊ ಪ್ರೊಪ್ರೈಟರ್
ಟಿ. ಕೆ. ಕೃಷ್ಣಸ್ವಾಮಿಶೆಟ್ಟರವರು,
ಈ ಇಬ್ಬರಿಂದಲೂ
ಕಳಾನಿಧಿ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಿ
ಪ್ರಕಟಿಸಲ್ಪಟ್ಟಿತು.

ಬೆಂಗಳೂರು ಸಿಟಿ.
ಪ್ರಥಮ ಮುದ್ರಣ ೧,೦೦೦ ಪ್ರತಿಗಳು.

1924.

ಕ್ರಯ ೨—೮—೦.] [ಟಪಾಲ್‌ಹಾಸಲು ಬೇರೆ.

# ಮುನ್ನುಡಿ.

ಈ ಪುಸ್ತಕದಂತಹ ಪ್ರಜಾಹಿತಕಾರಿಯಾದ ಪುಸ್ತಕಗಳು ಕನ್ನಡದಲ್ಲಿ ವಿರಳವಾಗಿವೆ. ಜಗತ್ತಿನಲ್ಲಿ ಮನುಷ್ಯಾವತಾರವಾಗಬೇಕಾದರೆ ಯಾವ ಯಾವ ಅನುಕೂಲತೆಗಳು ಬೇಕೆಂಬುದನ್ನು ಈ ಪುಸ್ತಕದಲ್ಲಿ—ಚರಕ, ಸುಶ್ರುತ, ವಾಗ್ಭಟ, ಭಾವಪ್ರಕಾಶ ಮೊದಲಾದ ವೈದ್ಯಸಂಹಿತೆಗಳ ಆಧಾರದಿಂದಲೂ; ಮನುಸ್ಮೃತಿ, ಚಾಣಿಕ್ಯನೀತಿ ಮುಂತಾದ ಗ್ರಂಥಗಳಿಂದಲೂ ಆಬಾಲವೃದ್ಧರೂ, ಸ್ತ್ರೀಯರು ಸಹ ತಿಳಿಯುವಷ್ಟು ಲಲಿತವಾದ ಭಾಷೆಯಲ್ಲಿ, ಶಾಸ್ತ್ರಪಙ್ಕ್ತಿಗಳೊಡನೆ ವಿವರಿಸಲ್ಪಟ್ಟಿರುವದರಿಂದ ಇದು ಸಾಮಾನ್ಯ ಗ್ರಂಥವಲ್ಲ !

ಮಾನವನಿಗೆ ವೀರ್ಯರಕ್ಷಣೆಯೇ ಮುಖ್ಯವಾದ ಕರ್ತವ್ಯವು. ಇದನ್ನು ಬಲ್ಲ ನಮ್ಮ ಪೂರ್ವಜರು ತಮ್ಮ ಶುದ್ಧಾಚರಣೆಯಿಂದ ಸಕಲ ದಿಗ್ದೇಶಗಳಲ್ಲಿಯೂ ಪ್ರಸಿದ್ಧರಾಗಿ, ಅಜರರಾಗಿಯೂ, ಅಪಾರ ಪರಾಕ್ರಮಶಾಲಿಗಳಾಗಿಯೂ ಇರುತ್ತಿದ್ದರು. ಈಗ ಬಹು ಕಾಲದಿಂದ ಜನರು ವೀರ್ಯರಕ್ಷಣಾಧರ್ಮವಾದ ಬ್ರಹ್ಮಚರ್ಯಾಶ್ರಮದ ನಿಯಮಪಾಲನೆಯಿಂದ ವಿಮುಖರಾಗಿ—ಅತ್ಯಲ್ಪ ವಯಸ್ಸಿನಲ್ಲಿಯೇ ಕುಕರ್ಮರತರಾಗುತ್ತಾ, ದುಷ್ಟರತಿ, ಅಸಹಜವ್ಯಾಪಾರ ಮುಂತಾದ್ದರಿಂದ ತಮ್ಮ ವೀರ್ಯದ ಖಜಾನೆಗೆ ಬೆಂಕಿಯನ್ನು ಹತ್ತಿಸಿಕ್ಕೊಳ್ಳುತ್ತಾ—ವೀರ್ಯವಾಹಿನೀ ನರಗಳಲ್ಲಿಯೂ, ಅಂಗಗಳಲ್ಲಿಯೂ ಪಾಟವವಿಲ್ಲದವರಾಗಿ, ತೇಜಸ್ಸು, ಕಾಮಸಂಪತ್ತು, ವೀರ್ಯಸಂಪತ್ತು ಇವುಗಳಿಲ್ಲದೆ—ಸ್ವಪ್ನಸ್ಖಲನೆ, ಲಘುಸ್ಖಲನೆ, ನಪುಂಸಕತ್ವ ಮುಂತಾದ ಕ್ಷಯಧರ್ಮಗಳನ್ನುಳ್ಳವರಾಗಿದ್ದಾರೆ.

ಇತ್ಯಾದಿ ನಮ್ಮ ದೇಶದ ಈಗಿನ ಸ್ಥಿತಿಯನ್ನವಲೋಕಿಸಿದರೆ—ಮಾಲೇಂದ್ರಿಯ ರೋಗರಹಿತರಾದ ಕುಟುಂಬಿನಿಯರೂ, ತಮ್ಮ ಅರ್ಧಾಂಗಿನಿಯರನ್ನು ರೋಗಿಷ್ಟರನ್ನಾಗಿ ಮಾಡದಿರುವ ಪುರುಷರೂ ಅಪರೂಪವಾಗಿರುವರೆಂದು ಧಾರಾಳವಾಗಿ ಹೇಳಬಹುದು.

ನಮ್ಮ ದೇಶದ ಜನನಮರಣ ಲೆಖ್ಖವನ್ನು ನೋಡಿರಿ:—ಈ ದಕ್ಷಿಣ ಇಂಡಿಯಾದಲ್ಲಿ ಮರಣಪಡುವಷ್ಟು ಎಳೇ ಶಿಶುಗಳು ಮತ್ಯಾವ ರಾಜ್ಯಗಳ

ರಾರು ರೂಪಾಯಿಗಳನ್ನು ಕಷ್ಟವಿಲ್ಲದೆ ಉಪಾಯವಾಗಿ ಸಂಪಾದಿಸಿಕೊಂಡು ಆನಂದದಿಂದ ಇರುತ್ತಾ--ಇನ್ನುಮುಂದೆ ಇದೇ ವೈದ್ಯಪ್ರಕರಣದಲ್ಲಿ ನಾವು ಪ್ರಕಟಿಸುವ ಪುಸ್ತಕಗಳನ್ನು ತರಿಸಿಕೊಂಡು, ತಮ್ಮ ವೈದ್ಯ ಜೀವನೋಪಾಯವನ್ನು ಮತ್ತೂಮತ್ತೂ ದೃಢಪಡಿಸಿಕೊಳ್ಳಿರೆಂಬದರಲ್ಲಿ ಅಡ್ಡಿಯಿಲ್ಲ.

ಅಂತಹ ವೈದ್ಯರಾಗುವ ಮಹನೀಯರಿಗೆ ವೈದ್ಯವೃತ್ತಿಯಲ್ಲಿ ಮಹದುಪಕಾರವಾಗುವಂತೆ ರಸ ಲೋಹಾದಿ ದುಷ್ಟಪದಾರ್ಥಗಳನ್ನು (ಬೇರೇ ಯಾವ ಗುರುಗಳ ಸಹಾಯವೇ ಇಲ್ಲದೆ, ತಮ್ಮಷ್ಟಕ್ಕೆತಾವೇ) ಶುದ್ಧಿಮಾಡಿಕೊಳ್ಳುವ ವಿಧಾನಗಳನ್ನೂ, ಹಾಗೆಯೇ ರಸ-ಉಪರಸ, ಲೋಹ-ಉಪಲೋಹ ಮುಂತಾದ ಸಮಸ್ತ ವೈದ್ಯಕೀಯ ಧಾತುಪದಾರ್ಥಗಳನ್ನೂ ಭಸ್ಮಮಾಡುವ, ಸಿಂಧೂರಮಾಡುವ ವಿಧಾನವೂ, ಅವುಗಳನ್ನು ರೋಗಗಳಮೇಲೆ ಪ್ರಯೋಗಮಾಡುವ ವಿಶೇಷ ವಿಧಿಗಳೂ, ಅವುಗಳಿಗಾಗಿ ಮಾಡಿಸುವ ಪಥ್ಯಕ್ರಮಗಳೂ ಇದರಡಿಯಲ್ಲಿ ಬಹು ಲಲಿತವಾಗಿ (ಗುರುವೇ ಇಲ್ಲದೆ ತಮ್ಮಷ್ಟಕ್ಕೆತಾವೇ ತಿಳಿದುಕೊಳ್ಳುವಂತೆ) ವಿವರಿಸಿರುತ್ತೇವೆ. ಈ ಪುಸ್ತಕವೊಂದು ನಮ್ಮ ದೇಶೀಯರ ಪ್ರತಿಯೊಂದು ಮನೇಲಿರುವದರಿಂದ ಒಬ್ಬ ವೈದ್ಯನೇ ಇದ್ದಂತಾಗುತ್ತದೆ. ಇದರಲ್ಲಿ ತಿಳಿಸುವ ಪ್ರತಿಯೊಂದು ಔಷಧವನ್ನೂ, ಪ್ರತಿಯೊಬ್ಬ ಗಂಡಸಾಗಲೀ, ಹೆಂಗಸಾಗಲೀ, ಕೊನೆಗೆ ಬುದ್ಧಿಬಲ್ಲ ಹುಡುಗನಾಗಲೀ ತಯಾರ್ಮಾಡಿ ರೋಗದಮೇಲೆ ಉಪಯೋಗಿಸಬಹುದಾಗಿರುವದರಿಂದ ಇದನ್ನು ಸರ್ವರೂ ಕೊಂಡುಕೊಳ್ಳಲೇಬೇಕು. ನಾವು ಸ್ವಲ್ಪ ಪ್ರತಿಗಳನ್ನು ಛಾಪಿಸಿದ್ದೇವೆ. ತೀರಿಹೋದನಂತರ ಪುನಃ ದೊರಿಯಲಾರದಾದ್ದರಿಂದ ಮೊದಲೇ ಕೊಂಡಿಟ್ಟುಕೊಳ್ಳುವದು ಪರಮಾವಶ್ಯಕವು. ಆದಕ್ಕಾಗಿ ಈ ನಮ್ಮ "ಶಿಶುವೈದ್ಯ ಸಂಜೀ

ವನೀ " ಪುಸ್ತಕವನ್ನು ಕೊಂಡುಕ್ಕೊಂಡು ಅದನ್ನು ಸವ್ಯಾಗ್ವಿಚಾರ ಮಾಡುವದರಿಂದ ಆಯುರ್ವೇದ (ವೈದ್ಯಶಾಸ್ತ್ರ) ದ ಎಷ್ಟೋ ಭಾಗಗಳು ಅವರಿಗೆ ಮುಂದಟ್ಟಾಗಿ ಅವರು ವೈದ್ಯರೇ ಆಗುತ್ತಾರೆಂಬದರಲ್ಲಿ ಏನೇನೂ ಸಂದೇಹವಿಲ್ಲ.

ಈ ಪುಸ್ತಕದಲ್ಲಿ ಅಲ್ಲಲ್ಲಿ ಉಪಯೋಗಿಸಿರುವ ಪದಾರ್ಥಗಳ ಶುದ್ಧೀಕರಣವೆಲ್ಲ ಇದರಡಿ ಒಂದೇಕಡೆ ಬರಿಯಲ್ಪಟ್ಟಿದೆ. ಅದರಂತೆ ಶುದ್ಧಿಮಾಡಿಕ್ಕೊಂಡೇ ಔಷಧಗಳಲ್ಲಿ ಉಪಯೋಗಿಸಬೇಕೆಂಬುದನ್ನು ನೆನಪಿನಲ್ಲಿಟ್ಟುಕ್ಕೊಳ್ಳಬೇಕು.

☞ ಈ ಪುಸ್ತಕವನ್ನು ಕೊಂಡುಕೊಂಡವರು ಇದರಲ್ಲಿ ಬರದಿರುವ ಔಷಧಗಳನ್ನು ತಯಾರ್ಮಾಡುವದಕ್ಕೆ ಯತ್ನಿಸಿ ಮತ್ತೇನಾದರೂ ತಿಳಿಯಬೇಕಾದ ವಿಷಯಗಳಿದ್ದಲ್ಲಿ ನಮ್ಮ ವಿಳಾಸಕ್ಕೆ ಬರದುಕೊಂಡಲ್ಲಿ ಅವರಿಗೆ ವೈದ್ಯಕ್ರಮದ ಯಾವ ವಿಷಯಕ್ಕಾದರೂ ಮಾಹಿತಿಯನ್ನು ನಾವು ಬೇರೇವಿಧವಾದ ರುಸುಂ ಇಲ್ಲದೆ ಬರದು ಕಳುಹಿಸುವೆವು. ಅಂತವರು ನಮ್ಮ ಜವಾಬು ಪತ್ರದ ಪೋಸ್ಟೇಜ್ ಮುಂತಾದ್ದಕ್ಕಾಗಿ ೨ ಆಣೆಗಳನ್ನು ಕಳುಹಿಸಿಕೊಡಬೇಕು. ಹಾಗೆ ಕಳುಹಿಸದೆ ಇದ್ದವರಿಗೆ ನಾವು ಉತ್ತರವನ್ನು ಬರಿಯುವದಕ್ಕಾಗುವದಿಲ್ಲ.

ನಮ್ಮ ವಿಳಾಸ:—

ಬಿ. ಆರ್. ಗೋವಿಂದರಾಜುಲು ನಾಯುಡು,

ಆಂಗ್ಲೋ ಭಾರತೀ ವೈದ್ಯಶಾಲಾ,

೪೯೧, ಹಲಸೂರುಪೇಟೆ, ಬೆಂಗಳೂರು ಸಿಟಿ.

## ಧಾತು ಲೋಹಾದಿಗಳ

# ಭಸ್ಮಸಿಂಧೂರ ಕ್ರಮ.

### ಭಂಗಾರದ ಭಸ್ಮ.

೭-೮ ಬಣ್ಣದ ಬಂಗಾರವನ್ನು ತೆಳವು ರೇಕುಗಳಾಗಿ ಹೊಡಿಸಿ, ಕೆಂಪು ಮುಳ್ಳುಹರವೆ ಸಮೂಲವನ್ನು ಕವಚವಿಕ್ಕಿ ಚೇಲುಮಾಡಿ ೧೦ ಬೆರಣಿಯಲ್ಲಿ ಪುಟವಿಕ್ಕಿ ಇಂಗ್ಲಿಷ್ ಬಿಳೀಖಲ್ವದಲ್ಲಿ ಅರದು ಶೀಸೆಯಲ್ಲಿ ತುಂಬಿಟ್ಟುಕೊಳ್ಳುವದು. ತುಪ್ಪದ ಅನುಪಾನದಲ್ಲಿ ಹಂಚೀಕಡ್ಡಿಯ ಮೊನೆಯಲ್ಲಿ ಹಾಕಿ ಸಕ್ಕರೆ ಬೆರಸಿ ಕೊಡಲು ಬಾವು, ವಾಯುವಿಕಾರ, ಮೇಹ, ಮೇಹಶೂಲೆ ಹರವಾಗುವದು. ಧಾತುಪುಷ್ಟಿ. ಒಂದು ವರಹಾ ಚಿನ್ನಕ್ಕೆ ದೊಡ್ಡ ನಿಂಬೇಕಾಯಷ್ಟು ಕವಚವಿರಬೇಕು. ಈ ಲೆಖ್ಖ ನೋಡಿಕೊಂಡು ತಕ್ಕಷ್ಟು ಕವಚ ಕೊಡುವದು. ಇದು ಕ್ಷಯಾದಿ ಸಕಲ ಜಾಡ್ಯಗಳನ್ನೂ ಅನುಪಾನವಿಶೇಷದಿಂದ ನಿವೃತ್ತಿ ಮಾಡುತ್ತದೆ. ತುಪ್ಪದಲ್ಲಿ ಕಲಿಸಿ ಕಲ್ಲುಸಕ್ಕರೆವೆರಸಿಕೊಡಲು ಮಹಾ ಮೇಹರೋಗಗಳು, ಪ್ರಮೇಹಗಳು ನಿವಾರಣೆಯಾಗುವವು. ಜೇನಿನಲ್ಲಿ ಕಲಿಸಿ ಸೇವಿಸಿದರೆ ವಾತಜ್ವರ, ವಾಯುನೋತ, ೮೦ ಬಗೆ ವಾಯುಗಳು, ವಾತರಕ್ತ ಸಹ ನಿವೃತ್ತಿಯಾಗುವದು.

### ಮತ್ತೊಂದು ವಿಧ.

ಶುದ್ಧಿಮಾಡಿದ ಬಂಗಾರದರೇಕು ೧ ವರಹಾತೂಕ, ಕೋಳಿಮುಟ್ಟೆಯ ಶಿಪ್ಪೆ ೨ ವರಹತೂಕ, ಇವೆರಡನ್ನೂ ಕುರಟಿಗೆಸೊಪ್ಪಿನರಸದಲ್ಲಿ ಅರದು ಮೂಶೆಯಲ್ಲಿಟ್ಟು ಚೇಲುಮಾಡಿ, ಒಂದು ಮಡಿಕೆಯಲ್ಲಿ ಬತ್ತದಹೊಟ್ಟು ಹಾಕಿ ಅದರಮಧ್ಯೆ ಈ ಮೂಶೆಯನ್ನಿಟ್ಟು ಆ ಹೊಟ್ಟಿಗೆ ಬೆಂಕಿಯನ್ನಿಡಲು ಭಸ್ಮವಹುದು. ಕಾಸಶ್ವಾಸ, ಧಾತುಕ್ಷೀಣ ಮುಂತಾದ ಸಮಸ್ತ ರೋಗಗಳಮೇಲೆ ಇದನ್ನು ಅಕ್ಕೀಕಾಳಷ್ಟು ಅನುಪಾನವರಿತು ಕೊಡುವದು.

### ತಾಳಿಕೆ ಭಸ್ಮ.

ಶುದ್ಧ ಪತ್ರತಾಳಕ ೧ ಪಲವನ್ನು ಹೊಸ ಸುಣ್ಣದಲ್ಲಿ ಹಾಕಿ ನೀರುಹೊಯಿದು, ನೀರು ತಿಳಿಯಾದನಂತರ ತೆಗದುಕೊಂಡು, ಒಂದು ಕುಡಿಕೆಯಲ್ಲಿ ಹೊಸ ಸುಣ್ಣ ಘಟ್ಟಿಯಾದದ್ದನ್ನು ಹಾಕಿ ಅದರಲ್ಲಿ ಈ ತಾಳಕ ಬಿಲ್ಲೆಯನ್ನಿಟ್ಟು ತುಂಬಾ ಸುಣ್ಣದಿಂದ ತುಂಬಿ ಬಾಯಿಮುಚ್ಚಿ ೭ ಕವಚ ಚೇಲು ಮಾಡಿ ೧೦ ಬೆರಣಿಯಲ್ಲಿ ಪುಟವಿಡೆ ಭಸ್ಮವಹುದು. ಈ ಭಸ್ಮ ಜೇನುತುಪ್ಪ

ದಲ್ಲಿ ತೆಗದುಕೊಳ್ಳಲು, ಕ್ಷಯ, ಕೆಮ್ಮು, ಮೇಹಕ್ಷಯ, ಶ್ವಾಸಕಾಸ, ಉಬ್ಬಸ, ರಕ್ತಕ್ಷಯ ಇವು ನಿರ್ನಾಮವಾಗುವವು. ತಾಳೀಸಪತ್ರೆ, ಶುಂಠಿ, ಹಿಪ್ಪಲಿ, ಮೆಣಸು, ಲವಂಗ, ಆಡುಸೋಗೆಬೇರು, ಅಳಲೆಕಾಯಿ, ನೆಲ್ಲೀಕಾಯಿ, ತಾರೆಕಾಯಿ, ಜೇಷ್ಟಮಧು, ಯಾಲಕ್ಕಿ ಇವು ೧-೧ ಪಲ, ಇವೆಲ್ಲದರ ಸಮಸಕ್ಕರೆ ಮತ್ತು ಗರುಗದಸಮೂಲ ಚೂರ್ಣ ೧೦ ಪಲ, ಎಲ್ಲ ಕುಟ್ಟಿ ವಸ್ತ್ರಗಾಳಿತ ಮಾಡಿ ಸಕ್ಕರೆ ಬೆರಸಿದ ಚೂರ್ಣ ಕಾಲುರೂಪಾಯಿತೂಕ, ತಾಳಕಭಸ್ಮ ಭತ್ತದಕಾಳಷ್ಟು ಹಾಕಿ ಸ್ವಲ್ಪ ಜೇನುತುಪ್ಪ ಬೆರಸಿ ಸೇವಿಸಲು—ಮೇಹಕ್ಷಯ, ಮೇಹಜ್ವರ, ಮೇಹಸಂಜು, ಮೇಹಚಟ್ಟಿ, ಅಂಗೈಯಲ್ಲಿ ಹೂವು ವಡದಿರುವಿಕೆ, ಕಫಕ್ಷಯ, ಕುಷ್ಟ ಇವು ನಿವಾರಣೆಯಾಗುವವು. ಈ ಔಷಧವನ್ನು ೪೦ ದಿನ (ದಿನ ೨ ಹೊತ್ತು) ಸೇವಿಸುವದು.

ಇದಕ್ಕೆ ಪಥ್ಯ:—ಶೀಸಾರು, ಎಳೀ ದಂಟಿನಸೊಪ್ಪು, ಕಿರುಕಸಾಲೆ, ಎಳೀ ಬದನೇಕಾಯಿ, ಚಪ್ಪರದವರೆ, ಹಸುವಿನಹಾಲು ಅಥವಾ ಹಾಲೂಅನ್ನ, ಗೋಧೀರವೆ, ತುಪ್ಪ ಇವು ಪಥ್ಯ. ಹುಳಿ, ಮೆಣಶಿನಕಾಯಿ, ಹೊಗೇಸೊಪ್ಪು ಶೇದುವಿಕೆ, ಸ್ತ್ರೀಸಂಗ, ಇವೆಲ್ಲಾ ಶಲದಿವರ್ಜ್ಯವಾದದ್ದು.

## ಬೇರೇ ವಿಧ.

ಶುದ್ಧ ತಾಳಕವನ್ನು ಚೇಳುಕೊಂಡಿಸೊಪ್ಪಿನರಸದಲ್ಲಿ ೪ ಝಾವ ಮರ್ದಿಸಿ ಬಿಲ್ಲೆಮಾಡಿ ಒಣಗಿಸಿ, ಹಣತೆಯಲ್ಲಿಟ್ಟು ೩ ಕವಚ ಚೇಲುಮಾಡಿ ೫೦ ಬೆರಣಿಯಲ್ಲಿ ಪುಟವಿಟ್ಟರೆ ಶುದ್ಧ ಭಸ್ಮವಾಗುವದು.

### ಇದರಲ್ಲಿ ನಾಶಿಯಾಗುವ ರೋಗಗಳು.

ಈ ಭಸ್ಮ ಸಣ್ಣಅಕ್ಕಿಕಾಳು ಅರ್ಧದ ತೂಕವನ್ನು ಜೇನುತುಪ್ಪದಲ್ಲಿ ಕೊಟ್ಟರೆ—ಜ್ವರ, ಛಳಿಜ್ವರ, ಏಕಾಹಿಕ, ಧ್ವ್ಯಾಹಿಕ, ತ್ರ್ಯಾಹಿಕ, ಚಾತುರ್ಥಿಕ, ದ್ವಂದ್ವಜ್ವರ ನಿವಾರಣೆಯಾಗುವವು. ಮೆಣಶಿನಕಾಳು ಕಷಾಯದಲ್ಲಿ ಸೇವಿಸಿದರೆ ವಾತಜ್ವರ, ಮೈಭಾರ, ತಲೆನೋವು, ಶೂಲೆ, ವಾಂತಿಹರ; ಹಶೀಶುಂಠೀರಸದಲ್ಲಿ ಕೊಡಲು ಪಿತ್ತಜ್ವರ, ಎದೆವುರಿ, ವಾಕರಿಕೆ, ವಾಂತಿ, ಅಜೀರ್ಣ, ಅರುಚಿ ಇವನ್ನು ಹರಿಸುವದು. ಉಪ್ಪಿರಸದಲ್ಲಿ ಕೊಡಲು ಸನ್ನಿಪಾತ ಜ್ವರಹರ. ನುಗ್ಗೆಚಕ್ಕೆರಸ, ಲಕ್ಕಿಸೊಪ್ಪಿನರಸ, ಗರಗದರಸ, ಇವೆಲ್ಲ ಶೇರಿಸಿ ಕಾದಸೂಟಿನಲ್ಲಿ ಹಾಕಿ ಅದರಲ್ಲಿ ಈ ಭಸ್ಮ ಬೆರಸಿ ಕೊಡಲು—ದೋಷಜ್ವರ, ದ್ವಂದ್ವಜ್ವರ ಮೊದಲಾದವು ನಾಶವಾಗುವವು. ತಾಳೀಸಾದಿಚೂರ್ಣದಲ್ಲಿ ಈ ಭಸ್ಮವನ್ನು ಸೇವಿಸಲು ಕ್ಷಯದಕೆಮ್ಮು, ಮೇಹದಕೆಮ್ಮು, ಮೇಹ, ಪಿತ್ತಪಾಂಡು ಮೊದಲಾದವನ್ನು ನಿವಾರಿಸುವದು.

ಇದಕ್ಕೆ ಪಥ್ಯ:—ತೊಗರೀಬೇಳೆ, ಎಳೇ ಬದನೇಕಾಯಿ, ಚಪ್ಪರದ ವರೆ, ಹೀರೆಕಾಯಿ, ಪಡುವಲಕಾಯಿ, ಬಾಳೇಹೂವು, ಹಾಲು, ಆಕಳತುಪ್ಪ ಮೊದಲಾದ ಪಥ್ಯಕಾರಿ ಪದಾರ್ಥಗಳನ್ನು ಸೇವಿಸಬೇಕು. ಹುಳಿ, ಮೆಣಸಿನ ಕಾಯಿ, ಶಲದಿಪದಾರ್ಥ ಇವು ಕೂಡದು, ಹೊಗೇಸೊಪ್ಪು ಶೇದಬಾರದು, ಬಿಸಿನೀರನ್ನೇ ಕುಡಿಯುತ್ತಾ ಇರಬೇಕು. ಗಾಳಿಗೆ ಹೊರಗೆ ಹೊರಡಬಾರದು.

## ಸೂ ತ ಸಿಂ ಧೂ ರ .

ಶುದ್ಧ ಪಾದರಸ ೧ ಪಲ ಖಲ್ವದಲ್ಲಿಟ್ಟು ರಸಕರ್ಪೂರ (ಶುದ್ಧವಾದ್ದು) ೨ ವರಹಾತೂಕ, ಬೆಳಿಗಾರ ೨ ವರಹಾತೂಕ, ಕಸ್ತೂರಿ ಅರಿಶಿನ, ಮರದರಿಶಿನ ೧-೧ ವರಹಾತೂಕ, ಎಲ್ಲ ಶೇರಿಸಿ ವಿಳ್ಯದೆಲೆಯರಸದಲ್ಲಿ ೪ ಝಾವ ಮರ್ದಿಸಿ, ಕರೀಉಮ್ಮತ್ತಿಯಲೆ ರಸದಲ್ಲಿ ೪ ಝಾವ ಮರ್ದಿಸಿ, ಹೀಗೆ ಮರ್ದಿಸುವಾಗ ಪಟ್ಲುಪ್ಪಿನ ನೀರನ್ನು ಹಾಕಿ ಅರಿಯುತ್ತಾ ಬರುವದು. ಮರ್ದನ ಪೂರೈಸಿದನಂತರ ಬಿಲ್ಲೆಮಾಡಿ ಒಣಗಿಸಿ—ಮಹೇಶ್ವರನ ಪೂಜಾರ್ಚನೆಗಳನ್ನು ಮಾಡಿ—ಈ ಬಿಲ್ಲೆಯನ್ನು ಹಣತಿಯಲ್ಲಿಟ್ಟು ಮೇಲೊಂದು ಹಣತಿ ಮುಚ್ಚಿ ವಜ್ರಶೀಲು ಮಾಡಿ ಒಣಗಿಸಿ, ಕುಕ್ಕುಟಪುಟವಿಟ್ಟರೆ ಸಿಂಧೂರವಾಗುವದು. ಈ ಸಿಂಧೂರವನ್ನು ಬೆಣ್ಣೆಯಲ್ಲಿ ಕಾಲುಗುಲಗಂಜಿ ಅಂದರೆ ಅಕ್ಕಿಯಕಾಳಿನ ಅರ್ಧದಷ್ಟು ತೆಗದುಕೊಳ್ಳುವದು.

### ಇದರಲ್ಲಿ ವಾಶಿಯಾಗುವ ವ್ಯಾಧಿಗಳು.

ತಮಕಶ್ವಾಸ, ಮೇಹವ್ರಣ, ಶ್ವಾಸಕಾಸ, ೨೦ ಬಗೆ ಪಿತ್ತ, ೮೦ ಬಗೆ ವಾಯು, ಶ್ಲೇಷ್ಮರೋಗ ೪೦, ಪ್ರಮೇಹಗಳು, ಭಗಂದರ, ನೂತಿ, ಉಪದಂಶ, ಟಾಕಿ, ಪರಮ, ಸೂತಿಕಾರೋಗ, ಸನ್ನಿವಿಕಾರಗಳು ಇವೆಲ್ಲಾ ನಿರ್ಮೂಲವಾಗುವವು. ಬೆಲ್ಲದ ಅನುಪಾನದಿಂದ ಸುಖಸನ್ನಿ ನಿವೃತ್ತಿಯಹುದು; ತ್ರಿಕಟುಕಚೂರ್ಣದಲ್ಲಿ ಹಾಕಿ ಜೇನುಬೆರಸಿ ಕೊಡಲು ಮೇಹಗಡ್ಡೆ, ತೊಡೆವಾಳ, ಜ್ವರ, ಜ್ವರವಾಯು, ದೋಷಜ್ವರ ಇತ್ಯಾದಿ ಸಮಸ್ತ ರೋಗಹರ.

ಇದಕ್ಕೆ ಪಥ್ಯ:—ಜ್ವರ, ಜ್ವರದೋಷ, ವಾಯುಗಳಿಗೆ ತೊಗರೀಬೇಳೆ ಶೀಸಾರು, ಗೋಧಿಯಗಂಜಿ, ಕಿರಕಸಾಲೆ, ನುಗ್ಗೆಕಾಯಿ, ನುಗ್ಗೆಸೊಪ್ಪು, ಬಿಸಿನೀರೂಅನ್ನ, ಶೀತೊವ್ವೆ ಕೊಡುವದು. ಶಲದಿ ವಾತವಸ್ತುಗಳು ಕೂಡದು. ಇತರೇ ವ್ಯಾಧಿಗಳಿಗೆ ಶಲದಿ ಇಲ್ಲದ ಇಚ್ಛಾಪಥ್ಯ. ಹುಳಿ, ಮೆಣಸಿನ ಕಾಯಿ, ಯಣ್ಣೆ ವರ್ಜ್ಯ. ಸ್ತ್ರೀಸಂಗ, ತಂಬಾಕು ಶೇದುವದು, ಚುಟ್ಟಾ ಶೇದುವದು ಖಂಡಿತ ಕೂಡದು.

# ಕೃಷ್ಣಾಭ್ರಕಸಿಂಧೂರ.

ಕೃಷ್ಣಾಭ್ರಕಕ್ಕೆ ಮೊದಲು ನಿಂಬೇಹುಳೀಲಿ ಪೆಟ್ಲುಪ್ಪನ್ನರದು ತುಂಬಾ ಸವರಿ ಮುಚ್ಚಳದಲ್ಲಿಟ್ಟು ಮೇಲೆ ಮುಚ್ಚಿ ಚೀಲುಮಾಡಿ ಅಘುಪುಟವಿಕ್ಕಿದರೆ ಅರಿಯುವದಕ್ಕೆ ಬರುತ್ತದೆ. ಅದನ್ನು ಖಲ್ವದಲ್ಲಿಟ್ಟು ಯಕ್ಕದ ಬೇರಿನ ಚಕ್ಕೆಯರಸ ಅಥವಾ ಯಕ್ಕೆಯ ಹಾಲನ್ನು ಹಾಕಿಕೊಳ್ಳುತ್ತಾ ೪ ಝಾಮ ಮರ್ದಿಸಿ ಬಿಲ್ಲೆಮಾಡಿ ಒಣಗಿಸಿ, ಚೀಲುಮಾಡಿ ಪುಟವಿಡುವದು. ಅದು ನಿರುದ್ಧವಾಗುವವರಿವಿಗೂ ಇದೇಮೇರೆ ಕೆಲವು ಪುಟವಿಕ್ಕಿ, ಅನಂತರ ಕೆಂಪುಮಚ್ಚೆಯಿರುವ ಮುಳ್ಳುಹರವೇಸೊಪ್ಪಿನ ಸಮೂಲ ರಸದಲ್ಲಿ ನಾಲ್ಕು ಝಾಮ ಮರ್ದಿಸಿ ಬಿಲ್ಲೆಮಾಡಿ ಒಣಗಿಸಿ ಗಜಪುಟವಿಡುವದು. ಅನಂತರ ಆಲದಬಿಳಲು ಚಿಗುರಿನ ರಸದಲ್ಲಿ ೪ ಝಾಮ ಅರದು ಪುಟವಿಡುವದು, ಅನಂತರ ಹಳದೀ ಗರಗದಸೊಪ್ಪಿನ ಸಮೂಲ ರಸದಲ್ಲಿ ೧ ಪುಟ, ಅನಂತರ ಮೊಲೆಹಾಲಿನಲ್ಲಿ ಒಂದು ಪುಟ, ಜಾಳಮೂಲಂಗೀರಸದಲ್ಲಿ ಒಂದು ಪುಟ, ಹೊಮ್ಮುಗಳ ರಸದಲ್ಲಿ ಒಂದು ಪುಟವಿಡಲು ಅರುಣಾರ್ಕದಂತೆ ದಿವ್ಯಸಿಂಧೂರವಾಗುವದು.

ಇದರ ಉಪಯೋಗ:—ಬಿಲ್ವಾದಿ ಲೇಹದಲ್ಲಿ ಮೆಣಸುಕಾಳಷ್ಟು ಸೇವಿಸೆ—ಪಿತ್ತಪಾಂಡು, ಪಿತ್ತಮೈಕ, ಪಿತ್ತಮೇಹ ಹರಿಸುವದು. ಇದನ್ನು ಬೆಣ್ಣೆಯಲ್ಲಿ ಕೊಡಲು—ಕ್ಷಯ, ಪಾಂಡು, ಮೇಹ, ಶೋಭೆ, ಅತಿಸಾರ, ಅಗ್ನಿಮಾಂದ್ಯ, ಮಧುಮೇಹ, ಕಾಸಶ್ವಾಸ, ಮೊದಲಾದ ಸಕಲ ವ್ಯಾಧಿಗಳೂ ಹರಿಸುವವು. ಅಯಸಿಂಧೂರ, ಕಾಂತಸಿಂಧೂರ, ಅಭ್ರಕಸಿಂಧೂರ ಈ ಮೂರನ್ನೂ ಬೆರಸಿ ಅನುಪಾನದಿಂದ ಅಥವಾ ತುಪ್ಪ, ಬೆಣ್ಣೆ, ಜೇನುತುಪ್ಪ ಸಕ್ಕರೆಯಿಂದ ಸೇವಿಸಲು ಸಕಲ ವ್ಯಾಧಿಗಳೂ ನಾಶನವಾಗಿ—ರಕ್ತವೃದ್ಧಿ, ವೀರ್ಯವೃದ್ಧಿ, ಆಯುಸ್ತೇಜೋ ಬಲವನ್ನೀಯುವದು.

ಅಭ್ರಕಸಿಂಧೂರವನ್ನು ಜೇನಿನ ಅನುಪಾನದಿಂದ ಕೊಟ್ಟರೆ ಅತ್ಯುಗ್ರ ಸನ್ನಿಪಾತಗಳು, ಮೂರ್ಛೆಯೂ ನಿರ್ನಾಮವಾಗುವವು.

ಅಭ್ರಕಸಿಂಧೂರದಲ್ಲಿ—ಹಿಪ್ಪಲಿಚೂರ್ಣ, ತಾರೇಕಾಯಿಚೂರ್ಣ ಶೇರಿಸಿ ಜೇನಿನಲ್ಲಿ ಕಲಿಸಿಕೊಡಲು ಶ್ಲೇಷ್ಮರೋಗಗಳೆಲ್ಲಾ ನಾಶನವು.

ಅಭ್ರಕಸಿಂಧೂರವು ಅರಿಶಿನದಚೂರ್ಣ, ಶತಾವರಿಗೆಡ್ಡೆ ಇವುಗಳ ಚೂರ್ಣದಲ್ಲಿ ಕಲಿಸಿ ಜೇನುಹಾಕಿ ಕೊಟ್ಟರೆ ವಿಂಶತಿಮೇಹಗಳನ್ನು ಹರಿಸುವದು.

ಅಭ್ರಕಸಿಂಧೂರ, ಕಾಂತಸಿಂಧೂರ ಶೇರಿಸಿ ಆಕಳಬೆಣ್ಣೆಯಲ್ಲಿ ಒಂದು ಮಂಡಲಕಾಲ ಸೇವಿಸಿದರೆ ಸರ್ವರೋಗಗಳೂ ನಾಶವಾಗುವವು. ವೀರ್ಯವೃದ್ಧಿ, ರಕ್ತವೃದ್ಧಿ, ಬಲವೃದ್ಧಿ ಇವನ್ನುಂಟುಮಾಡುವದು.

ಅಭ್ರಕಸಿಂಧೂರವು—ಸೈಂಧವಲವಣ, ದ್ರಾಕ್ಷಿಹಣ್ಣು, ಮೆಣಸು ಇವುಗಳನ್ನರದು ಅದರೊಡನೆ ಕೊಟ್ಟು ಬಿಸಿನೀರನ್ನು ಕುಡಿಸಿದರೆ ಸರ್ವಅಜೀರ್ಣಗಳೂ ನಾಶವಾಗುವವು.

ಅಭ್ರಕಸಿಂಧೂರ, ತಾಮ್ರಭಸ್ಮ ಇವನ್ನು ಕೇರಿಸಿ ಅಳಲೇಕಾಯಿ ಚೂರ್ಣದಲ್ಲಿ ಕೇರಿಸಿ ಮಾದಳಹಣ್ಣು ರಸದಲ್ಲಿ ಸೇವಿಸಿದರೆ ಸರ್ವಶೂಲೆಗಳು, ಬಿಕ್ಕಳಿಕೆ, ಛರ್ದಿ ಇವು ಹರ.

ಅಭ್ರಕಸಿಂಧೂರ—ರಸಸಿಂಧೂರ, ಸ್ವರ್ಣಭಸ್ಮ ಇವನ್ನು ಕೇರಿಸಿ ಹಳೀಕುಂಠೀರಸದಲ್ಲಿ ಒಂದು ಮಂಡಲ ಸೇವಿಸಿದರೆ—ಕ್ಷಯ, ಕ್ಷಯಪಾಂಡು, ಕುಂಭಕಾಮಿಲಾ, ಜಲೋದರ, ಮಹೋದರ ಇವೆಲ್ಲಾ ನಿರ್ನಾಮವಾಗುವವು.

ಅಭ್ರಕಸಿಂಧೂರ ಅಳಲೇಕಾಯಿಚೂರ್ಣದಲ್ಲಿ ಕಲಿಸಿ ಗೋಮೂತ್ರದಲ್ಲಿ ೧ ಮಂಡಲ ಸೇವಿಸಿದರೆ ೫ ಬಗೆ ಪಾಂಡುರೋಗಗಳು ಹರಿಸಲ್ಪಡುವವು.

ಅಭ್ರಕಸಿಂಧೂರ ಅಳಲೇಕಾಯಿಚೂರ್ಣ ಕೇರಿಸಿ ಸೇವಿಸಿದರೆ ಪಾಂಡು, ಕಾಮಲೆ, ಹಲೀಮಕ ಮುಂತಾದ ರೋಗಹರ.

ಅಭ್ರಕಸಿಂಧೂರವನ್ನು ಅಳಲೇಕಾಯಿಚೂರ್ಣದಲ್ಲಿ ಕೇರಿಸಿ ಆಕಳ ಮೂತ್ರದೊಂದಿಗೆ ಸೇವಿಸಿದರೆ ಶೋಭೆ, ಪಾಂಡು, ಕುಂಭಕಾಮಾಲೆಹರ.

ಅಭ್ರಕಸಿಂಧೂರ ಲೋಹಭಸ್ಮ ಕೇರಿಸಿ ಲವಂಗಚೂರ್ಣದಲ್ಲಿ ಜೇನು ತುಪ್ಪ ಬೆರಸಿ ಕೊಡಲು ವೀರ್ಯವೃದ್ಧಿಯಾಗಿ ದಶಸ್ತ್ರೀಯರಲ್ಲಿ ರಮಿಸ ಶಕ್ತನಾಗುವನು.

## ಕಾಂತಸಿಂಧೂರ.

ಕಾಂತದ ಗಟ್ಟಿಗಳನ್ನು ಒಡೆದು ಮಡಕೆಯಲ್ಲಿ ಹಾಕಿ ಇದು ಮುಳುಗುವಷ್ಟು ಆಡಿನ ರಕ್ತವನ್ನು ಹಾಕಿ ಬಾಯಿಮುಚ್ಚಿ ವಜ್ರಚೇಲುಮಾಡಿ ಒಂದು ಗುಂಡಿ ತೆಗದು ಆ ಮಡಿಕೆಯನ್ನು ಹೂಳಿಡುವದು. ೧೫ ದಿನವಾದ ನಂತರ ತೆಗದು ಆ ಕಾಂತ ೧ ಪಲ, ನೆಲ್ಲೀಕಾಯಿಗಂಧಕ ೧ ಪಲ, ಲೋಹದ ರಾಪುಡಿ ೧ ಪಲ, ಶುದ್ಧ ಪಾದರಸ ೧ ಪಲ, ಇವೆಲ್ಲವನ್ನೂ ಖಲ್ವದಲ್ಲಿ ಹಾಕಿ ನಿಂಬೇಹುಳಿಯಲ್ಲಿ ೧ ಝಾವ ಮರ್ದಿಸಿ ಬಿಲ್ಲೆಮಾಡಿ ಒಣಗಿಸಿ ಒಂದು ಮಡಕೆಯಲ್ಲಿಟ್ಟು ಬಾಯಿಮುಚ್ಚಿ ವಜ್ರಸರಿಯ ೭ ಚೇಲುಮಾಡಿ ಒಲೇಮೇಲಿಟ್ಟು ೮ ಝಾವ ವುರಿಹಾಕಿದರೆ ಸಿಂಧೂರಿಸುತ್ತದೆ. ಆ ಸಿಂಧೂರವನ್ನು ತೆಗದಿಟ್ಟುಕೊಂಡು, ಅಕ್ಕೀಕಾಳಷ್ಟು ಮೊದಲುಗೊಂಡು ಗುಲಗಂಚಿಪ್ರಮಾಣದವರಿಗೆ ರೋಗಬಲಾಬಲವರಿತು—ಜೇನುತುಪ್ಪ, ಬೇರೆಬೇರೆ ಅನುಪಾನಗಳು, ಲೇಹ್ಯಗಳು, ಚೂರ್ಣಗಳು, ಕಷಾಯುವರ್ಗಗಳು ಇವುಗಳಲ್ಲಿ ...

ಇದರಿಂದ ಗುಣವಾಗುವ ವ್ಯಾಧಿಗಳು:—ಈ ಕಾಂತಸಿಂಧೂರವನ್ನು ಮೇಕೆಯಹಾಲಿನಲ್ಲಿ ಸೇವಿಸಿದರೆ ಎದೆಯ ರೋಗಗಳು, ಗ್ರಹಣಿ ಮುಂತಾದ ವ್ಯಾಧಿಗಳು ನಿವೃತ್ತಿಯಾಗುವವು. ಕಾಮಾಲೆ, ಪಾಂಡು, ಶೋಭೆ, ಮೇಹ ವಾಯುಗಳು ನಾಶನವಾಗುವವು. ರಕ್ತಪುಟವಿಲ್ಲದೆ ಬಿಳಪೇರಿದ ಶರೀರವು ರಕ್ತವೃದ್ಧಿಯಿಂದ ಸುಕುಮಾರತ್ವವನ್ನು ಪಡೆಯುವದು. ವೀರ್ಯನಷ್ಟವಿರುವವನಿಗೆ ರಕ್ತವೃದ್ಧಿ, ವೀರ್ಯವೃದ್ಧಿ, ಆಯುಸ್ತೇಜೋಬಲ ಪರಾಕ್ರಮಗಳನ್ನು ಕೊಡುವದು. ಕಾಂತಿವಿವರ್ಧನೆ ಮಾಡುವದು, ಕಾಸಶ್ವಾಸಗಳನ್ನು ಮೂಲೋತ್ಪಾಟನೆ ಮಾಡುವದು. ಬಹುಮೂತ್ರಜಾಡ್ಯವನ್ನು ಹರಿಸುವದು. ಅಪಸ್ಮಾರ, ಮಲರೋಗ ಇವುಗಳನ್ನು ಮೂಲತಃ ನಾಶಗೊಳಿಸುವದು.

ಇದರ ಸೇವನಾಕಾಲದಲ್ಲಿ ಪಥ್ಯ:—ತೊಗರಿಬೇಳೆ, ಹಶೀಹೆಸರುಬೇಳೆ, ಶೀಯಾದ ಕಂದಗಳು, ಹೀರೇಕಾಯಿ, ಪಡವಲಕಾಯಿ, ಎಳೇಬದನೇಕಾಯಿ, ನುಗ್ಗೆಕಾಯಿ, ಎಳೇಬೆಂಡೇಕಾಯಿ, ನುಗ್ಗೆಸೊಪ್ಪು, ಎಳೇ ಹರವೇ ಸೊಪ್ಪು, ಚಪ್ಪರದವರೆಕಾಯಿ, ಮೆಂತಿಯಸೊಪ್ಪು, ಹೊನಗೊನೆಸೊಪ್ಪು, ಅತ್ತಿಕಾಯಿ, ಆಕಳತುಪ್ಪ, ಆಕಳಹಾಲು, ಆಕಳಮಜ್ಜಿಗೆ, ನೆಲ್ಲೀಕಾಯಿ, ಹುಣಸೆಚಿಗರು ಇವು ಅನುಕೂಲವಾದ ಪಥ್ಯ. ಹುಣಸೇಹಣ್ಣು, ಮೆಣಶಿನಕಾಯಿ, ಕಲದಿಪದಾರ್ಥ, ಯಣ್ಣೆ, ನಿಷಾವಸ್ತುಗಳು ಸಹಾ ಕೂಡದು. ಶೋಕ, ದುರಾಲೋಚನೆ, ಸ್ತ್ರೀಸಹವಾಸ, ಹೊಗೆಚುಟ್ಟಾ ಸೇದುವಿಕೆ ಇವು ವರ್ಜ್ಯಗಳು. ಹೀಗೆ ಪಥ್ಯದಿಂದಿದ್ದು ಈ ಕಾಂತಸಿಂಧೂರವನ್ನು ಸೇವಿಸಿದರೆ ಸಕಲರೋಗ ನಿವೃತ್ತಿಯಾಗಿ ಕಾಮಶಕ್ತಿಯುಂಟಾಗಿ ಅಪರಿಮಿತ ಸುಖಿಯಾಗುವನು. ಸ್ತ್ರೀಯರು ಸೇವಿಸಿದರೆ ಅವರ ರಜೋಧರ್ಮದ ವಿಷಮತ್ವ, ಪ್ರದರರೋಗ, ಬಂಜೆತನ ಇವು ನಿವಾರಣೆಯಾಗಿ ಆಕೆಯು ಪುತ್ರವತಿಯಾಗುವಳು.

## ಬೇರೇವಿಧವಾದದ್ದು.

ಶುದ್ಧಿಮಾಡಿದ ಕಾಂತ ೧ ಪಲ, ನೆಲ್ಲೀಕಾಯಿಗಂಧಕ ೧ ಪಲ, ಇವೆರಡನ್ನೂ ನಿಂಬೇಹುಳಿಯಲ್ಲಿ ೧ ಝಾಮ ಮರ್ದಿಸಿ ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಗಜಪುಟವಿಕ್ಕಿ ಪುನಃ ಹೀಗೆಯೇ ೪ ಸಲ ಪುಟವಿಟ್ಟರೆ ಸಿಂಧೂರವಾಗುವದು.

ಇದರಲ್ಲಿ ಗುಣವಾಗುವ ವ್ಯಾಧಿಗಳು:—ಕರಳುಗಳಲ್ಲಿರುವ ವಾತ, ಅಂಡವಾತ, ವಾಯುಗಳು, ಗುಲ್ಮವಾತ, ಜ್ವರಗಡ್ಡೆ, ಬಾವು, ಹೊಟ್ಟೆ ದೊಡ್ಡದಾಗಿರುವಿಕೆ, ಉದರವಾಯುಗಳು, ಮಹೋದರ, ಹೊಟ್ಟೆಯುಬ್ಬರ ಇವನ್ನು ನಾಶಮಾಡುವದು.

## ಇಂಗಲೀಕಭಸ್ಮ.

ಶುದ್ಧಿಮಾಡಿದ ಇಂಗಲೀಕದಗಡ್ಡೆಯನ್ನು ತಂದು—ಬಿಳೀಯಕ್ಕದಬೇರಿನ ಜತೇಲಿ ಸ್ವಲ್ಪ ಪಟಿಕ್ಲುಪ್ಪು ಹಾಕಿ ಕುಟ್ಟಿ ರಸವನ್ನು ಹಿಂಡಿಕೊಂಡು ಆ ರಸದಲ್ಲಿ ಅರ್ಧವನ್ನು ಈ ಇಂಗಲೀಕದಗಡ್ಡೆಗೆ ಚುರುಕು ಕೊಡುವದು. ಉಳಿದ ಅರ್ಧರಸದ ಜತೇಲಿ ಮತ್ತಷ್ಟು ಪಟಿಕ್ಲುಪ್ಪು ಹಾಕಿ ಅರದು ಬಣಗಿಸುವದು. ಅನಂತರ ಅದನ್ನು ಪುಡಿಮಾಡಿ—ಕುತ್ತಿಗೆ ಅಗಲವಿರುವ ಒಂದು ಕುಡಿಕೆಯಲ್ಲಿ ಕೆಳಕ್ಕೆ ಬಂದುವರಿಶೆ ಮೇಲಿನ ಪಟಿಕ್ಲುಪ್ಪನ್ನು ಹಾಕಿ ಅದರ ಮೇಲೆ ಇಂಗಲೀಕದ ಗಡ್ಡೆಯನ್ನಿಟ್ಟು, ಅದರಮೇಲೆ ಪಟಿಕ್ಲುಪ್ಪುಹಾಕಿ ೧೦ ಬೆರಣಿಯಲ್ಲಿ ಪುಟವಿಡುವದು. ಉಪ್ಪು ಕೆಂಪಾದಕೂಡ್ಲೆ ತೆಗದುನೋಡಿ ಇಂಗಲೀಕವನ್ನು ಅರದು ಇಟ್ಟುಕೊಳ್ಳುವದು.

## ಬೇರೇವಿಧಾನ.

ಇಂಗಲೀಕ ಶುದ್ಧಿಯಾದದ್ದು ೨ ಪಲ ಅಭ್ರಕದ ತಗಡಿನಲ್ಲಿಟ್ಟು ನಿಂಬೇಹುಳೀಲಿ ೨ ಝಾವ ಚುರಕು ಕೊಡುವದು, ಅದನ್ನು ತೆಗದುಕೊಂಡು (ದೂದಿಯಾ) ಹಾಲುಗಿಡದ ಹಾಲನ್ನು ಇಂಗಲೀಕದಗಡ್ಡೆಗೆ ಸವರಿ ಬಿಸಲಲ್ಲಿ ಬಣಗಿಸಿ ಆದೇ ಹಾಲು ಗಿಡದಸಮೂಲವನ್ನು ಅರದು ಕವಚವಿಕ್ಕಿ ಒಂದು ಹಣತೆಯಲ್ಲಿಟ್ಟು ಮೇಲೆ ಮುಚ್ಚಿ ಚೇಲುಮಾಡಿ ೪ ಬೆರಣಿಯಲ್ಲಿ ಪುಟವಿಡಲು ಭಸ್ಮವಾಗುವದು. ಈ ಭಸ್ಮ ಅರ್ಧಗುಲಗಂಜಿ ತೂಕವನ್ನು ಫರಂಗಿಚಕ್ಕೆ ಚೂರ್ಣದಲ್ಲಿ ಕೊಟ್ಟರೆ ಮೇಹದಹುಣ್ಣು, ಜ್ವರ, ಮೇಹದ ಎಲ್ಲಾ ನೋವುಗಳು ನಾಶವಾಗುವವು. ಜೇನುತುಪ್ಪದಲ್ಲಿ ಕೊಟ್ಟರೆ ಜ್ವರನಾಶನವು, ತುಪ್ಪದಲ್ಲಿ ಉಷ್ಣಹರ, ತ್ರಿಫಲಕಷಾಯದಲ್ಲಿ ಕೊಟ್ಟರೆ ಮೇಹೋಷ್ಣ, ಮೇಹದ ಭಗಂದರ, ಮುಸುಕು, ಟಾಕಿ, ಉಪದಂಶ ಮುಂತಾದವು ಹರವಾಗುವವು. ಮೆಣಶಿನ ಕಷಾಯದಲ್ಲಿ ಕೊಟ್ಟರೆ ವಾತಜ್ವರ, ಮಾಂದ್ಯ, ಅಜೀರ್ಣ, ಹುಳಿತೇಗು, ಹೊಟ್ಟೆಯುಬ್ಬರ ಹರಿಸುವದು. ಅತಿಬಜೆ ಕಷಾಯದಲ್ಲಿ ಭೇದಿಯಾಗುವಿಕೆ ನಿಲ್ಲುವದು, ಅತಿಸಾರ ಮುಂತಾದ ರೋಗಹರ. ಚಿಕ್ಕಮಕ್ಕಳಿಗೂ, ಹುಡುಗರಿಗೂ ಅಕ್ಕಿಕಾಳಷ್ಟು, ದೊಡ್ಡವರಿಗೆ ಗುಲಗಂಜಿಯಷ್ಟು ಕೊಡಬಹುದು.

## ವಂಗಭಸ್ಮ.

ವಂಗ ೧೬ ತೊಲೆಯನ್ನು ಅರಳಿಚಕ್ಕೆ ಕುಟ್ಟಿದತೊಕ್ಕು ಗೋಣೀತಟ್ಟಿನ ಮಧ್ಯದಲ್ಲಿ ಹಾಕಿ ಅದರನಡುವೆ ವಂಗವನ್ನಿಟ್ಟು ಕಪಡಮಟ್ಟಿಮಾಡಿ ೪೦ ಬೆರಣಿಯಲ್ಲಿ ಪುಟವನ್ನು ಹಾಕಿ ಎತ್ತಿಕೊಂಡು, ಖಲ್ವದಲ್ಲಿ ಅರದು ಶೀಸೆ

ಯಲ್ಲಿಟ್ಟುಕೊಳ್ಳುವದು. ತುಪ್ಪದಲ್ಲಿ ಕೊಡಲು ಎಲ್ಲಾ ಮೇಹಹರ. ಸಾಸವೆ, ಬಳ್ಳೆಣ್ಣೆ, ಮತ್ಸ್ಯಗಳು ಮುಂತಾದ ಶಲದಿಪದಾರ್ಥವನ್ನು ಬಿಡಬೇಕು.

## ಬೇರೇವಿಧ.

ಶುದ್ಧಿಮಾಡಿದ ವಂಗವನ್ನು ರೇಕುಗಳಾಗಿ ಮಾಡಿ ಸಣ್ಣಗೆ ಕತ್ತರಿಸಿ, ಕರೀಲಕ್ಕೀಸೊಪ್ಪನ್ನು ಒಣಗಿಸಿ ಅದನ್ನು ಗೋಣೀಪಟ್ಟೆಯಮೇಲೆ ಹಾಸಿ ಅದರಮೇಲೆ ವಂಗದ ತುಂಡುಗಳನ್ನು ಹರಡಿ ಮೇಲೆ ಆ ಮೂಲಿಕೆಯನ್ನು ಹಾಕಿ ಚನ್ನಾಗಿ ಸುರಳಿಸುತ್ತಿ ಪುಟವಿಡಲು ನಿರುದ್ಧಭಸ್ಮವಾಗುವದು. ಈ ಭಸ್ಮ ಭತ್ತದಕಾಳಷ್ಟು ಸಕ್ಕರೆಯೊಡನೆ ಶೇರಿಸಿ ಒಂದುತೊಲೆ ಬೆಣ್ಣೆಯೊಡನೆ ಕಲಿಸಿ ಹಗಲೂ, ರಾತ್ರಿ ಹೀಗೆ ೭ ದಿನ, ೧೧ ದಿನ, ಸೇವಿಸಿ ಪಥ್ಯದಲ್ಲಿದ್ದರೆ—ಬಿಳಪು, ಟಾಕಿ, ಮೇಹಕಾರಕ, ಎಲ್ಲಾ ಮೇಹಜಾಡ್ಯಗಳು, ಮೇಹವ್ರಣ, ಲೂತೀವ್ರಣ, ಭಗಂದರ, ಉಪದಂಶ ಮೊದಲಾದ ರೋಗಗಳು ನಾಶನವಾಗುವವು. ಮೊಣಶಿನಕಾಳು ೨ ಪಲ, ದಾಲಚಿನ್ನಿ ೧ ಪಲ, ತಂಗೇಡಿಚಕ್ಕೆ ೨ ಪಲ, ತಂಗೇಡಿಹೂವು ೪ ಪಲ, ಇವೆಲ್ಲಾ ಚೂರ್ಣಿಸಿ ವಸ್ತ್ರಗಾಳಿತಮಾಡಿ ಸಕ್ಕರೆ ೨ ಪಲ ಬೆರಸಿ, ಈ ಚೂರ್ಣ ಅರ್ಧತೊಲಾಕ್ಕೆ ಅರ್ಧಗುಲಗಂಜಿತೂಕ ಭಸ್ಮ ಶೇರಿಸಿ ಸೇವಿಸುತ್ತಾಬಂದರೆ ಬಹುಮೂತ್ರ, ಮಹೋದರ, ಜಲೋದರ, ಉಷ್ಣವಿಕಾರ ಇವು ನಿರ್ನಾಮವಾಗುವವು. ಈ ಭಸ್ಮ ಮತ್ತು ಕಾಂತಸಿಂಧೂರ ಮತ್ತು ಈ ಮೇಲಿನ ಚೂರ್ಣ ಶೇರಿಸಿ ೨೦ ದಿನ ಅಥವಾ ೪೦ ದಿನ ಸೇವಿಸಿದರೆ ಮಧುಮೇಹ, ಮೂತ್ರಕೃಚ್ಛ್ರ ಇವು ನಿವೃತ್ತಿಯಾಗುವವು.

ಈ ಭಸ್ಮ ಸೇವನೆಗೆ ಪಥ್ಯ:—ತೊಗರಿಬೇಳೆ, ಹಸೀಹೆಸರುಬೇಳೆ, ಎಳೇತೆಂಗಿನಕಾಯಿ, ನುಗ್ಗೆಕಾಯಿ, ಚಪ್ಪರದವರೆಕಾಯಿ ಮೊದಲಾದ ಪಥ್ಯಪದಾರ್ಥಗಳನ್ನು ಸೇವಿಸಬಹುದು. ಹುಳಿ, ಕೆಂಪುಮೊಣಶಿನಕಾಯಿ, ಎಣ್ಣೆ, ಉದ್ದು, ಬದನೇಕಾಯಿ ಮೊದಲಾದ ಶಲದಿಪದಾರ್ಥಗಳು ವರ್ಜಿಸತಕ್ಕವು. ಧಾತುಪುಷ್ಟಿಗಾಗಿಯೇ ಸೇವಿಸಿದರೆ ಹಾಲು, ತುಪ್ಪ, ರವೆ ಇವು ಹಿತವಾದವು.

## ಸೀಸಭಸ್ಮ.

ಅತ್ತಿಯಚಕ್ಕೆ ಅಥವ ಮುತ್ತಿಚಕ್ಕೆಯನ್ನು ಚೆನ್ನಾಗಿ ಕುಟ್ಟಿ ಶುದ್ಧಸೀಸಕ್ಕೆ ಕವಚವಿಕ್ಕಿ ಚೀಲುಮಾಡಿ ೧೧೦ ಬೆರಣಿಯಲ್ಲಿ ಪುಟವಿಡಲು ಭಸ್ಮವಹುದು. ಇದನ್ನು ಅರಮು ಇಟ್ಟುಕೊಳ್ಳುವದು.

## ಬೇರೇವಿಧ.

ಸೀಸವನ್ನು ೨೧ ಸಲ ಕರಗಿ ಕರಗಿ ಲೋಳೆಸರದರಸದಲ್ಲಿ ಹೊಯ್ಯುವದು. ಆಮೇಲೆ ೭ ಸಲ ಲಕ್ಕಿಸೊಪ್ಪಿನರಸದಲ್ಲಿ ಕರಗಿ ಹಾಕುವದು. ಅನಂತರ ಇಪ್ಪೆಯಣ್ಣೆಯಲ್ಲಿ ೭ ಸಲ ಕರಗಿಹಾಕಿದರೆ ಶುದ್ಧಿಯಾಗುತ್ತದೆ.

ಶುದ್ಧ ಸೀಸವನ್ನು ತೆಳುವಾದ ತಗಡುಮಾಡಿಟ್ಟುಕೊಂಡು—ಒಂದು ಮಡಕೆಯಲ್ಲಿ ಅರ್ಧಶೇರು ಉಪ್ಪುಹಾಕಿ ಆ ಉಪ್ಪಿನಮೇಲೆ ಸೀಸದಬಿಲ್ಲೆ ಇಟ್ಟು, ಅದರಮೇಲೆ ಉಪ್ಪುಹಾಕಿ ಬಾಯಿಮುಚ್ಚಿ ಚೇಲುಮಾಡಿ ಕಮಲಾಗ್ನಿಯಿಂದ ೪ ಝಾವ ಅಡುವದು. ಸಾಂಗಶೀತಲವಾದಮೇಲೆ ಖಲ್ವದಲ್ಲಿ ಹಾಕಿ ಯಕ್ಕದಹಾಲಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಚೇಲುಮಾಡಿ ಪುಟವಿಡಲು ಭಸ್ಮವಾಗುವದು.

ಈ ಭಸ್ಮ ಭತ್ತದಕಾಳಷ್ಟು ಬೆಣ್ಣೆಯಲ್ಲಿ ಸೇವಿಸಲು ಮೇಹಚಾಂದ್ಯಗಳನ್ನೂ, ಉಷ್ಣವನ್ನೂ ನಿರ್ನಾಮ ಮಾಡುತ್ತದೆ. ಲೇಹ್ಯ, ಚೂರ್ಣ ಕಷಾಯ ಇವುಗಳ ಜತೇಲಿ ಸೀಸಭಸ್ಮವನ್ನು ಪ್ರಯೋಗಿಸಲು—ಗುಲ್ಮ, ಜ್ವರ ಗಡ್ಡೆ, ಮೂತ್ರಕೃಚ್ಛ್ರ, ಮೂತ್ರಾಘಾತ, ಉರಿಮೂತ್ರ ಮುಂತಾದ ಅನೇಕ ರೋಗ ನಾಶನವಾಗುವವು. ಇದಲ್ಲದೆ ಅನುಪಾನಭೇದದಿಂದ ಕೊಡಲು—ಜ್ವರ, ಕಾಸಶ್ವಾಸ, ಅತಿಸಾರಾದಿ ರೋಗಗಳು ನಿವೃತ್ತಿಯಾಗುವವು.

ಇದಕ್ಕೆ ಪಥ್ಯಕ್ರಮ:—ಘನವಾದ ರೋಗಗಳಿಗೆ ತೊಗರಿಬೇಳೆ, ನುಗ್ಗೆಕಾಯಿ, ಬದನೇಕಾಯಿ, ಎಳೇಬೆಂಡೇಕಾಯಿ, ಬಾಳೆಹೂವು, ತುಪ್ಪ, ಹಾಲು ಇವು ಹಿತವಾದವು. ಶಲದಿಪದಾರ್ಥ ವರ್ಜ್ಯ.

## ಕಲ್ನಾರು ಭಸ್ಮ.

೫ ಪಲ ಶುದ್ಧ ಕಲ್ನಾರನ್ನು ಸಣ್ಣತುಂಡುಗಳನ್ನುಮಾಡಿ ಹೊಸಮುಚ್ಚಳದಲ್ಲಿ ಹಾಕಿ ಮುಳುಗುವಂತೆ ನಿಂಬೇಹುಳಿ ಹಾಕಿ ಬಿಸಲಲ್ಲಿ ಒಣಗಿಸಿ, ಹೀಗೆ ೫ ಸಲಮಾಡಿ ಮೇಲೊಂದು ಬಿಲ್ಲೆಮುಚ್ಚಿ ಕಪಡಮಟ್ಟಿಮಾಡಿ ೪೦ ಬೆರಣಿಯಲ್ಲಿ ಪುಟವಿಟ್ಟರೆಭಸ್ಮವಹುದು. ಅದನ್ನು ಖಲ್ವದಲ್ಲಿ ಅರದು ಇಟ್ಟುಕೊಳ್ಳುವದು.

## ಬೇರೇವಿಧ.

ಕಲ್ನಾರು ೧ ಪಲ ಖಲ್ವದಲ್ಲಿಟ್ಟು ಪಟ್ಲುಪ್ಪು ನೀರುಹಾಕಿ ೪ ಝಾವ ಮರ್ದಿಸಿ ಬಿಲ್ಲೇಮಾಡಿ ಒಣಗಿಸಿ, ಹಣತೆಯಲ್ಲಿಟ್ಟು ಚೇಲುಮಾಡಿ ೫೦ ಬೆರಣಿಯಲ್ಲಿ ಪುಟವಿಡಲು ಭಸ್ಮವಾಗುವದು. ಇದರಲ್ಲಿ ೨ ಗುಲಗಂಜಿತೂಕ ಭಸ್ಮ ಆಕಳತುಪ್ಪದಲ್ಲಿ ಅಥವಾ ಜೇನುತುಪ್ಪದಲ್ಲಿ ಸೇವಿಸಿದರೆ ಉಷ್ಣವಾಯು, ಹಲ್ಲುನೋವು, ಎದೆನೋವು, ಉಷ್ಣವಿಕಾರ ಇವು ನಾಶನವಾಗುವುದು. ಇದನ್ನು ಬೆಣ್ಣೆಯಲ್ಲಿಯೂ ಕೊಡಬಹುದು. ಇಚ್ಛಾಪಥ್ಯ.

## ಕರ್ಪೂರಶಿಲಾಜತು ಭಸ್ಮ.

೧೦ ವರಹಾತೂಕ ಶುದ್ಧ ಕರ್ಪೂರಶಿಲಾಜತನ್ನು ತೆಗದುಕೊಂಡು ಹೊಸ ಸುಣ್ಣವನ್ನು ದಪ್ಪಗೆ ಹಚ್ಚಿ ಕಪಡಮಟ್ಟಿಮಾಡಿ ೧೦ ಬೆರಣಿಯಲ್ಲಿ

ಪುಟವಿಡಲು ಭಸ್ಮವಾಗುವದು. ಅದರಮೇಲಿರುವ ಸುಣ್ಣವನ್ನು ಹೆರದು ಖಲ್ವದಲ್ಲಿ ಅರದು ಶೀಸೆಯಲ್ಲಿಟ್ಟುಕೊಳ್ಳುವದು. ಆಕಳತುಪ್ಪದ ಅನುಪಾನ ದಿಂದ ಸಕಲಮೇಹವಿಕಾರಗಳೂ, ವಾಯುವೂ, ಉಷ್ಣರೋಗಗಳೂ ನಾಶ ನವಾಗುವವು. ಇಚ್ಛಾಪಥ್ಯ.

## ಗರುಡಪಚ್ಚೆ ಭಸ್ಮ.

ಗರುಡಪಚ್ಚೆ ಮಣಿಯನ್ನು ಖಲ್ವದಲ್ಲಿ ಹಾಕಿ ಪೆಟ್ಲುಪ್ಪು ನೀರಿನಲ್ಲಿ ೪ ಝಾವ ಮರ್ದಿಸಿ ಬಿಲ್ಲೆಮಾಡಿ ಒಣಗಿಸಿ, ಹಣತೆಯಲ್ಲಿಟ್ಟು ಚೇಲುಮಾಡಿ ಪುಟವಿಡುವದು. ಈ ಭಸ್ಮವನ್ನು ಗರುಡಪಕ್ಷಿಯ ಮೊಟ್ಟೆಯರಸದಲ್ಲಿ ಕಲಸಿ ಗುರುಧ್ಯಾನಮಾಡಿ ಸೇವಿಸುತ್ತಾ ೧ ಮಂಡಲ ಸೇವಿಸಿದರೆ ಕಾಯಸಿದ್ಧಿಯುಂ ಟಾಗುವದು. ಕುಷ್ಟರೋಗ ಸಹಾ ನಿವೃತ್ತಿಯಾಗಿ ಸಕಲ ರೋಗಗಳೂ ನಾಶನವಾಗುವವು. ವಿಷ ನಿವಾರಣೆಯಾಗುವದು. ಸರ್ಪದಂಶಕ್ಕೆ ಇದೇ ಸ ರ್ವೋತ್ತಮವಾದ ಔಷಧವು. ಈ ಔಷಧ ಸೇವನೆಯಿಂದ ಕಾಯಸಿದ್ಧಿ ಯನ್ನು ಪಡದಿರುವವನು ಅರಣ್ಯದಲ್ಲಿ ಸಂಚರಿಸುತ್ತಾ ಇದ್ದರೆ ಹಾವು ಮುಂ ತಾದ ಸಮಸ್ತ ದುಷ್ಟಜಂತುಗಳೂ ಈತನ ನೆರಳಿಗೆ ಸಹಾ ಬೀಳದಂತೆ ಭಯ ಪಟ್ಟೋಡುತ್ತಿರುವವು. ಆತನಿರುವಕಡೆಯಲ್ಲಿ ವಿಷವೆಂಬದೇ ನಿಲ್ಲುವದಿಲ್ಲ !!!

## ಬಿಳುಪಿಗೂ ಕೆಮ್ಮಿಗೂ ಪಟಿಕೆಭಸ್ಮ.

ಒಂದು ಸಣ್ಣ ಕುಡಿಕೆಯಲ್ಲಿ ೪ ರೂಪಾಯಿತೂಕ ಆಕಳಬೆಣ್ಣೆ ಹಾಕಿ ಅದರ ಮಧ್ಯದಲ್ಲಿ ೪ ರೂಪಾಯಿತೂಕ ಪಟಿಕದಗೆಡ್ಡೆಯನ್ನು ಹೂಳಿ ಆ ಕುಡಿಕೆಯ ಬಾಯಿಗೆ ಹೆಂಚುತುಂಡು ಮುಚ್ಚಿ ಮೂರು ಚೇಲುಮಾಡು ವದು. ೫ ಬೆರಣಿಯಲ್ಲಿ ಪುಟವಿಟ್ಟರೆ ಭಸ್ಮವಾಗುವದು. ಮೊಣಸಿನಕಾಳಷ್ಟು ಈ ಭಸ್ಮವನ್ನು ಬೆಣ್ಣೆಯಲ್ಲಿ ೩ ದಿನ ಅಥವಾ ೫ ದಿನ, ದಿನವೂ ೨ ಹೊತ್ತು ಕೊಟ್ಟರೆ ಬಿಳುಪು ನಿವಾರಣೆಯಾಗುವದು. ಈ ಭಸ್ಮ ೩ ಗುಲಗಂಜಿ ತೂಕ ವನ್ನು—ಗರಗದಯಲೆ, ಕುಪ್ಪಿಯಲೆ ಮುಂತಾದ್ದರಲ್ಲಿಟ್ಟು ಮಡಿಸಿ ಸೇವಿ ಸುತ್ತಾ-೭ ದಿನ ಸೇವಿಸಿದರೆ ಕೆಮ್ಮು ನಿಲ್ಲುವದು. ದಿನಕ್ಕೊ ಮೊದಲುದಿನ ೧ ಯಲೆ, ೨ನೇ ದಿನ ೨ ಯಲೆ ಹೀಗೆ ದಿನವೂ ಒಂದೊಂದು ಯಲೆ ವೃದ್ಧಿಮಾ ಡುತ್ತಾ ಬರಬೇಕು. ಪಥ್ಯದಿಂದಿರಬೇಕು.

## ಕವಡೆ ಭಸ್ಮ.

ಕವಡೆಗಳನ್ನು ೧೨ ತೊಲೆ ತೆಕ್ಕೊಂಡು ಹುಣಸೇಹುಳೀಲಿ ನೆನೆಹಾ ಕಿದ್ದು ಕಶ್ಮಲವಿಲ್ಲದಂತೆ ತೊಳದು ಅನಂತರ ಒಂದು ಕುಡಿಕೆಯಲ್ಲಿ ನಿಂಬೇ ಹುಳಿ ತುಂಬಿ ಅದರಲ್ಲಿ ಈ ಕವಡೆಗಳನ್ನು ಹಾಕಿ ಬಾಯಿಗೆ ಬಿಲ್ಲೆಹಾಕಿ ಕವ

ಚವಿತ್ತು ೧೦ ಬೆರಣಿಯಲ್ಲಿ ಪುಟವಿಟ್ಟು ತೆಗದಿಡುವದು. ಈ ಭಸ್ಮವನ್ನು— ತುಪ್ಪ, ಜೇನುತುಪ್ಪ, ಹಶೀಶುಂಠಿರಸ, ಗರಗದರಸ ಇವುಗಳಲ್ಲಿ ಯಾವದಾದರೂ ರೋಗವರಿತು ಅನುಪಾನದಿಂದ ಮೆಣಸಿನಕಾಳಷ್ಟು ಪ್ರಯೋಗಿಸುತ್ತಾ ಬಂದರೆ—ಪಕ್ಕಶೂಲೆ, ಎದೆಶೂಲೆ, ವಾಯು, ಜ್ವರ, ಛಳಿ, ಕೆಮ್ಮು, ವಾಂತಿ, ಹೊಟ್ಟೆಶೂಲೆ ಇವು ನಾಶನವಹುವು.

## ಶೃಂಗಿ ಭಸ್ಮ.

ಸಾರಗದಕೊಂಬನ್ನು ಸಣ್ಣಗೆ ತುಂತುಮಾಡಿ ಅಗಸೆಸೊಪ್ಪಿನರಸದಲ್ಲಿ ೧ ಝಾವ ಬೇಯಿಸುವದು. ಅನಂತರ ನೀರುಳ್ಳಿಗಿಡದ ಸಮೂಲ ಅಥವಾ ಲೋಳೆಸರಪಟ್ಟೆ ಇವುಗಳ ಕವಚಮಾಡಿ ಕಪಡಮುಟ್ಟಿಮಾಡಿ ಪುಟವಿಟ್ಟರೆ ನಿರುದ್ಧಭಸ್ಮವಾಗುವದು. ಇದನ್ನು ರೋಗಕ್ಕೆ ತಕ್ಕ ಅನುಪಾನದಿಂದ ಕೊಡಲು ಎದೆಶೂಲೆ, ಪಾರ್ಶ್ವಶೂಲೆ, ನಾಲಿಗೆಹುಣ್ಣುಗಳು, ಪಡದಿರುವಿಕೆ, ಬಿಳುಪು ಇನ್ನೂ ವಿಧವಿಧ ಉಷ್ಣವಿಕಾರಗಳು ನಾಶವಾಗುವವು.

## ಪ್ರವಾಳ ಭಸ್ಮ.

೪ ಪಲ ಶುದ್ಧ ಹವಳದಬಳ್ಳಿಯನ್ನು ನಿಂಬೇಹುಳೀಲಿ ಒಂದು ದಿನ ನೆನೆಯಿಕ್ಕಿದ್ದು ತೊಳೆದು ಬಾಯಿ ಅಗಲವಾದ ಕುಡಿಕೆಯಲ್ಲಿ ಹಾಕಿ ಮೊಲದರಕ್ತವನ್ನು ಹಾಕಿ ಕಪಡಮುಟ್ಟಮಾಡಿ ೫೦ ಬೆರಣಿಯಲ್ಲಿ ಪುಟವಿಟ್ಟರೆ ದಿವ್ಯವಾದ ಭಸ್ಮವಾಗುವದು. ಇದನ್ನರದುಕೊಂಡು—ಜೇನುತುಪ್ಪದಲ್ಲಿ ಕೊಡಲು ಕೆಮ್ಮು, ಜ್ವರ, ಪಿತ್ತ, ಶೂಲೆ, ಬಿಳುಪು ಹರವಾಗುವವು. ವಾತಕ್ಷಯ, ಉಷ್ಣದ ಬಿಕ್ಕಳಿಕೆ ನಾಶನವಾಗುವವು. ಜೇನಿನಲ್ಲಿ ಸೇವಿಸಿದರೆ ಕಫಕ್ಷಯ, ಉಬ್ಬಸ, ಕಾಸಶ್ವಾಸ, ವಾಯುರೋಗಗಳು ಸಹ ನಿಶ್ಶೇಷವಾಗುವವು. ಇದಕ್ಕೆ ಹುಳಿ ಕೂಡದು. ರೋಗಾನುಗುಣ್ಯವಾದ ಪಥ್ಯವಿರಬೇಕು.

## ಮೌಕ್ತಿಕ ಭಸ್ಮ.

ಒಂದು ವರಾತೂಕ ಗಟ್ಟಿಮುತ್ತುಗಳನ್ನು ಗರಗವರಸದಲ್ಲಿ ಒಂದು ಚಿಕ್ಕ ಕುಡಿಕೇಲಿ ಹಾಕಿ ಚೀಲುಮಾಡಿ ೧೦ ಬೆರಣಿಯಲ್ಲಿ ಪುಟವಿಟ್ಟರೆ ನಿರುದ್ಧಭಸ್ಮವಾಗುವದು. ತುಪ್ಪ ಬೆಣ್ಣೆ ಮುಂತಾದ ಅನುಪಾನದಿಂದ ಕೊಡಲು ದೇಹಕಾಂತಿ, ವೀರ್ಯವೃದ್ಧಿಯಾಗಿ ಪಿತ್ತ, ಉಷ್ಣಹರ. ಪಾಕಾದಿಲೇಹ್ಯ, ಪಿಪ್ಪಲ್ಯಾದಿ ರಸಾಯನಗಳೊಡನೆ ಸೇವಿಸಿದರೆ ಮೇಹ, ಉಬ್ಬಸ, ಮೇಹವಾಯುಹರ, ಅಸ್ಥಿಗತಜ್ವರಗಳನ್ನು ಹರಿಸುವದು. ಇದಕ್ಕೆ ವಾಯುಪದಾರ್ಥ ಕೂಡದು.

## ಶಂಖ ಭಸ್ಮ.

೪ ಪಲ ಶುದ್ಧ ಶಂಖದಚೂರನ್ನು ತಂದು ವಜ್ರನೀಲೀರಸದಲ್ಲಿ ಖಲ್ವದಲ್ಲಿ ನುಣ್ಣಗರದು ಬಿಲ್ಲೆಮಾಡಿ ಒಣಗಿಸಿ ೩೫ ಬೆರಣಿಯಲ್ಲಿ (ಚೀಲುಮಾಡಿ)

ಪುಟವಿಡಲು ನಿರುದ್ಧಭಸ್ಮವಾಗುವದು. ಇದನ್ನೇ ಮತ್ತೆ ಯುಕ್ತದಹಾಲಿನಲ್ಲಿ ಅರೆದು ಲಘುಪುಟವಿಟ್ಟರೆ ಗುಣಾಧಿಕವಹುದು. ನಿಂಬೇಹುಳಿರಸ, ಗರಗದರಸ, ಜೇನುತುಪ್ಪ ಮುಂತಾದ ಅನುಪಾನದಲ್ಲಿ ಕೊಡಲು ವಾತಗುಲ್ಮ, ಹೊಟ್ಟೆ ಶೂಲೆ, ಜ್ವರ ಮುಂತಾದ ಕವಡೆಭಸ್ಮಗಳು ಪ್ರಯೋಗವಾಗುವ ಎಲ್ಲಾ ರೋಗ ಗಳಮೇಲೂ ಬರುವದು.

## ಮತ್ತೊಂದು ವಿಧ.

ಶಂಖವನ್ನು ಕಾಶಿ ತೆಕ್ಕೊಂಡು ಖಲ್ವದಲ್ಲಿಟ್ಟು ಹಾಲುಕುರಟಗನಯಲೆ ರಸದಲ್ಲಿ ೨ ಝಾವ ಅರದು ಹಣತೆಯಲ್ಲಿಟ್ಟು ಚೀಲುಮಾಡಿ ೩೦ ಬೆರಣಿಯಲ್ಲಿ ಪುಟವಿಡುವದು. ಈ ಭಸ್ಮ ಖಲ್ವದಲ್ಲಿ ಹಾಕಿ ಕವಡೆಸಾಂಬ್ರಾಣಿ ೫ಕ್ಕೆ ೧ ರಂತೆ ಹಾಕಿ ಮಾಚಿಪತ್ರೆರಸದಲ್ಲಿ ೨ ಝಾವ ಮರ್ದಿಸಿ ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಚೀಲುಮಾಡಿ ಪುಟವಿಟ್ಟರೆ ದಿವ್ಯಭಸ್ಮವಾಗುವದು. ಈ ಭಸ್ಮ ಗುಲಗಂಜಿತೂಕವನ್ನು ಜೇನಿನಲ್ಲಿ ಸೇವಿಸಿದರೆ ಶೂಲವಾಯುಹರ. ಹಸೀಶುಂಠೀರಸವನ್ನು ಕಾಸಿ ಜೇನುತುಪ್ಪ ಹಾಕಿ ಅದರೊಂದಿಗೆ ಸೇವಿಸಿದರೆ ಗರ್ಭಶೂಲೆ, ಪಿತ್ತವಾಯು, ಎದೆಯುಲ್ಲುರಿ, ಪೈತ್ಯ ಇವು ಹರ; ತಣ್ಣೀರಿನಲ್ಲಾ ಗಲೀ, ಜೇನಿನಲ್ಲಾಗಲೀ ಸೇವಿಸಿದರೆ ಜ್ವರ, ಅಜೀರ್ಣಮಾಂದ್ಯ ನಾಶವಾಗು ವವು. ಪಥ್ಯ ರೋಗಾನುಸಾರವಾಗಿಡುವದು.

## ಆಮೆಯು ಚಿಪ್ಪಿನ ಭಸ್ಮ.

ಇದನ್ನು ಚಿಕ್ಕ ತುಂಡುಗಳು ಮಾಡಿಕ್ಕೊಂಡು ಗೇಕಿನಗೆಡ್ಡೆ (ಭದ್ರ ಮುಷ್ಟಿ) ಹಸೀದನ್ನು ತಂದು ಕುಟ್ಟಿ ಅದನ್ನು ಕವಚವಿಕ್ಕಿ ಚೀಲುಮಾಡಿ ಒಣಗಿಸಿ, ೩೦ ಬೆರಣಿಯಲ್ಲಿ ಪುಟವಿಟ್ಟರೆ ಭಸ್ಮವಾಗುವದು. ತುಪ್ಪದಲ್ಲಿ ಕೊಟ್ಟರೆ ಅಜೀರ್ಣವಿಕಾರ, ಹುಳಿದೇಗು, ಹೊಟ್ಟೆಯುಬ್ಬರಹರ; ಗರುಗ ದರಸ, ಕಬ್ಬಿನರಸ, ಹಸೀಶುಂಠಿರಸ ಇವನ್ನು ಕಾದಸಾಟಿಗೆ ಹಾಕಿ ಅದರಲ್ಲಿ ಕೊಡಲು ಜ್ವರ, ಕೆಮ್ಮು, ಇವುಗಳನ್ನೂ ನಾಶಮಾಡುವದು.

## ಉಪ್ಪು ಭಸ್ಮ.

ಸಮುದ್ರಲವಣ ೧೦ ಪಲ, ಬಿಳಿಗಾರ ೧ ಪಲ, ಸಜ್ಜಕ್ಷಾರ ೧ ಪಲ, ಪೆಟ್ಲುಪ್ಪು ೧ ಪಲ, ಪಟಿಕಾರ ೧ ಪಲ, ಕರ್ಪೂರಶಿಲಾಜತು ೧ ಪಲ ಇವನ್ನು ನಿಂಬೇಹುಳಿಯಲ್ಲಿ ೧ ಝಾವ ಮರ್ದಿಸಿ ಬಿಲ್ಲೆಮಾಡಿ ಒಣಗಿಸಿ, ದೊಡ್ಡ ಹಣ ತೆಯಲ್ಲಿಟ್ಟು ಮೇಲೆ ಬೇರೊಂದು ಹಣತೆಮುಚ್ಚಿ ಚೀಲುಮಾಡಿ ೧೦ ಬೆರಣಿ ಯಲ್ಲಿ ಪುಟಹಾಕುವದು. ಅನಂತರ ಹಾಗಲಕಾಯಿರಸದಲ್ಲರದು ಕುಕ್ಕುಟ ಪುಟಹಾಕುವದು. ಅನಂತರ ಗಜ್ಜುಗದಸೊಪ್ಪಿನರಸದಲ್ಲಿ ಅರದು ಪುಟಹಾಕು ವದು. ಆಗ ನಿರುದ್ಧಭಸ್ಮವಾಗುವದು.

### ಇದರಲ್ಲಿ ವಾಶಿಯಾಗುವ ವ್ಯಾಧಿಗಳು.

ಈ ಉಪ್ಪು ಭಸ್ಮ ೪ ಗುಲಗಂಜಿತೂಕವನ್ನು ಜೇನಿನಲ್ಲಿ ಸೇವಿಸಿದರ ಮೂತ್ರದಉರಿ, ಪಕ್ಕಶೂಲೆ, ಸೂತಿಕಾವಾಯುಗಳು ನಾಶವಾಗುವವು.

ಬಾಳೇಗಡ್ಡೆರಸದಲ್ಲಿ ಸೇವಿಸಿದರೆ ಮೂತ್ರಕಟ್ಟು, ಮೂತ್ರಾಘಾತ, ಮೂತ್ರಕೃಛ್ರಹರ.

ಹಶೀಶುಂಠಿರಸದಲ್ಲಿ ಈ ಭಸ್ಮ ಹಾಕಿ ಸ್ವಲ್ಪ ಜೇನುತುಪ್ಪ ಮಿಶ್ರಮಾಡಿ ಸೇವಿಸಿದರೆ—ಉದರಶೂಲೆ, ವಾಂತಿ, ಅಜೀರ್ಣ, ಹೊಟ್ಟೆಯುಬ್ಬರ, ಬಾಯಲ್ಲಿ ನೀರುಸುರಿಯುವಿಕೆ ಮುಂತಾದ ರೋಗಹರ.

ನುಗ್ಗಿ ಚಕ್ಕೆರಸದಲ್ಲಿ ಸೇವಿಸಲು ಸೂತಿಕಾವಾಯು ಹರವಾಗುವದು. ಜೇನುತುಪ್ಪದಲ್ಲಿ ಸೇವಿಸಲು ಕಂಠದಲ್ಲಿ ಕಟ್ಟಿರುವ ಕಫ ಹೊರಬೀಳುವದು.

ಇದಕ್ಕೆ ಪಥ್ಯ:—ವಾಯುಪದಾರ್ಥ ಕೂಡದು. ತೊಗರೀಬೇಳೆ, ಬದನೇಕಾಯಿ, ಎಳೇಹರವೇಸೊಪ್ಪು, ನುಗ್ಗಿಸೊಪ್ಪು, ನುಗ್ಗೆಕಾಯಿ, ಚಪ್ಪರದವರೆಕಾಯಿ, ಬಿಸಿನೀರು ಕುಡಿಯುವಿಕೆ, ತುಪ್ಪ, ಆಕಳಮಜ್ಜಿಗೆ, ಹುಳ್ಳಿ, ಸಕ್ಕರೆ, ಹಾಲು ಇವು ಹಿತವಾದವು.

## ರ ಸ ಕ ರ್ಪೂ ರ ಭ ಸ್ಮ .

ರಸಕರ್ಪೂರದಗಡ್ಡೆ ೧। ಪಲಾ (೫ ತೊಲಾ) ಒಂದು ದೊಡ್ಡ ಮಡಿಕೆಯನ್ನು ತಂದು—ತಳದಲ್ಲಿ ೨ ಅಂಗುಲ ಮರಳುಹಾಕಿ ಒಲೇಮೇಲಿಟ್ಟು ಅದು ಕಾದನಂತರ ಪಿಂಗಾಣಿತಟ್ಟೆಯೊಂದನ್ನು ಆ ಕಾದ ಮರಳಮೇಲೆ ಇಟ್ಟು ಈ ಪಿಂಗಾಣಿಯಲ್ಲಿ ಮೇಲಿನ ರಸಕರ್ಪೂರದ ಗಡ್ಡೆಯನ್ನಿಟ್ಟು ಮೊಲೇಹಾಲಿನಲ್ಲಿ ಚುರುಕು ಕೊಡುತ್ತಾ ಹೊಗೆಯಾಡದಂತೆ ಲಘುವಾದ ಅಗ್ನಿಯಿಂದ ಉರಿ ಹಾಕಬೇಕು. ಒಂದೊಂದೇ ಬೊಟ್ಟು ಬೊಟ್ಟಾಗಿ ಚುರುಕು ಕೊಡುವದು. ೪ ಝಾವ ಚುರುಕು ಕೊಟ್ಟು ಅನಂತರ ತೊಂಡೇಸೊಪ್ಪಿನರಸದಲ್ಲಿ ೨ ಝಾವ ಚುರುಕುಕೊಡುವದು. ಅನಂತರ ಕರೀತುಲಸೀ ಎಲೇರಸದಲ್ಲಿ ೨ ಝಾವ ಚುರುಕುಕೊಡುವದು. ಅನಂತರ ಅದನ್ನು ತೆಕ್ಕೊಂಡು ಕರೀಉಮ್ಮತ್ತಿಯ ಲೆಯನ್ನರದು ಕವಚವಿಕ್ಕಿ ಹಣತೆಯಲ್ಲಿಟ್ಟು ಮುಚ್ಚಿ ಚೀಲುಮಾಡಿ ಒಣಗಿಸಿ ೫ ಬೆರಣಿಯಲ್ಲಿ ಪುಟವಿಟ್ಟರೆ ಭಸ್ಮವಾಗುವದು.

### ಇದರಲ್ಲಿ ಗುಣವಾಗುವ ವ್ಯಾಧಿಗಳು.

ಈ ಭಸ್ಮ ಸಾಸವೆಕಾಳಷ್ಟು ಮಕ್ಕಳಿಗೂ, ಹೆಸರುಕಾಳಷ್ಟು ದೊಡ್ಡವರಿಗೂ ಕೊಡುವದು.

ಈ ಭಸ್ಮವನ್ನು ಮೊಲೆಹಾಲಲ್ಲಿ ಕೊಟ್ಟರೆ ಸಕಲವಿಧ ಜ್ವರ, ಸನ್ನಿಪಾತ, ದ್ವಂದ್ವಜ್ವರಗಳೆಲ್ಲ ಹೋಗುವವು. ಜೇನುತುಪ್ಪದಲ್ಲಿ ಕೊಟ್ಟರೆ

ಪಿತ್ತವಾಯುಗಳು, ಉದರವಿಕಾರ, ವಾಂತಿ, ಬಿಕ್ಕಳಿಕೆ, ಕಾವಾಲೆ, ಪಾಂಡು ಸಹ ಹರವಾಗುವವು.

ಹಶೀಶಂಬಿರಸದಲ್ಲಿ ಕೊಡಲು ಪಿತ್ತರೋಗಗಳು, ಪಿತ್ತವಿಕಾರಗಳು, ವಾಂತಿ, ರಕ್ತಪಿತ್ತ, ಹುಳಿತೇಗು, ಅರುಚಿ, ಪಿತ್ತಜ್ವರ ಇವು ನಾಶನವಾಗುವವು.

ನೆಲಬೇವಿನ ಕಷಾಯದಲ್ಲಿ ಕೊಟ್ಟರೆ ಯಾತಕ್ಕೂ ಜಗ್ಗದಿರುವ ಏಕಾಹಿಕ, ದ್ವ್ಯಾಹಿಕ, ತ್ರ್ಯಾಹಿಕ, ಚಾತುರ್ಥಿಕ ಇನ್ನೂ ವಿಧವಿಧವಾದ ಜ್ವರ, ಛಳಿ, ಉಷ್ಣವಾಯು ಇವೆಲ್ಲಾ ನಾಶವಾಗುವವು.

ತುಂಗಮುಸ್ತೆ ಚೂರ್ಣ, ಯಕ್ಕದಬೇರಿನರಸ, ನುಗ್ಗೆಚಕ್ಕೆರಸ, ಗರುಗದರಸ, ಲೋಳಿಸರಬೇರಿನರಸ, ಕೋಳಿಮೊಟ್ಟೆಯ ತೈಲ—ಇವುಗಳಲ್ಲಿ ಈ ಭಸ್ಮವನ್ನು ಶೇರಿಸಿ ಸ್ವಲ್ಪ ಜೇನು ಮಿಶ್ರಮಾಡಿ ಕೊಟ್ಟರೆ—ವಿಷಮದೋಷ, ಸನ್ನಿಪಾತ, ವಾಯುಗಳು, ಇನ್ನೂ ಅನೇಕ ವ್ಯಾಧಿಗಳುಹರ.

ರೋಗವರಿತು ಸಮಯೋಚಿತ ಪಥ್ಯವಿಡಬೇಕು. ಗೋಧಿಯರವೆ ಗಂಜಿ, ಎಳೇಚಪ್ಪರದವರೆಕಾಯಿ, ನುಗ್ಗೆಸೊಪ್ಪು ಮುಂತಾದ ಉತ್ತಮ ಆಹಾರವನ್ನು ಮಾಡಿಸಬೇಕು.

## ಬೆ ಳಿ ಗಾ ರ ಭ ಸ್ಮ .

ಯಣ್ಣೆಬೆಳಿಗಾರ ೫ ಪಲ ಖಲ್ವದಲ್ಲಿ ಹಾಕಿ ಹಾಲುಕುರಟಿಗನಯಲೆ ರಸದಲ್ಲಿ ೪ ಝಾವ ಮರ್ದಿಸಿ ಬಿಲ್ಲೆಮಾಡಿ, ಒಂದು ಹಣತೆಯಲ್ಲಿಟ್ಟು ಒಣಗಿಸಿ, ಮೇಲೊಂದು ಹಣತೆಮುಚ್ಚಿ ಚೀಲುಮಾಡಿ ೧೦ ಬೆರಣಿಯಲ್ಲಿ ಪುಟವಿಡಲು ಭಸ್ಮವಾಗುವದು.

ಈ ಭಸ್ಮ ೪ ಗುಲಗಂಜಿ ತೂಕವನ್ನು ಜೇನುತುಪ್ಪದಲ್ಲಿ ಸೇವಿಸಲು ಕಟ್ಟುಮೂತ್ರ ಹರಿಸುವದು. ತೆಂಗಿನಕಾಯಿ ಹಾಲಿನಲ್ಲಿ ಸೇವಿಸಿದರೆ ಮೂತ್ರದಉರಿ, ಮೂತ್ರಕಟ್ಟು, ಲಿಂಗದಲ್ಲಿರುವ ಉರಿ ಮುಂತಾದ ಎಷ್ಟೋ ವ್ಯಾಧಿಗಳು ನಿರ್ನಾಮವಾಗುವವು. ಇಚ್ಛಾಪಥ್ಯ, ವಾತಪದಾರ್ಥ ವರ್ಜ್ಯ.

## ಪಾ ಲು ತು ತ್ತ ಭ ಸ್ಮ.

ಶುದ್ಧಿಮಾಡಿದ ಪಾಲುತುತ್ತ ೧ ಪಲ, ನವಾಸಾರ ೧ ಪಲ ಇವೆರಡನ್ನೂ ಕುಪ್ಪಿಯಲೆಯ ರಸದಲ್ಲಿಯೂ, ರುದ್ರಜಡೆರಸದಲ್ಲಿಯೂ ೧ ದಿನವೆಲ್ಲಾ ಮೇಣವಾಗುವಂತೆ ಅರದು ಬಿಲ್ಲೆಮಾಡಿ ಒಣಗಿಸಿ, ಹಣತೆಯಲ್ಲಿಕ್ಕಿ ಮೇಲೆ ಮುಚ್ಚಿ ಛಟ್ಟೆಯಾದ ೪ ಚೀಲುಗಳನ್ನು ಮಾಡಿ ೧೦ ಬೆರಣಿಯಲ್ಲಿ ಪುಟವಿಟ್ಟರೆ ಭಸ್ಮವಾಗುವದು.

ಈ ಭಸ್ಮವನ್ನು ಅಕ್ಕಿಕಾಳಷ್ಟು ತುಪ್ಪದಲ್ಲಿ ಕೊಟ್ಟರೆ ೧೮ ಕೂಲೆಜಾಡ್ಯಗಳೂ, ವ್ರಣರೋಗಗಳೂ, ಸಂಧಿರೋಗಗಳೂ, ಮಹೋದರಗಳೂ ಮುಂತಾದ ಎಲ್ಲಾ ಜಾಡ್ಯಗಳೂ ಹರವಾಗುವವು. ದಿನ ೨ ಹೊತ್ತು ಸೇವಿಸಬೇಕು. ಅನುಪಾನಗಳನ್ನು ರೋಗಾನುಗುಣ್ಯವಾಗಿ ಕಲ್ಪಿಸಬೇಕು.

ಇದಕ್ಕೆ ಪಥ್ಯ:—ಹುರದ ತೊಗರಿಬೇಳೆ, ನುಗ್ಗೆಚಿಗರು, ನುಗ್ಗೆ ಎಳೇಕಾಯಿಗಳು, ಚಪ್ಪರದವರೇಕಾಯಿ, ತುಪ್ಪ, ಹೆಸರುಬೇಳೆ ಹಾಕಿಮಾಡಿದ ಖಿಚಡಿ, ಹಾಲು, ನಿಂಬೇಕಾಯಿ, ಉಪ್ಪಿನಕಾಯಿ ಇವು ಪಥ್ಯಗಳು. ಹುಳಿ, ಮೆಣಶಿನಕಾಯಿ, ಕಲದಿ ವರ್ಜ್ಯ.

## ಮ ಣಿ ಶಿ ಲೆ ಭ ಸ್ಮ .

೧ ಪಲ ಮಣಿಶಿಲೆ, ಚೊಕ್ಕಹಾದ ಸುಣ್ಣ ೧ ತೊಲಾ, ಪಡಿಯುಚೆಪ್ಪು ಅರಪಲ, ಅಟ್ಟುಪ್ಪು ೧ ಪಲ, ಸಹದೇವಿಬೇರು ೧ ಪಲ ಇವೆಲ್ಲಾ ಖಲ್ವದಲ್ಲಿ ಹಾಕಿ ನಿಂಬೇಹುಳಿಯಲ್ಲಿ ೨ ಝಾಮ ಮರ್ದಿಸುವದು. ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಘಟ್ಟಿ ಚೇಲುಮಾಡಿ ಕುಕ್ಕುಟ ಪುಟವಿಡಲು ಭಸ್ಮವಾಗುವದು. ಈ ಭಸ್ಮವನ್ನು ತುಪ್ಪದಲ್ಲಿ ಕಾಲು ಗುಲಗಂಜಿತೂಕಕ್ಕೂ ಕಡಮೆ ಕೊಡಬೇಕು. ಮೇಹವ್ರಣ, ಮೈಮೇಲೆ ಹೂವು ಒಡದಿರುವಿಕೆ, ಭಗಂದರ, ಉಪದಂಶ, ಹುಣ್ಣುಗಳು ಇವು ಹರವಾಗುವವು. ಜೇನುತುಪ್ಪದಲ್ಲಿ ಸೇವಿಸಿದರೆ ಪೀನಸರೋಗಗಳು, ಸಂದುವಾತಗಳು, ಅರ್ಧಾಂಗವಾಯು, ಜ್ವರಗೆಡ್ಡೆ, ರಕ್ತದಗೆಡ್ಡೆ, ರಕ್ತಪಿತ್ತ, ವಾತರಕ್ತ ಇವು ನಾಶನವಾಗುವವು.

## ಗ ಂ ಧ ಕ ಭ ಸ್ಮ .

ಶುದ್ಧಿಮಾಡಿದ ನೆಲ್ಲೀಕಾಯಿಗಂಧಕ ೨ ಪಲವನ್ನು ಖಲ್ವದಲ್ಲಿ ಹಾಕಿ ಕಿರಿನೆಲ್ಲಿಯರಸದಲ್ಲಿ ೪ ಝಾಮ ಮರ್ದಿಸಿ ಬಿಲ್ಲೆಮಾಡಿ ಕಿರಿನೆಲ್ಲಿ ಸಮೂಲ ಕವಡೆಸುಣ್ಣ ಎರಡನ್ನೂ ಅರದು ಈ ಗಂಧಕದಬಿಲ್ಲೆಗೆ ಕವಚವಿಕ್ಕಿ ಒಣಗಿಸಿ, ಹಣತೆಯಲ್ಲಿಟ್ಟು ಮೇಲೊಂದು ಮುಚ್ಚಿ, ಘಟ್ಟಿಯಾಗಿ ಚೇಲುಮಾಡಿ ಕುಕ್ಕುಟ ಪುಟವಿಡಲು ಭಸ್ಮವಾಗುವದು.

ಇದರಿಂದ ಗುಣವಾಗುವ ವ್ಯಾಧಿಗಳು.

ಈ ಭಸ್ಮ ಗುಲಗಂಜಿತೂಕ ತುಪ್ಪದಲ್ಲಿ ಒಂದು ಮಂಡಲ ಸೇವಿಸಿದರೆ ಮೂಲರೋಗ, ಒಳಮೊಳೆ, ಹೊರಮೊಳೆ, ಭಗಂದರದಲ್ಲಿ ಮೂತ್ರಬರುವ ಪವಿತ್ರವೆಂಬ ಜಾಡ್ಯ ಇವು ನಾಶನವಾಗುವವು.

ಈ ಗಂಧಕಭಸ್ಮವನ್ನು ಬಿಶಿಮಾಡಿದ ಹಿಪ್ಪಲಿಚೂರ್ಣದಲ್ಲಿ ಸಕ್ಕರೆಬೆರಸಿದ್ದರಲ್ಲಿ ತುಪ್ಪವನ್ನು ಬೆರಸಿ ಸೇವಿಸಿದರೆ ಕಠಿಣವಾದ ಕುಷ್ಟಜಾಡ್ಯಗಳು, ಮೇಹವ್ರಣಗಳು ನಿರ್ನಾಮವಾಗುವವು.

ಜೇನುತುಪ್ಪದಲ್ಲಿ ಈ ಭಸ್ಮವನ್ನು ಸೇವಿಸಿದರೆ ಶರೀರದ ಶೋಭೆ, ನೋವುಗಳು, ಕ್ಷಯಜಾಡ್ಯಗಳು, ಉಬ್ಬಸ, ಕಾಸಶ್ವಾಸ, ಮೂತ್ರದಉರಿ, ಮೇಹಧೋರೆ, ಮೇಹಚಟ್ಟೆ ಮುಂತಾದ ವ್ಯಾಧಿಗಳು ನಿವೃತ್ತಿಯಾಗುವವು.

ಪಥ್ಯವು:—ತೊಗರಿಬೇಳೆ, ಹೆಸರುಬೇಳೆ, ಹೀರೇಕಾಯಿ, ಸೋರೆಕಾಯಿ, ಬಾಳೇಕಾಯಿ, ಬಾಳೇಹೂವು, ಮೆಂತಿಯದಸೊಪ್ಪು, ಚಪ್ಪರದವರೆಕಾಯಿ, ಕಾಚಿಸೊಪ್ಪು, ಹೊನಗೊನೆಸೊಪ್ಪು, ಬದನೇಕಾಯಿ, ನುಗ್ಗೇಕಾಯಿ, ಬೆಂಡೆಕಾಯಿ, ಮುಲ್ಲಂಗಿ, ಮೊಸರು, ಹುಳಿ, ನಿಂಬೇಹುಳಿ, ತುಪ್ಪ, ಮಜ್ಜಿಗೆ ಇವು ಪಥ್ಯಕಾರಿಗಳು. ಉದ್ದಿನವಡೆ ಸಹಾ ಆಗಬಹುದು. ಹುಣಸೇಹುಳಿ ಕೂಡದು. ಮೆಣಶಿನಕಾಯಿ, ತೆಂಗಿನಕಾಯಿ, ಶಲದಿ ಇವೆಲ್ಲಾ ವರ್ಜ್ಯ.

## ಉಕ್ಕು ಭಸ್ಮ.

ಉಕ್ಕು ರಾಪುಡಿಯನ್ನು ಮೂಶೆಯಲ್ಲಿ ಹಾಕಿ ಕೆಂಪಗೆ ಕಾಶಿ ಮೇಕೆಯ ಮೂತ್ರದಲ್ಲಿ ೧೧ ಸಲ ಹಾಕುವದರಿಂದ ಶುದ್ಧಿಯಾಗುತ್ತದೆ. ಅನಂತರ ಖಲ್ವದಲ್ಲಿ ಹಾಕಿ ಪುಳ್ಳಂಪುರಚಿರಸದಲ್ಲಿ ನಾಲ್ಕುಝಾಮ ಮರ್ದಿಸಿ ಬಿಲ್ಲೆಮಾಡಿ ಒಣಗಿಸಿ, ಹಣತೆಯಲ್ಲಿಟ್ಟು ಚೇಲುಮಾಡಿ ಒಣಗಿಸಿ ಪುಟವಿಕ್ಕುವದು. ಪುನಃ ಪುಳ್ಳಂಪುರಚಿರಸದಲ್ಲಿ ಮರ್ದಿಸಿ ಪುಟಹಾಕುವದು. ಅನಂತರ ಮುಪ್ಪಿಹಣ್ಣಿನ ರಸದಲ್ಲಿ ೨ ಝಾಮ ಮರ್ದಿಸಿ ಬಿಲ್ಲೆಮಾಡಿ ಪುಟವಿಡುವದು. ಅನಂತರ ನಿಂಬೇಹುಳೀಲಿ ಅರದು ಪುಟವಿಕ್ಕುವದು. ಭಸ್ಮವಾಗುವದು.

### ಇದರಿಂದ ಗುಣವಾಗುವ ವ್ಯಾಧಿಗಳು.

ಈ ಭಸ್ಮ ಗುಲಗಂಜಿತೂಕವನ್ನು ಜೇನುತುಪ್ಪದಲ್ಲಿ ಸೇವಿಸಲು ಮೇಹಗಳು ನಿವಾರಣೆಯಾಗುವವು. ದೃಢವಾದ ಶಕ್ತಿಬರುವದು. ಇಂದ್ರಿಯಪುಷ್ಟಿಯನ್ನೂ, ನರಗಳಿಗೆ ಬಲವನ್ನೂ ಉಂಟುಮಾಡುವದು.

ಈ ಭಸ್ಮವನ್ನು ಭೃಂಗರಾಜಚೂರ್ಣದಲ್ಲಿ ಸೇವಿಸಿದರೆ—ಮೇಹಪಾಂಡುಗಳು, ಪಿತ್ತಪಾಂಡುಗಳು, ಮೇಹನಂಜು ಇವುಗಳನ್ನು ನಿರ್ಮೂಲವಾಗಿ, ಬಿಳಿಚಿಕೊಂಡಿರುವ ಶರೀರಕ್ಕೆ ರಕ್ತವೃದ್ಧಿಯನ್ನುಂಟುಮಾಡಿ ಒಳ್ಳೇ ಬಲವನ್ನುಂಟುಮಾಡುವದು.

ಇದನ್ನು ತ್ರಿಕಟುಕಚೂರ್ಣ ಬೆರಸಿ, ಸ್ವಲ್ಪ ಜೇನುತುಪ್ಪದಲ್ಲಿ ಕಲಿಸಿ ಸೇವಿಸಿದರೆ ಶೂಲೆಗಳು ನಿವೃತ್ತಿಯಾಗುವವು.

ಈ ಉಕ್ಕುಭಸ್ಮದೊಂದಿಗೆ ಗಂಧಕಭಸ್ಮವನ್ನೂ ಶೇರಿಸಿ ತುಪ್ಪದಲ್ಲಿ ಸೇವಿಸಿದರೆ ಮೇಹವ್ರಣಗಳು, ಭಗಂದರ, ಉಪದಂಶ, ಪವಿತ್ರ ಮುಂತಾದ ರೋಗಗಳೂ, ಶುಕ್ಲಮೇಹವೂ ನಿರ್ಮೂಲವಾಗುವದು.

ಪಥ್ಯ:—ಪಾಂಡುರೋಗಕ್ಕೂ, ನಂಜುರೋಗಗಳಿಗೂ ಹುಳಿ, ವಾತಕರ ಪದಾರ್ಥಗಳು ಕೂಡದು. ಮೇಹವ್ರಣಗಳಿಗೂ, ಭಗಂದರಾದಿಗಳಿಗೂ-ಬದನೇಕಾಯಿ, ಹೆಸರು, ಕಡಲೆ, ಮೀನುಗಳು ಇವು ಕೂಡದು. ಗೋಧೀಮಯಗಂಜಿ, ಹಾಲು, ತುಪ್ಪ ಇತ್ಯಾದಿ ಪಥ್ಯಪದಾರ್ಥಗಳು.

## ಬೇರೇ ವಿಧ.

ಶುದ್ಧ ಉಕ್ಕಿನಪುಡಿಯನ್ನು ಪಿಂಗಾಣಿಯಲ್ಲಿ ಹಾಕಿ ಹುಳಿದಾಳಿಂಬಹಣ್ಣಿನರಸ ಉಕ್ಕಿನಪುಡಿ ಮುಳುಗುವಂತೆ ಹೊಯಿದು ೭ ದಿನ ಬಿಸಲಲ್ಲಿ ಇಟ್ಟರೆ ಭಸ್ಮವಾಗುತ್ತದೆ. ಈ ಭಸ್ಮ ೪ ಗುಲಗಂಜಿತೂಕವನ್ನು ಜೇನುತುಪ್ಪದಲ್ಲಿ ಸೇವಿಸಲು ಮೇಹಪಾಂಡುಗಳು, ಪಿತ್ತಪಾಂಡು, ಮೇಹಜ್ವರಗಳು ನಾಶವಾಗುವವು. ಮೇಹವಾಯುಗಳು, ಜ್ವರಗಡ್ಡೆ, ಗುಲ್ಮ ಇವುಸಹಾ ನಿವಾರಣೆಯಾಗುವವು.

## ಲೋಹಭಸ್ಮ.

ಕಬ್ಬಿಣದ ರಾಪುಡಿ ಮೇಲಿನ ಉಕ್ಕಿನಂತೆ ಶುದ್ಧಿಮಾಡಿ, ಖಲ್ವದಲ್ಲಿ ಹಾಕಿ ನಿಂಬೇಹುಳಿಯಲ್ಲಿ ೮ ಝಾವ ಮರ್ದಿಸಿ ಬಿಲ್ಲೆಕಟ್ಟಿ ಒಣಗಿಸಿ, ಹಣತೆಯಲ್ಲಿಟ್ಟು ಮೇಲೆ ಮುಚ್ಚಿ ಚೀಲುಮಾಡಿ ೧೦೦ ಬೆರಣಿಯಲ್ಲಿ ಪುಟವಿಕ್ಕಿ ಅನಂತರ ನೇರಲುಚಕ್ಕೆರಸದಲ್ಲಿ ಅರದು ಪುಟಹಾಕುವದು. ಅನಂತರ ಲೋಳಸರದರಸದಲ್ಲರದು ಪುಟವಿಡುವದು. ಹೀಗೆ ಲೋಳಸರದರಸದಲ್ಲಿಯೇ ಮೂರು ಪುಟವಿಕ್ಕಿದರೆ ಭಸ್ಮವಾಗುತ್ತದೆ.

### ಇದರಿಂದ ಗುಣವಾಗುವ ವ್ಯಾಧಿಗಳು.

ಈ ಭಸ್ಮ ಅರ್ಧಗುಲಗಂಜಿ ಅಥವಾ ೧ ಗುಲಗಂಜಿತೂಕವನ್ನು ಜೇನಿನಲ್ಲಿ ಸೇವಿಸಲು ಪಾಂಡುರೋಗಗಳು, ಮೇಹನಂಜು, ಜ್ವರಗಡ್ಡೆ, ಗುಲ್ಮ, ಕ್ಷಯ, ಕಾಸಶ್ವಾಸ, ಶೋಭೆ ಇವು ನಿರ್ಮೂಲವಾಗುವವು.

ಆಡುಸೋಗೆರಸ, ಮೆಣಸಿನಚೂರ್ಣ, ಶುಂಠಿಚೂರ್ಣ, ಬಿಶಿಮಾಡಿದ ಹಿಪ್ಪಲಿಚೂರ್ಣ ಇವುಗಳನ್ನು ಶೇರಿಸಿ ಇದರ ಅನುಪಾನದಲ್ಲಿ ಅಥವಾ ಅಗ್ನಿಕುಮಾರಕರಸವನ್ನು ಅರದು ಅದರಜತೇಲಿ ಈ ಭಸ್ಮವನ್ನು ಪ್ರಯೋಗಿಸಿದರೆ—ಕಾಸಶ್ವಾಸ, ಗೂರಲು ಇವು ನಾಶನವಾಗುವವು.

ಇದಕ್ಕೆ ಪಥ್ಯ:—ತೊಗರೀಬೇಳೆ, ನುಗ್ಗೆಕಾಯಿ, ಯುಳೇಹರವೆಸೊಪ್ಪು, ಗೋಧೀರವೆ, ಆಕಳತುಪ್ಪ, ಸಕ್ಕರೆ ಇವು ಪಥ್ಯಕಾರಿಗಳು. ಶೀತಲಪದಾರ್ಥ ಕೂಡದು.

## ತಾಮ್ರಭಸ್ಮ.

ಹಳೇ ತಾಮ್ರದ ದುಡ್ಡುಗಳನ್ನು ತೆಳುವಾದ ರೇಕುಗಳಾಗಿ ಬಡಿದು, ತಾಳಕ ಕಾಲುಪಲ, ನವಾಸಾರ ಕಾಲುಪಲ, ಸಮುದ್ರಲವಣ ಕಾಲುಪಲ,

ನಿಂಬೇಹುಳಿ ೧ ಶೇರು, ಹುಳಿಮಜ್ಜಿಗೆ ಕಾಲುಶೇರು ಒಂದು ಪಾತ್ರೆಯಲ್ಲಿ ಹಾಕಿ, ಇದರಲ್ಲಿ ತಾಳಕ ಮತ್ತು ಉಪ್ಪು ಇವನ್ನು ಪುಡಿಮಾಡಿ ಹಾಕಿ ತಾಂಬ್ರದರೇಕನ್ನು ಕುಲುಮೆ ಬೆಂಕಿಯಲ್ಲಿ ಕೆಂಪಗೆ ಕಾಸಿಕಾಸಿ ಈ ನಿಂಬೇಹುಳಿ ಕೂಟದಲ್ಲಿ ಅದ್ದುತ್ತಾ ೧೧ ಸಲ ಅದ್ದುವದು

ಹೀಗೆ ಶುದ್ಧಿಮಾಡಿದ ತಾಂಬ್ರದರೇಕು ೧ ಪಲ, ಗಂಧಕ ಅರ್ಧಪಲ, ಗೋರುಹರಳು, ಆಡುಮುಟ್ಟದ ಸಮೂಲ ಇವನ್ನೂ ಸಮವಾಗಿ ಕಾಡಿಗೆಯಂತೆ ಅರದು ತಾಂಬ್ರದರೇಕುಗಳಿಗೆ ಕವಚವಿಕ್ಕಿ ಬಿಸಲಲ್ಲಿ ಒಣಗಿಸಿ, ಚೀಲುಮಾಡಿ ಗಜಪುಟವಿಕ್ಕಿದರೆ ನಿರುದ್ಧಭಸ್ಮವಾಗುತ್ತವೆ.

ಅಥವಾ ಶುದ್ಧಿಮಾಡಿದ ತಾಂಬ್ರದ ತಗಡನ್ನು ಹುಣಸೆಯಲೆ ಪಂಗವಾಗಿ ರೇಕುಬಡಿಸಿ, ಗಂಧಕವನ್ನು ಯಕ್ಕೆಯಹಾಲಲ್ಲಿ ನುಣ್ಣಗರದು ರೇಕುಗಳಿಗೆ ಕವಚವಿಕ್ಕಿ ಚೀಲುಮಾಡಿ ಪುಟವಿಟ್ಟರೂ ಭಸ್ಮವಾಗುತ್ತದೆ.

ಈ ಮೇಲಿನ ಭಸ್ಮಗಳಲ್ಲಿ ಇನ್ನೂ ಪಿರಗು ಇದ್ದಲ್ಲಿ ಪುನಃ ನಿಂಬೇಹುಳೀಲಿ ಅಥವಾ ಅರ್ಕಕ್ಷೀರದಲ್ಲಿ ನಾಲ್ಕುಝಾವ ಮರ್ದಿಸಿ ಹಣತೆಯಲ್ಲಿಟ್ಟು ಚೀಲುಮಾಡಿ ಪುಟವಿಟ್ಟರೆ ನಿರುದ್ಧಭಸ್ಮವಾಗುವದು.

**ಇದರಿಂದ ಗುಣವಾಗುವ ವ್ಯಾಧಿಗಳು.**

ಅಕ್ಕಿಕಾಳಷ್ಟು ಈ ಭಸ್ಮ ತುಪ್ಪದಲ್ಲಿ ಸೇವಿಸಿದರೆ ಗರ್ಭದಲ್ಲಿರುವ ರಕ್ತಗೆಡ್ಡೆ, ಮಾಂಸದಗೆಡ್ಡೆ, ನೀರುಗೆಡ್ಡೆ, ಮಹೋದರ, ಶೋಭೆ, ಪಾಂಡು, ಕಾಮಾಲೆ, ನೀರುಪಾಂಡು, ಶೂಲೆ, ಗುಲ್ಮ, ಕುಷ್ಟರೋಗಗಳು ಇವುಗಳನ್ನು ಹರಿಸುತ್ತದೆ.

ಕರೀಲಕ್ಕಿಸೊಪ್ಪಿನರಸದ ಅನುಪಾನದಲ್ಲಿ ಜೇನುಬೆರಸಿಕೊಳ್ಳಲು ವಾತವ್ಯಾಧಿಗಳು, ಅರ್ಧಾಂಗವಾಯು, ಅಪತಾನಕವಾಯು, ವಾತಜ್ವರ, ಇನ್ನೂ ವಿಧವಿಧ ವಾಯುರೋಗಗಳು, ವಾತರಕ್ತ ಇವು ನಾಶವಾಗುವವು.

ಪಥ್ಯ:—ಹೆಸರು ಗಂಜಿ, ಖಿಚ್ಚಡಿಅನ್ನ, ತುಪ್ಪ, ಹಾಲು, ಮೊಸರು, ಸೋರೆಕಾಯಿ, ಹೀರೆಕಾಯಿ, ಕೆಸವಿನಗೆಡ್ಡೆ, ಸಕ್ಕರೆ ಹಣ್ಣುಗಳು, ಶೀಪದಾರ್ಥಗಳು ಇವು ಹಿತವಾದವು. ಹುಳಿ, ಮೆಣಶಿನಕಾಯಿ ಇವು ಕೂಡದು.

ಈ ಭಸ್ಮ ಅಕ್ಕಿಕಾಳಷ್ಟು ತುಪ್ಪ, ಬೆಣ್ಣೆ, ಸಕ್ಕರೆಮಿಶ್ರದಿಂದ ತೆಕ್ಕೊಳ್ಳುವದು.

## ಬೇರೇ ವಿಧ

ತಾಂಬ್ರದ ಹಳೇದುಡ್ಡು ಕಾಸಿ ಶುದ್ಧಿಮಾಡಿ ಒಂದು ಹಣತೇಲಿ ಹಾಕಿ, ಉತ್ತರಣಿರಸದಲ್ಲಿ ಚುರುಕು ಕೊಡುವದು. ಅನಂತರ ದುಡ್ಡುಗಳ ಸಮತೂಕ ಅದೇ ರಸವನ್ನು ಬೆಳಗಾರ ಸ್ವಲ್ಪ ಹಾಕಿ ಒಂದು ಬಲವಾದ ಮುಚ್ಚಳ

ಳದಲ್ಲಿಟ್ಟು ಚೀಲುವಮಾಡಿ ಪುಟವಿಟ್ಟರೆ ಬಿಳುಪಾಗಿ ಭಸ್ಮವಾಗುವದು. ಅಥವಾ ಅಪಾಮಾರ್ಗದ ಸಮೂಲವನ್ನರದು ಕವಚತನ್ನು ಕೊಟ್ಟು ಪುಟಕ್ಕಿಡುವದು.

## ಬೆಳ್ಳಿ ಭಸ್ಮ.

ಬಳ್ಳೀ ಬೆಳ್ಳಿಯಸರಿಗೆ ೧ ಪಲ, ಕುಮಾಟಬೊಕಿಯಲ್ಲಿ ಕೆಂಪಗೆ ಕಾಸಿ ಉತ್ತರಣಿರಸದಲ್ಲಿ ೨೧ ಸಲ ಅದ್ದುವದು. ಅನಂತರ ತಾಳಕ ೧ ಪಲ, ನಿಂಬೆಹುಳೀಲಿ ಅರದು ಶುದ್ಧ ರಜತದ ತಗಡಿಗೆ ಲೇಪಿಸಿ ಪುಟವಿಟ್ಟರೆ ಭಸ್ಮವಾಗುವದು.

### ಇದರಲ್ಲಿ ಗುಣವಾಗುವ ವ್ಯಾಧಿಗಳು.

ಈ ಭಸ್ಮವನ್ನು ಅಕ್ಕೀಕಾಳಷ್ಟು ತುಪ್ಪದ ಅನುಪಾನದಲ್ಲಿ ಕೊಟ್ಟರೆ ಮೇಹಗಳು, ಮೇಹದವಿಕಾರಗಳು ಹರಿಸುವದು. ಬೆಣ್ಣೆಯ ಅನುಪಾನದಲ್ಲಿ ಬಿಳಪು ನಿವೃತ್ತಿಯಾಗಿ ಧಾತುಪುಷ್ಟಿಯನ್ನುಂಟು ಮಾಡುವದು.

ಪರಂಗಿಚಕ್ಕೆ, ನೆಲತಾಟಗಡ್ಡೆ, ಗಸಗಸೆ, ಇಸಮಗೋಲು, ಜಾಪತ್ರಿ, ಭೂಚಕ್ರಗಡ್ಡೆ, ಅತ್ತಿಬೀಜ, ಕೊಳವಳಕೆಬೀಜ, ಹತ್ತಿಬೀಜದಪ್ಪೊಪ್ಪು, ಜಾಕಾಯಿ ಇವು ದಿನಸಿಗೆ ೧-೧ ಪಲದಂತೆ ತಂದು ಚೂರ್ನಿಸಿ ವಸ್ತ್ರಗಾಳತಮಾಡಿ ೧ ಶೇರು ಆಕಳಹಾಲಿನಲ್ಲಿ ಖೋವಾಮಾಡಿ, ಹಾಲು ಗಟ್ಟಿಯಾಗುತ್ತಾ ಬರುವಾಗ ಈ ಚೂರ್ಣವನ್ನೂ, ಮುಕ್ಕಾಲುಶೇರು ಆಕಳತುಪ್ಪ ಹಾಕಿ, ೨ ಶೇರು ಸಕ್ಕರೆಯಪಾಕದಲ್ಲಿ ಇವೆಲ್ಲವನ್ನೂ ಹಾಕಿ ೧ ವರಹಾತೂಕ ಕುಂಕುಮಕೇಸರಿ, ೧ ವರಹಾತೂಕ ಪಚ್ಚಕರ್ಪೂರ ಇವನ್ನೂ ಪುಡಿಮಾಡಿ ಹಾಕಿ, ಲೇಹ್ಯವನ್ನು ಮಾಡಿಕೊಂಡು ನೆಲ್ಲೀಕಾಯಷ್ಟು ಲೇಹ್ಯ ದಿನವೂ ೨ ಹೊತ್ತು, ಅದರಲ್ಲಿ ಅಕ್ಕಿಕಾಳಷ್ಟು ರಜತಭಸ್ಮ ಬೆರಸಿ ಸೇವಿಸುತ್ತಾ ೨೪ ದಿನ ಸೇವಿಸಿದರೆ—ಬಿಳಪು, ರಸಿಕೆಯಿರುವ ಟಾಕಿ, ಇಂದ್ರಿಯನಷ್ಟ, ದುರ್ಬಲ, ಲಿಂಗದ ಉತ್ಥಾಪನೆಯೇ ಇಲ್ಲದಿರುವಿಕೆ, ಮೇಹದಹುಣು, ಅತಿಯಾದ ಉಷ್ಣವಿಕಾರ ಇವನ್ನು ತೊಲಗಿಸಿ, ರಕ್ತವೃದ್ಧಿ, ವೀರ್ಯವೃದ್ಧಿ, ನರಗಳಿಗೆ ಬಲ ಇವನ್ನು ಕಲ್ಪಿಸಿ, ರತಿಯಲ್ಲಿ ಅತ್ಯಾಸಕ್ತಿಯನ್ನೂ, ತೇಜೋಬಲಗಳನ್ನೂ ಕೊಡುವದು.

ಪಥ್ಯ:—ತೊಗರಿಬೇಳೆ, ಹೆಸರುಬೇಳೆ, ಉದ್ದಿನಬೇಳೆ, ತುಪ್ಪ, ಹಾಲು, ಮೊಸರು, ಗೋದಿರವೆ, ಸಕ್ಕರೆ, ತರಕಾರಿಗಳು ಇವು ಹಿತವಾದವುಗಳು. ಸ್ತ್ರೀಸುಖವನ್ನು ಔಷಧ ಸೇವನೆಯ ಕಾಲದಲ್ಲಿ ಖಂಡಿತವಾಗಿ ಬಿಡಬೇಕು.

## ಅನ್ನಭೇದಿಸಿಂಧೂರ.

ಅನ್ನಭೇದಿ ೧೦ ವರಹಾತೂಕ ತಂದು ಗಂಜಿಯಲ್ಲಿ ನೆನೆಹಾಕಿ ೧ ದಿನ ಬಿಟ್ಟು ಅನಂತರ ಖಲ್ವದಲ್ಲಿ ಹಾಕಿ ನಿಂಬೇಹುಳಿಯಲ್ಲಿ ೧ ಝಾವ ಮರ್ದಿಸಿ

ಇಲ್ಲ ಮಾಡಿ ಒಣಗಿಸಿ ಜೀಲುಮಾಡಿ ೧೦ ಬೆರಣಿಯಲ್ಲಿ ಪುಟವಿಟ್ಟರೆ ಭಸ್ಮವಾಗುವದು.

**ಇದರಲ್ಲಿ ನಾಶಿಯಾಗುವ ವ್ಯಾಧಿಗಳು.**

ಜೇನುತುಪ್ಪದ ಅನುಪಾನದಲ್ಲಿ ಈ ಭಸ್ಮವನ್ನು ಕೊಟ್ಟರೆ—ಮೇಹ ವಾಯು, ಎದೆನೋವು, ಅಜೀರ್ಣ, ಹೊಟ್ಟೆಯುಬ್ಬರ, ಶಕ್ತಿಯಿಲ್ಲದಿರುವಿಕೆ ಇವೆಲ್ಲಾ ನಿವಾರಣೆಯಾಗಿ ರಕ್ತವೃದ್ಧಿ, ತೇಜಸ್ಸು, ಬಲ ಇವು ಬರುವವು.

ಇತಿ ಭಸ್ಮವಿಧಾನವು.



# ಅಥ ಶುದ್ಧಿಕ್ರಮವು.

ವೈದ್ಯಶಾಸ್ತ್ರದ ಔಷಧಗಳಲ್ಲಿ ಬರುವ ಎಷ್ಟೋ ವಸ್ತುಗಳನ್ನು ಶುದ್ಧಿ ಮಾಡಲೇಬೇಕಾಗುವದು. ಹಾಗಿಲ್ಲದಿದ್ದರೆ ಅವು ವಿಷತುಲ್ಯಗಳಾಗಿ ಔಷಧ ವನ್ನೂ ಕೆಡಿಸಿ, ಔಷಧವನ್ನು ಸೇವಿಸಿದವರನ್ನು ಕೊಂದೇಹಾಕುವವಾದ್ದರಿಂದ ಅಂತಹ ದುಷ್ಟಪದಾರ್ಥಗಳನ್ನು ಶುದ್ಧಿಮಾಡುವ ವಿಧಾನವನ್ನು ಇದರಡಿ ನಿರೂಪಿಸುವೆವು.

## ಗೌರಿಪಾಷಾಣಶುದ್ಧಿ.

ಗೌರೀಪಾಷಾಣವನ್ನು ನಿಂಬೇಹುಳೀಲಿ ಮರ್ದನದಿಂದ ಮುದ್ದೆಮಾಡಿ, ಅದನ್ನು ೨ ಮಡತದ ಬಟ್ಟೇಲಿಕಟ್ಟಿ ಸುಣ್ಣದ ತಿಳಿಯಲ್ಲಿ ಡೋಲಾಯಂತ್ರದಲ್ಲಿ ೨ ಝಾಮ ಅಟ್ಟರೆ ಶುದ್ಧಿಯಾಗುವದು.

## ಇಲೀಪಾಷಾಣಶುದ್ಧಿ.

ಇದನ್ನೂ ಗೌರೀಪಾಷಾಣದಂತೆಯೇ ಶುದ್ಧಿಮಾಡುವದು.

## ದೊಡ್ಡಿಪಾಷಾಣಶುದ್ಧಿ.

ಇದನ್ನು ಪುಡಿಮಾಡಿ ೨ ಮಡಿತೆಯ ಬಟ್ಟೆಯಲ್ಲಿ ಗಂಟುಕಟ್ಟಿ ಗೋಮೂತ್ರದಲ್ಲಿ ೩ ದಿನ ಪಚನಮಾಡಿದರೆ ಶುದ್ಧಿಯಾಗುವದು.

## ಇಂಗಲೀಕಶುದ್ಧಿ.

ಇಂಗಲೀಕದಗೆಡ್ಡೆಯನ್ನು ಪುಡಿಯಾಗದಂತೆ ಹಳಕುಗಳಾಗಿ ಮಾಡಿ ಅವುಗಳು ಮುಳುಗುವಂತೆ ಜೇನುತುಪ್ಪದಲ್ಲಿ ಒಂದು ದಿನ ನೆನೆಹಾಕಬೇಕು. ಅಲ್ಲಿಂದ ತೆಗದು ಮೊಲೆಹಾಲಿನಲ್ಲಿ ಒಂದು ದಿನ ನೆನೆಹಾಕಬೇಕು. ಅದರಿಂದ ತೆಗದು—ನಿಂಬೇಹುಳಿ, ಕುಪ್ಪಿಸೊಪ್ಪಿನರಸ, ಮೊಲೆಹಾಲು ಈ ಮೂರನ್ನೂ

ಸಮವಾದ ಅಳತೆಯಿಂದ ಶೇರಿಸಿಟ್ಟುಕೊಳ್ಳುವದು. ಒಲೇಮೇಲೆ ಒಂದು ತವವನ್ನಿಟ್ಟು ಆದರಲ್ಲಿ ಇಂಗಲೀಕವನ್ನು ಹಾಕಿ ಕೆಳಗೆ ಸಾಮಾನ್ಯವಾಗಿ ಉರಿ ಹಾಕುತ್ತಾ, ಇಂಗಲೀಕದಿಂದ ಹೊಗೆಹೊರಡದಂತೆ ಆ ಮೂರು ರಸ ಶೇರಿರುವದರಿಂದ ಚುರುಕು ಕೊಡುತ್ತಾ ಬರುವದು. ಆಗ ಇಂಗಲೀಕವು ಶುದ್ಧವಾಗಿ ಎಲ್ಲಾ ಕಾರ್ಯಗಳಿಗೂ ಉಪಯೋಗಾರ್ಹವಾಗುವದು.

## ಸೌವೀರ ಶುದ್ಧಿ.

ಒಂದು ಎಳನೀರಿನಲ್ಲಿ ೧ ವರಹಾತೂಕ ಆರತಿಕರ್ಪೂರವನ್ನು ಪುಡಿಮಾಡಿ ಹಾಕಿ ಕಲಕಿ ಅದನ್ನು ಒಂದು ಮಣ್ಣಿನ ಮಡಕೆಯ ಅರ್ಧಕ್ಕೆ ಬರುವಂತೆ ಹಾಕಿ ಒಲೇಮೇಲಿಟ್ಟು ಸೌವೀರದ ತುಂಡುಗಳನ್ನು ಒಂದು ಬಟ್ಟೆಯಲ್ಲಿ ಗಂಟುಕಟ್ಟಿ, ಅದು ಆ ಎಳನೀರಿನಲ್ಲಿ ಮುಳುಗಿದ್ದು, ಮಡಕೆಯತಳಕ್ಕೆ ತಗಲದಂತೆ ಡೋಲಾಯಂತ್ರದಲ್ಲಿಅಟ್ಟು ಉರಿಹಾಕಿತೆಗದರೆ ಶುದ್ಧಿಯಾಗುವದು.

## ರಸಕರ್ಪೂರ ಶುದ್ಧಿ.

ಅದರ ಗಡ್ಡೆಯನ್ನು ಪುಡಿಯಾಗದಂತೆ ಸಣ್ಣಸಣ್ಣ ತುಂಡುಗಳನ್ನು ಮಾಡಿ ಬಟ್ಟೆಯಲ್ಲಿ ಕಟ್ಟಿ ಡೋಲಾಯಂತ್ರದಲ್ಲಿ—ವಿಳ್ಯದೆಲೆ, ಮೆಣಸು ಇವುಗಳನ್ನು ಸಮವಾಗಿ ಹಾಕಿ ಕಾಸಿದ ಕಷಾಯದಲ್ಲಿ ಅಟ್ಟು—ಅದೇ ರಸದಲ್ಲಿ ೩ ದಿನ ನೆನೆಹಾಕಿ ತೆಗೆದುಕೊಂಡರೆ ಶುದ್ಧಿ.

## ಮುರದಾರಶಿಂಗಿ ಶುದ್ಧಿ.

ಇದರ ಗಡ್ಡೆಯನ್ನು ಮೇಕೆಮೂತ್ರದಲ್ಲಿ ಡೋಲಾಯಂತ್ರದಲ್ಲಿ ಅಟ್ಟರೆ ಶುದ್ಧಿ.

## ಶಂಖಪಾಷಾಣ ಶುದ್ಧಿ.

ಈ ಬಿಳೀಪಾಷಾಣದಗೆಡ್ಡೆಯನ್ನು ಆಕಳಹಾಲಿನಲ್ಲಿ ಅಥವಾ ಸಗಣಿಯ ರಸದಲ್ಲಿ ಅಥವಾ ಸುಣ್ಣದತಿಳಿಯೊಡನೆ ಮೆಣಸಿನಕಷಾಯ ಬೆರಸಿ ಅದರಲ್ಲಿ ಡೋಲಾಯಂತ್ರದಲ್ಲಿ ೧ ಝಾವ ಅಟ್ಟು, ಆಮೇಲೆ ಹಂದಿಯಹಾಲು ಹಾಕಿ ಹಾಗೆಯೇ ಡೋಲಾಯಂತ್ರದಲ್ಲಿ ಪಕ್ವಮಾಡಿದರೆ ಶುದ್ಧಿ.

## ಮಣಿಶಿಲೆ ಶುದ್ಧಿ.

ಇದನ್ನು ಮೊದಲು ಅಗಸೆಸೊಪ್ಪಿನರಸದಲ್ಲಿ ೩ ದಿನ ನೆನೆಹಾಕಿಟ್ಟು ಆನಂತರ ಮೇಕೆಯಮೂತ್ರದಲ್ಲಿ ಡೋಲಾಯಂತ್ರದಲ್ಲಿ ೧ ಝಾವ ಅಟ್ಟು ತೆಗದರೆ ಶುದ್ಧಿ.

## ಪಾಲುತುತ್ತ ಶುದ್ಧಿ.

ಎಳೇಮಕ್ಕಳ ಮೂತ್ರದಲ್ಲಿ ೭ ದಿನ ನೆನೆಹಾಕಿ ದಿನವೂ ಹೊಸಹೊಸದಾಗಿ ಹಾಕಬೇಕು. ಆಮೇಲೆ ಹಸುವಿನ ಹಾಲಿನಲ್ಲಿ ೨ ಝಾವ ಅಟ್ಟರೆ ಶುದ್ಧಿ.

## ಪಾದರಸಶುದ್ಧಿ.

ಪಾದರಸವನ್ನು ಯಕ್ಕೆಯಹಾಲಿನಲ್ಲಿ ೩ ದಿನ ಮುಳುಗುವಂತೆ ಹೊಯಿದು ನೆನೆಹಾಕುವದು. ಆ ಮುಂದೆ ಇಟ್ಟಿಗೆಯಪುಡಿಯಲ್ಲಿ ಅರದು ಆ ಮೇಲೆ ಸಕ್ಕರೆಯೊಡನೆ ಅರದು ತೆಕ್ಕೊಳ್ಳಲು ಶುದ್ಧಿ.

ಅಥವಾ ಇಂಗಲೀಕ ೧-೨ ಶೇರು ತಂದು ನಿಂಬೇಹುಳಿಯಲ್ಲಿ, ಅಥವಾ ಬೇವಿನ ಎಲೆಯರಸದಲ್ಲಿ ೧ ಪ್ರಹರ ಅರದು ಅದನ್ನು ಡಮರುಗಯಂತ್ರದಲ್ಲಿ ಕೆಳಗಿನ ಹಂಡಿಯಲ್ಲಿಟ್ಟು ಉರಿಹಾಕಿದರೆ ಮೇಲಿನ ಹಂಡಿಗೆ ಇಳಿದಿರುತ್ತದೆ. ಈರೀತಿಯಲ್ಲಿ ತೆಕ್ಕೊಂಡ ಪಾದರಸವು ಸರ್ವವೈದ್ಯಕ್ರಿಯೆಗೂ ನಿರಾತಂಕ ವಾಗಿ ಉಪಯೋಗಕ್ಕೆ ಬರುತ್ತದೆ.

### ಪಾದರಸದ ಮುಖಕರಣವಿಧಿ.

ಕಾಲಕೂಟ, ವತ್ಸನಾಭಿ, ಶಂಖ, ಪ್ರದೀಪನ, ಹಲಾಹಲ, ಬ್ರಹ್ಮಪುತ್ರ, ಹಳದೀಪಾಷಾಣ, ಸೂಕ್ತಕ, ಸೌರಾಷ್ಟ್ರಕ ಇವು ೯ ಬಗೆ ಪಾಷಾಣಗಳು; ಯಕ್ಕೆ, ಕಳ್ಳಿ, ಉಮ್ಮತ್ತಿ, ಕೆಂಪುಕಣಗಿಲು, ಗುಲಗಂಜಿ, ಅಫೀಮು, ಅಂಕೋಲೆ ಇವು ೭ ಉಪವಿಷಗಳು. ಈ ಎಲ್ಲಾ ವಿಷಗಳಲ್ಲಿ ಒಂದೊಂದು ದಿನ ಅರಿಯುತ್ತಾಬಂದರೆ ಪಾದರಸವು ಸಕಲ ಕಾರ್ಯೋಪಯೋಗಿಯಾಗುವದು. ಸಮಸ್ತ ಧಾತುಗಳನ್ನೂ ಭಕ್ಷಣಮಾಡ ಸಮರ್ಥವಾಗುತ್ತದೆ. ಅಥವಾ ತ್ರಿಕಟುಕ, ಸಜ್ಜಕ್ಷಾರ, ಯವಕ್ಷಾರ, ಸಾಸವೆ, ಪಂಚಲವಣ, ಬೆಳ್ಳುಳ್ಳಿ, ನವಾಸಾಗರ, ನುಗ್ಗಿಯತೊಪ್ಪಲು ಇವನ್ನು ಸಮವಾಗಿ ಶೇರಿಸಿ ಚೂರ್ಣಮಾಡಿ ಇವುಗಳಸಮಾನ ಮೇಲಿನ ಪಾದರಸವನ್ನು ಹಾಕಿಕ್ಕೊಂಡು ಇದನ್ನು ನಿಂಬೇಹುಳೀಲಿ, ಬೇವಿನಸೊಪ್ಪಿನರಸ, ಗಂಜಿ, ಇವುಗಳಲ್ಲಿ ತಪ್ತಖಲ್ವದಲ್ಲಿ ೩ ದಿನ ಹಗಲೂ ರಾತ್ರಿ ಅರಿಯುತ್ತಾಬಂದರೆ ಆಗ ಆ ಪಾದರಸವು ಸರ್ವಭಕ್ಷಕವಾಗುತ್ತದೆ. ಅನಂತರ ಅದನ್ನು ಬೀರಬಹೂಟಿರಸದಲ್ಲಿ ೩ ದಿನ ಅರದು ಅನಂತರ ಪಂಚಲವಣ ಮತ್ತು ನಿಂಬೆಹುಳೀಲಿ ೩ ದಿನ ಮರ್ದನಮಾಡಿದರೆ ಅದರ ಮುಖವುಂಟಾಗಿ ಸರ್ವಭಕ್ಷಕವಹುದು.

## ಸೀಸಶುದ್ಧಿ.

ವಜ್ರನೀಲೀ ಸಮೂಲದ ರಸವನ್ನು ಮೇಕೆಮೂತ್ರದಲ್ಲಿ ಕಲಿಸಿ ಬಳ್ಳೆಣ್ಣೆಯನ್ನೂ ಅದರಲ್ಲಿ ಬೆರಸಿ ಈ ಸೀಸವನ್ನು ೧೦ ಸಲ ಕರಗಿಕರಗಿ ಅದರಲ್ಲಿ ಹಾಕಿದರೆ ಶುದ್ಧಿ.

## ಕಲ್ನಾರುಶುದ್ಧಿ.

ಕತ್ತೆಯಮೂತ್ರದಲ್ಲಿ ೩ ದಿನ ನೆನೆಹಾಕಿ ತೆಕ್ಕೊಳ್ಳುವದು; ಶುದ್ಧಿ.

## ವಂಗಶುದ್ಧಿ.

ಇಪ್ಪೆಯಣ್ಣೆ ಅಥವಾ ತೆಂಗಿನಯಣ್ಣೆ ಕೊಂಚ ನವಾಸಾಗರವನ್ನು ಪು ಮಾಡಿ ಹಾಕಿ ಅದರಲ್ಲಿ ಈ ವಂಗವನ್ನು ೭ ಸಲ ಕರಗಿಕರಗಿ ಹಾಕುವದ ಶುದ್ಧಿಯಹುದು. ಮೊಸರು, ಹುರಳಿಕಟ್ಟು, ನಿಂಬೇಹುಳಿ, ಹಸುವಿನಮೂತ್ರ ಇವುಗಳಲ್ಲಿ ಕರಗಿಹಾಕಿದರೆ ಶುದ್ಧಿಯಾಗುವದು. ಇದರಂತೆಯೇ ಸತುವು ಸಹ ಶುದ್ಧಿಯಾಗುವದು.

## ಶಿಲಾಜತುಶುದ್ಧಿ.

ಇದನ್ನು ನಿಂಬೇಹುಳೀಲಿ ಬೇಯಿಸಿ ತೆಕ್ಕೊಂಡು ಅನಂತರ ಬಿಳೀಯ ಕ್ಕೆಯ ಹಾಲಿನಲ್ಲಿ ೧ ಝಾವ ನೆನೆಯಿಟ್ಟು ಆಮೇಲೆ ಆಕಳಹಾಲಲ್ಲಿ ಬೇಯಿಸಿ ತೆಕ್ಕೊಳ್ಳಲು ಶುದ್ಧಿ.

## ಪಟಿಕಾರಶುದ್ಧಿ.

ಯಮ್ಮೆಯ ಸಗಣಿಯನ್ನು ಅಥವಾ ಯಮ್ಮೆಯ ಮೂತ್ರದಲ್ಲಿ ಕಲಿಸಿ ಅದರಲ್ಲಿ ೪ ದಿನ ನೆನೆಹಾಕಿದರೆ ಶುದ್ಧಿ.

## ಮೈಲುತುತ್ತಶುದ್ಧಿ.

ಇದನ್ನು ಮಜ್ಜಿಗೇಲಿ ನೆನೆಹಾಕಿಟ್ಟು ಒಂದು ಝಾವ ಬಿಟ್ಟು ತೆಗದರೆ ಶುದ್ಧಿ.

## ಹವಳದಬೇರುಶುದ್ಧಿ.

ಇದನ್ನು ಹಸುವಿನ ಮೊಸರಿನಲ್ಲಿ ೧ ಝಾವ ನೆನೆಹಾಕಿದ್ದು ತೆಕ್ಕೊಳ್ಳು ವದು ಶುದ್ಧಿ.

## ವತ್ಸನಾಭಿಶುದ್ಧಿ.

ಹತ್ತಿಯ ಎಲೆಯರಸದಲ್ಲಿ ನೆನೆಯಿಟ್ಟದ್ದು, ಹರಳೆಣ್ಣೆಯಲ್ಲಿ ನೆನೆಯಿ ಟ್ಟದ್ದು ತೆಕ್ಕೊಂಡು ಅಮೃತಬಳ್ಳಿಯ ಕಷಾಯದಲ್ಲಿ ಡೋಲಾಯಂತ್ರದಲ್ಲಿ ಅಟ್ಟು, ತೆಕ್ಕೊಂಡು ಯಕ್ಕದಹಾಲಿನಲ್ಲಿ ನೆನೆಹಾಕಿ ಗೋಮೂತ್ರದಲ್ಲಿ ತೊ ಳೆದು ನೆನೆಯಿಟ್ಟದ್ದು ತೆಕ್ಕೊಂಡರೆ ಶುದ್ಧಿ.

## ತಾಳಕಶುದ್ಧಿ.

ಸಣ್ಣ ತುಂಡುಗಳಾಗಿ ಮಾಡಿ ಇದನ್ನು ಸುಣ್ಣದಲ್ಲಿ ಗಂಟುಕಟ್ಟಿಟ್ಟು ಕತ್ತೆಯಮೂತ್ರವನ್ನು ಸುಣ್ಣ ಕರಗುವಂತೆ ಹೊಯಿದು ಹೀಗೆ ೭ ಸಲ ಮಾಡಿ ಅನಂತರ ಸುಣ್ಣದತಿಳಿ, ಹುರಳೀಕಟ್ಟು, ಮಜ್ಜಿಗೆ, ಬೂದಗುಂಬಳರಸ, ಅಗ ಸೆಯಲೆಯರಸ ಇವೆಲ್ಲಾ ಶೇರಿಸಿದ್ದರಲ್ಲಿ ೩ ಝಾವ ಚುರಕುಕೊಟ್ಟು, ಅನಂ

ತರ ನುಗ್ಗಿ ಪಟ್ಟೆಯನ್ನರದು ಕವಚವಿಕ್ಕಿ ಲಘು ಅಗ್ನಿಸಂಸ್ಕಾರದಿಂದ ಶುದ್ಧಿಯಹುದು.

## ಪಾ ಷಾ ಣ ಶು ದ್ಧಿ .

ಕುಪ್ಪಿ ಸಮೂಲದರಸ, ಕುಮಾರೀರಸ, ಉಪ್ಪೀರಸ, ಕೆಂಪುಹತ್ತಿಸೊಪ್ಪಿನರಸ, ವಿಳ್ಳೆದೆಲೆಯರಸ, ಇವೆಲ್ಲಾ ೧ ಮಡಕೆಯಲ್ಲಿ ಹಾಕಿ, ಅದರಲ್ಲಿ ಕಲ್ಲುಪ್ಪು, ಬೆಳಿಗಾರ, ಪಟಿಕ, ನವಾಸಾಗರ ೧-೧ ತೊಲಾ ಹಾಕಿ ಡೋಲಾಯಂತ್ರದಲ್ಲಿ ಇದರಲ್ಲಿ ಅಟ್ಟರೆ ಪಾಷಾಣ ಶುದ್ಧಿ.

## ಆ ಯ ಶು ದ್ಧಿ .

ನಿಂಬೆಹುಳಿಯಲ್ಲಿ ಒಂದುದಿನ, ಒಳ್ಳೆಣ್ಣೆಯಲ್ಲಿ ಒಂದುದಿನ ಕಬ್ಬಿಣದ ರಾಪುಡಿಯನ್ನು ನೆನೆಹಾಕಿ ತೆಕ್ಕೊಂಡು ಉಪ್ಪಿಯ ಕಷಾಯದಲ್ಲಿ ಡೋಲಾಯಂತ್ರದಲ್ಲಿ ೨ ಝಾವ ಪಕ್ವಮಾಡಿದರೆ ಶುದ್ಧಿ.

## ಕಾ ೦ ತ ಶು ದ್ಧಿ .

ನಿಂಬೇಹುಳಿಯಲ್ಲಿ ೪ ದಿನ ನೆನೆಯಿಕ್ಕಿದ್ದು ನಂತರ ಗೋಮೂತ್ರದಲ್ಲಿ ೧ ಝಾವ ಡೋಲಾಯಂತ್ರದಲ್ಲಿ ಅಟ್ಟರೆ ಶುದ್ಧಿ.

## ಅ ಶ್ವ ಗ ೦ ಧಿ ಶು ದ್ಧಿ .

ಆಕಳಹಾಲಲ್ಲಿ ಬೇಯಿಸಿ ಒಣಗಿಸಲು ಶುದ್ಧಿ.

## ವಿ ಷ ಮು ಷ್ಟಿ ಬೀ ಜ ಶು ದ್ಧಿ .

ಇವನ್ನು ಭತ್ತದೊಂದಿಗೆ ಹಾಕಿ ಬೇಯಿಸುವದು. ಅನಂತರ ಅದನ್ನು ಕಿರಕಸಾಲೆಯ ಸಮೂಲ ರಸದಲ್ಲಿ ಡೋಲಾಯಂತ್ರದಲ್ಲಿ ೧ ಝಾವ ಅಟ್ಟರೆ ಶುದ್ಧಿ.

## ಗ ೦ ಧ ಕ ಶು ದ್ಧಿ .

ತುಪ್ಪವಿರುವ ಮಡಿಕೆಯಲ್ಲಿ ಹಾಲು ಹಾಕಿ ಅದರ ಬಾಯಿಗೆ ಅರವೆ ಕಟ್ಟಿ ಆ ಬಟ್ಟೆಯ ಮೇಲ್ಭಾಗದಲ್ಲಿ ಗಂಧಕಚೂರ್ಣವನ್ನು ಹರವಿಬಿಡುವದು. ಅದರಮೇಲೆ ಒಂದು ಬೋಕಿಯನ್ನು ಸರಿಯಾಗಿ ಮುಚ್ಚಿ ಸಂಧಿಲೇಪನ ಮಾಡುವದು. ಅದು ಒಣಗಿದನಂತರ ಮೇಲಿನ ಬೋಕಿಮಾತ್ರ ಮೇಲಕ್ಕೆ ಕಾಣುವಂತೆ ಎಲ್ಲವನ್ನೂ ನೆಲದಲ್ಲಿ ಹೂಳುವದು. ಆ ಬೋಕಿಯ ಮೇಲ್ಗಡೆ ಲಘುಪುಟವನ್ನು ಹಾಕಲು ಅದರೊಳಗಿರುವ ಗಂಧಕ ಈ ಬಿಸಿಗೆ ಕರಗಿ ವಸ್ತ್ರದ ಸಂದಿಯಮೂಲಕ ತುಪ್ಪವಿರುವ ಹಾಲಿನಲ್ಲಿ ಇಳಿಯುವದು. ಈ ಗಂಧಕವು ಶುದ್ಧವಾದದ್ದು; ಔಷಧಕ್ಕೆ ಉಪಯೋಗಿಸಬಹುದು.

## ಕರ್ಪೂರಶಿಲಾಜತು ಶುದ್ಧಿ.

ತಾವರೆಗಡ್ಡೆ ಅಥವಾ ಕರೀತಾವರೆಗಡ್ಡೆ ರಸದಲ್ಲಿ ಒಂದು ಝಾವ ಮರ್ದಿಸಿದರೆ ಕರ್ಪೂರಶಿಲಾಜತು ಶುದ್ಧಿಯಹುದು.

ಅಥವಾ ಹಸುವಿನಹಾಲು, ತ್ರಿಫಲಕಷಾಯ, ಬಿಳಿಗಣಜಲೆರಸ, ಈ ಮೂರರಲ್ಲಿಯೂ ಒಂದೊಂದು ದಿನ ಖಲ್ವದಲ್ಲಿ ಅರದು ಒಣಗಿಸಿದರೆ ಶುದ್ಧಿಯಹುದು.

## ಜಾಪಾಳ ಶುದ್ಧಿ.

ಇದರಮೇಲಿನ ಶಿಪ್ಪೆ ಮತ್ತು ಪೊಪ್ಪುಗಳ ನಡುವೆ ಮೊಳಕೆ ಇವನ್ನು ತೆಗದುಹಾಕಿ ಲೋಳಸರದರಸ, ಬೆಲ್ಲದಪಾನಕ, ಹಸುವಿನಹಾಲು, ಆಕಳತುಪ್ಪ ಇವುಗಳಲ್ಲಿ ಬೇರೆಬೇರೆ ಬೇಯಿಸಿದರೆ ಶುದ್ಧಿಯಾಗುವದು.

ಅಥವಾ ಯಮ್ಮೆಯ ಸಗಣಿಯನ್ನು ಗಂಜಿಯಲ್ಲಿ ಕಲಸಿ ಅದರಲ್ಲಿ ಜಾಪಾಳಬೀಜಗಳನ್ನು ಹಾಕಿ ಒಲೇಮೇಲಿಟ್ಟು, ಒಂದು ಝಾವ ಉರಿಹಾಕುವದು. ಅದರನಂತರ ಅದನ್ನು ತೆಗದುಕೊಂಡು ತೊಳೆದು ಆಮೇಲೆ ಶಿಪ್ಪೆ ಮತ್ತು ಒಳಗಿನ ಮೊಳಕೆ ಇವನ್ನು ತೆಗದು—ಮಜ್ಜಿಗೆ, ನಿಂಬೇಹುಳಿ, ಗಂಜಿ ಇವನ್ನು ಕೂಡಿಸಿ ಅದರಲ್ಲಿ ಈ ಜಾಪಾಳದ ಪೊಪ್ಪುಗಳನ್ನು ಹಾಕಿ ಒಲೇಮೇಲಿಟ್ಟು ೨ ಘಂಟೆಕಾಲ ಬೇಯಿಸಿ ತೆಗದುಕೊಳ್ಳುವದು ಶುದ್ಧಿ.

## ಲೋಹ ಶುದ್ಧಿ.

ಲೋಹವನ್ನು ರಾಪುಡಿ ಮಾಡಿಕೊಂಡು ಗಂಜಿಯಲ್ಲಿ ಹಾಕಿ ಒಂದು ಝಾವ ಬೇಯಿಸಿ, ಅನಂತರ ತಾವರೆಯಲೆಯ ರಸವನ್ನು ಒಂದು ಮಡಿಕೆಯಲ್ಲಿ ಹಾಕಿ ಒಂದು ಝಾವ ಬೇಯಿಸಲು ಶುದ್ಧಿ.

## ಗುಗ್ಗಿಲ ಶುದ್ಧಿ.

ಗುಗ್ಗಿಲವನ್ನು ಬಟ್ಟೆಯಲ್ಲಿ ಗಂಟುಕಟ್ಟಿ ತ್ರಿಫಲಕಷಾಯದಲ್ಲಿ ಒಂದು ಝಾವ ಅಟಲು ಶುದ್ಧಿ.

## ತಾಮ್ರ ಶುದ್ಧಿ.

ತಾಳಕ ೨ ತೊಲ, ನವಾಸಾಗರ ೨ ತೊಲ, ಕಲ್ಲುಪ್ಪು ೨ ತೊಲ ಇವನ್ನು ಪುಡಿಮಾಡಿ ನಿಂಬೇಹುಳೀಲಿ ಘಟ್ಟಿಯಾಗಿರುವಂತೆ ಅರದು ಅದರಲ್ಲಿ ತಾಂಬ್ರದ ಬಿಲ್ಲೆಗಳನ್ನು ಹಾಕಿ ೧೦ ದಿನ ಬಿಸಲಿನಲ್ಲಿ ಇಟ್ಟದ್ದು ನೀರಿನಲ್ಲಿ ತೊಳೆದರೆ ಶುದ್ಧಿ.

ಅಥವಾ ತಾಮ್ರದ ರೇಕನ್ನು ಕುಲುಮೆಯಲ್ಲಿ ಕಾಶಿಕಾಶಿ ೨೧ ಸಲ ಯಕ್ಕದಹಾಲಿನಲ್ಲಿ ಅದ್ದಿದರೆ ಶುದ್ಧಿ.

## ಹೇಮಮಾಕ್ಷಿಕ ಶುದ್ಧಿ.

ಇದನ್ನು ಬೆಂಕಿಯಲ್ಲಿ ಕಾಸಿ ತ್ರಿಫಲಕಷಾಯದಲ್ಲಿ ಅದ್ದುತ್ತಾ ೩ ಸಲ ಹೀಗೆ ಮಾಡಿ, ಅನಂತರ ಜೇನಿನಲ್ಲಿ ಅರದು ಗೋಮೂತ್ರದಲ್ಲಿ ೩ ಝಾವ ಅಡಲು ಶುದ್ಧಿ.

## ಅಭ್ರಕ ಶುದ್ಧಿ.

ಅಭ್ರಕವನ್ನು ಬೇರೆಬೇರೆ ರೇಕುಗಳಾಗಿಮಾಡಿ ಗಂಜಿಯಲ್ಲಿ ೧೦ ದಿನ ನೆನೆಯಿಕ್ಕಿ, ಗಂಡುಮಕ್ಕಳ ಮೂತ್ರದಲ್ಲಿ ಹಾಕಿ ೧ ದಿನವಿಟ್ಟದ್ದು ತೊಳೆದು ಕೊಂಡರೆ ಶುದ್ಧಿ.

## ಗೇರುಬೀಜದ ಶುದ್ಧಿ.

ಗೇರುಬೀಜಗಳನ್ನು ಒಂದು ದಿನ ನೀರಿನಲ್ಲಿ ನೆನೆಹಾಕಿದ್ದು ಬಿಸಲಲ್ಲಿ ಒಣಗಿಸುವದು ಶುದ್ಧಿ. ಮೊದಲೇ ಅದರ ತೊಟ್ಟನ್ನು ತೆಗದಿರಬೇಕು.

## ತಿಗಡೆ ಶುದ್ಧಿ.

ಬಿಳೀ ತಿಗಡೆಯಾಗಲೀ, ಕೆಂಪು ತಿಗಡೆಯಾಗಲೀ, ಆಕಳಹಾಲಿನಲ್ಲಿ ಬೇಯಿಸಿದರೆ ಶುದ್ಧಿ.

## ಉಮ್ಮತ್ತ ಬೀಜದ ಶುದ್ಧಿ.

ಇವನ್ನು ನೀರಿನಲ್ಲಿ ಒಂದುಝಾವ ನೆನೆಯಿಟ್ಟದ್ದು ಅನಂತರ ನಿಂಬೇ ಹುಳಿಯಲ್ಲಿ ೪ ಝಾವ ನೆನೆಯಿಕ್ಕಿದರೆ ಶುದ್ಧಿ.

## ರಸಕರ್ಪೂರದ ಶುದ್ಧಿ.

ಹೊಗೆಸೊಪ್ಪನ್ನು ಗಂಜಿಯಲ್ಲಿ ತುಂಡುಮಾಡಿ ಹಾಕಿ ಅದಕ್ಕೆ ಮೆಣಸಿನಕಾಳುಹುಡಿ, ತುಲಸೀ ಎಲೆಗಳು ಸಹಾ ಹಾಕಿ ಅದರಲ್ಲಿ ಡೋಲಾಯಂತ್ರದಲ್ಲಿ ರಸಕರ್ಪೂರವನ್ನು ೧ ಝಾವ ಅಟ್ಟರೆ ಶುದ್ಧಿ.

## ಪ್ರವಾಳ ಶುದ್ಧಿ.

ಇವನ್ನು ಸಣ್ಣ ತುಂಡುಗಳಾಗಿ ಮಾಡಿಕೊಂಡು ಒಂದು ಪಿಂಗಾಣಿಯಲ್ಲಿ ಹಾಕಿ ಅದರತುಂಬಾ ನಿಂಬೇಹುಳಿಯು ತುಂಬಿ ಮೂರುದಿನ ಬಿಸಲಲ್ಲಿಟ್ಟು ತೊಳದು ತೆಗೆದುಕೊಳ್ಳುವದು. ಅನಂತರ ಕಿರಿನೆಲ್ಲಿಸೊಪ್ಪುರಸದಲ್ಲಿ ೩ ದಿನ ನೆನೆಯಿಟ್ಟು ಒಣಗಿಸಿಕೊಂಡರೆ ಶುದ್ಧಿ.

## ರಜತಶುದ್ಧಿ

ಸರಿಗೆಬೆಳ್ಳಿಯನ್ನು ರೇಕುಗಳಾಗಿ ಹೊಡೆದು ಕುಲುಮೆಯಲ್ಲಿ ಕಾಶಿ ಕಾಶಿ ೭ ಸಲ ವೃಷ್ಪಿಹಣ್ಣಿನ ರಸದಲ್ಲಿ ಅದ್ದುತ್ತಾ ಬಂದರೆ ಶುದ್ಧಿ.

## ಸ್ವರ್ಣಶುದ್ಧಿ.

ಅಪರಂಜಿಯನ್ನು ರೇಕುಗಳನ್ನಾಗಿಮಾಡಿ ಕಾವಿಕಲ್ಲನ್ನು ನಿಂಬೆಹ ಳಿಲಿ ಅರದು ತಾಳೇಗರಿಯಷ್ಟು ದಪ್ಪನಾಗಿ ಆ ರೇಕುಗಳಿಗೆ ಬೊಳಿಯ ವದು. ಇದ್ದಲಬೆಂಕಿಯಲ್ಲಿ ಕಾಸುವದು. ಹೀಗೆ ೪ ಸಲ ಮಾಡಿದರೆ ಶುದ್ಧಿ.

## ಮಂಡೂರಶುದ್ಧಿ.

ಮಂಡೂರವನ್ನು ಕುಲಮೆಬೆಂಕಿಯಲ್ಲಿ ೭ ಸಲ ಕಾಶಿಕಾಶಿ ಗೋಮೂ ತ್ರದಲ್ಲಿ ಅಥವಾ ಮೇಕೆಮೂತ್ರದಲ್ಲಿ ಅದ್ದುತ್ತಾ ಬಂದರೆ ಶುದ್ಧಿ.

ಇಂತು ಶುದ್ಧಿಪ್ರಕರಣ.



# ವಿಷಯಾನುಕ್ರಮಣಿಕೆ.

ಇತಿ ದ್ವಿತೀಯಭಾಗಃ.

## ಅಥ ತೃತೀಯಭಾಗ ಪ್ರಾರಂಭಃ.

# ಕನ್ನಡ ಇಂಡಿಯನ್ ಪೆನಲ್‌ಕೋಡ್.

ಇದರಿಂದ ಮೈಸೂರ್, ಮದ್ರಾಸ್, ಬೊಂಬಾಯಿಜಿಲ್ಲಾ ಕನ್ನಡ ಭಾಷಾ ವಾಚಕ ಮಹಾಶಯರಿಗೆ ತಿಳಿಯಪಡಿಸುವದೇನಂದರೆ :—



ಶ್ರೀಮದಿಂಡಿಯಾ ಗವರ್ನರ್ ಜನರಲ್‌ರವರ ಅನುಮತಿ ಪ್ರಕಾರ ಸನ್ ೧೮೬೦ನೇ ಇಸವಿಯಲ್ಲಿ ಮಂಜೂರಾದ "ಇಂಡಿಯನ್ ಪೆನಲ್ಕೋಡ್ ಎಂಬ ಆಕ್ಟನ್ನು ಈಗ ಅನೇಕ ಜಡ್ಜಿಗಳ ಟಿಪ್ಪಣಿಗಳೊಡನೆಯೂ ಅಮೆಂಡ್ ಮೆಂಟ್‌ಗಳೊಡನೆಯೂ ಅಂದವಾದ ಕಾಗದದಲ್ಲಿ ಸ್ಫುಟವಾದ ಅಕ್ಷರಗಳಿಂದ ಬೆಂಗಳೂರು ಸಿಟಿ ಚಿಕ್ಕಪೇಟೆ ಕಳಾನಿಧಿ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಾಪಿಸಿ ಮಾರಾಟಕ್ಕೆ ಸಿದ್ಧಪಡಿಸಿದೆ. ಈ ಆಕ್ಟಿನಲ್ಲಿ ಪ್ರತಿ ಸೆಕ್ಷನಿಗೂ ಫಿರ್ಯಾದಿಗಳೂ, ಅಪರಾಧಿಗಳೂ, ಪೋಲೀಸ್ ಅಧಿಕಾರಿಗಳೂ, ಮಾಜಿಸ್ಟ್ರೇಟರುಗಳೂ, ನಡೆಯಿಸಬೇಕಾದ ಆಚರಣೆಗಳೆಂದರೆ :— ನಡೆಯುವ ಮೊಕದ್ದಮೆಯನ್ನು ಯಾವ ಕೋರ್ಟಿನಲ್ಲಿ ವಿಚಾರಣೆ ಮಾಡಬೇಕು ! ವಾರಂಟಿಲ್ಲದೆ ಹಿಡಿಯಬಹುದೇ ? ಹಿಡಿಯಕೂಡದೆ ? ಸಮನ್ ಕೊಡತಕ್ಕದ್ದೇ ? ವಾರಂಟು ಕೊಡತಕ್ಕದ್ದೇ ? ಜಾಮಿನ್ ತೆಗೆದುಕೊಂಡು ಬಿಡಬಹುದೆ ? ರಾಜಿಯಾಗಬಹುದೇ ? ರಾಜಿಯಾಗತಕ್ಕದ್ದಲ್ಲವೇ ? ಎಂಬ ತಪ್ಶೀಲುಗಳು ವಿವರಿಸಲ್ಪಟ್ಟಿರುವವು. ಈ ಪುಸ್ತಕವು ಸರ್ಕಾರಿ ಅಧಿಕಾರಿಗಳಿಗೂ, ಪೋಲೀಸಿನವರಿಗೂ, ಪಟೇಲ ಶಾನುಭೋಗರುಗಳಿಗೂ, ವರ್ತಕರುಗಳಿಗೂ, ಜಮೀನ್ದಾರರುಗಳಿಗೂ, ಇತರ ಸಮಸ್ತ ಕೈ ಕಸಬುದಾರರಿಗೂ ಖುಷ್‌ಬಾಷ್ ಜನಗಳಿಗೂ, ಉಪಯೋಗಕರವಾದದ್ದು.

ಈ ಪುಸ್ತಕದ ಸಹಾಯದಿಂದ ಅನೇಕರು ಕಷ್ಟದಿಂದ ಬಿಡುಗಡೆಯಾಗಿರುವರು. ಅಂತಹ ಮೊಕದ್ದಮೆಗಳು ಉದಾಹರಣೆಗಾಗಿ ಈ ಪುಸ್ತಕದಲ್ಲಿ ಅಡಗಿರುವವು.

ತಾ|| ಕ|| ಈ ಪುಸ್ತಕದಲ್ಲಿ ಚೋರಿ, ಕಳವು, ಡಕಾಯಿತಿ, ಅತಿಕ್ರಮಪ್ರವೇಶ, ಆಸಾಮಿ ಚೋರಿ, ಮುಂತಾದ ಮೊಕದ್ದಮೆಗಳಲ್ಲಿ ಜಡ್ಜಿಗಳು ಕೊಟ್ಟಿರತಕ್ಕ ಅಭಿಪ್ರಾಯಗಳು ಸೂಚಿಸಲ್ಪಟ್ಟಿರುವದು.

ಕನ್ನಡದಲ್ಲಿ ಇದುವರೆಗೆ ಇಂಥಾ ಪುಸ್ತಕವು ಇನ್ನೆಲ್ಲಿಯೂ ಇಲ್ಲ.

ಕ್ರಯ ೩—೮—೦, ಟಪ್ಪಾಲ್ ಛಾರ್ಜ್ ೦—೪—೦.

ಬೇಕಾದವರು ಈ ಕೆಳಗಿನ ವಿಳಾಸಕ್ಕೆ ಬರೆದು ತರಿಸಿಕೊಳ್ಳಬಹುದು.

ಟಿ. ಕೆ. ಕೃಷ್ಣಸ್ವಾಮಿಶೆಟ್ಟಿ,

ಕಳಾನಿಧಿ ಬುಕ್ ಡಿಪೋ ಪ್ರೊಪ್ರೈಟರ್, ಚಿಕ್ಕಪೇಟೆ, ಬೆಂಗಳೂರು ಸಿಟಿ.



ಶ್ರೀರಸ್ತು.

# ಶಿಶುವೈದ್ಯಸಂಜೀವನೀ.

ಮಂಗಳಾಚರಣೆ.

ನತ್ವಾಸರ್ವಜ್ಞಮಾನಂದಂ ತಥಾऽऽತ್ರೇಯಾದಿ ಸನ್ಮುನೀನ್ ||
ತಂತ್ರಕಾರಾನ್ಲೋಕದುಃಖ ಧ್ವಂಸನೈಕಪರಾಯಣಾನ್ || ೧ ||
ಸಂವಿಚಾರ್ಯ ಚ ತಂತ್ರಾಣಿ ಶಿಶುವೈದ್ಯ ಇತೀಹಯತ್ ||
ತಂತ್ರಂಸಂಜೀವನೀನಾಮ ತನ್ಯತೇ ಸುಖಸಿದ್ಧಯೆ || ೨ ||
ತೇಷಾಂ ಸಯೋऽತಿ ಗಂಭೀರಃ ಕಥಂಸಂಜ್ಞಾಯತೇಸ್ಫುಟಮ್ ||
ಮಮದೇಶಾರ್ತಿಶಾನ್ತ್ಯರ್ಥಂ ಕೃತೋऽಯತ್ನಸ್ಸುದುಸ್ತರಃ || ೩ ||
ದೋಷಾಕರಂ ಮನುಷ್ಯಾಣಾಂ ಸ್ವಭಾವಃಕಲಿಭೂತಲೇ ||
ಕ್ಷಂತವ್ಯಂ ಸದ್ಭಿರೀಶಾನೋಧತ್ತೇಚೆಂದ್ರಂ ಶಿರಸ್ಥಲೇ || ೪ ||

## ಪ್ರಥಮಾಶಯವು.

### ಶಾಸ್ತ್ರಜ್ಞಾನದ ಅಗತ್ಯ.

ನಮ್ಮ ದೇಶದ ಸ್ತ್ರೀಯರಲ್ಲಿ—"ಋತುವಾದನಂತರ ಯಾವರೀತಿ ನಡದುಕೊಳ್ಳಬೇಕು? ಮತ್ತು ಆ ಸಮಯದಲ್ಲಿ ಅವರಿಗಾಗಿ ಯಾವದು ಹಿತಕಾರಿಯಾದದ್ದು?" ಎಂಬ ವಿಷಯವನ್ನು ತಿಳಿಯತಕ್ಕವರು ಬಹಳ ವಿರಳರಿದ್ದಾರೆ. ಇದರಂತೆ—ಗರ್ಭಾವಸ್ಥಾ ಮತ್ತು ಬಾಣಂತಿತನದ ಸಮಯದಲ್ಲಿ ಯಾವ ನಿಯಮದ ಪಾಲನೆಯಿಂದ ಶರೀರ ನೀರೋಗವಾಗಿಯೂ, ಸುದೃಢವಾಗಿಯೂ ಇದ್ದೀತು? ಎಂಬದನ್ನು ವಿಚಾರಮಾಡಿ ತಿಳಿದುಕೊಂಡು, ಅದಕ್ಕನುಸಾರವಾಗಿ ಆಚರಣೆ ಮಾಡತಕ್ಕ ನಾರೀಮಣಿಗಳೂ ಬಹಳ ಅಪರೂಪವೆಂದೇ ಹೇಳಬೇಕಾಗಿದೆ. ಹೊಸ ಶಾಸ್ತ್ರೀಯ ಪ್ರಣಾಳೀ ಅಥವಾ ಹಳೇ ಪರಂಪರಾಪ್ರಾಪ್ತರೀತಿ ಈ ಎರಡರಲ್ಲಿ ಯಾವದರಲ್ಲಿಯೂ ಜ್ಞಾನವಿಲ್ಲದಿರುವದರಿಂದ, ನಮ್ಮ ದೇಶೀಯ ಅಬಲೆಯರಿಗೆ ಈ ವಿಷಯದಲ್ಲಿ ಒಳ್ಳೇ ಅಥವಾ ಕೆಟ್ಟಸಂಗತಿಗಳ ವಿಚಾರವಾಗುವದೇ ಇಲ್ಲ! ಯಾರಾದರೂ ಸ್ತ್ರೀಯರ—ಗರ್ಭಿಣಿದಶಾ ಮತ್ತು ಬಾಣಂತಿ ದಶಾಕಾಲದ ಸುವ್ಯವಸ್ಥೆಯ ವಿಷಯವಾಗಿ ಉಪದೇಶಮಾಡಿದರೆ, ಆ ಸ್ತ್ರೀಯರು ಮೌಢ್ಯದಿಂದ ರೇಗಿಕೊಂಡು—

"ಸಾಕುಬಿಡಿ; ಇಷ್ಟು ದಿನದವರಿಗೂ ಯಾವಳೂ ಮಕ್ಕಳನ್ನು ಹಡಿಯಲೇ ಇಲ್ಲವೆ? ಮಕ್ಕಳನ್ನು ಸಾಕಿ, ಚಿಕ್ಕತಲೆಯನ್ನು ದೊಡ್ಡದನ್ನಾಗಿ ಮಾಡಲಿಲ್ಲವೆ? ಆಗಿಲ್ಲದ ಜ್ಞಾನ, ಆಚರಣೆ ಈಗ ಎಲ್ಲಿಂದ ಬಂತು? ಈಗ ನೀವು ಇಂಗ್ಲಿಷ್ ಓದಿಕ್ಕೊಂಡು ಹೀಗೆ ಪಾದ್ರಿಗಳಂತೆ ಉಪದೇಶಿಸತೊಡಗಿದಿರಿ! ಜಂಗಲೀ ಸ್ತ್ರೀಯರು ನದೀ ದಡದಲ್ಲಿಯೇ ಪ್ರಚಂಡ ಬಿಸಲಿನಲ್ಲಿ ಮಗುವನ್ನು ಹಡಿಯುವದಿಲ್ಲವೆ? ಹುಟ್ಟಿದ ಮಗುವನ್ನು ಶರಗಿನಲ್ಲಿ ಹಾಕಿಕ್ಕೊಂಡು ಕೆಲಸ ಮಾಡಲು ಕಾಡಿನಲ್ಲಿ ಹೋಗುವದಿಲ್ಲವೆ? ಅವರಿಗೇನು ಆಗುತ್ತೆ? ಈ ಇಂಗ್ಲಿಷ್ ಓದಿದ ನವನಾಗರಿಕರಾದವರು ಉಪದೇಶಮಾಡಿ—ಬಾಣಂತಿಯು ೧೦-೨೦ ದಿನತನಕ ಪಥ್ಯವಾಗಿ, ಪರಿಶ್ರಮವಿಲ್ಲದೆ, ಹೊರಗೆ ಹೊರಡದೆ, ಕಂಡಲ್ಲಿ ತಿರುಗದೆ, ಬಾಯಿಗೆ ಬೇಕಾದ್ದನ್ನು ತಿನ್ನದೆ ಬಿದ್ದಿರಬೇಕೆಂದರೆ ಏನು ಮಾತು?" ಎಂದು ಮಹಾ ವೈಯ್ಯಾರದ ಉತ್ತರವನ್ನು ಹೇಳುತ್ತಾರೆ. ವಾಸ್ತವವಾಗಿ ಈ ವಿಷಯಗಳೆಲ್ಲವೂ ಕೆಟ್ಟದ್ದೇ ಇದ್ದರೂ, ಅಜ್ಞಾನಿಗಳಾದ ಸ್ತ್ರೀಯರ ಮಂಡಲಿಯಲ್ಲಿ ಇದೆಲ್ಲವೂ ಸರ್ವರಿಂದಲೂ ಅನುಮೋದಿಸಲ್ಪಡುತ್ತಾ—ನ್ಯಾಯವಾದ ವಿಷಯಗಳೇ ತಲೆಯತ್ತಲಾರದಷ್ಟು ಮೂಢತ್ವವು ನಮ್ಮ ಭಗಿನೀಗಣದ ಎಷ್ಟೋ ಭಾಗವನ್ನು ಸ್ವಾಧೀನಪಡಿಸಿಕ್ಕೊಂಡಿರುತ್ತದೆ. ಇತ್ಯಾದಿ ನಮ್ಮ ದೇಶದ ಅವಿಚಾರಪರಂಪರೆಯನ್ನು ಎಷ್ಟು ಬರದರೂ ತೀರದು!! ಇಲ್ಲಿ ನಮ್ಮ ಭಗಿನೀಗಣಕ್ಕಿರುವ ಮೂಢತಾದಿ ತಪ್ಪುಗಳನ್ನು ತೋರಿಸಿಕೊಟ್ಟು ಅವರನ್ನು ಸತ್ಪಥಕ್ಕೆ ತರುವದು ಮುಖ್ಯ ಕರ್ತವ್ಯವು.

ಇತ್ಯಾದಿ ಕಾರಣಗಳಿಂದ ನಮ್ಮ ದೇಶದ ಭಗಿನಿಯರು—ಸ್ವಾರ್ಥರಕ್ಷಾ, ಸಂತಾನೋತ್ಪಾದನ, ದೇಹತತ್ವವಿಚಾರ, ಸ್ತ್ರೀವ್ಯಾಧಿ ಚಿಕಿತ್ಸಾ, ಧಾತ್ರೀವಿದ್ಯಾ ಮುಂತಾದ ವೈದ್ಯಶಾಸ್ತ್ರಪ್ರಕ್ರಿಯೆಗಳನ್ನು ಚೆನ್ನಾಗಿ ತಿಳಿದುಕ್ಕೊಂಡು-ತನ್ಮೂಲಕ ತಮ್ಮ ಕುಟುಂಬರಕ್ಷಣೆಯಲ್ಲಿ ದಕ್ಷಳಾಗಿರುವದಕ್ಕೆ ಅವಕಾಶವುಂಟಾಗುವವರಿಗೂ ನಮ್ಮ ದೇಶವನ್ನಾವರಿಸಿರುವ ಈ ದುರ್ದಶೆಯು ನಾಶವಾಗುವದೇ ಇಲ್ಲ! ಯಾಕೆಂದರೆ:—

"ಅಪತ್ಯಂಧರ್ಮಕಾರ್ಯಾಣಿ ಶುಶ್ರೂಷಾ ರತಿರುತ್ತಮಾ ||
ದಾರಾಧೀನಸ್ತಥಾಸ್ವರ್ಗಃ ಪಿತೃಣಾಮಾತ್ಮನಶ್ಚಹ ||"

(ಮನುಸ್ಮೃತಿ)

"ಸಂತಾನೋತ್ಪತ್ತಿ, ಧರ್ಮಕಾರ್ಯಾಚರಣೆ, ಸೇವಾಶುಶ್ರೂಷಾ, ಸುಖಪ್ರೀತಿಯುಕ್ತವಾದ ರತಿಪ್ರಾಪ್ತಿ, ಸ್ವರ್ಗಸಾಧನೆ ಇವೆಲ್ಲವೂ ಸ್ತ್ರೀಯರ ಆಧೀನದಲ್ಲಿಯೇ ಇರುವವೆಂದು ಮಹಾತ್ಮನಾದ ಮನುವು ಬೋಧಿಸಿದ್ದಾನೆ. ಇದರಿಂದ ಸ್ತ್ರೀಯರೇ ತಮ್ಮ ಸ್ವಾಧೀನದಲ್ಲಿದತಕ್ಕ ಕುಟುಂಬದ ಪ್ರತಿಯೊಂದು

ಪ್ರಾಣಿಯನ್ನೂ ಪೋಷಿಸುತ್ತಾ ಇರುವದರ ಜತೆಯಲ್ಲಿ, ಅವರಿಗುಂಟಾಗುವ ವ್ಯಾಧಿಗಳಿಗೂ ಯಥಾಸಾಧ್ಯ ಚಿಕಿತ್ಸೆಯನ್ನೂ ಮಾಡುತ್ತಾ ಬರುವದಾದರೆ ನಮ್ಮ ದೇಶಕ್ಕೆ ದುಃಖವೆಲ್ಲಿಯದು ? ಸ್ತ್ರೀಯರೇ ಮಾನವಜಾತಿಯ ಮಾತೆಯರಲ್ಲವೆ ? ಸಂತಾನದ ಪಾಲನ ಪೋಷಣೆಯ ಭಾರವು ಅವರ ಸ್ವಾಧೀನದಲ್ಲಿಯೇ ಇರಬೇಕಲ್ಲವೆ ? ಇಂತವರು ಚಿಕಿತ್ಸಾವಿಷಯವನ್ನರಿತರೆ ಬಾಲಕರ ಜೀವನ ವಿಷಯದಲ್ಲಿ ಎಂದಿಗಾದರೂ ಸಂಶಯವುಂಟಾದೀತೆ ? ಸೂರ್ಯನಿದಿರಿನಲ್ಲಿ ತಮಸ್ಸು ಅಡಗಿದಂತೆ ಅವರ ಕುಟುಂಬದಲ್ಲಿ ಬರುವ ರೋಗಗಳು ಇವರಿದಿರಿನಲ್ಲಿ ತಲೆಯತ್ತಲು ಧೈರ್ಯಪಟ್ಟಾವೆ ? ಇಷ್ಟಕ್ಕೂ ಸ್ತ್ರೀಯು ಪುರುಷನ ಅರ್ಧಾಂಗಿನಿಯು ! ಅವಳು “ ಸಾಧಾರಣವಾದ ಪೀಡೆಗಳು, ಅದಕ್ಕೆ ಕಾರಣ, ಔಷಧಿ ” ಮುಂತಾದವುಗಳನ್ನು ತಿಳಿಯದೇ ಇದ್ದಲ್ಲಿ ಸಂದರ್ಭವಶಾತ್ ಪ್ರಾಣವನ್ನೇ ತ್ಯಜಿಸಬೇಕಾಗುವದಿಲ್ಲವೆ ? ಇಷ್ಟೇ ಅಲ್ಲ; ಸ್ತ್ರೀಯು ತನಗೆ ಸಂಭವಿಸಿದ ರೋಗವನ್ನು ಎಷ್ಟು ಗುಪ್ತವಾಗಿಟ್ಟುಕೊಂಡು ಬೆಳಸುತ್ತಾ ಬಂದು—ಇತರರಿಗೆ ಆ ರೋಗದ ವಿಷಯವನ್ನು ಹೇಳುವದು ಹಾಗಿರಲಿ; ತನ್ನ ಇಷ್ಟದೈವವಾದ ಸ್ವಾಮಿ (ಗಂಡ) ಗೂ ಅದರ ವಿಚಾರವೇ ತಿಳಿಯದಂತೆ ಮುಚ್ಚುತ್ತಾ, ಪ್ರಾಣಾಂತಕರವಾಗುವ ಸ್ಥಿತಿಗೆ ತರುತ್ತಾಳೆ ! ಸ್ತ್ರೀಯರಿಗೆ ಔಷಧಜ್ಞಾನವಿದ್ದಲ್ಲಿ ಜಗತ್ತಿನ ಅರ್ಧಹಿಸ್ಸೆ ಕಾಯಿಲೆಗಳು ಹುಟ್ಟಿದ ಸಂಗಡಲೇ ಮುಕ್ತಾಯವಾಗುತ್ತಿದ್ದವು. ಸ್ತ್ರೀಯರ ಶರೀರದಮೇಲೆಯೇ ಮನುಷ್ಯರ ಶಾರೀರಕ ಮಾನಸಿಕಸುಖ ಮತ್ತು ಸ್ವಚ್ಛಂದತಾ ಸಂಪೂರ್ಣ ನಿರ್ಭರವಾಗಿದೆ. ಇತ್ಯಾದಿ ಎಲ್ಲಾ ಕಾರಣಗಳಿಂದಲೂ ಸ್ತ್ರೀಯರು ಚಿಕಿತ್ಸಾವಿಷಯವನ್ನು ತಿಳಿಯುವದು ಮುಖ್ಯವಾದದ್ದು ! ಸ್ತ್ರೀಯರು ತಮ್ಮ ಇಂದ್ರಿಯಗಳ ಸಂಬಂಧಿಯಾದ ಎಲ್ಲಾ ವಿಷಯಗಳನ್ನೂ ಲಜ್ಜೆಯಿಂದ ಮುಚ್ಚುತ್ತಾ ಬರುತ್ತಿರುವದರಿಂದ ಅವರ ಎಷ್ಟೋ ರೋಗಗಳ ವಿವರಣೆಯನ್ನು ಚಿಕಿತ್ಸಾಶಾಸ್ತ್ರ ಸಹಾ ಇನ್ನೂ ತಿಳಿದಿಲ್ಲವೆಂದೇ ಹೇಳಬಹುದಾಗಿದೆ. ಇಂದ್ರಿಯಗಳ ಸಂಬಂಧವಾದ ಸಂಗತಿಯನ್ನು ಎಷ್ಟೋಮಟ್ಟಿಗೆ ಮುಚ್ಚಿಡುತ್ತಾ ಬರುತ್ತಿರುವದರಿಂದ—ಸ್ತ್ರೀಜಾತಿಯು ಸರ್ವನಾಶವಾಗುವದಲ್ಲದೆ, ಅವರ ಸಂತತಿಯಾದ ನಮಗೂ ಸದಾ ರೋಗಿಯಾಗಿಯೂ, ಹೀನ, ದೀನ ಕ್ಷೀಣನಾಗಿಯೂ ಇರತಕ್ಕ ಅದೃಷ್ಟವು ಪ್ರಾಪ್ತವಾಯಿತು ! !

ಚಿಕಿತ್ಸಾ ಶಾಸ್ತ್ರದಲ್ಲಿ ಅಶ್ಲೀಲತಾ ತುಂಬಿರುವದೆಂಬದು ಶುದ್ಧ ಸುಳ್ಳು ! ಇಂದ್ರಿಯಗಳ ಯಥಾವತ್ ವಿಷಯಗಳನ್ನು ವಿಚಾರಮಾಡುವದರಲ್ಲಿ ಯಾವ ಲಜ್ಜೆಯುಂಟಾಗುತ್ತದೆ ? ಯಾವ ಆಶ್ಚರ್ಯದ ನಿಯಮದಿಂದ ಮನುಷ್ಯಜಾತಿಯು ಜನ್ಮವಾಗುತ್ತಿದೆಯೋ ಅದು ಪವಿತ್ರವಿಷಯವೋ ಅಥವಾ ಲಜ್ಜಾಜನ

ಕವಾದದ್ದೊ ? ಈ ಉನ್ನತವಾದ ಸಮಯದಲ್ಲಿ ಇಂತಹ ಅಸಂಭವ ಪ್ರಸ್ತಾವವು ಎಂದೆಂದಿಗೂ ಶೋಭಿಸಲಾರದು. ಇದು ಲಜ್ಜಾಸ್ಪದವೆಂದು ತಿಳಿಯಬೇಕೋ ಅಥವಾ ಸಂಪೂರ್ಣ ದೇಶವಾಸಿನೀ ಭಗಿನೀಗಣವು ಮುಚ್ಚಿ ಮುಚ್ಚಿ, ಕಠೋರಪೀಡೆಯ ಯಂತ್ರಣಾದಿಂದ ದಿನದಿನವೂ ಯಮರಾಜಧಾನಿಗೆ ತೆರಳಲು ಸಿದ್ಧವಾಗಿರುವ ನಮ್ಮ ದೇಶದ ದುರ್ದಶಾಪನ್ನಸ್ಥಿತಿಗೆ ಇನ್ನೂ ಮನಸ್ಸು ಕರಗದಿರುವದು ಲಜ್ಜಾಸ್ಪದವೆಂದು ತಿಳಿಯಬೇಕೋ ? ಇದೂ ಅಲ್ಲದೆ ಕಂಡೂ ಕಂಡೂ ತಮ್ಮ ದೈವಿಕಸ್ವಭಾವವನ್ನು ಪಿಶಾಚಿವೃತ್ತಿಗೆ ಬದಲಾಯಿಸಿಕೊಂಡು ಚಿರರುಗ್ಣ (ಸದಾರೋಗೀ) ಸಂತಾನವನ್ನು ಸೃಜಿಸುತ್ತಾ, ಇದಕ್ಕೂ ಕರುಣ ಬಾರದಿರುವದು ಲಜ್ಜಾಸ್ಪದವಲ್ಲದೆ ಮತ್ತೇನು ?

ಇದಕ್ಕಾಗಿ ನಮ್ಮ ದೇಶದ ಮನುಷ್ಯರಲ್ಲಿ--ಅರ್ಧಜೀವವುಳ್ಳ, ಪೀಡಿತ, ದುರ್ಬಲ, ದುರ್ದಶಾಪನ್ನ ಶಿಶುರತ್ನಗಳು ಉತ್ಪನ್ನವಾಗುತ್ತಾ—ಪರಲೋಕಕ್ಕೆ ತೆರಳುತ್ತಾ ಇರತಕ್ಕ ಈ ಅವಸ್ಥೆಯಲ್ಲಿ ಇದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಮಾಡದೆ ಉದಾಶೀನದಿಂದಿರುವದು ಉಚಿತವಾದದ್ದಲ್ಲ !

ಸ್ತ್ರೀಯರ ಚಿಕಿತ್ಸಾ, ಅವರ ದೇಹತತ್ವ, ಶಿಶುಪಾಲನಶಿಕ್ಷಾ ಇವು ನಿತಾಂತ ಆವಶ್ಯಕವೆಂದರಿತು, ನಮ್ಮ ಭಗಿನೀಗಣಕ್ಕೆ ಅಗತ್ಯವಾದ ಕರ್ತವ್ಯವಾಗಿ ಚಿಕಿತ್ಸಾಶಾಸ್ತ್ರ ಪರಿಜ್ಞಾನದ ಪರಮ ಪ್ರಯೋಜನವನ್ನು ಇದುವರಿಗೆ ತಿಳಿಸಿದೆವು. ಇನ್ನಾದರೂ ನಮ್ಮ ಭಗಿನಿಯರು ಈ ವಿಷಯಕ್ಕೆ ತಮ್ಮ ಘನವಾದ ಗಮನಿಕೆಯನ್ನು ಕೊಟ್ಟು ನಮ್ಮ ದೇಶದ ಅಕ್ರಮಗಳನ್ನು ತಪ್ಪಿಸುವರೆಂದು ನಂಬುತ್ತೇವೆ.

ಇಂತು ಶಾಸ್ತ್ರಜ್ಞಾನದ ಅಗತ್ಯವೆಂಬ ಪ್ರಥಮಾಶಯವು.



## ಎರಡನೇ ಆಶಯವು.

### ಆರ್ತನಿದರ್ಶನ.

**ಸ್ತ್ರೀಯರ ಅನಾದರಣೆ:**—ಶರೀರಶಿಕ್ಷಾ ಎಂಬ ಭಂಡಾಗಕ್ಕೆ ಜ್ಞಾನವೇ ಅದರ ಬೀಗದಕ್ಕೈಯ್ಯಂತಿದೆ. ಯಾರು ಈ ಶರೀರರಕ್ಷಾ ನಿಯಮವನ್ನು ಸಮ್ಯಗ್ವಿಚಾರಪೂರ್ವಕ ಆಚರಿಸುವರೋ ಆ ಬೀಗದಕ್ಕೈ ಅವರಲ್ಲಿರುವದು. ಈ ಬೀಗದಕ್ಕೈಯ್ಯನ್ನು ಸದುಪಯೋಗ ಮಾಡುವದರಿಂದಲೇ ಶರೀರ ಭಂಡಾರವು ನಮ್ಮ ವಶದಲ್ಲಿರತಕ್ಕದ್ದಾಗುತ್ತದೆ. ಈ ಜ್ಞಾನರೂಪಿಯಾದ ಬೀಗದಕ್ಕೈ ನಮ್ಮ ದೇಶದ ಸ್ತ್ರೀಯರ ವಶದಲ್ಲಿಲ್ಲದಿರುವುದರಿಂದಲೇ ಅವರ ಆಯುಸ್ಸು ಅನೇಕಪ್ರಕಾರದ ಕಷ್ಟಗಳಿಂದ ಕಳೆಯಲ್ಪಡುತ್ತಾ ಇದೆ. ಇದರಿಂದ ಅವರಿಗೆ ಸುಖ

ಭೋಗಾರ್ಥವಾದ ಇಚ್ಛೆಯೂ, ಉತ್ಸಾಹವೂ ಇದ್ದರೂ, ಅವರ ಆಯುಃ ಪಥವು ಕಂಟಕಾಕೀರ್ಣವಾದ್ದೆಂತಲೇ ತಿಳಿಯಬೇಕು.

ಸ್ತ್ರೀಯ ಯಥಾರ್ಥವಾದ ಸ್ತ್ರೀತ್ವವು ರಜೋದರ್ಶನವಾದನಂತರವೇ ಆರಂಭಿಸುವದು. ಹಾಗೆಯೇ ಸ್ತ್ರೀಯರಿಗೆ ಉಂಟಾಗುವ ರೋಗಗಳೂ ಸಹ ರಜೋದರ್ಶನ, ಗರ್ಭಾವಸ್ಥಾ, ಬಾಣಂತಿಯಾಗಿರುವಿಕೆ ಇವುಗಳಲ್ಲಿಯೇ ಪ್ರಾಯಶಃ ಸಂಬಂಧಪಟ್ಟಿರುವವು, ಅಂದರೆ ಆ ಅವಸ್ಥೆಗಳಲ್ಲಿ ಉಂಟಾಗುವ ವಿಕಾರಗಳಿಂದಲೇ ಬಂದುಬಿಡುವವು. ಆ ಕಾಲಗಳಲ್ಲಿ ಯಾವ ವಿಕಾರವೂ ಇಲ್ಲದಿರುವದಾದರೆ (ಸ್ತ್ರೀಯರನ್ನು ಪ್ರಾಯಕಾಲದಲ್ಲಿಯೇ ಯಮಪುರಿಗೆ ಒಯ್ಯುವ) ತಥಾ ಅವರ ಮರಣಪರ್ಯಂತವೂ ಕಷ್ಟದಲ್ಲಿ ಅದ್ದುವಂತಹ ರೋಗಗಳು ಅವರಿಗೆ ಖಂಡಿತವಾಗಿಯೂ ಬರಲಾರವು. ಅಂದರೆ ಮೇಲೆ ಹೇಳಿದ ಮೂರು ವಿಷಯಗಳೂ ಸ್ತ್ರೀಯರಿಗೆ ಅತ್ಯಂತ ಮಹತ್ವದವುಗಳಾಗಿವೆ. ಹೀಗಿದ್ದರೂ ಇವುಗಳ ವಿಷಯದಲ್ಲಿ ನಮ್ಮ ದೇಶದ ಸ್ತ್ರೀಯರಿಗೂ ಪುರುಷರಿಗೂ ಸಂಪೂರ್ಣವಾದ ಅನಭಿಜ್ಞತೆಯೂ, ಉಪೇಕ್ಷೆಯೂ ಕಂಡು ಬರುತ್ತಾ ಇದೆ. ಇದರಿಂದ ನಮ್ಮ ದೇಶದ ಎಷ್ಟೋ ಸ್ತ್ರೀಯರುಗಳ ಜೀವನ ವ್ಯಾಪಾರವು ಕಷ್ಟಮಯವಾಗಿರುವದಲ್ಲದೆ, ಅವರ ಗೃಹಸ್ಥಿತಿಯು ಕೆಟ್ಟು ಹೋಗುವದರಲ್ಲಿ ಅಡ್ಡಿ ಇಲ್ಲ ! ! ಯಾಕೆಂದರೆ ಧರ್ಮಶಾಸ್ತ್ರದಲ್ಲಿ ಸಹ:—

"ನ ಗೃಹಂ ಗೃಹಮಿತ್ಯಾಹುಃ ಗೃಹಿಣೀಗೃಹಮುಚ್ಯತೇ ॥"

ಅಂದರೆ "ಗೃಹವನ್ನೇ ಗೃಹವೆಂದು ತಿಳಿಯಬಾರದು ; ಗೃಹಿಣೀ (ಕುಟುಂಬಿನಿಯು) ಇರತಕ್ಕದ್ದೇ ಮನೆಯೆಂದು ತಿಳಿಯಬೇಕು" ಎಂದಿದೆ. ಯಾವ ಮನೆಯಲ್ಲಿ ಸ್ತ್ರೀಯು ಕಷ್ಟದಲ್ಲಿ ಮುಳುಗಿರುವಳೋ ಆ ಮನೆಯಲ್ಲಿ ಸುಖವೆಲ್ಲಿದೆ ? ನಮ್ಮ ಗೃಹಸ್ಥಾಶ್ರಮದ ಪ್ರಧಾನ ಆಧಾರವೇ ಕುಟುಂಬಿನಿಯು ! ! ಇದಕ್ಕಾಗಿ ರಜೋದರ್ಶನ, ಗರ್ಭಾವಸ್ಥಾ, ಬಾಣಂತಿತನ ಈ ಮೂರು ವಿಷಯಗಳಲ್ಲಿಯೂ ಆಗುವ ಅಪಚಾರದಿಂದ ಬರುವ ರೋಗಗಳು ಅವುಗಳ ಚಿಕಿತ್ಸೆ ಸಹಾ ತಿಳಿಸಬೇಕಾಗಿದೆ.

ಋತುಪ್ರಾಪ್ತಿಯಾದ ಸಂಗಡಲೇ ಸ್ತ್ರೀಯರು ತಮ್ಮ ಆಹಾರ ವಿಹಾರಗಳಲ್ಲಿ ವಿಶೇಷ ಶ್ರದ್ಧೆಯನ್ನು ವಹಿಸತಕ್ಕದ್ದು ಪರಮಾವಶ್ಯಕವು. ಯಾವದು ಶರೀರಕ್ಕೆ ಹಿತಕರವಾದದ್ದೋ ಅವುಗಳನ್ನೇ ಸೇವಿಸಬೇಕು; ಆದರೆ ಗರ್ಭಿಣಿ ದಶಾದಲ್ಲಿ ಇದಕ್ಕಿಂತಲೂ ಸಾವಧಾನಿಯಾಗಿರಬೇಕು. ಯೌವನ ಪ್ರಾದುರ್ಭಾವ ಕಾಲದಲ್ಲಿ ಅನೇಕ ಸ್ತ್ರೀಯರು "ಗರ್ಭಪಾತ" ವೆಂದರೇನೆಂಬುದನ್ನು ತಿಳಿಯುವದೇ ಇಲ್ಲ ! ಪರಂತು ಆ ಮುಂದೆ ವಯಸ್ಸು ಕಳೆಯುತ್ತಾ ಬಂದ ನಂತರ ಈ ಅವಿವೇಕದ ಕೆಟ್ಟಫಲ ಅನುಭವಕ್ಕೆ ಬಂದೇಬರುವದು. ಈ

ಕಾಲದಲ್ಲಿ ದೊಡ್ಡದೊಡ್ಡ ಷಹರುಗಳಲ್ಲಿರುವ ನೂತನ ದಂಪತಿಗಳು— ನಾಟಕ-ತಮಾಷಾ, ಅಥವಾ ಸಿನೀಮಾ ಮುಂತಾದವುಗಳನ್ನು ನೋಡಿ, ಆನಂದಿಸುವದರಲ್ಲಿ ರಾತ್ರಿಯ ಎಷ್ಟೋಭಾಗವನ್ನು ಕಳೆಯುತ್ತಾ, ಈ ವೃಥಾ ಕಾಲಕ್ಷೇಪಕ್ಕಾಗಿ ರಾತ್ರಿಯಲ್ಲಾ ಜಾಗರಣೆ ಮಾಡುವುದರಲ್ಲಿ ಅವರಿಗೆ ಸ್ವಲ್ಪವೂ ಕಷ್ಟ ತೋರುವದೇ ಇಲ್ಲ; ಪರಂತು ಗರ್ಭವತಿಗೆ ಈ ವಿಧವಾಗಿ ನಿದ್ರಾರಾಹಿತ್ಯದಿಂದಿರುವದು ಮಹಾ ಹಾನಿಕರವಾದ ವಿಷಯ ! ಗರ್ಭಾವಸ್ಥೆಯಲ್ಲಿ ಸ್ತ್ರೀಯ ಮನಸ್ಸು ಸ್ವಭಾವದಿಂದ ವಿಕಾರವಶವಾಗಿರುತ್ತದೆ. ಅವಳ ಶರೀರಬಲವೂ ಇಳಿದುಹೋಗಿರುತ್ತದೆ. ಈ ಕಾರಣದಿಂದ ಯಾವ ಪ್ರಕಾರದಿಂದಲೂ ಗರ್ಭವತಿಯ ಶಾರೀರಕ ಮತ್ತು ಮಾನಸಿಕ ಶಕ್ತಿಯಮೇಲೆ ಭಾರವನ್ನು ಹೊರಿಸತಕ್ಕದ್ದು ಕ್ಷೇಮಕರವಾದದ್ದಲ್ಲ ! !

**ಆರ್ತವಸ್ರಾವ:**—ಸ್ತ್ರೀಯು ಯುವಾವಸ್ಥೆಯನ್ನು ಪಡದಾಗ ಅವಳ ಗರ್ಭಾಶಯದ ಒಳಗಿನಿಂದ ನಿಯಮಪೂರ್ವಕವಾಗಿ ಅಂದರೆ ೨೮ನೇ ದಿನಕ್ಕೆ ಸರಿಯಾಗಿ ರಕ್ತಸ್ರಾವವಾಗುತ್ತದೆ. ಇದಕ್ಕೆ ಸಂಸ್ಕೃತದಲ್ಲಿ "ಆರ್ತವ" ಎಂದು ಹೆಸರು. ವೈದ್ಯಶಾಸ್ತ್ರದಲ್ಲಿ ಈ ರಜೋದರ್ಶನಕ್ಕೆ ಕಾರಣವಾಗಿ ಹೇಳಿರುವದೇನೆಂದರೆ:—

**"ಮಾಸೇನೋಪಚಿತಂ ಕಾಲೇಧಮನೀಭ್ಯಾಂ ತದಾರ್ತವಮ್||**
**ಈಷದ್ರಕ್ತಂ ವಿವರ್ಣಂ ಚ ವಾಯು ಯೋನಿಮುಖಂ ನಯೇತ್||"**

ಅಂದರೆ "ಪ್ರತಿಮಾಸದಲ್ಲಿಯೂ ಒಂದಾಗಿ ಶೇರಿರುವ ರಕ್ತವನ್ನು ವಾಯುವು ಎರಡು ದಮನಿ (ನಾಡಿ) ಗಳ ದ್ವಾರಾ ಯೋನಿಯ ಮುಖದಲ್ಲಿ ತೆಗೆದುಕೊಂಡು ಹೋಗುತ್ತದೆ" ಎಂದಿದೆ. ಸಾಮಾನ್ಯತಃ ಈ ರಕ್ತಸ್ರಾವವು ೪ ದಿನಗಳವರೆಗೆ ಆಗುತ್ತಲೇ ಇರುವದು. ಪರಂತು ಒಂದೊಂದುವೇಳೆ ೫-೬ ದಿನ, ಮತ್ತು ೭-೮ ದಿನದವರೆಗೂ ಇರುತ್ತದೆ. ಈ ಕಾಲಮರ್ಯಾದೆಗೆ ಋತುಕಾಲವೆಂದು ಹೇಳುತ್ತಾರೆ. ಸ್ತ್ರೀಯರ ಅಂಡಾಶಯದಿಂದ ಪ್ರತಿತಿಂಗಳೂ ಒಂದು ಅಂಡವು ಹೊರಡುತ್ತದೆ. ಅದರ ಜತೆಯಲ್ಲಿ ರಕ್ತಸ್ರಾವವಾಗುತ್ತದೆ. ಸ್ವಲ್ಪಕಾಲಕ್ಕೆ ಪೂರ್ವ ಪಾಶ್ಚಾತ್ಯ ಡಾಕ್ಟರುಗಳು—"ಈ ಅಂಡವು ಪುರುಷ ಸಮಾಗಮವಾಗುವಾಗ ಅಥವಾ ಗರ್ಭವಿರುವಾಗ ಹೊರಡುತ್ತದೆ" ಎಂದು ತಿಳಿಯುತ್ತಿದ್ದರು. ಆದರೆ ಮ್ಯೂಸಿಯರ್ ರಸಿಬಾಸ್ಕಿ ಎಂಬ ಡಾಕ್ಟರ್ ಮಹಾಶಯನು—"ಹಾಗೆ ಆರ್ತವದರ್ಶನಕಾಲದಲ್ಲಿ ಅಂಡವು ಹೊರಡುವದಕ್ಕೂ ಮೈಥುನಕ್ಕೂ ಸ್ವಲ್ಪವೂ ಸಂಬಂಧವಿಲ್ಲ;" ವೆಂಬುದನ್ನು ಸಿದ್ಧಮಾಡಿದನು. ಅಂಡವು ಗರ್ಭಾಶಯದಿಂದ ಹೊರಟಾಗ ರಕ್ತಸ್ರಾವವಾ

ಗುತ್ತದೆ. ಪರಂತು ಮೈಥುನದ ಅಂತದಲ್ಲಿ ಹೊರಡುವ ಪುರುಷವೀರ್ಯದೊಂದಿಗೆ ಈ ಅಂಡದ ಸಂಯೋಗವುಂಟಾದರೆ ಗರ್ಭ ನಿಲ್ಲುವದು.

ಸ್ತ್ರೀಯರಿಗೆ ಪ್ರಥಮ ರಜೋದರ್ಶನಕ್ಕೆ ಸರ್ವತ್ರ ಒಂದೇ ನಿಯಮಿತ ಸಮಯವಿಲ್ಲ; ದೇಶ ಭೇದದಿಂದ ಋತುಪ್ರಾಪ್ತಕಾಲದಲ್ಲಿ ಬಹಳ ವ್ಯತ್ಯಾಸವಿದ್ದೇ ಇದೆ. ಇಂಗ್ಲಂಡಿನಂತಹ ಶೀತರಾಜ್ಯಗಳಲ್ಲಿಯೂ ಸಮಶೀತೋಷ್ಣವಲಯ ರಾಜ್ಯಗಳಲ್ಲಿಯೂ ೧೪—೧೬ ವರ್ಷದ ಅವಸ್ಥೆಯಲ್ಲಿ ಅನೇಕ ಸ್ತ್ರೀಯರು ರಜೋದರ್ಶನವನ್ನು ಪಡಿಯುತ್ತಾರೆ. ಹಿಂದೂಸ್ಥಾನ ಮತ್ತು ಉಷ್ಣದೇಶಗಳಲ್ಲಿ ಇದಕ್ಕಿಂತಲೂ ೨ ವರ್ಷ ಮೊದಲೇ ರಜೋದರ್ಶನವು ಆರಂಭವಾಗುತ್ತದೆ.

" ತದ್ವರ್ಷಾದ್ದ್ವಾದಶಾತ್ಕಾಲೇ ವರ್ತಮಾನಮಸೃಕ್ಸ್ರವನಃ ।
ಜರಾಪಕ್ವಶರೀರಾಣಾಂ ಯಾತಿ ಪಂಚಾಶತಃಕ್ಷಯಮ್ ॥ "

ಅಂದರೆ "೧೨ನೇ ವರ್ಷದಿಂದಾರಂಭವಾಗಿ ಪ್ರತಿಮಾಸವೂ ರಜೋದರ್ಶನವಾಗುತ್ತದೆ. ೫೦ ನೇ ವರ್ಷದ ವಯಸ್ಸಿನಲ್ಲಿ ನಿಂತುಹೋಗುತ್ತದೆ" ಎಂದರ್ಥವು. ಜನನೇಂದ್ರಿಯವು ಯಾವಾಗ ಪೂರ್ಣಾವಸ್ಥೆಗೆ ಬರುವದೋ ಆಗಲೇ ರಜೋದರ್ಶನವಾಗಲಾರಂಭಿಸುತ್ತದೆ. ಜನನೇಂದ್ರಿಯದ ಪೂರಾ ವೃದ್ಧಿಯಾಗುವ ವಯಸ್ಸು ಸ್ತ್ರೀಯರಿಗೆ ೧೨ ರಿಂದ ೧೬ ; ಹಾಗೆಯೇ ಪುರುಷರಿಗೆ ೧೪ ರಿಂದ ೧೬ ಬೇಕಾಗುವದೆಂದರಿಯುವದು. ಇದಕ್ಕೆ ವಿಪರೀತವಾಗಿ ಕೆಲವು ಸ್ತ್ರೀಯರಿಗೆ ಹುಟ್ಟಿದ ೧ನೇ ವರ್ಷದಿಂದ ಎಳೇಹುಡುಗಿಯರಿಗೆ ರಜಸ್ಸು ಪ್ರಾರಂಭವಾಗುವದನ್ನೂ, ೬೦ ವರ್ಷವಾದರೂ ಮೈನೆರೆಯುದವರನ್ನೂ ಸಕೃತ್ ನೋಡಬಹುದು. ಇಂತವು ಕೇವಲ ಅಪರೂಪವಾದವೇ. ಸೈಬೀರಿಯಾರಲ್ಲಿ ಒಂದೊಂದುಕಡೆ ೬೦ ರಿಂದ ೬೬ ವರ್ಷ ವಯಸ್ಸಿನಲ್ಲಿ ಪ್ರಥಮಾರ್ತವವುಂಟಾಗುತ್ತದೆ. ಅಂತವರ ಆಯುಸ್ಸೂ ಸಹ ಸಾಧಾರಣವಾಗಿ ೧೫೦ ವರ್ಷದವರಿಗೂ ಇರುತ್ತದೆ. ಇದರಿಂದ ಸಿದ್ಧವಾದದ್ದೇನೆಂದರೆ— ಸ್ತ್ರೀಯರ ರಜೋದರ್ಶನ ತಥಾ ಪುರುಷರ ವೀರ್ಯಪಾಕ ಯಾವ ವಯಸ್ಸಿನಲ್ಲಿ ಉಂಟಾಗುವದೋ ಸುಮಾರು ಅದರ ೫ ರಷ್ಟು ವಯಸ್ಸು ಅವರಿಗೆ ದೊರಿಯುವುದೆಂದು ತಿಳಿಯಬಹುದು.

ಪ್ರಥಮ ರಜೋದರ್ಶನವು ಶೀಘ್ರವಾಗಿ ಅಥವಾ ವಿಲಂಬವಾಗಿ ಪ್ರಾಪ್ತಿಯಾಗಲು ಎಷ್ಟೋ ಕಾರಣಗಳುಂಟು. ಉಷ್ಣಪ್ರದೇಶ, ಶಹರುಗಳಲ್ಲಿ ವಾಸ, ದೃಢಶರೀರ ಇತ್ಯಾದಿ ಕಾರಣಗಳಿಂದ ರಜೋದರ್ಶನವು ಶೀಘ್ರವಾಗಿ ಆಗುತ್ತದೆ. ಹಾಗೆಯೇ ದುರ್ಬಲತ್ವ, ಶೀತಪ್ರದೇಶವಾಸ, ಹಳ್ಳಿಗಾಡುಗಳಲ್ಲಿ ರುವಿಕೆ ಇತ್ಯಾದಿ ಕಾರಣಗಳಿಂದ ಋತುವಾಗುವದು ವಿಲಂಬವಾಗುತ್ತದೆ.

ಜಲವಾಯುಗಳ ಹೊರ್ತು ಆಲಸ್ಯ ಮತ್ತು ಕೇವಲ ಸೋಮಾರಿತನದಿಂದ ಕಾಲಹಾಕುವಿಕೆ, ಶೃಂಗಾರರಸಪೂರ್ಣ ಉಪನ್ಯಾಸ (ನಾವೆಲ್) ಗಳನ್ನೂ, ನಾಟಕಗಳನ್ನೂ ಓದುತ್ತಾ ಇರುವಿಕೆ, ತಮಾಷೆಗಳನ್ನು ನೋಡುತ್ತಿರುವಿಕೆ, ತರುಣಪುರುಷರೊಂದಿಗೆ ಪ್ರೇಮಪೂರ್ಣ ಗೋಷ್ಠಿಯಲ್ಲಿರುವಿಕೆ, ವಿಷಯ ವಿಚಾರ ಮಾತುಕಥೆಗಳಲ್ಲಿ ನಿಮಗ್ನರಾಗಿರುವಿಕೆ, ನಗುತ್ತಾಯಿರುವಿಕೆ, ಹಾಸ್ಯ, ರಾತ್ರಿಕಾಲದ ಜಾಗರಣೆ, ಸಮಯ ನಿಯಾಮಕವಿಲ್ಲದೆ ಭೋಜನಮಾಡುವಿಕೆ, ಒಳ್ಳೊಳ್ಳೇ ಮೃದುಮಧುರ ಭೋಜನ, ಮದ್ಯಪಾನ, ಮಾಂಸಾಶನ, ಮನಸ್ಸಿನ ಚಂಚಲತ್ವ, ಹಾಗೆಯೇ ಬಾಲ್ಯಾವಸ್ಥೆಯಿಂದಲೇ ಸಂಗದೋಷವಶತಃ ಇಂದ್ರಿಯಗಳನ್ನು ಉತ್ತೇಜಿತಗಳನ್ನಾಗಿ ಮಾಡಲಾರಂಭಿಸುವಿಕೆ ಮುಂತಾದ ಇನ್ನೂ ಅನೇಕ ಕಾಮೋತ್ತೇಜಕ ಕಾರ್ಯಗಳಿಂದ ಅಂತವರಿಗೆ ನಿಯತಕಾಲಕ್ಕಿಂತ ಮುಂಚಿತವಾಗಿಯೇ ಋತುಪ್ರಾಪ್ತವಾಗುತ್ತದೆ. ಹೀಗಾಗುವದರಿಂದ ಸ್ವಾಸ್ಥ್ಯಭಂಗವಾಗುತ್ತದೆ. ಅವರ ಸಂತಾನವು ದೀರ್ಘರೋಗಿಯಾಗುತ್ತದೆ. ಅದಕ್ಕಾಗಿ ಯೌವನಕಾಲವು ಪೂರ್ಣವಾಗಿ ಬರುವವರಿಗೂ ಋತುಪ್ರಾಪ್ತಿಯಾಗತಕ್ಕ ಮೇಲಿನ ದುರ್ವೃತ್ತಿಗಳಿಗೆ ಅವಕಾಶ ಕೊಡದಂತೆ ಸಾವಧಾನವಾಗಿರುವದು ಅಗತ್ಯವು. ಯಾವ ವಿಧದಿಂದಲೂ ಬಾಲಕಿಯರ ಮನಸ್ಸಿನಲ್ಲಿ ಇಂದ್ರಿಯೋತ್ತೇಜನ ಉಂಟಾಗದಂತೆ ನೋಡಬೇಕು.

ವಿಚಾರ ಮಾಡಿದ್ದರಲ್ಲಿ ಕಂಡುಬಂದದ್ದೇನೆಂದರೆ:—ನಮ್ಮ ದೇಶದ ದರಿದ್ರರ ಹುಡುಗಿಯರಿಗಿಂತಲೂ ಅಮೀರರ ಹುಡುಗಿಯರಿಗೆ ಶೀಘ್ರವಾಗಿ ಋತುಪ್ರಾಪ್ತವಾಗುತ್ತದೆ. ಇದಕ್ಕೆ ಕಾರಣವಾಗಿ ಮೇಲೆ ಹೇಳಿದ ಪ್ರಾಯಶಃ ಎಲ್ಲಾ ಋತುಪ್ರೇರಕ ವಿಷಯಗಳೂ ಅಮೀರರ ಹುಡುಗಿಯರಿಗೆ ಪೂರ್ಣತಯಾ ದೊರಿಯುತ್ತವೆ; ಗರೀಬರ ಹುಡುಗಿಯರಿಗೆ ದೊರಿಯಲಾರವು; ಸಿಕ್ಕಿದರೂ ಕೇವಲಾಲ್ಪ ಮಾತ್ರ ಸಿಕ್ಕುವವು. ಅಷ್ಟೇ ಅಲ್ಲದೆ ಗರೀಬರ ಕನ್ಯೆಗಳು ಶಾರೀರಕ ಪರಿಶ್ರಮದಲ್ಲಿಯೂ ನಿಪುಣರಾಗಿರುತ್ತಾರೆ. ಉಪನ್ಯಾಸ (ನಾವಲ್‌ಗಳು)—ನಾಟಕ-ತಮಾಷೆಗಳಲ್ಲಿ ಇವರಿಗೆ ಬಹು ಕಡಮೆ ಸಂಬಂಧವಿರುವದು. ಮತ್ತು ಅವರು ಮಾಡತಕ್ಕ ಕೆಲಸ ಕಾರ್ಯಗಳಿಂದ ಅವರ ಶರೀರವು ನೀರೋಗವಾಗಿಯೂ ದೃಢವಾಗಿಯೂ ಆಗುತ್ತದೆ. ಗ್ರಾಮನಿವಾಸಿಗಳ ಹುಡುಗಿಯರಿಗಿಂತಲೂ ಷಹರುಗಳ ಹುಡುಗಿಯರು ಶೀಘ್ರವಾಗಿ ರಜಸ್ವಲೆಯರಾಗುತ್ತಾರೆ. ಇದಕ್ಕೂ ಮೇಲಿನದೇ ಕಾರಣವು. ಭಾರತವರ್ಷದಲ್ಲಿ ಸ್ತ್ರೀಯರು ಯುವಾವಸ್ಥೆಗೆ ಬೇಗನೆ ಬಂದುಬಿಡುತ್ತಾರೆ; ಪರಂತು ಇವರ ಸೌಂದರ್ಯವು ಸ್ವಲ್ಪ ಕಾಲ ಮಾತ್ರ ನಿಲ್ಲತಕ್ಕದ್ದಾಗಿದೆ; ಇದರಂತೆ ಇವರಿಗೆ ಜರಾವಸ್ಥೆ (ಮುಪ್ಪು) ಜಾಗ್ರತೆಯಾಗಿ ಬಂದೇಬಿಡುತ್ತದೆ. ಅಫ್ಘಾನಿಸ್ಥಾ

ಮುಂತಾದ ಶೀತಪ್ರದೇಶಗಳ ಸ್ತ್ರೀಯರಿಗೆ ರಜೋದರ್ಶನವು ಸಾವಕಾಶವಾಗಿ ಆಗುತ್ತದೆ. ಪರಂತು ಅವರ ಯೌವನದ ಶೋಭೆಯೂ ಅಧಿಕಕಾಲದವರೆಗೆ ನಿಲ್ಲುವದು.

ಸಾಮಾನ್ಯತಃ ೪೫ ನೇ ವರ್ಷದ ಅವಸ್ಥೆಯಲ್ಲಿ ಮಾಸಿಕ ರಜೋದರ್ಶನ (ಮುಟ್ಟಾಗುವಿಕೆ) ನಿಂತುಬಿಡುತ್ತದೆ. ಆದರೂ ೫೦ ನೇ ವಯಸ್ಸಿನಲ್ಲಿಯೂ ಕೆಲವು ಸ್ತ್ರೀಯರು ಗರ್ಭಿಣಿಯರಾಗಿರುವ ಉದಾಹರಣೆಗಳಿರುವವು. ಆದರೂ ಅನುಭವನ್ಯಾಯ, ವೈದ್ಯಕ, ಶಾರೀರಸಂಪತ್ತು ಇವು ಮೂರನ್ನೂ ಶೇರಿಸುವದರಿಂದ—೫೦ ವರ್ಷದ ನಂತರ ಸ್ತ್ರೀಯರಿಗೆ ಸಂತಾನೋತ್ಪಾದಕ ಶಕ್ತಿ ಸುತರಾಂ ಇಲ್ಲವೆಂಬದು ನಿಶ್ಚಯವಾಗಿದೆ.

“ ಶಶಾಸೃಪ್ರತಿಮಂ ಯಚ್ಚ ಯದ್ವಾ ಲಾಕ್ಷಾರಸೋಪಮ್ ॥
ತದಾರ್ತವಂಪ್ರಶಂಸಂತಿ ಯದ್ವಾಸೊ ನ ವಿರಂಜಯೇತ್ ॥ ”

ಅಂದರೆ “ ಯಾವ ಆರ್ತವ ರಕ್ತವು ಮೊಲದ ರಕ್ತಸದೃಶ ಅಥವಾ ಅರಗಿನರಸದಸಮಾನ ಕೆಂಪುರಂಗಿನಲ್ಲಿ ಆಗುತ್ತದೆಯೋ ಯಾವದರ ಬಣ್ಣವು ವಸ್ತ್ರದ ಮೇಲೆಕಲೆಯಾಗುವದಿಲ್ಲವೋ ಇಂತಹ ಆರ್ತವಕ್ಕೆ ನಮ್ಮ ವೈದ್ಯಶಾಸ್ತ್ರದಲ್ಲಿ ಉತ್ತಮವಾದದ್ದೆಂದು ತಿಳಿಸುತ್ತಾರೆ” ಎಂದಿದೆ. ಇಲ್ಲಿ ಸಾಧಾರಣ ರಕ್ತಕ್ಕೂ, ಆರ್ತವರಕ್ತಕ್ಕೂ ಅಂತರವೇನೆಂದರೆ:—ಸಾಧಾರಣ ರಕ್ತವು ಗಾಳಿಯಿಂದ ಮಂದವಾಗುತ್ತದೆ; ಆರ್ತವ ರಕ್ತವು ಹೀಗೆ ಮಂದವಾಗುವದಿಲ್ಲ. ಇದರ ಕಾರಣವು:— ಇದು ಗರ್ಭಾಶಯದಿಂದ ಹೊರಡುವ ಸಮಯದಲ್ಲಿ ಅದರೊಂದಿಗೆ ಎಷ್ಟೋ “ ಆಸಿಡ್ ” ಗಳು ಶೇರಿಬಿಡುತ್ತವೆ. ಪ್ರತಿಮಾಸವೂ ೪-೫ ಔನ್ಸ್ ರಕ್ತವು ಹೊರಡುತ್ತದೆ. ರಜಸ್ರಾವವು ಹೆಚ್ಚಾಗಿ ಆದಲ್ಲಿ ರಜಸ್ವಲಾ ಸ್ತ್ರೀಯು ನಿಶ್ಶಕ್ತಳಾಗುತ್ತಾಳೆ. ಋತುಪ್ರಾಪ್ತಿಯ ಆರಂಭ ಸಮಯದ ನಿಯಮವೇನೂ ಇಲ್ಲ; ಒಂದೊಂದುವೇಳೆ ೨-೨ ತಿಂಗಳಿಗೆ, ೩-೩ ತಿಂಗಳಿಗೆ ರಜೋದರ್ಶನವಾಗುವದೂ ಉಂಟು. ಹೀಗೆ ಕೆಲವುಸಾರಿ ನಡಿಯುತ್ತಾ ಪುನಃ ಪ್ರತಿಮಾಸವೂ ಹೊರಡಲಾರಂಭಿಸುತ್ತದೆ. ಆದರೆ ಎಷ್ಟೋ ಸ್ತ್ರೀಯರು ಸರಿಯಾಗಿ ನಿಯತವಾದ ಘಂಟೆಯ ಸಮಯದಂತೆ ರಜಸ್ವಲೆಯರಾಗುತ್ತಾರೆ. ಅದೇರೀತಿಯಾಗಿ ರಕ್ತದ ಪರಿಮಾಣವೂ, ಅದರ ವರ್ಣಾದಿಗಳ ಗುಣವೂ ನಿಯಮಿತವಾಗಿರುತ್ತದೆ.

“ ಪೀತಪ್ರಸನ್ನವದನಾಂ ಪ್ರಕ್ಲಿನ್ನಾತ್ಮಮುಖದ್ವಿಜಾಮ್ ॥
ನರಕಾಮಪ್ರಿಯಕಥಾಂ ಸ್ರಸ್ತಕುಕ್ಷ್ಯಕ್ಷಿಮೂರ್ಧಜಾಮ್ ॥
ಸ್ಫುರದ್ಭುಜಾಸ್ತನಶ್ರೋಣೀನಾಭ್ಯೂರು ಜಘನಸ್ಫಿಜಮ್ ॥
ಹರ್ಷೌತ್ಸುಕ್ಯಪರಾಂಚಾಪಿ ವಿದ್ಯಾದೃತುಮತೀಸ್ತ್ರಿಯಮ್ ॥ ”

" ಅಂದರೆ ಯಾವಾಗ ಸ್ತ್ರೀಯು ಮುಖವು ಪೀತವರ್ಣವೂ, ಪ್ರಸನ್ನವಾಗಿಯೂ ಇರುತ್ತಾ, ಮುಖವೂ ಹಲ್ಲುಗಳೂ ಜಿಗಟಾಗಿಯೂ, ನೀರಾಡುವಂತೆಯೂ ಇದ್ದರೂ, ಹೊಟ್ಟೆ, ಕಣ್ಣು, ಕೂದಲು ಶಿಥಿಲವಾಗಿದ್ದರೂ, ಬಾಹು, ಸ್ತನ, ನಿತಂಬ, ನಾಭಿ, ಜಂಘೆ, ಜಘನ ಇವುಗಳಲ್ಲಿ ಸ್ಫುರಣವುಂಟಾದರೂ ಹರ್ಷದಿಂದೊಡಗೂಡಿದ ಉತ್ಸುಕತೆಯು ತಲೆದೋರಿದರೂ ಆಗ ಸ್ತ್ರೀಯುನ್ನು ಋತುಮತಿಯುನ್ನಾಗಿ ತಿಳಿಯಬೇಕು.

ಸ್ತ್ರೀಯು ರಜಸ್ವಲೆಯಾಗಿರುವಾಗ ಆಚರಿಸತಕ್ಕ ಕೆಲವು ಮುಖ್ಯ ಧರ್ಮಗಳನ್ನು ನಮ್ಮ ಆದಿಕಾಲದ ಮಹರ್ಷಿಗಳು ತಮ್ಮ ಶಾಸ್ತ್ರಗಳಲ್ಲಿ ಬೋಧಿಸುತ್ತಿದ್ದಾರೆ. ಅವು ಯಾವವೆಂದರೆ:—

" ಆರ್ತವಸ್ರಾವ ದಿವಸಾದಹಿಂಸಾಬ್ರಹ್ಮಚಾರಿಣೀ ॥ "

" ಆರ್ತವಸ್ರಾವ ಮೊದಲ್ಗೊಂಡು ಸ್ತ್ರೀಯು ಅಹಿಂಸಾವ್ರತದಿಂದ " ಬ್ರಹ್ಮಚಾರಿಣೀ " ಅಂದರೆ ಕಾಮೋತ್ತೇಜಕ ವ್ಯಾಪಾರ, ಚಿಂತನೆ ಮುಂತಾದ್ದರಿಂದ ಗುಹ್ಯಾಂಗಗಳನ್ನು ಸ್ಫುರಣಪಡಿಸದೆ ಇರಬೇಕು. "

" ಅಜ್ಞಾನಾದ್ವಾಪ್ರಮಾದಾದ್ವಾ ಲೋಭಾದ್ವಾ ದೈವತಶ್ಚವಾ ॥
ಸಾಚೇತ್ ಕುರ್ಯಾನ್ನಿಷಿದ್ಧಾನಿ ಗರ್ಭೋದೋಷಾಂಸ್ತದಾಪ್ನುಯಾತ್ ॥ "

" ಅಜ್ಞಾನದಿಂದಲಾಗಲೀ, ಅಸಾವಧಾನದಿಂದಾಗಲೀ, ದ್ರವ್ಯಾದಿಲೋಭದಿಂದಾಗಲೀ, ದೈವಯೋಗದಿಂದಾಗಲೀ ರಜಸ್ವಲೆಯು ನಿಷಿದ್ಧ ಕಾರ್ಯಾಚರಣೆಯನ್ನು ಮಾಡಿದ್ದಾದರೆ ಗರ್ಭವು ದೋಷಗಳನ್ನು ಹೊಂದುತ್ತದೆ. "

" ಋತೌ ಪ್ರಥಮದಿವಸಾತ್ಪ್ರಭೃತಿ ಬ್ರಹ್ಮಚಾರಿಣೀ, ದಿವಾಸ್ವಪ್ನಾಂಜನಾಶ್ರುಪಾತ ಸ್ನಾನಾನುಲೇಪನಾಭ್ಯಂಗ ನಖಚ್ಛೇದ ಪ್ರಧಾವನ ಹಸನ ಕಥನಾತಿಶಬ್ದಶ್ರವಣಾವಲೇಖನ ಅನಿಲಾಯಾಸಾನ್ ಪರಿಹರೇತ್ ॥ "

" ರಜಸ್ವಲೆಯಾದ ದಿನದಿಂದ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು, ಕಾಮೋತ್ತೇಜನ ಚಿಂತೆಗೂ, ಮೈಥುನಕ್ಕೂ ಮನಸ್ಸನ್ನು ಸಹಾ ಬಿಡದೆ ಶುಚಿಯಾಗಿರಬೇಕು. ಹಗಲು ನಿದ್ರಿಸಬಾರದು, ಕಣ್ಣಿಗೆ ಅಂಜನವಿಡಬಾರದು, ದುಃಖಿಸುತ್ತಾ ಕಣ್ಣೀರು ಸುರಿಸಬಾರದು, ಸ್ನಾನಮಾಡಬಾರದು, ಗಂಧಪುಷ್ಪಾದಿಗಳನ್ನು ಧರಿಸಬಾರದು, ಅಭ್ಯಂಗಸ್ನಾನ ಮಾಡಬಾರದು, ಉಗುರುಗಳನ್ನು ಕತ್ತರಿಸಬಾರದು, ಓಡಬಾರದು, ನಗಬಾರದು, ಅತಿಯಾಗಿ ಮಾತನಾಡಬಾರದು, ಅತಿಯಾಗಿ ಶಬ್ದಗಳನ್ನು ಕೇಳಬಾರದು, ನೆಲದಮೇಲೆ ಗೀಚುತ್ತಾ ಕೂಳಿತಿರಬಾರದು, ಗಾಳಿಯು ಹೊಡತಕ್ಕೆ ಮೈಯೊಡ್ಡಿರಬಾರದು. "

ಇವೆಲ್ಲವೂ "ನಮ್ಮ ಜಾತಿಯು ಕಟ್ಟಲೆಯಲ್ಲಿಲ್ಲ; ನಮಗೆ ಇವು ಅಗತ್ಯ ವಿಲ್ಲ" ವೆಂದು ಈ ಮೇಲಿನ ಆಜ್ಞೆಗಳನ್ನು ಉಲ್ಲಂಘಿಸುವವರಿಗೆ ಉಂಟಾಗುವ ದೈವಿಕಶಿಕ್ಷೆಯನ್ನು ಸುಶ್ರುತದಲ್ಲಿಯೇ ಬೋಧಿಸಿದ್ದಾನೆ. ಹೇಗೆಂದರೆ:--

"ದಿವಾಸ್ವಪನ್ತ್ಯಾಃ ಸ್ವಾಪಶೀಲೋಽಂಜನಾದಂಧೋ, ರೋದನಾದ್ವಿಕೃತದೃಷ್ಟಿಃ ಸ್ನಾನಾನುಲೇಪನಾದ್ದುಃಖಶೀಲಃ, ತೈಲಾಭ್ಯಂಗಾತ್ಕುಷ್ಠೀ, ನಖಾಪಕರ್ತ್ತನಾತ್ಕುನಖೀ, ಪ್ರಧಾವನಾಚ್ಚಂಚಲೋ, ಹಸನಾಚ್ಛ್ಯಾವದಂತೋಷ್ಠತಾಲುಜಿಹ್ವಃ, ಪ್ರಲಾಪೀಚಾತಿಕಥನಾತ್, ಅತಿಶಬ್ದಶ್ರವಣಾದ್ಬಧಿರೋ, ಽವಖನಾತ್ಖಲತಿ, ರ್ಮಾರುತಾಯಾಸ ಸೇವನಾದುನ್ಮತ್ತೋ ಗರ್ಭೋಭವತ್ಯೇವಮೇತಾ ಪರಿಹರೇತ್ ॥"

"ರಜಸ್ವಲೆಯಾದವಳು ಹಗಲು ನಿದ್ರಿಸುವದರಿಂದ ನಿದ್ರಾಲುವನ್ನೂ, ಅಂಜನವಿಡುವದರಿಂದ ಕುರುಡನನ್ನೂ, ರೋದನ ಮಾಡುವದರಿಂದ ದೃಷ್ಟಿಯಲ್ಲಿ ದೋಷವಿರುವವನನ್ನೂ, ಸ್ನಾನಾನುಲೇಪನಶೀಲಳಾದರೆ ದುಃಖಶೀಲನನ್ನೂ, ತೈಲಾಭ್ಯಂಗ ಮಾಡುವವಳು ಕುಷ್ಟರೋಗಿಯನ್ನೂ, ಉಗುರು ಕತ್ತರಿಸುವದರಿಂದ ಕೆಟ್ಟ ಉಗುರಿನವನನ್ನೂ, ಓಡುವದರಿಂದ ಚಂಚಲಸ್ವಭಾವದವನನ್ನೂ, ನಗುವದರಿಂದ—ಹಲ್ಲು ತುಟಿ ತಾಲು ನಾಲಿಗೆಗಳಲ್ಲಿ ದೋಷವುಳ್ಳವನನ್ನೂ, ಅತಿಯಾಗಿ ಮಾತನಾಡುವದರಿಂದ ಬಲು ಹರಟೆಗಾರನನ್ನೂ, ಅತಿಶಬ್ದಶ್ರವಣದಿಂದ ಕಿವುಡನನ್ನೂ, ನೆಲದಲ್ಲಿ ಗೀರುವದರಿಂದ ಖಲತಿಯನ್ನೂ, ಗಾಳಿಗೆ ಮೈಯೊಡ್ಡುವದರಿಂದ ಹುಚ್ಚನನ್ನೂ ತನ್ನ ಗರ್ಭದಲ್ಲಿ ಪ್ರಸವಿಸುವಳು! ಇದಕ್ಕಾಗಿಯೇ ಈ ದುರ್ಗುಣಗಳನ್ನು ತ್ಯಜಿಸಬೇಕು."

ಋತುಪ್ರಾಪ್ತಿ ಕಾಲದಲ್ಲಿ ಇನ್ನೂ ಅನೇಕ ಲಕ್ಷಣಗಳುಂಟಾಗುತ್ತವೆ. ಶರೀರವು ಸುಸ್ತಾಗುತ್ತದೆ. ಕೆಲಸಮಾಡಲು ಮನಸ್ಸೇ ಬರುವದಿಲ್ಲ. ವಸ್ತಿ (ನಾಭಿಯ ಕೆಳಗೆ) ಯಲ್ಲಿ ಸ್ವಲ್ಪ ಸ್ವಲ್ಪ ನೋವುಂಟಾಗುತ್ತದೆ. ಬೆನ್ನಿನ ಕೆಳಗೆ ಯಳತವೂ, ಭಾರವೂ ಕಂಡುಬರುತ್ತದೆ. ಕಣ್ಣುಗಳ ಕೆಳಗೆ ಕರೀಗೋಲಾಕೃತಿಯ ರೇಖೆಯು ಕಂಡುಬರುತ್ತದೆ. ಶೀರೆಯನ್ನುಡುವ ಸೊಂಟದಸುತ್ತಾ ನವೆಯುಂಟಾಗುವದು. ಪ್ರತಿಮಾಸವೂ ನಿಯುತವಾಗಿ ಋತುವಾಗುವವಳಿಗೆ ಈ ಚಿಹ್ನೆಗಳುಂಟಾಗುವದಿಲ್ಲ. ಮಾಸಿಕ ರಜೋದರ್ಶನದಿಂದ ಸ್ತ್ರೀಯ ಶರೀರಕ್ಕೂ, ಮನಸ್ಸಿಗೂ ಮಹಾ ಪರಿವರ್ತನವುಂಟಾಗುತ್ತದೆ. ಸ್ತ್ರೀಯ ಋತುವೇ ಯೌವನಾರಂಭದ ಚಿಹ್ನೆಯು! ಅವಳ ಶರೀರವು ಮೊದಲಿನಂತೆ ಇರುವದಿಲ್ಲ. ಒಳಗಿನ ಅಂತ್ರಗಳಲ್ಲಿ ಪೂರ್ಣತೆಯುಂಟಾಗುತ್ತದೆ. ಸ್ತನಗಳು ಹೃಷ್ಟಪುಷ್ಟಗಳಾಗಿ ಎತ್ತರಕ್ಕೆ ಬೆಳೆಯುತ್ತಾ ಪೂರ್ಣವಾಗಿ ಆಗುತ್ತವೆ.

ಇನ್ನುಮೇಲೆ ಕಂಚುಕವು ವಿಸ್ತೃತವಾಗಬೇಕಾಗುತ್ತದೆ. ಪಿರ್ರೆಗಳು ದೊಡ್ಡವಾಗುವವು. ಗರ್ಭಾಶಯವು ಯೋನಿಯೊಂದಿಗೆ ಕೂಡಿಬಿಡುತ್ತದೆ. ಎದೆ, ಕತ್ತು, ಹಸ್ತ ಇವು ಪೂರ್ಣತ್ವವನ್ನು ಪಡಿಯುವವು; ಅಂದರೆ ಶರೀರದ ಅನೇಕ ಅವಯುವಗಳಲ್ಲಿ ಮಜ್ಜೆಯು ತುಂಬುತ್ತಾ ಬರುವದು, ಸಂಪೂರ್ಣ ಶರೀರವು ಹೃಷ್ಟ ಪುಷ್ಟ ಸೌಂದರ್ಯವನ್ನವಲಂಬಿಸುವದು. ಕೇಶಗಳು ಅಧಿಕವಾಗಿ ಉತ್ಪನ್ನವಾಗುವವು. ಕಾಮೇಂದ್ರಿಯದ ಜತೇಲಿ ಯಾವ ಯಾವ ಸ್ಥಳಗಳ ಸಂಬಂಧವಿದೆಯೋ ಪ್ರಾಯಶಃ ಅಲ್ಲಲ್ಲಾ ಕೇಶವುಂಟಾಗುತ್ತದೆ. ಸ್ವರವು ಮಧುರವಾಗಿಯೂ, ಗಂಭೀರವಾಗಿಯೂ ಆಗುವದಲ್ಲದೆ, ಮಾತುಕಥೆಗಳಲ್ಲಿಯೂ, ಸ್ಥಿತಿಸ್ವಭಾವಗಳಲ್ಲಿಯೂ ಅಭೂತಪೂರ್ವವಾದ ಗಾಂಭೀರ್ಯವು ತೋರಿಬರುತ್ತಲಿರುವದು. ಸಂಕ್ಷೇಪವಾಗಿ ಹೇಳುವದಾದರೆ ಸಂಪೂರ್ಣ ಶರೀರದಲ್ಲಿಯೂ ಅದೇ ಮಾಧುರ್ಯವೂ, ಅದೇ ಸೊಬಗೂ, ಅದೇ ತೇಜಸ್ಸೂ, ಅದೇ ಗಾಂಭೀರ್ಯವೂ ತುಂಬಿ ತುಳುಕುತ್ತಾ ಇರುವದು. ಆಗ ಆ ತರುಣಿಯ ಚಿತ್ತದಲ್ಲಿ ಭವಿಷ್ಯತ್ತಿಗೋಸ್ಕರ—ಗೃಹಿಣಿಯ, ತಾಯಿಯ ಮಹತ್ವವುಳ್ಳ ಕಾರ್ಯಭಾರವು ಒಪ್ಪಿಸಲ್ಪಟ್ಟಿರುವಂತಹ ಸೌಮ್ಯಭಾವವು ಪ್ರಕಟವಾಗುತ್ತಲಿರುವದು. ಯಾವ ದಿನ ಈ ಪ್ರಥಮಾರ್ತವವಾರಂಭಿಸುವದೋ ಆ ದಿನದಿಂದ ಅವಳು ಎಲ್ಲದರಲ್ಲಿಯೂ ಬದಲಾಯಿಸಲ್ಪಟ್ಟವಳಾಗುತ್ತಾಳೆ. ಅವಳ ಬಾಲತ್ವದ ಹುಡುಗಾಟವೂ, ಅವಿಚಾರವೂ ದೂರವಾಗಿ ಅದರ ಸ್ಥಾನದಲ್ಲಿ ಲಜ್ಜೆಯೂ, ಗಾಂಭೀರ್ಯವೂ ಅವಳ ಯೌವನ ರಾಜ್ಯಕ್ಕೆ ಪ್ರಭುಗಳಾಗಿ ಸಿಂಹಾಸನಾರೂಢರಾಗುವವು. ಈಗ ಅವಳಿಗೆ ಮೊದಲಿನಂತೆ ಬಾಲಕ್ರೀಡೆಗಳೆಂದರೆ ಆಗದು; ಯುವಾವಸ್ಥೆಯ ವ್ಯವಸಾಯವೇ ಅವಳ ಮನಸ್ಸಿನಲ್ಲಿ ಬೇರೂರಲ್ಪಡುತ್ತದೆ. ಋತುಕಾಲದಲ್ಲಿ ಗರ್ಭಾಶಯ, ಬೀಜಕೋಶ, ಫಲವಾಹಿನೀಸ್ರೋತ, ಸ್ತನಗಳು ಇವುಗಳಲ್ಲಿ ರಕ್ತವು ತುಂಬಿ ಅವನ್ನು ಅಭಿವೃದ್ಧಿಪಡಿಸಲಾರಂಭಿಸುತ್ತದೆ. ಇದರಿಂದ ಅವು ಮೇಲಕ್ಕೇಳುವವು. ಸೊಂಟದಲ್ಲಿ ನೋವುಂಟಾಗುವದು. ಮನಸ್ಸು ಅಲ್ಪಸ್ವಲ್ಪ ವ್ಯಗ್ರವಾಗುವದು. ಕ್ವಚಿತ್ ಕಾಂತಿಯು ಇದ್ದೇ ಇರುವದು.

ಈಗ ಹೇಳಿರಿ—ಋತುವೆಂದರೇನು ? ಋತು ಮತ್ತೇನೂ ಅಲ್ಲ, ಗರ್ಭಧಾರಣ ಮಾಡತಕ್ಕಸಮಯ ಸೂಚನಾರ್ಥವಾದ ಚಿಹ್ನೆಯು ! ! ಯಾವ ಸಮಯದಲ್ಲಿ ಅವರ ಎಲ್ಲಾ ಅಂಗ ಪ್ರತ್ಯಂಗಗಳೂ ಪೂರ್ಣತ್ವವನ್ನು ಪಡಿಯುವವೋ ಆಗ ಸ್ವಭಾವದಿಂದಲೇ ಅವರು ನೂತನ ಮನುಷ್ಯಜನ್ಮವನ್ನು ಕೊಡುವ ಸಾಮರ್ಥ್ಯವನ್ನು ಹೊಂದುತ್ತಾರೆ. ಸಂಸಾರದ ನಿಯಮವೂ ಇದೇ ! ಈಶ್ವರ ರಾಜ್ಯದ ಪ್ರಥೆಯೂ ಇದೇ ! ! ನೀವು ಯತ್ನಮಾಡಿದರೂ,

ಾಡದಿದ್ದರೂ—"ಮರವಾಗುತ್ತದೆ, ಹೂಬಿಡುತ್ತದೆ, ಫಲವನ್ನು ಫಲಿಸು ತ್ತದೆ, ಮತ್ತೆ ಬಣಗಿ ನಿಂತುಬಿಡುತ್ತದೆ" ನೀವು ಸಂತಾನವಾಗಬೇಕೆಂದು ಅಪೇಕ್ಷಿಸಿರಿ, ಅಥವಾ ಅಪೇಕ್ಷಿಸದೆ ಇದ್ದರೂ, ನಿಮ್ಮ ಸಂತಾನವಾಗತಕ್ಕ ಸಾಮರ್ಥ್ಯವು ತನ್ನಷ್ಟಕ್ಕೆತಾನೇ ಬಂದುಬಿಡುತ್ತದೆ!! ಬೇರೆ ಬೇರೆ ಪ್ರಾಣಿ ಗಳಿಗೆ ಸಂತಾನೋತ್ಪತ್ತಿ ಮಾಡತಕ್ಕ ಒಂದೊಂದು ನಿಯತವಾದ ಸಮಯ ವಿದೆ; ಆ ಕಾಲದಲ್ಲಿಯೇ ಅವುಗಳ ಕಾಮೇಚ್ಛಾ ಪ್ರಬಲವಾಗುವದು!! ಮನು ಷ್ಯರಿಗೆ ಈ ನಿಯಮವಿಲ್ಲ!! ಪ್ರತಿಮಾಸವೂ ಸ್ತ್ರೀಯರು ಸಂತಾನೋತ್ಪನ್ನ ಮಾಡತಕ್ಕದ್ದಕ್ಕೆ ಉಪಯುಕ್ತರಾಗುತ್ತಾರೆ! ಆ ಸಮಯದಲ್ಲಿ ಸಹವಾಸವಾ ಖುವದರಿಂದ ಸಂತಾನೋತ್ಪತ್ತಿಯಾಗಲು ಸಂಭವವಿದೆ.

ಇಂತು ಆರ್ತವದರ್ಶನವೆಂಬ ದ್ವಿತೀಯಾಶವು.

---

## ತೃತೀಯೋಶವು.

### ಸ್ತ್ರೀಪುರುಷರ ಗುಹ್ಯಾಂಗ ವಿವೇಚನೆ.

ವೈದ್ಯಶಾಸ್ತ್ರ ಜ್ಞಾನಕ್ಕಾಗಿ ಸ್ತ್ರೀಪುರುಷರ ಸಮಸ್ತಾಂಗಗಳ ರಚನಾಕ್ರ ಮವನ್ನು ತಿಳಿಸುವದಾದರೆ ಅದೇ ಒಂದು ರಾಮಾಯಣದಂತಹ ಪುಸ್ತಕವಾ ದೀತು. ಪ್ರಕೃತದಲ್ಲಿ ನಮ್ಮ ಈ "ಶಿಶುವೈದ್ಯ" ಕ್ಕಾಗಿ ಅಗತ್ಯವಿರುವ ಶಿಶೂತ್ಪಾದಕಾಂಗಗಳಾದ ಸ್ತ್ರೀಪುರುಷರ ಮರ್ಮಾಂಗಗಳೆಡರ ರಚನಾಕ್ರ ಮವನ್ನು ಸಂಕ್ಷೇಪವಾಗಿ ತಿಳಿಸುವೆವು. ನಾವು ಮೇಲೆ ಹೇಳಿರುವ— "ಸ್ತ್ರೀಯರ ರಜೋದರ್ಶನ, ಗರ್ಭಿಣಿದಶಾ, ಬಾಣಂತಿಯ ಸಮಯ" ಇಷ್ಟು ಮಾತ್ರವೇ ಶಿಶೂತ್ಪಾದನೆಗೆ ಅಗತ್ಯ ವಿಷಯಗಳಾಗಿವೆ. ಇವು ಸ್ತ್ರೀಪುರುಷರ ಗುಹ್ಯಾಂಗ ಪ್ರತ್ಯಂಗರಚನಾಜ್ಞಾನದಿಂದ ಯಥಾವತ್ ಅವಗತವಾಗುವವು.

ಜಗತ್ತಿನ ಶ್ರೇಷ್ಠಸೃಷ್ಟಿಯ ಮಧ್ಯೆ—ಮನುಷ್ಯಾವತಾರವೆಂಬದು ಎಂಥಾ ಕೌತುಕ! ಪರಮೇಶ್ವರನ ಎಂತಹ ನಿಯಮ!! ನಮ್ಮ ಆದ್ಯ ಗರ್ಭಾಂತರ್ವಾಸವು ಹೇಗಿರಬಹುದು? ಈ ಗುಹ್ಯೇಂದ್ರಿಗಳ ಮಿಥುನೀಭಾವ ಕರ್ಮದಿಂದ ನಮ್ಮಂತಹ ಬೇರೇ ವ್ಯಕ್ತಿಯೇ ಹುಟ್ಟುವದೆಂದರೆ ಅದು ಸಾಮಾ ನ್ಯಾಂಶವೆ? ನಮ್ಮ ಶರೀರದ ಮತ್ಯಾವ ಅಂಗಗಳಲ್ಲಿ ಈ ಸಾಮರ್ಥ್ಯವಿದೆ? ಇಂತಹ ಈಶ್ವರ ಸೃಷ್ಟಿಕ್ರಮದ ಮಹಾರ್ವ್ಯಾಪಾರಕ್ಕೆ ಸಾಧಕಾಂಗಗಳ ಗೂಢತತ್ವಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವು ಯಾರಿಗೆತಾನೆ ಇರಲಾರದು?

ಈ ಇಂದ್ರಿಯಗಳನ್ನು ಪ್ರತಿಕ್ಷಣವೂ ಪ್ರತಿಯೊಬ್ಬರೂ ಉಪಯೋಗ ದಲ್ಲಿ ತರುತ್ತಲೇ ಇದ್ದಾರೆ. ಇದೇ ಅಲ್ಲವೆ—"ವಿವಾಹ, ಸ್ತ್ರೀಪುರುಷರ

ಮೇಲನ ಮುಂತಾದ ಸಾಂಸಾರಿಕ ವ್ಯಾಪಾರ ! ಈಶ್ವರನ ರಾಜ್ಯದ ನ್ಯಾಯವಾದ ಪ್ರಥೆ ! ! ಇದರಿಂದುಂಟಾಗುವ ಅವರ್ಣನೀಯವಾದ ಆನಂದವನ್ನು ಕುರಿತು:—

"ಕಾಮಿನೀಂ ಪ್ರಥಮಯೌವನಾನ್ವಿತಾಮ್ ।
ಮಂದವಲ್ಗು ಮೃದುಪೀಡಿತಸ್ವನಾಮ್ ॥
ಉತ್ಸ್ತನೀಂ ಸಮವಲಂಬ್ಯಯಾ ರತಿಃ ।
ಸಾ ನ ಧಾತೃಭವನೇಸ್ತಿ ಮೇ ಮತಿಃ ॥"

"ಮೊದಲನೇ ತಾರುಣ್ಯವೆಂಬ ಪರರು ಸೋಂಕದಿರುವವಳೂ, ಮಂದ ವೈಯ್ಯಾರ, ಮೃದು, ಹಿಡಿತಗಳುಳ್ಳ ಮಧುರವಾಣಿಯೂ, ಎದ್ದ ಮೊಲೆಗಳುಳ್ಳವಳೂ, ಆದ ಕಾಮಿನಿಯನ್ನು ಅವಲಂಬಿಸಿಕ್ಕೊಂಡು ಯಾವ ಸುರತವನ್ನು ಹೊಂದುವೆವೋ ಆ ಆನಂದವು ಬ್ರಹ್ಮಲೋಕದಲ್ಲಿತಾನೆ ಎಲ್ಲಿ ದೊರಕೀತು ?" ಎಂದು ಒಬ್ಬ ಕವಿಯು ಹೇಳಿದ್ದಾನೆ. ಇಂತಹ ಆನಂದದ ಲವವನ್ನಾದರೂ ಅರಿಯದವನು ನರನೋ, ವಾನರನೋ ? ಇಲ್ಲ; ಅವನು ಪಾಮರನೇ ! !

ಈ ಲೋಕದ ಪ್ರತಿಕಾರ್ಯದಲ್ಲಿಯೂ:—

"ಸುಖಸ್ಯಾನಂತರಂದುಃಖಂ, ದುಃಖಸ್ಯಾನಂತರಂಸುಖಮ್ ॥"

"ಸುಖಾವಸಾನದಲ್ಲಿ ದುಃಖ, ದುಃಖಾವಸಾನದಲ್ಲಿ ಸುಖ" ವೆಂಬುದು ಅನುಭವದ ಮಾತು. ಹೀಗೆ ಮೈಥುನದಿಂದಾನಂದ ! ಅದು ವಿಘಟಿಸಿದರೆ ಮೇಹಾದಿ ರೋಗಗಳಿಂದ ! ! ಬಲು ಚೆಂದ ! !

ಪ್ರತಿಕ್ಷಣವೂ ಎಷ್ಟೋ ನರನಾರಿಯರು ಸದ್ವ್ಯವಹಾರಶೂನ್ಯರಾಗಿ, ಅವಿವೇಕ ಕಾರ್ಯಗಳಾದ—ವ್ಯಭಿಚಾರ, ರೋಗಿಗಳಲ್ಲಿ ರಮಿಸುವಿಕೆ, ಅತಿಸಂಭೋಗ, ಅಸದ್ವ್ಯವಹಾರ ಮುಂತಾದ ಜಘನ್ಯ ವ್ಯಾಪಾರಗಳಿಂದ—ಅನುಭವಿಸುತ್ತಿರುವ ಅಪಾರ ರೋಗಸಮುದಾಯಗಳು ನಮ್ಮ ದೇಶವನ್ನೇ ವಿಲಯಪಡಿಸುತ್ತಾ ಇವೆ. ಈ ಗುಹ್ಯೇಂದ್ರಿಯ ರೋಗಗಳನ್ನು (ರೋಗಗ್ರಸ್ತ ಯೋನಿಗಳಲ್ಲಿ ರಮಣಮಾಡಿ) ಸಂಪಾದಿಸಿಕ್ಕೊಂಡು ಬಂದು—ಲೋಕವ್ಯವಹಾರವೇನೆಂಬುದನ್ನರಿಯದ, ಮಹಾದೇವಸ್ವಭಾವದ, ಅತಿಶುದ್ಧ ಕೋಮಲ ಮತ್ತು ವಿನಾಘ್ರಾತ ಪುಷ್ಪದಂತೆ ರಮಣೀಯತೆಯಿಂದ ಕಂಗೊಳಿಸುತ್ತಿರುವ—ಸ್ವವಧೂಮಣಿ (ಹೆಂಡತಿ) ಯಲ್ಲಿ ಬೀಜಹಾಕುವ ಅನೇಕ ನೀಚಪುರುಷರ ಮತ್ತು ಆ ನಿರಪರಾಧಿನೀಕುಲ ವಧೂಮಣಿಗಳ ದುಃಸ್ಥಿತಿಯು ಕಾಡ್ಗಿಚ್ಚಿನಂತೆ ಎಲ್ಲೆಲ್ಲಿಯೂ ಮುಸುಕಿಕ್ಕೊಂಡು ಹೊಗೆಯಾಡುತ್ತಾ ಇದೆ.

ಇಂತಹ ಗುಹ್ಯಾಂಗ ರೋಗಗಳ ಯಥಾವತ್ ಜ್ಞಾನಕ್ಕೆ ಆಯಾಯ ಅಂಗಘಟನಾ ಪ್ರಣಾಳಿಯನ್ನು ತಿಳಿಯದಿದ್ದರೆ ಚಿಕಿತ್ಸೆಯನ್ನು ಮಾಡುವದು

ಷ ಸಹಜವಾಗಲಾರದು. ಇದಕ್ಕಾಗಿ ಈ ಕೆಳಗೆ ಸಂಕ್ಷಿಪ್ತವಾಗಿ ಪುರುಷಾಂಗರಚನೆಯ ಕ್ರಮವನ್ನು ತಿಳಿಸಿ, ಅನಂತರ ಸ್ತ್ರೀಯ ಗುಹ್ಯಾಂಗ ಪ್ರತ್ಯಂಗರಚನಾ ಪ್ರಣಾಳಿಯನ್ನು ತಿಳಿಸುವೆವು.

**ಪುರುಷರ ಗುಹ್ಯಾಂಗರಚನೆ:**— ಮನುಷ್ಯನ ಜನ್ಮ ಸಂಪಾದನ ಮಾಡುವದಕ್ಕಾಗಿ ಮೂರುಪ್ರಕಾರದ ಯಂತ್ರಗಳು ಪುರುಷನ ಶರೀರದಲ್ಲಿ ವಿದ್ಯಮಾನಗಳಿವೆ. ೧ ಅಂಡನಿರ್ಮಾಯಕ ಯಂತ್ರ, ೨ ವೀರ್ಯಪರಿಚಾಲಕ ಯಂತ್ರ, ೩ ವೀರ್ಯನಿಕ್ಷೇಪಕಯಂಗಳೆಂಬವು ! ಪುರುಷನಿಗೆ ೨ ಅಂಡಗಳಿವೆ. ಇವೆರಡೂ ಒಂದೇ ಥೈಲಿಯಲ್ಲಿ ಸ್ಥಾಪಿತಗಳಾಗಿವೆ. ಈ ಥೈಲಿಗೆ ಕೋಶವೆನ್ನುವರು; ಇದೇ ವೀರ್ಯನಿರ್ಮಾಯಕ ಯಂತ್ರವು. ಈ ಎರಡು ಅಂಡಗಳೂ ಅತಿಕೋಮಲ ಪದಾರ್ಥ ಸಮೂಹವಾಗಿವೆ. ಇವನ್ನು ಬಿಚ್ಚಿ ಉದ್ದಕ್ಕೆ ಹಿಡಿದರೆ ಇದು ಸಾವಿರ ಅಡಿಗಳಿಗಿಂತ ಉದ್ದಕ್ಕಾಗುವದು. ಈ ನಾಳಗಳ ಒಳಗೆ ಸಣ್ಣ ಸಣ್ಣ ಚೀಲಗಳು ಹುಟ್ಟುತ್ತಿವೆ. ಅವುಗಳಲ್ಲಿ ವೀರ್ಯವು ಉತ್ಪನ್ನವಾಗುತ್ತಿದೆ. ವೀರ್ಯದ ಮಧ್ಯದಲ್ಲಿ ಒಂದುಪ್ರಕಾರದ ಅತಿಸೂಕ್ಷ್ಮಾತ್ ಸೂಕ್ಷ್ಮಪದಾರ್ಥವಿರುತ್ತದೆ. ಇದನ್ನು ಅಣುವೀಕ್ಷಣ ಯಂತ್ರ (ದುರ್ಬೀನು) ಮೂಲಕವೇ ನೋಡಲಾಗುವದು. ಪ್ರತಿಯೊಂದು ಪ್ರಾಣಿಯೂ ಗುಂಡಾಗಿಯೂ, ಸಣ್ಣ ಬಾಲದಿಂದ ಕೂಡಿರುವದು. ಇದರಲ್ಲಿ ಭ್ರಮಣಶಕ್ತಿಯೂ ಬೊಗ್ಗುವ ಶಕ್ತಿಯೂ ಇದೆ. ಈ ಜೀವಿಗಳು ವೀರ್ಯದ ಒಳಗೆ ಅಲ್ಲಿಂದಿಲ್ಲಿಗೆ ತಿರುಗುತ್ತಾ ಇರುವವು. ಕೇವಲ ಶೀತಲಜಲವನ್ನು ಹಾಕುವದರಿಂದ ಸತ್ತುಹೋಗುವವು. ಇದನ್ನು ನಾವು ಶುಕ್ರಜವೆನ್ನುವೆವು. ಪುರುಷಾಂಗದ ಒಳಗಡೆ ತಗಲಿಕ್ಕೊಂಡಿರುವ ಒಂದು ಛಿದ್ರವಿದೆ. ಇದರ ಪ್ರಾರಂಭದಲ್ಲಿ ಸಣ್ಣಪುಟ್ಟ ಚೀಲಗಳಿವೆ. ವೀರ್ಯವು ಅಂಡಕೋಶದಲ್ಲಿ ತಿರುಗುತ್ತಾ ಈ ಛಿದ್ರದಮೂಲಕ ಬಂದು ಈ ಚೀಲಗಳಲ್ಲಿ ತುಂಬುತ್ತಾ ಇರುತ್ತದೆ. ಇದೇ ವೀರ್ಯಚಾಲನ ಯಂತ್ರವು. ಯೌವನಕಾಲ ಪ್ರಾಪ್ತವಾಗುವ ಮೊದಲು ಎಂದಿಗೂ ವೀರ್ಯ ಉತ್ಪನ್ನವಾಗುವದಿಲ್ಲ. ಈ ಎಲ್ಲಾ ಚೀಲಗಳ ಕೆಳಗಡೆ ಪ್ರಸ್ರಾವದ ಛಿದ್ರನಾಡಿಯು ಒಂದು ಪುರುಷಾಂಗ ನಾಡಿಯೊಂದಿಗೆ ಸೇರುತ್ತದೆ. ಪ್ರಸ್ರಾವನಾಡಿಯ ಮೇಲ್ಭಾಗದಲ್ಲಿ ಮತ್ತೊಂದು ದೊಡ್ಡ ಚೀಲವಿದೆ. ಈ ಥೈಲಿಯ ಜತೇಲಿ ರೇತೋಧಾರಕ್ಕೆ ಸಣ್ಣಸಣ್ಣ ಚೀಲಗಳ ಸಂಯೋಗವಿದೆ. ಕಾಮೋಚ್ಛ್ರಿಯು ವಿಶೇಷವಾಗಿ ಉಂಟಾದಾಗ ಈ ದೊಡ್ಡ ಚೀಲದಲ್ಲಿ ದ್ರವರೂಪದ ಹಾಲಿನಂತಹ ಒಂದುಪ್ರಕಾರದ ಪದಾರ್ಥ ಹುಟ್ಟುತ್ತದೆ. ಸಹವಾಸದ ಸಮಯದಲ್ಲಿ ವೀರ್ಯಘರ್ಷಣ ವಶದಿಂದ ಈ ಪದಾರ್ಥದ ಜತೇಲಿ ಕೂಡಿಕ್ಕೊಂಡು, (ಯಾವಾಗ ಸಹವಾಸ ಪೂರ್ಣವಾಗುವದೋ ಆಗ) ಪುರುಷಾಂಗದಲ್ಲಿಂದ ಅತಿವೇಗದಿಂದ ಬೀಳುತ್ತದೆ.

ಪುರುಷಾಂಗವು ರೇತೋನಿಕ್ಷೇಪಕ ಯಂತ್ರವು. "ಮನುಷ್ಯಜನ್ಮವಾಗುವದಕ್ಕಾಗಿ ಎಷ್ಟು ಯಂತ್ರಗಳ ಆವಶ್ಯಕತಾ ಉಂಟಾಗುತ್ತದೆ!"

**ಸ್ತ್ರೀಯರ ಗುಹ್ಯಾಂಗರಚನೆ:—** ಸ್ತ್ರೀಯರಿಗೂ—೧ ವೀರ್ಯನಿರ್ಮಾಯಕ ಯಂತ್ರ, ೨ ವೀರ್ಯಪರಿಚಾಲಕ ಯಂತ್ರ, ೩ ವೀರ್ಯನಿಕ್ಷೇಪಕ ಯಂತ್ರಗಳೆಂಬ ೩ ಯಂತ್ರ ವಿಶೇಷಗಳಿವೆ. ಯಾವ ಸ್ಥಾನದಲ್ಲಿ ಪುರುಷಾಂಗವು ಪ್ರವಿಷ್ಟವಾಗಿ ವೀರ್ಯನಿಕ್ಷೇಪ ಮಾಡುವದೋ, ಸ್ತ್ರೀಯರಿಗೂ ಅದೇ ವೀರ್ಯನಿಕ್ಷೇಪಕ ಯಂತ್ರವು. ಯಾವ ರಂಧ್ರದಿಂದ ಒಳಗೆ ವೀರ್ಯವು ಹೋಗಿ ಅಂಡದ ಸಂಗಡ ಕೂಡುತ್ತದೆಯೋ ಅದಕ್ಕೇ ರೇತಃ ಪರಿಚಾಲಕ ಯಂತ್ರವೆನ್ನುವರು. ಯಾವ ಸ್ಥಾನದಲ್ಲಿ ವೀರ್ಯವು ಪ್ರಸ್ತುತವಾಗುತ್ತದೆಯೋ ಅದೇ ರೇತೋನಿರ್ಮಾಯಕ ಯಂತ್ರವು. ಸ್ತ್ರೀಯರ ಗರ್ಭಾಶಯವೇ ಮನುಜಾತಿಯ ಆದ್ಯವಾಸಸ್ಥಾನವು !!! ಈ ಗರ್ಭಾಶಯದ ಎರಡು ಪಾರ್ಶ್ವದಲ್ಲಿಯೂ ಎರಡು ಕೋಶಗಳಿವೆ. ಇವುಗಳಲ್ಲಿ ಅಂಡಾಕಾರ ಪದಾರ್ಥವಿರುತ್ತದೆ. ಇದಕ್ಕೂ ಶುಕ್ರವೆಂದೇ ಹೆಸರು! ಇಲ್ಲಿ ಮುಖ್ಯವಾಗಿ ವಿವರಿಸಬೇಕಾದದ್ದು ಸ್ತ್ರೀಯರ ಗುಹ್ಯವೆಂದರೆ ಯೋನ್ಯಾದಿ ಅಂಗಪ್ರತ್ಯಂಗಗಳು—ಸ್ಥಾನಭೇದದಿಂದ ಅದಕ್ಕೆ ಎರಡು ವಿಭಾಗಗಳಿವೆ; ಮೊದಲನೇದು ಅಂತರ್ವಿಭಾಗ, ಮತ್ತೊಂದು ಬಾಹ್ಯವಿಭಾಗವು. ಅಂತರ್ವಿಭಾಗದಲ್ಲಿ ಗರ್ಭಾಶಯ, ಅಂತಃಫಲ, ಫಲಸ್ರೋತ ಮತ್ತು ಯೋನಿ ಈ ೪ ಅಂಗಗಳಿರುವವು. ಹಾಗೆಯೇ—ಯೋನಿದ್ವಾರ, ಪ್ರಥಮಾವರ್ತ, ದ್ವಿತೀಯಾವರ್ತ, ಯೋನಿಲಿಂಗ, ಯೋನಿಪಟಲ ತಥಾ ಗುಹ್ಯ ಕೇಶಭೂ, ಇವು ಬಾಹ್ಯವಿಭಾಗದಲ್ಲಿವೆ. ಸ್ತ್ರೀಯರ ಈ ಗುಹ್ಯಾಂಗವು ಶರೀರದ ವಸ್ತಿಪ್ರದೇಶದ ಒಳಗಿದೆ. ಇದಕ್ಕಾಗಿ ಗುಹ್ಯಾಂಗದ ರಚನೆಯನ್ನು ತಿಳಿಯುವದಕ್ಕಾಗಿ "ವಸ್ತಿ" (ಕಿಬ್ಬೊಟ್ಟೆ) ಯ ರಚನಾಕ್ರಮವನ್ನು ತಿಳಿಯುವದು ಮೊದಲನೇ ಕೆಲಸವು.

ವಸ್ತಿಗೆ ಇಂಗ್ಲಿಷ್‌ನಲ್ಲಿ Pelvis (ಪೆಲ್ವಿಸ್) ಎಂದೆನ್ನುವರು. ಇದು ಒಂದು ವಿಧವಾದ ಎಲುಬಿನ ಪಿಂಜರವಾಗಿದೆ. ಈ ವಸ್ತಿಯು ಹೊಟ್ಟೆಯ ಕೆಳಗಿದೆ. ಇದಕ್ಕೆ ನಾಲ್ಕು ಬೇರೆಬೇರೆ ಎಲುಬುಗಳಿವೆ. ಹಿಂದಗಡೆ ಎಲುಬಿನ ಕೆಳಭಾಗದಲ್ಲಿ "ತ್ರಿಕಾಸ್ಥಿ" Secrum (ಸೇಕ್ರಮ್) ಎಂಬದಿದೆ. ಅದರ ಕೆಳಗೆ ಗುದಾಸ್ಥಿ Coccyx (ಕಾಕ್‌ಸಿಕ್ಸ್) ಇದೆ. ಇವೆರಡರ ಪಾರ್ಶ್ವದಲ್ಲಿ ಮತ್ತು ಮುಂಭಾಗದಲ್ಲಿ ಒಂದೊಂದು ದೊಡ್ಡ ಎಲುಬುಗಳಿವೆ. ಅಂದರೆ ವಸ್ತಿಯ ಮುಂದಿನ ಭಾಗದಲ್ಲಿ ವಂಕ್ಷಣಾಸ್ಥಿ, ಪಾರ್ಶ್ವದಲ್ಲಿ ನಿತಂಬಾಸ್ಥಿ, ಕೆಳಗೆ ಆಸನಾಸ್ಥಿ, ಹಿಂದುಗಡೆ ತ್ರಿಕ ಮತ್ತು ಗುದಾಸ್ಥಿಗಳಿವೆ. ಬಾಲ್ಯಾವಸ್ಥೆಯಲ್ಲಿ ಪಾರ್ಶ್ವದ ಎಲುಬಿನ ಮೂರು ಬೇರೆಬೇರೆ ತುಂಡುಗಳಿರುತ್ತವೆ.

ಕಿಂತು ವಯಸ್ಸಾದಹಾಗೆ ಅಂದರೆ ತರುಣಾವಸ್ಥೆಯಲ್ಲಿ ಈ ಮೂರು ತುಂಡು
ಗಳೂ ಸೇರಿ ಒಂದೇ ಒಂದು ದೊಡ್ಡ ಎಲುಬಾಗಿರುತ್ತದೆ. ನಿತಂಬಾಸ್ಥಿಗೆ
Iliam (ಈಲಿಯಮ್) ಎಂತಲೂ, ವಂಕ್ಷಣಾಸ್ಥಿಗೆ Pubis (ಪ್ಯೂಬಿಸ್)
ಎಂತಲೂ ಹೇಳುವರು. ಇದು ತೆಳುವಾಗಿ, ಗಟ್ಟಿಯಾಗಿ ಸಣ್ಣದಾಗಿರುವದು.
ಆಸನಾಸ್ಥಿಗೆ (ಇಸ್ಕಿಯಮ್) ಎನ್ನುವರು. ಇವೆರಡೂ ಕೂಡುವ ಸ್ಥಾ
ನಕ್ಕೆ (ಪ್ಯೂಬಿಕ್ ಸಂಧಿ) ವಂಕ್ಷಣಸಂಧಿ ಎಂದೆನ್ನುವರು. ಹಿಂದೆಯೂ,
ಪ್ರತಿಯೊಂದು ಪಾರ್ಶ್ವದಲ್ಲಿಯೂ ತ್ರಿಕ ಮತ್ತು ನಿತಂಬಾಸ್ಥಿಗಳ ಸಂಯೋ
ಗವಾಗುತ್ತದೆ. ಅವುಗಳ ಬಲದ, ಎಡದ (ಸೇಕ್ರಂ ಕಲ್ಯಾಕ್) ಸಂಧಿ ಎಂದೆ
ನ್ನುವರು. ಇದು ಹೊರ್ತು ತ್ರಿಕ ಮತ್ತು ಗುದಾಸ್ಥಿಗೂ ಸಂಧಿಯಾಗು
ತ್ತದೆ. ಈ ಎಲ್ಲಾ ಸಂಧಿಗಳ ಅಥವಾ ಜೋಡಿಸುವಿಕೆಗಳಲ್ಲಿ—ತ್ರಿಕ ಗುದಾ
ಸ್ಥಿಗಳ ಜೋಡಣೆಯು ಚಲ (ಅಲಗಾಡತಕ್ಕದ್ದು) ವಾಗಿಯೂ, ಬಾಕೀ ಜೋ
ಡಣೆಯು ಅಚಲ (ಸ್ಥಿರ) ವಾದ್ದಾಗಿವೆ. ವಂಕ್ಷಣಕ್ಕೂ ಆಸನಾಸ್ಥಿಗೂ ಮಧ್ಯ
ದಲ್ಲಿ ಒಂದು ಛಿದ್ರವಿದೆ. ಅದಕ್ಕೆ Thyroid (ಥಾಯರಾಯಿಡ್) ಛಿದ್ರವೆಂದೆ
ನ್ನುವರು. ಸ್ವಾಭಾವಿಕ ಅವಸ್ಥೆಯಲ್ಲಿ ಅದು ಒಂದು ಪರದೆಯಿಂದ ಮು
ಚ್ಚಲ್ಪಟ್ಟಿರುತ್ತದೆ. ಹೊರಗಿನಕಡೆಗೆ ವಂಕ್ಷಣಾಸ್ಥಿ, ಆಸನಾಸ್ಥಿ ಮತ್ತು
ನಿತಂಬಾಸ್ಥಿಗಳು ಎಲ್ಲಿ ಜೋಡಿಸಲ್ಪಟ್ಟಿರುವವೋ ಅಲ್ಲಿ ಒಂದು ಸಣ್ಣ ಗುಂಡಿ
ಇದೆ. ಅದಕ್ಕೆ ಇಂಗ್ಲಿಷ್‌ನಲ್ಲಿ "ಆಸೇಟಾಬ್ಯುಲಂ" ಎಂದೆನ್ನುವರು.
ಮೇಲೆ ಹೇಳಿದ ಎಲುಬುಗಳು ಭಿನ್ನಭಿನ್ನ ಸಂಧಿಬಂಧನಗಳಿಂದ ಪರಸ್ಪರ
ಜೋಡಿಸಲ್ಪಟ್ಟಿವೆ. ನಿತಂಬಾಸ್ಥಿಗೆ ಹೊರಗಡೆ ಸ್ನಾಯುಸಂಬದ್ಧವಾಗಿದೆ.
ಕೆಳಗಿನ ಭಾಗದಲ್ಲಿ ಜಂಘೆಯ ಆಕುಂಚನ (ಮುದುರುವಿಕೆ) ಪ್ರಸಾರಣ (ವಿಸ್ತ
ರಿಸುವಿಕೆ) ಮತ್ತು ಅಂತರ್ಬಹಿಃಕ್ಷೇಪಣಾದಿ ಕಾರ್ಯಗಳನ್ನು ಮಾಡಿಸತಕ್ಕ
ಸ್ನಾಯುಗಳ ಸಂಬದ್ಧವಿದೆ. ಒಳಭಾಗದಲ್ಲಿ ಗುದಚಾಲಕಸ್ನಾಯು ಮತ್ತು
(ಸ್ತ್ರೀಪುರುಷರ) ಶಿಶ್ನಯೋನಿ ಚಾಲಕ-ಸ್ನಾಯುಗಳಿಗೆ ಮೇಲ್ಗಡೆ ಪಾರ್ಶ್ವದಲ್ಲಿ
ಉದರಸಂಬಂಧೀ ಸ್ನಾಯುಗಳಿವೆ. ವಸ್ತಿಯ ಒಳಗಡೆ ಎಷ್ಟು ಅವಕಾಶವಿ
ರುತ್ತದೆಂದು ಹೊರಗಡೆ ಕಂಡುಬರುತ್ತದೆಯೋ ವಾಸ್ತವವಾಗಿ ಅಲ್ಲಿ ಅಷ್ಟು
ಅವಕಾಶವಿಲ್ಲ! ಸ್ತ್ರೀಯರ ವಸ್ತಿಪಂಜರವು ಪುರುಷರದಕ್ಕಿಂತ ಅಧಿಕ ಅಗಲ
ಮತ್ತು ಲಘುವಾದದ್ದಾಗಿದೆ. ವಸ್ತಿಯುಮೇಲೂ ಕೆಳಗೂ ಎರಡು ದ್ವಾರಗ
ಳಿವೆ. ಮೇಲಿನ ದ್ವಾರಕ್ಕೆ ಆಗಮನದ್ವಾರವೆಂತಲೂ, ಕೆಳಗಿನ ದ್ವಾರಕ್ಕೆ ನಿರ್ಗ
ಮನದ್ವಾರವೆಂತಲೂ ಹೇಳುತ್ತಾರೆ. ಈ ಸಂಜ್ಞೆಗಳು ಗರ್ಭದಸಂಬಂಧದಿಂದ
ಇಡಲ್ಪಟ್ಟಿವೆ. ಯಾಕೆಂದರೆ ಪ್ರಸೂತಿಯ ಸಮಯದಲ್ಲಿ ಗರ್ಭವು ಮೇಲಿನ
ದ್ವಾರದಿಂದ ಒಂದು ಇರುತ್ತಾ, ಅದರ ಕೆಳಗಿನ ದ್ವಾರದಿಂದ ಹೊರಟು ಪ್ರಸವ

ವನ್ನು ಪಡಿಯುವದು. ಈ ದ್ವಾರಗಳೆರಡರ ಮಧ್ಯದ ಮಾರ್ಗಕ್ಕೆ "ವಸ್ತಿಕಕ್ಷಾ" ಎಂದೆನ್ನುವರು. ಈ ವಸ್ತಿಯು ಮಧ್ಯದಲ್ಲಿ ಗರ್ಭಾಶಯ ಮತ್ತು ಯೋನಿಗಳಿರುವವು. ಯೋನಿಯು ಅಂತಸ್ಸೀಮಾ ಮೇಲ್ಭಾಗವೇ ಗರ್ಭಾಶಯದ ಸ್ಥಾನವು. ಗರ್ಭಾಶಯವು ವಸ್ತಿಯು ಮಧ್ಯದಲ್ಲಿಯೇ ಇದೆ. ಇದರ ಮುಂದೆ ಮೂತ್ರಾಶಯವೂ, ಹಿಂದುಗಡೆ ಗುದವೂ, ಮೇಲ್ಗಡೆ ಸಣ್ಣ ಕರಳುಗಳೂ, ಹಾಗೆಯೇ ಕೆಳಗಡೆ ಯೋನಿಯೂ ಇರುವವು. ಎರಡು ಪಾರ್ಶ್ವಗಳಲ್ಲಿಯೂ ಎರಡು ಬಂಧನಗಳಿವೆ. ಆ ಕಾರಣದಿಂದಲೇ ವಸ್ತಿಪ್ರದೇಶದ ಮುಂಭಾಗ ಹಿಂಭಾಗಗಳೆಂಬೆರಡು ವಿಭಾಗಗಳುಂಟಾದವು.

**ಗರ್ಭಾಶಯ:—** ಇದು ಚಪ್ಪಟೆಯಾದ ಆಕೃತಿಯುಳ್ಳದ್ದು. ಇದರ ಉದ್ದ ಪ್ರಾಯಃ ೩ ಅಂಗುಲ, ಅಗಲ ೧॥ ಇಂದ ೨॥ ಅಂಗುಲ, ಮಂದ ೧ ಅಂಗುಲವಿದೆ. ಇದರ ತೂಕವು ೫ ತೊಲೆಯಿಂದ ೧೦ ತೊಲೆಯವರಿಗೆ ಇದೆ. **(ಇದೇ ಮಾನವಕೋಟಿಯ ಪ್ರಾರಂಭವಾಸ ಗೃಹವು !!)** ಗರ್ಭಿಣಿ ಅವಸ್ಥೆಯಲ್ಲಿ ಇದರ (ಉದ್ದವೂ, ಅಗಲವೂ, ತೂಕವೂ ವಿಶೇಷ ವೃದ್ಧಿಯಾಗುವದು.) ತೂಕವು ೧೨೫ ತೊಲೆಯವರಿಗೂ ವೃದ್ಧಿಯಾಗುವದು. ಉದ್ದವೂ, ಅಗಲವೂ ೮-೧೦ ಅಂಗುಲದವರಿಗೆ ಆಗುತ್ತದೆ. ವೃದ್ಧಾವಸ್ಥೆಯಲ್ಲಿ ಗರ್ಭಾಶಯವು ಬಹು ಸಣ್ಣದಾಗಿರುವದು.

ಗರ್ಭಾಶಯಕ್ಕೆ ೨ ಭಾಗಗಳಿರುವವು:— ೧ನೇದು ಇದರ ಶರೀರವು, (ಇದು ಅಗಲವಾಗಿ ಮೇಲಿನ "ಫಂಡಸ್" (Fundus) ಎಂಬ ನರಕ್ಕೆ ಸೇರಿದೆ.) ಮತ್ತೊಂದು ಅದರ ಗ್ರೀವಾ; ಇದಕ್ಕೆ "ಸರ್‌ವಿಕ್ಸ್" (Cervix) ಎಂದು ಹೆಸರು. ಈ "ಗ್ರೀವಾ"ದ ಸ್ವಲ್ಪ ಭಾಗವು ಯೋನಿಯ ಒಳಗೆ ಇರುತ್ತದೆ, ಅಂದರೆ ಅದಕ್ಕಿಂತ ಮೇಲಿರುತ್ತದೆ. ಈ ಗ್ರೀವಾಕ್ಕೆ ಕಮಲವೆಂತಲೂ ಹೇಳುತ್ತಾರೆ. ಗರ್ಭಾಶಯ್ಯಾದ ಹೊರಗಿನ ಭಾಗವು ಪೂರ್ವ ಪಶ್ಚಿಮಗಳಲ್ಲಿ ಮತ್ತು ಮೇಲಕ್ಕೂ ಅಂತ್ರಾವರಣದಿಂದ ಸುತ್ತಲ್ಪಟ್ಟಿದೆ. ಈ ಅಂತ್ರಾವರಣವು ದೊಡ್ಡ ಕರಳು (Large intestines) ಗಳಿಂದ ಇಳಿದುಕೊಂಡು ಗರ್ಭಾಶಯ್ಯಾದ ಹಿಂಭಾಗದಲ್ಲಿಯೂ, ಮೇಲ್ಭಾಗದಲ್ಲಿಯೂ ಸುತ್ತಿಕೊಂಡು ಪೂರ್ವಭಾಗದಲ್ಲಿ ಹೋಗುತ್ತಾ ಇರುವ ವಸ್ತಿಯಕಡೆಗೆ ಹೋಗುತ್ತದೆ. ಮತ್ತು ವಸ್ತಿಯ ಮೇಲಿನ ಹಿಸ್ಸೆಯಿಂದ ಸಂಲಗ್ನವಾಗಿ, ಮತ್ತೆ ಉದರಸ್ನಾಯುವಿನ ಒಳಭಾಗದಕಡೆಗೆ ಬರುತ್ತದೆ. ಈಪ್ರಕಾರ ತಿರುಗಿಕೊಂಡು ಶಯ್ಯಾದ ಪೂರ್ವ ಮತ್ತು ಪಶ್ಚಿಮಭಾಗದಲ್ಲಿ ಈ ಆವರಣದ ಎರಡು ದ್ರೋಣೀಗಳಿವೆ. ಸಣ್ಣ ಕರಳಿನ ಕೆಲವುಭಾಗ ಇವುಗಳಲ್ಲಿದೆ. ದ್ರೋಣಿಯ ಪಾರ್ಶ್ವಭಾಗದ ಪೂರ್ವ ಮತ್ತು ಪಶ್ಚಿಮ ಪ್ರದೇಶದಲ್ಲಿ ಅಂತ್ರಾವರಣದ ಶೇಷ,

ನವುಂಟಾಗುತ್ತದೆ. ಇವಕ್ಕೆ ಪೂರ್ವಬಂಧನ ಮತ್ತು ಪಶ್ಚಾದ್ಬಂಧನವೆಂದೆನ್ನುವರು. ಈ ಬಂಧನಗಳ ಆಶ್ರಯದಲ್ಲಿ ಗರ್ಭಾಶಯವು ಯಥಾವಸ್ಥಿತವಾಗಿದೆ. ಈ ಬಂಧನ ಶಿಥಿಲವಾಗುವದಾದರೆ, ಅಥವಾ ಇವುಗಳಲ್ಲಿ ಬೇರೆ ವಿಕಾರವುಂಟಾಗುವದಾದರೆ ಗರ್ಭಾಶಯವು ಡೊಂಕಾಗಿಯೂ, ತಿರಗಿಕೊಂಡು ಬಿಡುವದು, ಅಥವಾ ಬೊಗ್ಗಿ ಬಿಡುವದು. ಅಂತ್ರಾವರಣಕ್ಕೆ "ಪೆರಿಟೋನಿಯಮ್" (Peritoneum) ಎಂದೆನ್ನುವರು. ಇದು ಗರ್ಭಾಶಯದ ಮುಂದೆಯೂ, ಹಿಂದೆಯೂ ಮೂತ್ರಾಶಯ ಮತ್ತು ಮಲಾಶಯಗಳ ಮಧ್ಯದಲ್ಲಿ ಇಳಿದು, ಮತ್ತೆ ಮಧ್ಯದಿಂದ ಅವುಗಳ ಮೇಲಕ್ಕೆ ಹತ್ತುತ್ತದೆ. ಇದರಿಂದ ಆ ಎರಡು ಭಾಗದಲ್ಲಿ ದ್ರೋಣಿಯ ಆಕಾರದ ಗುಂಡಿಗಳುಂಟಾಗುತ್ತವೆ. ಗರ್ಭಾಶಯ ಮತ್ತು ಗುದದ ಮಧ್ಯದ ದ್ರೋಣಿಯು ಬಹು ಆಳವಾಗಿರುತ್ತದೆ ಅಥವಾ ಅಂತ್ರಾವರಣ (ಪೆರಿಟೋನಿಯಮ್) ಗರ್ಭಾಶಯದಿಂದ ಬಂಧಿಸಲ್ಪಟ್ಟು ಪಕ್ಕದಲ್ಲಿ ತಿರುಗುತ್ತದೆಂದು ತಿಳಿದರೂ ಸರಿಯೆ; ಇದರಿಂದ ಅವು ಗರ್ಭಾಶಯದ ಪಾರ್ಶ್ವಬಂಧನದಂತಾಗುತ್ತವೆ. ಈ ಬಂಧನವು ಒಂದುಕಡೆಗೆ ಗರ್ಭಾಶಯದಿಂದ ಕೂಡಿಯೇ ಇರುತ್ತದೆ. ಮತ್ತು ಬೇರೇಕಡೆ ವಸ್ತಿಯ ಪಾರ್ಶ್ವದಿಂದ ಸಂಬದ್ಧವಾಗಿರುತ್ತದೆ. ಈ ಪ್ರತ್ಯೇಕ ಬಂಧನಕ್ಕೆ ಪೃಥುಬಂಧನವೆಂದೆನ್ನುವರು. ಅಂದರೆ—ಅಂತ್ರಾವರಣ ಅಥವಾ ಪೆರಿಟೋನಿಯಂನ ಗರ್ಭಾಶಯದ ಎರಡುಕಡೆಗಳ ಕಡೆಗೆ ಯಾವ ಅಂತಸ್ಥು ಇದೆಯೋ ಅದರ ಹೆಸರೇ ಪೃಥುಬಂಧನ (Broad Ligament) ವು. ಈ ಪೃಥುಬಂಧನದ ಒಳಗೆ ಗರ್ಭಾಶಯದ ಉಪಾಂಗವಿರುತ್ತದೆ. ಅಂತಃಫಲ ಅಥವಾ ಅಂತರ್ಗತಫಲ ಮತ್ತು ಅದರ ಮೇಲಿನ ಅದರ ಸ್ರೋತವಿದೆಯೋ ಅದಕ್ಕೆ ಫಲಸ್ರೋತವೆಂತಲೂ, ಫಲವಾಹಿನೀ ಎಂತಲೂ ಹೇಳುವರು. ಇದೇ ಗರ್ಭಾಶಯದ ಪ್ರತ್ಯಂಗವು. ಅಂತಃಫಲದ ಕೆಳಗಿನ ಕಡೆಗೆ ಒಂದು ಹಗ್ಗದಂತಹ ಬಂಧನವಿದೆ. ಇದು ಗರ್ಭಾಶಯದ ಪಾರ್ಶ್ವಭಾಗದಲ್ಲಿ ತಗಲಿಕೊಂಡು ವಸ್ತಿಯಲ್ಲಿಂದ ಉದರಸ್ನಾಯುವಿನ ಮಧ್ಯದಿಂದ ದಾಟುತ್ತಾ, ಗುಹ್ಯಕೇಶಭೂದಿಂದ ಸಂಲಗ್ನವಾಗುತ್ತದೆ. ಇದರ ಹೆಸರೇ "ರಜ್ಜುಬಂಧನ" ವು.

ಯಾವ ಸ್ಥಾನದಲ್ಲಿ ಗರ್ಭಶಯ್ಯಾಕ್ಕೆ ಯೋನಿಯೊಂದಿಗೆ ಸಂಬಂಧವಿದೆಯೋ ಅದೇ ಮೇಲೆ ಹೇಳಿದ ಗ್ರೀವಾ. ಈ ಸ್ಥಳದಲ್ಲಿ ಗರ್ಭಶಯ್ಯೆಯು ಪೂರ್ವಭಾಗಕ್ಕೆ ಬಗ್ಗಿರುತ್ತದೆ. ಗ್ರೀವೆಯ ಮಧ್ಯದಲ್ಲಿ ಶಯ್ಯಾಮುಖವಿದೆ. ಈ ಮುಖಕ್ಕೆ ಶಯ್ಯಾಬಾಹ್ಯಮುಖ (Os externum) ವೆಂದೆನ್ನುವರು. ಮುಖದಬಳಿ ಗ್ರೀವಾ ಓಷ್ಠಾಕಾರವಾಗಿದೆ. ಯಾವ ಸ್ಥಾನದಲ್ಲಿ ಗ್ರೀವಾ ಮತ್ತು ಆಶಯದ ಸಂಬಂಧವಾಗುತ್ತದೆಯೋ ಅಲ್ಲಿ ಗ್ರೀವಾಸ್ಥವಾದ ಸ್ರೋ

ತವು ಮುದುರಿಕೊಂಡು ಇರುತ್ತದೆ. ಈ ಮುದುರಿಕೊಂಡಿರುವ ಪ್ರದೇಶಕ್ಕೆ ಅಂತರ್ಮುಖ (Os uteri) ವೆಂದೆನ್ನುವರು. ಶಯ್ಯಾದ ಒಳಗಿನ ಪ್ರದೇಶವು ತ್ರಿಕೋಣಾಕಾರವಾಗಿದೆ. ಇದರ ಅಧಃಕೋಣದ ತಥಾ ಗ್ರೀವಾಸ್ರೋತದ ಸಂಬಂಧ ಮತ್ತು ಪಾರ್ಶ್ವಕೋಣ ತಥಾ ಫಲಸ್ರೋತದ ಸಂಬಂಧವುಂಟಾಗುವದರಿಂದ ಗರ್ಭಾಶಯದ ನಾಲ್ಕು ಪ್ರದೇಶಗಳಾಗುವವು. ಫಲಸ್ರೋತ ಸಂಲಗ್ನವಾಗಿರುವ ಸ್ಥಾನದಿಂದ ಮೇಲಿನ ಪ್ರಾಂತದವರಿಗೆ ಯಾವ ಪ್ರದೇಶವಿದೆಯೋ ಅದೇ ಶಯ್ಯೋರ್ಧ್ವ ಪ್ರದೇಶವು; ಫಲಸ್ರೋತದಿಂದ ಗ್ರೀವೆಯವರಿಗೆ ಗರ್ಭಾಶಯವು; ಮತ್ತೆ ಗ್ರೀವಾ, ಮತ್ತೆ ಅಂತದಲ್ಲಿ ಶಯ್ಯಾಮುಖಗಳಿರುವವು.

ಗರ್ಭಾಶಯಕ್ಕೆ ೩ ಆವರಣಗಳಿವೆ; ಮೊದಲನೇದು ಹೊರಗಿನ ರಸಮಯಾವರಣ (Serous coat) ಮಧ್ಯೆ ಸ್ನಾಯುಮಯಾವರಣ (muscular coat) ಮತ್ತು ಒಳಗಡೆ ಶ್ಲೇಷ್ಮಲಾವರಣ (mucous coat) ಗಳಾಗಿವೆ. ಈ ಶ್ಲೇಷ್ಮಲಾವರಣಕ್ಕೂ ಸ್ನಾಯ್ವಾವರಣಕ್ಕೂ ಮಧ್ಯದಲ್ಲಿ ರುಧಿರವಹ ಶ್ರೋತಗಳ ಜಾಲವಿದೆ. ಇದರಂತೆಯೇ ಬಾಹ್ಯಾವರಣಕ್ಕೂ, ಸ್ನಾಯ್ವಾವರಣಕ್ಕೂ ಮಧ್ಯೆ ಸ್ರೋತೋ ಜಾಲವಿದೆ. ಈ ಜಾಲದಿಂದ ಜೀವಶೋಣಿತ ಪ್ರವಾಹವುಳ್ಳ ನಾಡಿಗಳೂ, ದುಷ್ಟ ರುಧಿರವಾಹಕ ಶಿರಾಗಳೂ, ವಾಯುಮಾರ್ಗ ಮತ್ತು ರಸವಾಹಕ ಸ್ರೋತಗಳೂ ಇರುವವು. ಗರ್ಭಾಶಯವು ಪ್ರಸರಿಸುವದೂ, ಮುದುರಿಕೊಳ್ಳುವದೂ ಸ್ನಾಯ್ವಾವರಣದ ಆಧಾರದಿಂದಲೇ! ಶುಕ್ಲ ಶೋಣಿತ ಸಂಯೋಗದ ನಂತರ ಗರ್ಭದ ಕಲಲಾವಸ್ಥಾ, ಘನೀಭಾವ, ಪಿಂಡಸ್ಥಿತಿ, ಅದರ ಅಂಗ ಪ್ರತ್ಯಂಗಗಳ ಆವಿರ್ಭಾವ, ಕ್ರಮಶಃ ಗರ್ಭವೃದ್ಧಿ ಹಾಗೆಯೇ ಪೂರ್ಣದಶೆಯನ್ನು ಪಡಿಯುವಿಕೆ—ಈ ಮುಂತಾದ ಅವಸ್ಥಾಂತರಗಳೆಲ್ಲವೂ ಈ ಗರ್ಭಾಶಯದಲ್ಲಿಯೇ ಉಂಟಾಗುವವು. ಹೇಗೆ ಹೇಗೆ ಗರ್ಭ ಪ್ರವೃದ್ಧಿಯಾಗುತ್ತಾ ಬರುವದೋ ಹಾಗೆ ಹಾಗೆಯೇ ಗರ್ಭಾಶಯವೂ ವೃದ್ಧಿಯಾಗುತ್ತಾ ತನ್ನ ಮಧ್ಯದಲ್ಲಿ ಶಯನಿಸಿರತಕ್ಕ ಶಿಶುವಿಗೆ ಇಂಬನ್ನುಂಟುಮಾಡುವದು. ೯ ನೇ ತಿಂಗಳನಂತರ ಶಯ್ಯಾಸ್ನಾಯುವು ಮುದುರಿಕೊಳ್ಳುವದರಿಂದ ಆ ಸ್ನಾಯುಗಳ ವೇಗದಿಂದ ಗರ್ಭವು ಹೊರಗೆಬಂದು ಪ್ರಸುವಾಗುವದು.

**ಫಲಸ್ರೋತ ಅಥವಾ ಫಲವಾಹಿನೀ:**—ಗರ್ಭಾಶಯದ ಎರಡು ಪಕ್ಕಗಳಲ್ಲಿಯೂ ನಾಲ್ಕು ನಾಲ್ಕು ಅಂಗುಲ ಉದ್ದವುಳ್ಳ ಒಂದೊಂದು ನಾಳಗಳಿವೆ. ಇವೇ ಫಲ ಅಥವಾ ಬೀಜ ಸ್ರೋತಗಳು. ಇಂಗ್ಲೀಷ್‌ನಲ್ಲಿ ಇವಕ್ಕೆ (Fallopian tubes) ಫಲೋಪಿಯನ್ ಟ್ಯೂಬ್ಸ್ ಎನ್ನುವರು. ಇದರ ಆಕೃತಿಯು ಬರಿಯುವ "ಪೆನ್ನಾ" (Quill) ದಂತೆ ಇರುತ್ತದೆ. ಗರ್ಭಾ

ಶಯದಲ್ಲಿ ಶುಕ್ಲಶೋಣಿತ ಸಂಯೋಗದಿಂದ ಗರ್ಭವರ್ಧನವಾಗದೆ, ಈ ಫಲ ಸ್ರೋತದಲ್ಲಿಯೇ ಸಂಯುಕ್ತವಾದ ಶುಕ್ಲಶೋಣಿತದ ವೃದ್ಧಿಯುಂಟಾಗಿ ಆ ಸ್ರೋತದ್ದೇಶಯ್ಯಾ ಉಂಟಾಗುತ್ತದೆ. ಇದರಿಂದ ಈ ಸ್ರೋತಕ್ಕೆ ವಿಕಸನ ಶಕ್ತಿಯೂ ಇರುತ್ತದೆ. ಗರ್ಭಾಶಯದಿಂದ ಈ ಸ್ರೋತದ ಸಿರಾ ಹೊರ ಡುವಲ್ಲಿ ಸ್ರೋತೋರಂಧ್ರ ಮತ್ತು ಆಶಯದ ಸಮಾಗಮವಾಗುತ್ತದೆ. ಈ ಸ್ರೋತದ ಹೊರಗಡೇ ಸಿರಾ (ನಾಡಿ) ಅಂಚಲಿತ ತಥಾ ಕೂರ್ಚಾಕಾರವಾ ಗಿದೆ. ಇದರ ಅನೇಕ ಅಂಚುಗಳಲ್ಲಿ ಒಂದೆರಡು ಬೀಜಕೋಶದಲ್ಲಿ ಸಂಬಂ ಧಿಸಿರುವವು. ಈ ಅಂಚಿನ ಮಧ್ಯದಲ್ಲಿ ಸ್ರೋತದ ಹೊರಮುಖವಿದೆ. ಪ್ರತಿಯೊಂದು ಫಲಸ್ರೋತಕ್ಕೂ ಮೂರು ಆವರಣವಿವೆ. ಇವು ಗರ್ಭಾ ಶಯದಂತೆ ರಸಮಯ, ಸ್ನಾಯುಮಯ, ಶ್ಲೇಷ್ಮಮಯ ರೂಪಗಳಾಗಿವೆ. ಈ ಸ್ರೋತದ ಮಧ್ಯದಲ್ಲಿ ಧಮನೀ, ಶಿರಾ, ವಾಯುಮಾರ್ಗ ಮತ್ತು ರಸವಾ ಹಕ ಸ್ರೋತಗಳಿರುವವು. ಬೀಜಕೋಶದ ಒಳಗಿನ ಬೀಜವು ಇದರಮೂಲ ಕವೇ ಗರ್ಭಾಶಯಕ್ಕೆ ಶೇರುತ್ತದೆ; ಹಾಗೆಯೇ ಪುರುಷನ ವೀರ್ಯವೂ ಇದರ ಮುಖಾಂತರವಾಗಿಯೇ ಸ್ತ್ರೀಬೀಜದೊಂದಿಗೆ ಶೇರಿಕೊಳ್ಳುತ್ತದೆ.

**ಅಂತಃಫಲ:**—ಇದು ಸ್ತ್ರೀಯರ ಬೀಜಕೋಶವು; ಆರ್ಯವೈದ್ಯಕ ಗ್ರಂಥಗಳಲ್ಲಿ ಇದಕ್ಕೆ ಅಂತರ್ಗತಫಲವೆಂದು ಹೇಳಲ್ಪಟ್ಟದೆ. ಇಂಗ್ಲೀಷ್ ನಲ್ಲಿ ಇದಕ್ಕೆ (Overy) ಓವರೀ ಎಂದೆನ್ನುವರು. ಪುರುಷನಿಗೆ ಅಂಡಕೋ ಶವು ಬಾಹ್ಯಫಲವು, ಅದರಂತೆಯೇ ಸ್ತ್ರೀಯರ ಬೀಜಕೋಶವೇ ಅಂತಃಫ ಲವು. ಈ ಬೀಜಕೋಶವು ಅವಸ್ಥಾಭೇದದಿಂದ ಸಣ್ಣದೂ, ದೊಡ್ಡದೂ ಆಗುವದು. ಇದರ ಆಕಾರವು ಬಾದಾಮಿಯಂತಿದೆ; ಉದ್ದದಲ್ಲಿ ಪ್ರತಿ ಯೊಂದೂ ಹೆಚ್ಚುಕಡಮೆ ೧|| ಇಂಚು, ಅಗಲ ||| ಇಂಚು, ದಪ್ಪ = ಇಂಚು ತೂಕ | ತೊಲೆಯಿಂದ || ತೊಲೆವರಿಗೆ ಇರುತ್ತದೆ. ಇದರ ಯಾವದಾದ ರೊಂದು ಭಾಗದಲ್ಲಿ ಬೀಜಸ್ರೋತದ ಒಂದೆರಡು ಅಂಚು ತಗಲಿಕೊಂಡಿರು ತ್ತದೆ. ಇವುಗಳಲ್ಲಿ ರಕ್ತವಾಹಕ, ರಸವಾಹಕಸ್ರೋತ ತಥಾ ವಾಯುಮಾರ್ಗ ಗಳೂ ಇರುವವು. ಬೀಜಕೋಶದ ಬಾಹ್ಯ ಆಚ್ಛಾದನವು ರಸಮಯವಾಗಿ ರುವದು. ಇದರ ಒಳಗಿನ ರಚನೆಯು ಹೀರೇಕಾಯಿಯಂತೆ ಇರುತ್ತದೆ. ಶ್ವೇತತಂತು ಘಟಿತಗಳಾದ ವಿಲಕ್ಷಣ ಕೋಶಗಳು ಇದರಲ್ಲಿರುವವು. ಇವು ಗಳ ಮಧ್ಯಮಧ್ಯೆ ಸಣ್ಣ ಪುಟ್ಟ ಅಸಂಖ್ಯ ಬೀಜಸ್ಥಾನಗಳಿರುವವು. ಈ ಬೀಜಸ್ಥಾನದಲ್ಲಿ ಅಸಂಖ್ಯಾತ ಬೀಜಗಳು ಅನೇಕ ಭಿನ್ನ ಭಿನ್ನ ಅವಸ್ಥೆಗಳಿಂ ದಿರುವವು. ಯಾವ ಬೀಜವು ಪರಿಪಕ್ವವಾಗುವವೋ ಅವು ಈ ಕೋಶದ ಒಳಗಿನಿಂದ ಹೊರಭಾಗಕ್ಕೆ ಬರುವವು. ಅವುಗಳ ಎಲ್ಲಾಕಡೆಯೂ ಫಲ

ಸ್ರೋತದ ಸಿರಾಗಳು ಸುತ್ತಿಕೊಂಡಿರುತ್ತವೆ. ಬೀಜ ಒಡೆದನಂತರ ಇದು ಫಲ ಸ್ರೋತದ ಹೊರಮುಖದಿಂದ ಗರ್ಭಾಶಯದ ಕಡೆಗೆ ಹೋಗುತ್ತದೆ. ಪ್ರತಿಯೊಂದು ಬೀಜಸ್ಥಾನಕ್ಕೂ ಎರಡು ಕೋಶಗಳಿವೆ. ಒಂದು ಹೊರಗೆ. ಒಂದು ಒಳಗೆ. ಅವುಗಳೆರಡರ ಮಧ್ಯೆ ಬೀಜವಿರುವದು.

**ಬೀಜ:**—ಉಕ್ತಕೋಶಗಳಲ್ಲಿ ತೈಲಾಣುಗಳಿಂದ ಆಚ್ಛನ್ನವಾಗಿರುತ್ತವೆ. ಈ ಅಣುಗಳ ಆಸಪಾಸ್ ಹೊರಗಿನಿಂದ ಒಂದು ಆಚ್ಛಾದನವಿರುತ್ತದೆ. ಅದಕ್ಕೆ ಅಣ್ವಾಚ್ಛಾದನವೆನ್ನುವರು. ಬೀಜದ ಹೊರಗಿನ ಆಚ್ಛಾದನವು ಸ್ಫಟಿಕಾಕಾರವಿರುತ್ತದೆ. ಅದಕ್ಕಾಗಿ ಅದನ್ನು ಸ್ಫಟಿಕಾಚ್ಛಾದನವೆನ್ನುವರು. ಈ ಸ್ಫಟಿಕಾಚ್ಛಾದನದ ಒಳಗಡೆ ಬೀಜದ ಅಣುಗಳಿರುತ್ತವೆ. ಅವುಗಳ ಸುತ್ತಲೂ ಸೂಕ್ಷ್ಮವಾದ ಬೀಜತ್ವಚೆಯು ಇರುವದು. ಬೀಜಾಣು ಸಮೂಹದ ಒಂದು ಕೊನೆಯಲ್ಲಿ ಸೂಕ್ಷ್ಮಬೀಜವೂ, ಆ ಸೂಕ್ಷ್ಮಬೀಜದ ಮಧ್ಯದಲ್ಲಿ ಬೀಜಲೇಶವೂ ಇದೆ. ಕೋಳಿಯ ತತ್ತಿಯನ್ನು ಒಡೆದು ನೋಡುವದರಿಂದ ಬೀಜದ ಈ ಪರಿಸ್ಥಿತಿಯು ಒಳ್ಳೇರೀತಿಯಾಗಿ ತಿಳಿಯಲಾಗುತ್ತದೆ. ಪ್ರತಿಮಾಸವೂ ಒಂದೊಂದು ಬೀಜವು ಪರಿಪಕ್ವವಾಗಿ ಒಡೆಯುತ್ತದೆ. ಆ ಸಮಯದಲ್ಲಿ ಬೀಜಕೋಶ, ಫಲಸ್ರೋತ ಮತ್ತು ಗರ್ಭಾಶಯ ಮುಂತಾದ ಗುಹ್ಯ ಅವಯವಗಳು ರಕ್ತದಿಂದ ತುಂಬಿಬಿಡುತ್ತವೆ; ಹಾಗೆಯೇ ಆರ್ತವಪ್ರವಾಹವು ಪ್ರಾರಂಭಿಸುವದು. ಬೀಜವು ಯಾವಾಗ ಗರ್ಭಾಶಯದ ಕಡೆಗೆ ಹೋಗುವದೋ ಆಗ ಪುರುಷನ ಶುಕ್ಲವು ಇದರೊಡನೆ ಸಂಯೋಗವಾಗುವದರಿಂದ ಗರ್ಭವುಂಟಾಗುವದು. ಹಾಗೆ ಶುಕ್ರಸಂಯೋಗವುಂಟಾಗದಿದ್ದರೆ ಈ ಬೀಜವು ಆರ್ತವ (ರಜಸ್ಸಿನ) ಜತೇಲಿ ಹೊರಕ್ಕೆ ಬಂದುಬಿಡುತ್ತದೆ.

(**ರೋಮಸ್ಥಾನ! ಗುಹ್ಯಕೇಶಭೂ**) (Mons Veneris) -ಗುಹ್ಯಾವಯವದ ಎಮಿಕೆಗಳ ಸಂಧಿಯ ಮೇಲಿನ ವಿಸ್ತಾರವಾಗಿರುವ, ಮೃದುವಾದ ಸ್ಥಾನವೇ ಇದು. ಇದು ಕೊಬ್ಬು, ಚರ್ಮಗಳಿಂದ ನಿರ್ಮಿತವು, ಬುದ್ಧಿಯುಂಟಾದ ಕಾಲದಲ್ಲಿ ರೋಮಗಳಿಂದ ಮುಚ್ಚಲ್ಪಡುವದು. ಇದರ ಕೆಳಗಿರುವ ಎರಡು ಮೃದುವಾದ ದೊಡ್ಡ ಚರ್ಮದ ಮಡಿಕೆಗಳನ್ನು ಜಘನ (ಯೋನಿಯ ತುಟಿ) ಗಳೆನ್ನುವರು. ಇವುಗಳ ಕೆಳಗೆ ಕೊಬ್ಬು ಶೇರಿರುವದು. ಈ ಜಘನಗಳ ಒಳಭಾಗವು ನುಣ್ಣಗಿರುವದು, ಅವುಗಳಲ್ಲಿ ಕೆಲವು ಗ್ರಂಥಿಗಳು ತುಂಬಿರುವವು. ಯೋನಿತುಟಿಗಳು ಮರ್ಮಸ್ಥಾನದಲ್ಲಿನ ಎಲುಬುಗಳ ಸಂಧಿಯಿಂದ ಆರಂಭವಾಗಿ ಕೆಳಕ್ಕಿಳಿದು, ಹಿಂದಕ್ಕೆ ವಿಸ್ತರಿಸಿ "ಫೆರಿನಿಯಂ" ಎಂಬ ಸ್ಥಳದಲ್ಲಿ ಕೂಡಿಬಿಡುವವು; ಜಘನಾಂತ್ಯಕ್ಕೂ, ಗುದಕ್ಕೂ ಮಧ್ಯೆ ಇರತಕ್ಕ ಸ್ಥಳಕ್ಕೇನೆ "ಪೆರಿನಿಯಮ್" ಎಂದು ಹೆಸರು. ಇದು ಚರ್ಮ

ದಿಂದ ಏರ್ಪಟ್ಟು, ಸುಮಾರು ೧॥ ಅಂಗುಲ ಉದ್ದವಾಗಿರುವದು. ಯೋನಿತುಟಗಳ ಕೆಳಗಿನ ಮೊನೆಗಳು ಸೇರತಕ್ಕ "ಪೆರಿನಿಯಂ" ನ ಅಂಚನ್ನೂ ಯೋನಿತುಟಿಗಳನ್ನೂ ಎಳದು ಹಿಡಿದುಕೊಂಡಿರುವ ಮಡತೆಗೆ ಫ್ರೆಂಚ್ ಭಾಷೆಯಲ್ಲಿ "ಫೋರ್ಷೆಟ್" (Fourchette) ಎನ್ನುವರು. ಪೆರಿನಿಯಂನ ಮುಂದಿನ ಅಂಚಿಗೆ ಸಂಧಿ ಎಂದು ಹೆಸರು; ಮತ್ತೂ ಜಘನಗಳನ್ನು ಬಿಡಿಸಿ ನೋಡಿದರೆ ಅವುಗಳ ಕೆಳಗಿನ ಕೊನೆಗಳ ನಡುವೆ ಒಂದು ಗುಂಡಿ ಕಂಡುಬರುತ್ತದೆ. ಇದಕ್ಕೆ ಲ್ಯಾಟಿನ್‌ನಲ್ಲಿ (Fossa Navicularis) ಫಾಸ್ಸಾ ನಾವಿಕ್ಯುಲೇರಿಸ್, ಎಂಬ ಹೆಸರಿದೆ. ಮೇಲ್ಭಾಗದಲ್ಲಿ ಎರಡು ಜಘನಗಳು ಕೂಡುವ ಸ್ಥಾನಕ್ಕೆ ನಡುವೆ "ಯೋನಿಲಿಂಗ"ವು ಮೊದಲು ಕಾಣುತ್ತದೆ. ಇದು ರೂಪಿನಲ್ಲಿಯೂ ಏರ್ಪಾಡಿನಲ್ಲಿಯೂ ಹೆಚ್ಚು ಕಡಮೆ ಶಿಶ್ನದಂತಿರುವದು. ಆದರೆ ಶಿಶ್ನದಂತೆ ಇದರಲ್ಲಿ ಮೂತ್ರದ್ವಾರವೂ, ಸ್ಪಂಜಿನಂಥಾ "ಕಾರ್ಪಸ್ ಸ್ಪಂಜಿಯೋಸಂ" ಎಂಬ ಪದಾರ್ಥವೂ ಇಲ್ಲವಾದರೂ * "ಜಿವ್ವ" ಎಂಬ ಪದಾರ್ಥದಿಂದ ಮುಚ್ಚಲ್ಪಟ್ಟಿರುವ ಲಿಂಗವೊಂದಿರುವದು; ಮತ್ತು "ಕಾರ್ಪೊರಾ ಕಾವೆನೋರ್ಸಾ" ಎಂಬ ವಸ್ತುವಿದೆ.

ಈ ಯೋನಿಲಿಂಗದ ಕವಚದೊಂದಿಗೆ ಸೇರಿರುವ ಚರ್ಮದ ಮಡತೆಗಳಿಗೆ "ಚಂದ್ರನಾಡಿಗಳು" (Nympha) ಎಂದು ಹೆಸರು. ಇವಕ್ಕೆ ಒಳಗಿನ ಚಿಕ್ಕ ತುಟಿಗಳೆಂತಲೂ ಹೆಸರಿದೆ. ಇವು ಚರ್ಮದ ಮಡತೆಗಳು; ಇವುಗಳೊಳಗೆ ಸ್ಪಂಜಿನಂತಿರುವ ಪದಾರ್ಥವಿದೆ. ಇದಕ್ಕೆ ಇಂಗ್ಲಿಷ್‌ನಲ್ಲಿ "ಪ್ಯೂಡಿಕ್ ಆರ್ಟೆರಿ (Pudic Artery) ಎಂಬ ನಾಡಿಗಳ ಕೊಂಬೆಗಳು ಮುಖ್ಯವಾಗಿ ಇವುಗಳಲ್ಲಿ ವ್ಯಾಪಿಸಿರುವವು

**(ಚಂದ್ರನಾಡಿಗಳು) (Nympha)**— ಇವುಗಳು ಕೆಳಭಾಗಕ್ಕೆ ಇಳಿಯುತ್ತಾ ಬರುತ್ತಿರುವಾಗ ಕ್ರಮೇಣ ದೊಡ್ಡವಾಗುತ್ತಾ, ಯೋನಿಯ ಬಾಯಿಯ ಬಳಿಗೆ ಬಂದು ಅಲ್ಲಿ ಕಾಣದಂತಾಗುವವು. ಅವುಗಳ ಒಳಭಾಗವು ಪುಷ್ಕಳಗ್ರಂಥಿಗಳಿಂದ ತುಂಬಿದೆ. ಈ ಚಂದ್ರನಾಡಿಗಳ ಕೆಲಸವೇನೆಂದರೆ:— ಪ್ರಸವಕಾಲದಲ್ಲಿ ಗುಹ್ಯಸ್ಥಾನದ ಭಾಗಗಳು ಹೆಚ್ಚಾಗಿ ಉಬ್ಬುವಂತೆ ಮಾಡುವವಲ್ಲದೆ, ಮೂತ್ರವು ಪ್ರತ್ಯೇಕವಾಗಿ ಹೋಗುವಂತ ಸಹ ಅನುಕೂಲಪಡಿಸಿ ಕೊಡುವವು.

---

* ಈ ಶಾಸ್ತ್ರದಲ್ಲಿ ಬರುವ Elastic Substance ಮೃದುವಾದ ರಬ್ಬರಿನಂತಹ ಸ್ಥಿತಿಸ್ಥಾಪಕ ಧರ್ಮವುಳ್ಳ ಪದಾರ್ಥ, ಅಂದರೆ ಮುಂದಕ್ಕೆ ಎಳದರೆ ಸ್ವಲ್ಪದೂರ ಉದ್ದವಾಗಿದ್ದು, ಕೈಬಿಟ್ಟೊಡನೆಯೇ ಮೊದಲಿದ್ದ ಸ್ಥಿತಿಗೆ ಬರತಕ್ಕ ಗುಣವುಳ್ಳ ಪದಾರ್ಥಕ್ಕೆ "ಜಿವ್ವ" ಎಂದು ಭಾಷಾಂತರ ಮಾಡಿರುವ ಶಬ್ದವನ್ನೇ ನಾವೂ ಉಪಯೋಗಿಸುವೆವು.

ಮೂತ್ರನಾಳ:— ಈ ಚಂದ್ರನಾಡಿಗಳನ್ನು ಬಿಡಿಸಿ ನೋಡಿದಾಗ ಮೂತ್ರನಾಳದ ಬಾಯಿ ಕಾಣುವದು; ಅದರ ಕೆಳಭಾಗವು ಎತ್ತರವಾಗಿರುವದು. ಹಾಗೆಯೇ ಅದು ಯೋನಿಲಿಂಗಕ್ಕೆ ಒಂದು ಅಂಗುಲದ ಕೆಳಗೂ, ಯೋನಿಯ ಬಾಯಿಗೆ ||| ಅಂಗುಲದ ಮೇಲ್ಗಡೆಯೂ ಇರುತ್ತದೆ.

ಸ್ತ್ರೀಯರ ಮೂತ್ರದ್ವಾರದ ಉದ್ದಳತೆ ೨ ಅಂಗುಲಕ್ಕಿಂತ ಹೆಚ್ಚಾಗಿರುವದಿಲ್ಲ; ಪರಂತು ಇದರ ಪ್ರಮಾಣವು ಪುರುಷನ ಮೂತ್ರರಂಧ್ರಕ್ಕಿಂತಲೂ ದೊಡ್ಡದಾಗಿರುವದು. ಈ ದ್ವಾರದ ಒಳಪಾರ್ಶ್ವದಲ್ಲಿ ಇರತಕ್ಕ ಜಿವ್ವ್ವ ಮೂತ್ರತಿತ್ತಿಯ ಶ್ಲೇಷ್ಮವು ಜಿವ್ವಿನೊಂದಿಗೆ ಶೇರಿರುವದು. ಮತ್ತೂ ಅದರಲ್ಲಿ ಗೋಳಗಳಿರುವವು; ಈ ಗೋಳಗಳು, ಶ್ಲೇಷ್ಮವನ್ನು ಹುಟ್ಟಿಸಿ, ದಾರಿಯನ್ನು ನುಣುಪಾಗಿ ಮಾಡಿ, ಮೂತ್ರವು ಹೊರಟಾಗ ಉರಿಯುಂಟಾಗದಂತೆ ಮಾಡುವವು. ಈ ದ್ವಾರದ ಬಾಯಿಗೆ ಒಂದೊಂದು ಪಕ್ಕದಲ್ಲಿಯೂ "ಲಾಕ್ಯೂನಾ" (Lacuna) ಎಂಬ ದೊಡ್ಡ ಗ್ರಂಥಿಯು ಒಂದೊಂದಿರುವದು. ಮೂತ್ರನಾಳವು, ಯೋನಿಯ ಮೇಲ್ಭಾಗದಲ್ಲಿ ಮರ್ಮಸ್ಥಾನದಲ್ಲಿನ ಯುವಿಕೆಗಳ ಸಂಧಿಯ ಅಂಚಿನವರಿಗೂ ನೆಟ್ಟಗಿರುವದು; ಅಲ್ಲಿಂದ ಬೊಗ್ಗಿ ಮೇಲಕ್ಕೆ ಹಾಯುತ್ತದೆ; ಯೋನಿದ್ವಾರದಲ್ಲಿ ಬೆರಳಿಟ್ಟು ನೋಡಿದರೆ ಅದು ನರದಂತೆ ತೋರುವದು.

(ಯೋನಿ). (Vagina)—ಇದರ ಬಾಹ್ಯದ್ವಾರ(ಯೋನಿಯ ಮುಖ)ಕ್ಕೆ ಭಗವೆನ್ನುವರು. ಈ ಯೋನಿಮುಖದಿಂದ ಗರ್ಭಾಶಯ (ಎಲ್ಲಿ ಗ್ರೀವಾಕ್ಕೆ ವೇಷ್ಟನವುಂಟಾಗಿದೆಯೋ ಅಲ್ಲಿಯ) ವರಿಗೆ ಇರುವ, ಸ್ವಲ್ಪಮಟ್ಟಿಗೆ ಕೆಳಭಾಗಕ್ಕೆ ಬಾಗಿರುವ ಸ್ರೋತವೆಂಬ ಗಮನಮಾರ್ಗಕ್ಕೆ "ಯೋನಿ" ಎಂದು ಹೆಸರು. ಯಾವರೀತಿಯಲ್ಲಿ ವಸ್ತಿಯ ಬಗ್ಗುವಿಕೆಯಿದೆಯೋ ಅದರಂತೆಯೇ ಸ್ವಲ್ಪ ಹೆಚ್ಚುಕಡಮೆ ಯೋನಿಯ ಬಗ್ಗುವಿಕೆಯೂ ಇದೆ. ಈ ಯೋನಿಯು ಅತ್ಯಂತ ಕೋಮಲ ಮತ್ತು "ಸಂಕೋಚ-ಪ್ರಸರಣಶೀಲ" ವಾದದ್ದು. ಇದರ ಪೂರ್ವ-ಪಶ್ಚಿಮ ಭಾಗಗಳು ಒಂದರಿಂದೊಂದು ಕಲತಿವೆ. ಯೋನಿಯ ಮುಖವು ಮೂತ್ರನಾಳದ ಮುಖಕ್ಕಿಂತಲೂ $\frac{1}{3}$ ಅಂಗುಲದ ಕೆಳಗಿದೆ. ಯೋನಿಯೇ ಗರ್ಭಾಶಯಕ್ಕೆ ಹೋಗುವ ದಾರಿ; ಇದು ಗರ್ಭಾಶಯದ ಬಾಯಿಗೆ ಅಂಟಿಕೊಂಡಿದೆ. ಯೋನಿಗೆ ೨ ಮುಖಗಳಿವೆ; ಅವುಗಳಲ್ಲಿ ಮುಂದುಗಡೆಯದೇ ಮೇಲೆ ಹೇಳಿದ ಭಗವು; ಒಳಗಡೆಯ ಮುಖವು ಗರ್ಭಾಶಯದ ಮುಖಕ್ಕೆ ಶೇರಿರುವದಷ್ಟೆ?

ಇದು ಸ್ಥಿತಿಸ್ಥಾಪಕ ಧರ್ಮ (Elastic) ವುಳ್ಳದ್ದು; ಅದರ ಮುಖದಲ್ಲಿ ಇರಕಿಸತಕ್ಕ ಸ್ನಾಯು (Constrictor Muscle) ಗಳಿವೆ. ಯೋನಿಯು

ಹಿಂದುಗಡೆ ಭಾಗವು "ಪೆರಿಟೋನಿಯಂ" ಎಂಬ ಅಂತರ್ವೇಷ್ಟನದ ಮಡಿಕೆಯಿಂದ ಮುಚ್ಚಲ್ಪಟ್ಟದೆ; ಹಾಗೆಯೇ ಸುತ್ತುಮುತ್ತಲಿರುವ ಬಲೆಯಂತಿರುವ ಟ್ಟ ಜಿವ್ರುವೇಷ್ಟನದಿಂದ ಕಟ್ಟಲ್ಪಟ್ಟರುವದು. ಯೋನಿಯಲ್ಲಿ ನಾಡಿಗಳು, ನಾಳಗಳು, ಸ್ಪರ್ಶನರಗಳು, ಶೋಷಣ ನರಗಳು ಇವು ವಿಸ್ತಾರವಾಗಿ ವ್ಯಾಪಿಸಿರುವವು.

ಯೋನಿಯ ಮಾರ್ಗವು ಸ್ವಲ್ಪ ಡೊಂಕಾಗಿದ್ದು ಗರ್ಭಾಶಯಕ್ಕೆ ಸೇರಿರುವದು. ಕಣ್ಣಳತೆಯಿಂದ ಇದರ ಉದ್ದ ೪-೬ ಅಂಗುಲ; ಅಗಲ ೨ ಅಂಗುಲ; ಎಷ್ಟೋ ಸ್ತ್ರೀಯರಿಗೆ ೯-೧೦ ಅಂಗುಲದ ಉದ್ದನೇ ಯೋನಿಯೂ ಇರುತ್ತದೆ. ಕೇವಲ ಸಣ್ಣ ಯೋನಿಯು ೨ ಅಂಗುಲವಿರುತ್ತದೆ. ದೇಶಭೇದ ಮತ್ತು ದೇಹಭೇದದಿಂದ ಯೋನಿಯ ಉದ್ದವು ನ್ಯೂನಾಧಿಕವಾಗುವದು. ಇದರ ಮಧ್ಯಭಾಗಕ್ಕಿಂತಲೂ, ಆರಂಭದಲ್ಲಿಯೂ, ಅಂತ್ಯದಲ್ಲಿಯೂ ಚಿಕ್ಕದಾಗಿದೆ. ಇದರ ಮುಖದಲ್ಲಿ ವಿಧವಿಧ ಸ್ನಾಯುಗಳು ಸುತ್ತಿರುವವು, ಹಾಗೆಯೇ ನೆತ್ತರುನರಗಳು ಬಲೆಯಂತೆ ಹೆಣಕೊಂಡಿರುವವು, ಇವಕ್ಕೆ ಪ್ಲೆಕ್ಸಸ್ ರೀಟಫಾರ್ಮಿಸ್ (Plexus Reteformis) ಎಂದು ಹೆಸರು.

ಯೋನಿಯ ಮುಖದಬಳಿ ಕೆಲವು ಜುವ್ವು ಮಡಿಕೆ ಅಥವಾ ಉಂಗುರಗಳಿರುವವು. ಇವು (Myrtle leaves) ಮೆರ್ಟಲ್ ಎಲೆಗಳಂತಿರುವವೆಂದೂಹಿಸಿ, ಇಂಗ್ಲಿಷ್‌ನಲ್ಲಿ "ಕರಙ್ಕ್ಯುಲೀ ಮಿರ್ಟಿಫಾರ್ಮಿಸ್" (Caruncule Myrtiformes) ಎನ್ನುವರು. ಯೋನಿಯ ಒಳಗಿನ ಆವರಣವು ಶ್ಲೇಷ್ಮಲಾವರಣವು (Mucons membrave). ಈ ಯೋನ್ಯಾವರಣ ಮತ್ತು ಶಯ್ಯಾಂತರಾವರಣಗಳೆರಡೂ ಒಂದಕ್ಕೊಂದು ಕೂಡಿಕೊಂಡಿವೆ. ಇದಕ್ಕಾಗಿ ಎರಡೂ ಒಂದಾಗಿಯೇ ಕಾಣುವವು. ಪರಂತು ಇವೆರಡರ ಶ್ಲೇಷ್ಮಾಣುಗಳು ಬೇರೆಬೇರೆಯಾಗಿರುವವು. ಇದರ ಶ್ಲೇಷ್ಮಲಾವರಣದಲ್ಲಿ ಪಿಚ್ಛಿಲದ್ರವ್ಯೋತ್ಪಾದಕ ಪಿಂಡಗಳು ಬಹಳವಿವೆ. ಇದರಲ್ಲಿಯೂ ಯೋನಿಮುಖದಲ್ಲಿ ಹೆಚ್ಚಾಗಿಯೂ, ಗ್ರೀವಾದಬಳಿ ವೇಷ್ಟನದಲ್ಲಿಯೂ, ಶಯ್ಯಾದ ಅಂತರಾವರಣದಲ್ಲಿಯೂ ಇವೆ. ಯೋನಿದ್ವಾರದಲ್ಲಿ ಸೀದಾವಲಯುವಿದೆ. ಇದರಿಂದ ಇದು ಸಂಕುಚಿತವಾಗಿರುತ್ತದೆ. ಯೋನಿಯ ದೃಢಭಾಗದಲ್ಲಿ ಶಿರಾಜಾಲವಿದೆ. ಅದು ವಿಕಸಿತವಾದಾಗ "ಯೋನಿಹರ್ಷ" ವುಂಟಾಗಿ ಕಠಿಣತ್ವವುಂಟಾಗುವದು. ಯಾವದಾದರೂ ಕಾರಣದಿಂದ ಈ "ಶಿರಾ" ಹರಿಯುವದರಿಂದ ರಕ್ತಸ್ರಾವವುಂಟಾಗುವದು. ಯೋನಿಯಲ್ಲಿ--ರಸವಾಹಕಸ್ರೋತ, ರಕ್ತವಾಹಕಸ್ರೋತ, ವಾಯುಮಾರ್ಗ ಇರುವವು. ಶಂಖದಲ್ಲಿ ಹೇಗೆ ಒಂದರಮೇಲೊಂ

ದು, ಅದರಂತೆಯೇ ಅದರಮೇಲೊಂದು, ಹೀಗೆ ಆವರ್ತ (ಸುತ್ತು) ಗಳು ಕಾಣಲ್ಪಡುವವೋ ಹಾಗೆಯೇ ಯೋನಿಯಲ್ಲಿಯೂ ಆವರ್ತಗಳಿರುವವು. ಇದಕ್ಕಾಗಿ ಆಯುರ್ವೇದದಲ್ಲಿ:—

"ಶಂಖನಾಭ್ಯಾಕೃತಿರ್ಯೋನಿಸ್ತ್ರ್ಯಾವರ್ತಾ ಸಾ ಚ ಕೀರ್ತಿತಾ ।
ತಸ್ಯಾಸ್ತೃತೀಯೇತ್ವಾವರ್ತೇ ಗರ್ಭಶಯ್ಯಾಪ್ರತಿಷ್ಠಿತಾ ॥
ಯಥಾರೋಹಿತಮತ್ಸ್ಯಸ್ಯಮುಖಂ ಭವತಿರೂಪತಃ ।
ತತ್ಸಂಸ್ಥಾನಾ ತಥಾರೂಪಾಂ ಗರ್ಭಶಯ್ಯಾಂವಿದುರ್ಬುಧಾಃ ॥"

"ಶಂಖದ ನಾಭಿಯ ಸಮಾನ ಆಕಾರವುಳ್ಳ ಯೋನಿಯಲ್ಲಿ ಮೂರು ಆವರ್ತಗಳು ಹೇಳಲ್ಪಟ್ಟವೆ. ಇವುಗಳ ಮೂರನೇ ಆವರ್ತದಲ್ಲಿ "ಗರ್ಭಶಯ್ಯಾ" ಇರುವದು. ಇದನ್ನು ರೋಹಿತ ಮತ್ಸ್ಯದಮುಖದ ಆಕೃತಿಗೆ ಸಮಾನಸ್ಥಿತಿ ಮತ್ತು ರೂಪವುಳ್ಳದ್ದೆಂದು ಹೇಳುತ್ತಾರೆ. ಇಲ್ಲಿ ತಾತ್ಪರ್ಯವೇನೆಂದರೆ:—ಗರ್ಭಶಯ್ಯಾದ ಮುಖವು ರೋಹಿತ ಮತ್ಸ್ಯದಮುಖದ ಸಮಾನವಾಗಿದೆ. ಹೇಗೆ ಆ ಮತ್ಸ್ಯವು ಜಲದಲ್ಲಿ ವಾಸಮಾಡುವದೋ ಅದರಂತೆಯೇ ಪಿತ್ತಾಶಯ ಮತ್ತು ಪಕ್ವಾಶಯಗಳ ಮಧ್ಯದಲ್ಲಿ ಗರ್ಭಶಯ್ಯಾ ಇರುವದೆಂತಲೂ, ಅದರ ರೂಪವೂ ಅದರಂತೆಯೇ ಇರುತ್ತದೆಂತಲೂ ಹೇಳುವರು."

**ಯೋನಿಪಟಲ**—ಇದಕ್ಕೆ ಇಂಗ್ಲಿಷ್‌ನಲ್ಲಿ "ಹೈಮೆನ್" (Hymen) ಎನ್ನುವರು. ಸ್ತ್ರೀಯರ ಬಾಲ್ಯಾವಸ್ಥೆಯಲ್ಲಿ ಯೋನಿದ್ವಾರದಮೇಲೆ ಅದನ್ನು ಪ್ರತಿಬಂಧಿಸತಕ್ಕ "ಪರದಾ" ಇರುತ್ತದೆ. ಇದೇ ಯೋನಿಪಟಲವು. ಇದಕ್ಕೆ ನಿಜವಾದ ಒಂದೇವಿಧ ಆಕಾರವಿಲ್ಲ; ಕೆಲವು ಸಾರಣಿಯಂತಿರುವವು. ಕೆಲವು ಅರ್ಧಚಂದ್ರಾಕಾರ; ಕೆಲವು ವಲಯಾಕಾರವಿವೆ. ಪ್ರಥಮ ರಜೋದರ್ಶನದ ವರೆಗೆ ಇದರಿಂದ ಯೋನಿ ಬಂದಾಗಿರುತ್ತದೆ. ಬಾಲಕಿಯರ ಕ್ಷತ, ಅಕ್ಷತ ಯೋನಿತ್ವವು ಈ ಪಟಲದ ವಿದಾರಿತ ಅಥವಾ ಅವಿದಾರಿತ ಸ್ಥಿತಿಯಮೇಲೆ ನಿರ್ಧರಿಸಲ್ಪಡುತ್ತದೆ. ಕೆಲವು ಸ್ತ್ರೀಯರಿಗೆ ಜನ್ಮತಃ ಯೋನಿಪಟಲವಿರುವದೇ ಇಲ್ಲ. ಇತ್ಯಾದಿ ಕಾರಣದಿಂದ "ಕ್ಷತಯೋನಿ, ಅಕ್ಷತಯೋನಿ" ಯರೆಂದು ನಿರ್ಧರಿಸುವದು ಸಾಧ್ಯವಲ್ಲವೆಂದು ಅನುಭವದಿಂದ ನಿಶ್ಚೈಸಿದ್ದಾರೆ.

ಇಂತು ಸ್ತ್ರೀಪುರುಷರ ಗುಹ್ಯಾಂಗವಿವೇಚನೆಯೆಂಬ ತೃತೀಯಾಶಯವು.



# ಚತುರ್ಥಾಶ್ರಯವು.

## ಶಾರೀರಕ್ರಮ.

**ವಾತಾದಿಗಳ ಸ್ವರೂಪ—**

**“ ದೋಷಧಾತುಮಲಾದೀನಾಂ ನೇತಾ ಶೀಘ್ರಸ್ಸಮೀರಣಃ ||**
**ರಜೋಗುಣಮಯಸ್ಸೂಕ್ಷ್ಮೋ ರೂಕ್ಷಶ್ಶೀತೋ ಲಘುಶ್ಚಲಃ || ”**

“ ವಾಯುವು ದೋಷ, ಧಾತು ಮಲಾದಿಗಳನ್ನು ಸ್ಥಾನಾಂತರಕ್ಕೆ ತೆಗದುಕೊಂಡು ಹೋಗತಕ್ಕದ್ದು, ಶೀಘ್ರಗಾಮಿಯೂ, ರಜೋಗುಣಮಯ, ಸೂಕ್ಷ್ಮ, ರೂಕ್ಷ, ಶೀತಲ, ಲಘು, ಚಲನಾತ್ಮಕವಾದದ್ದು. ”

**“ ಉದಾನಸ್ತದನುಪ್ರಾಣಃ ಸಮಾನೋಽಪಾನಏವಚ ||**
**ವ್ಯಾನಶ್ಚೈತಾನಿನಾಮಾನಿ ವಾಯೋಃ ಸ್ಥಾನಪ್ರಭೇದತಃ || ”**

“ ಉದಾನ, ಪ್ರಾಣ, ಸಮಾನ, ಅಪಾನ, ವ್ಯಾನಗಳೆಂದು ವಾಯುವು ಸ್ಥಾನಭೇದದಿಂದ ೫ ವಿಧವಾಗಿದೆ. ”

**“ ಹೃದಿಪ್ರಾಣೋಗುದೇಽಪಾನಃಸಮಾನೋ ನಾಭಿಸಂಸ್ಥಿತಃ ||**
**ಉದಾನಃ ಕಂಠದೇಶೇತು ವ್ಯಾನಸ್ಸರ್ವಶರೀರಗಃ || ”**

“ ಹೃದಯದಲ್ಲಿ ಪ್ರಾಣ, ಮಲಾಶಯದಲ್ಲಿ ಅಪಾನ, ಜಠರಾಗ್ನಿಗೆ ಕೆಳ ಭಾಗದಲ್ಲಿ ಸಮಾನ, ಕಂಠದಲ್ಲಿ ಉದಾನ, ಸರ್ವಶರೀರದಲ್ಲಿಯೂ ವ್ಯಾನವಾಯುಗಳಿರುವವು. ”

**“ ಉದಾನೋ ನಾಮಯಸ್ತೂರ್ಧ್ವಮುಪೈತಿ ಪವನೋತ್ತಮಃ|| ತೇನಭಾಷಿತಗೀತಾದಿಪ್ರವೃತ್ತಿಃ ಕುಪಿತಸ್ತುಸಃ || ಊರ್ಧ್ವಜತ್ರುಗತಾನ್ ರೋಗಾನ್ ವಿದಧಾತಿವಿಶೇಶತಃ || ಯೋವಾಯುಃ ಪ್ರಾಣನಾಮಾಸ್ಯಾಮುಖಂ ಗಚ್ಛತಿದೇಹಧೃಕ್ || ಸೋಽನ್ನಂಪ್ರವೇಶಯನ್ತ್ಯಂತಃ ಪ್ರಾಣಾಂಶ್ಚಾಪ್ಯವಲಂಬತೇ || ಪ್ರಾಯಶಃ ಕುರುತೇ ದುಷ್ಟೋಹಿಕ್ಕಾ ಶ್ವಾಸಾದಿಕಾನ್ ಗದಾನ್ || ”**

“ ವಾಯುಗಳಲ್ಲಿ ಉತ್ತಮವಾದ ಉದಾನವು ಮೇಲೆಯೇ ಕೆಲಸಮಾಡುತ್ತದೆ. ಇದರಿಂದ ಭಾಷಣ, ಗೀತಾದಿಗಳಲ್ಲಿ ಪ್ರವೃತ್ತಿಯಾಗುವದು. ಅದು ಕುಪಿತವಾದರೆ ಎದೆ ಮತ್ತು ಬಗಲುಗಳ ಸಂಧಿಸ್ಥಾನದಿಂದ ಮೇಲ್ಭಾಗದ ರೋಗಗಳನ್ನು ಅಧಿಕವಾಗಿ ಉಂಟುಮಾಡುತ್ತದೆ. ಶರೀರವನ್ನು ಧಾರಣೆ ಮಾಡುತ್ತಾ, ಮುಖದಲ್ಲಿ ಕೆಲಸಮಾಡುವ ಪ್ರಾಣವಾಯುವು ಅನ್ನವನ್ನು ಒಳಕ್ಕೆ ತೆಗದುಕೊಂಡು ಹೋಗುವದು. ಪ್ರಾಣಗಳಲ್ಲಿಯೂ ಇರುತ್ತದೆ. ಅದು ಕುಪಿತವಾದರೆ ಬಿಕ್ಕಳಿಕೆ, ಕೆಮ್ಮು ಮುಂತಾದ ರೋಗಗಳನ್ನುಂಟು ಮಾಡುತ್ತದೆ. ”

“ ಆಮಪಕ್ವಾಶಯಚರಃ ಸಮಾನೋ ವಹ್ನಿಸಂಹಿತಃ || ಸೋಽ
ನ್ನಂ ಪಚತಿ ತಜ್ಜಾಂಶ್ಚ ವಿಶೇಷಾನ್ ವಿವಿನಕ್ತಿ ಹಿ || ಸದುಷ್ಟೋ ವ
ಹ್ನಿಮಾಂದ್ಯಾತಿಸಾರಗುಲ್ಮಾನ್ ಕರೋತಿ ಹಿ || ಪಕ್ವಾಶಯಾಲ
ಯೋಽಪಾನಃ ಕಾಲೇ ಕರ್ಷತಿ ಚಾಪ್ಯಯಮ್ || ಶರೀರಣಃ ಶಕೃ
ನ್ಮೂತ್ರ ಶುಕ್ರಗರ್ಭಾರ್ತವಾನ್ಯಧಃ || ಕೃದ್ಧಸ್ತು ಕುರುತೇ ರೋ
ಗಾನ್ ಘೋರಾನ್ ವಸ್ತಿಗುದಾಶ್ರಯಾನ್ || ಶುಕ್ರದೋಷಪ್ರಮೇ
ಹಾಂಶ್ಚ ವ್ಯಾನಾಪಾನಪ್ರಕೋಪಜಾನ್ || ಕೃತ್ಸ್ನದೇಹಚರೋ
ವ್ಯಾನೋ ರಸಸಂವಾಹನೋದ್ಯತಃ || ಸ್ವೇದಾಸೃಕ್ಸ್ರಾವಣಶ್ಚಾಪಿ
ಪಂಚಧಾ ಚೇಷ್ಟಯತ್ಯಪಿ || ಗತ್ಯಪಕ್ಷೇಪಣೋತ್ಕ್ಷೇಪನಿಮೇ
ಷೋನ್ಮೇಷಣಾದಿಕಾಃ || ಪ್ರಾಯಃ ಸರ್ವಾಃ ಕ್ರಿಯಾಸ್ತಸ್ಮಿನ್ ಪ್ರ
ತಿಬದ್ಧಾಃ ಶರೀರಿಣಾಮ್ || ಪ್ರಸ್ಯಂದನಶ್ಚೋದ್ವಹನಂ ಪೂರ
ಣಂಚ ವಿರೇಚನಮ್ || ಧಾರಣಶ್ಚೇತಿ ಪಂಚೈತಾಶ್ಚೇಷ್ಟಾಃ ಪ್ರೋ
ಕ್ತಾನಭಸ್ವತಃ || ಕೃದ್ಧಸ್ಸನ್ಕುರುತೇರೋಗಾನ್ ಪ್ರಾಯಶಃ ಸರ್ವ
ದೇಹಗಾನ್ || ಯುಗಪತ್ಕುಪಿತಾ ಏತೇ ದೇಹಂ ಭಿಂದ್ಯುರಸಂಶ
ಯಮ್ ”

“ ಆಮಾಶಯ ಮತ್ತು ಪಕ್ವಾಶಯಗಳಲ್ಲಿ ಸಂಚರಿಸುತ್ತಿರುವ ಸಮಾನವಾಯುವು ಅಗ್ನಿಯೊಂದಿಗೆ ಸೇರಿಕೊಂಡು ಅನ್ನವನ್ನು ಪಚನಮಾಡುತ್ತದೆ. ಮತ್ತು ಅನ್ನದಿಂದುತ್ಪನ್ನವಾದ ಮಲಮೂತ್ರಾದಿಗಳನ್ನು ಬೇರೆಬೇರೆ ಮಾಡುತ್ತದೆ. ಇದು ಕುಪಿತವಾದರೆ—ಮಂದಾಗ್ನಿ, ಅತಿಸಾರ, ಗುಲ್ಮ ಆದಿರೋಗಗಳನ್ನುಂಟುಮಾಡುತ್ತದೆ. ಪಕ್ವಾಶಯದಲ್ಲಿರುವ ಅಪಾನವಾಯುವು ಉಚಿತ ಸಮಯದಲ್ಲಿ-ಮಲ, ಮೂತ್ರ, ವೀರ್ಯ, ಗರ್ಭ, ರಜಸ್ಸು ಇವುಗಳನ್ನು ಕೆಳಭಾಗಕ್ಕೆ ದೊಬ್ಬುತ್ತದೆ. ಇದು ಕುಪಿತವಾದರೆ-ಮೂತ್ರಾಶಯ ಮತ್ತು ಮಲಕೋಶದ ರೋಗಗಳು, ವೀರ್ಯದೋಷ, ಪ್ರಮೇಹ ಮತ್ತು ವ್ಯಾನ ಮತ್ತು ಅಪಾನವಾಯುಗಳು ಕುಪಿತಗಳಾದಾಗ ಹುಟ್ಟುವ ಮಹಾರೋಗಗಳನ್ನೂ ಉಂಟುಮಾಡುತ್ತದೆ. ಸಂಪೂರ್ಣ ದೇಹದಲ್ಲಿರತಕ್ಕ ವ್ಯಾನವಾಯುವು-ರಸಗಳನ್ನು ತೆಗದುಕೊಂಡು ಹೋಗುವದು, ಸ್ವೇದ ಮತ್ತು ರುಧಿರಗಳನ್ನು ಪ್ರವಹಿಸುವಂತೆ ಮಾಡುವದು, ಗತಿ, ಮೇಲಕ್ಕೇಳುವಿಕೆ, ಕೆಳಕ್ಕೆ ಕುಳ್ಳಿರುವಿಕೆ, ನೇತ್ರಗಳನ್ನು ಮುಚ್ಚುವಿಕೆ, ತೆರಿಯುವಿಕೆ ಇವನ್ನು ಮಾಡುತ್ತದೆ. ಮನುಷ್ಯರ ಪ್ರಾಯಃ ಸಂಪೂರ್ಣ ಕ್ರಿಯೆಯೂ ಇದರ ಆಧೀನದಲ್ಲಿದೆ. ನಡಿಯುವಿಕೆ, ಮೇಲಕ್ಕೆತ್ತುವದು, ಪೂರ್ಣಮಾಡುವದು, ತೆಗದುಹಾಕುವದು, ಧಾರಣೆ ಈ ಪಂಚಕರ್ಮಗಳೂ ವಾಯುವಿನ ಚೇಷ್ಟೆಗಳು. ಇದು ಕುಪಿತವಾದರೆ ಶರೀರದ ಪ್ರಾಯಶಃ ಸಮಸ್ತ ರೋಗಗಳನ್ನೂ ಉತ್ಪತ್ತಿಮಾ

ಡುವದು. ಒಂದೇಸಲ ಈ ೫ ವಾಯುಗಳೂ ಕುಪಿತಗಳಾದರೆ ನಿಸ್ಸಂದೇಹ ವಾಗಿ ಮರಣವೇ ಆಗುವದು. ''

'' ಪಿತ್ತಮುಷ್ಣಂದ್ರವಂ ಪೀತಂ ನೀಲಂ ಸತ್ವಗುಣೋತ್ತರಮ್ ||
ಸರಂ ಕಟು ಲಘು ಸ್ನಿಗ್ಧಂ ತೀಕ್ಷ್ಣಮಮ್ಲಂ ತು ಪಾಕತಃ || ''

'' ಪಿತ್ತವು—ಉಷ್ಣ, ದ್ರವರೂಪಿ, ಪೀತವರ್ಣವುಳ್ಳದ್ದು (ಅಂದರೆ ಆಮ ರಹಿತವಾದ ಪಿತ್ತವು ಪೀತವರ್ಣವಾಗುತ್ತದೆ.) ನೀಲ (ಆಮ ಮಿಶ್ರವಾದ ಪಿತ್ತ ನೀಲ) ವರ್ಣವಾಗುತ್ತದೆ. ಅಧಿಕ ಸತ್ವಗುಣವುಳ್ಳದ್ದು, ವಿರೇಚನಕಾರಿ, ಕಟು, ಲಘು, ಸ್ನಿಗ್ಧ, ತೀಕ್ಷ್ಣ, ಪಾಕದಲ್ಲಿ ಹುಳಿಯಾಗುತ್ತದೆ. ''

'' ಪಾಚಕಂ ರಂಜಕಂಚಾಪಿ ಸಾಧಕಾಲೋಚಕೇತಥಾ ||
ಭ್ರಾಜಕಂಚೇತಿ ಪಿತ್ತಸ್ಯ ನಾಮಾನಿ ಸ್ಥಾನಭೇದತಃ || ''

'' ಇದು ಪಾಚಕ, ರಂಜಕ, ಸಾಧಕ, ಆಲೋಚಕ, ಭ್ರಾಜಕವೆಂದು ಸ್ಥಾನಭೇದದಿಂದ ೫ ಪ್ರಕಾರವಿದೆ. ''

'' ಅಗ್ನ್ಯಾಶಯೇ ಯಕೃತ್ಪ್ಲೀಹ್ನೋರ್ಹೃದಯೇ ಲೋಚನದ್ವಯೋಃ ||
ತ್ವಚಿ ಸರ್ವಶರೀರೇಷು ಪಿತ್ತಂ ನಿವಸತಿ ಕ್ರಮಾತ್ || ''

'' ಅಗ್ನ್ಯಾಶಯದಲ್ಲಿ ಪಾಚಕಪಿತ್ತವೂ, ಯಕೃತ್ ಮತ್ತು ಪ್ಲೀಹಗಳಲ್ಲಿ ರಜಕಪಿತ್ತವೂ, ಹೃದಯದಲ್ಲಿ ಸಾಧಕಪಿತ್ತವೂ, ಎರಡು ನೇತ್ರಗಳಲ್ಲಿಯೂ ಆಲೋಚಕಪಿತ್ತವೂ, ತ್ವಚಾದಲ್ಲಿ ಭ್ರಾಜಕಪಿತ್ತವೂ ಈ ಕ್ರಮದಿಂದ ಸಂಪೂರ್ಣ ಶರೀರದಲ್ಲಿ ಪಿತ್ತವಿರುತ್ತದೆ. ''

'' ಪಾಚಕಂ ಪಚತೇಭುಕ್ತಂ, ಶೇಷಾಗ್ನಿಬಲವರ್ಧನಮ್ || ರಸಮೂತ್ರ ಪುರೀಷಾಣಿ ವಿವೇಚಯತಿ ನಿತ್ಯಶಃ || ಪಾಚಕಂ ಪಿತ್ತಮಾಮಾಶಯ ಮಧ್ಯಸ್ಥಂ ಷಡ್ವಿಧಮಾಹಾರಂ ಭೋಜ್ಯಂ ಭಕ್ಷ್ಯಂ ಚರ್ವ್ಯಂ ಲೇಹ್ಯಂ ಚೋಷ್ಯಂ ಪೇಯಂ ಪಚತಿ, ದೋಷರಸಮೂತ್ರ ಪುರೀಷಾಣಿ ಪೃಥಕ್ಕರೋತಿ ಚ || ತದಗ್ನ್ಯಾಶಯಸ್ಥಮೇವ ಸ್ವಶಕ್ತ್ಯಾ ರಸ ರಂಜನ ಹೃದಯಸ್ಥ ಕಫತಮೋಪನೋದನ ರೂಪಗ್ರಹಣ ಪ್ರಭಾ ಪ್ರಕಾಶನಾಭ್ಯಂಗಲೇಪಾದಿ ಪಾಚನಾದ್ಯಗ್ನಿ ಕರ್ಮಣಾಂ, ವಿಶೇಷಾಣಾಂ ಪಿತ್ತಸ್ಥಾನಾನಾ ಮನುಗ್ರಹಂ ಕರೋತಿ || ಶೇಷಾಣ್ಯಪಿ ಪಿತ್ತಸ್ಥಾನಾನಿ ಯಕೃತ್ ಪ್ಲೀಹಾದೀನಿ ಭಾಗೇನ ಗತ್ವಾ ತತ್ರ ತತ್ರ ರಸರಂಜನಾದಿ ಕರ್ಮಭಿರುಪಕರೋತಿ || ಭಾನಮೂಷ್ಮಾಗ್ನೇಯ ವಾಯುವ್ಯಾಃ ಪಂಚೋಷ್ಮಾಣಸ್ಸನಾಭಸಾಃ || ದೋಷಧಾತುಮಲಾದೀನಾಂ ಊಷ್ಮೇತ್ಯಾತ್ರೇಯ ಶಾಸನಮ್ || ಅನ್ನಸ್ಯಪಕ್ತಾ ಸರ್ವೇಷಾಂ

ಪಕ್ತ್ರೄಣಾಮಧಿಕೋ ಮತಃ || ತನ್ಮೂಲಾಸ್ತೇಹಿ ತದ್ವೃದ್ಧಿ
ಕ್ಷಯವೃದ್ಧಿ ಕ್ಷಯಾತ್ಮಕಾ || (ನನು ಪಿತ್ತಾದನ್ಯೋಽಗ್ನಿರಾಹೋ
ಸ್ವಿತ್ ಪಿತ್ತಮೇವಾಗ್ನಿರಿತಿ ಸಂದೇಹಃ) ಉಚ್ಯತೇ—ಪಿತ್ತಸ್ಯೌ
ಷ್ಣ್ಯಾದಿ ಗುಣ ದ್ವಾರಾಹಾರ ಪಾಚನ ರಂಜನ ದರ್ಶನಾದಿ ಕರ್ಮ
ಣಶ್ಚ ನ ಖಲು ಪಿತ್ತವ್ಯತಿರೇಕೇಣಾನ್ಯೋಗ್ನಿಃ || ತಸ್ಮಾದಗ್ನಿರೂ
ಪಸ್ಯೈವ ಪಿತ್ತಸ್ಯ ಸ್ಥಾನ ಭೇದಾತ್ಪಾಚಕ ರಂಜಕ ಸಾಧಕಾ
ಲೋಚಕ ಭ್ರಾಜಕ ಸಂಜ್ಞಾಃ || ತಥಾಚ ವಾಗ್ಭಟೇ | ಪಾಚಕಂ
ತಿಲಮಾನಂ ಸ್ಯಾತ್ ಕಾಠಿನ್ಯಾನ್ನಾಸ್ಯದೋಷತಾ || ಅನುಗ್ರ
ಹ್ಣಾತ್ಯವಿಕೃತಂ ಪಿತ್ತಂ ಪಾಕೋಷ್ಮ ದರ್ಶನೈಃ || ಕ್ಷುತ್ತೃ
ಡ್ರುಚಿ ಪ್ರಭಾಮೇಧಾ ಧೀ ಶೌರ್ಯತನು ಮಾರ್ದವೈಃ || ಪಿತ್ತಂ
ಪಂಚಾತ್ಮಕಂ ತಚ್ಚ ಪಕ್ವಾಮಾಶಯ ಮಧ್ಯಗಮ್ || ಪಂಚ
ಭೂತಾತ್ಮಕತ್ವೇಽಪಿ ಯತ್ತೈಜಸ ಗುಣೋದಯಮ್ || ತ್ಯಕ್ತ
ದ್ರವತ್ವಂ ಪಾಕಾದಿ ಕರ್ಮಣಾಽನಲಶಬ್ದಿತಮ್ || ಪಚತ್ಯನ್ನಂ
ವಿಭಜತೇ ಸಾರಕಿಟ್ಟೌ ಪೃಥಕ್ತಥಾ || ತತ್ರಸ್ಥ ಮೇವ ಪಿತ್ತಾ
ನಾಂ ಶೇಷಾಣಾಮಪ್ಯನುಗ್ರಹಮ್ || ಕರೋತಿ ಬಲ ದಾನೇನ
ಪಾಚಕಂ ನಾಮ ತತ್ಸ್ಮೃತಮ್ || ನನು ಯದಿಪಿತ್ತಾಗ್ನ್ಯೋ
ರಭೇದಸ್ತದಾ ಕಥಂ ಘೃತಂ ಪಿತ್ತಸ್ಯ ಶಮಕ ಮಗ್ನೇರ್ದೀಪ
ಕಮಿತಿ ತಥಾ ಮತ್ಸ್ಯಾಃ ಪಿತ್ತಂ ಕುರ್ವಂತಿ ನಚ ತೇಽಗ್ನಿದೀ
ಪ್ತಿ ಕರಾ ಇತಿ ತಥಾ ಪಿತ್ತಾಧಿಕ್ಯಾ ತ್ತೀಕ್ಷ್ಣೋಽಗ್ನಿರಿತ್ಯಪಿ | ಕಥಂ
ಸ್ಯಾತ್ ? | ತಥಾ ಸಮದೋಷಃ ಸಮಾಗ್ನಿಶ್ಚೇತ್ಯಪಿ ವಕ್ತುಂ
ನಯುಜ್ಯತೇ | ತಥಾ || ದ್ರವಂ ಸ್ನಿಗ್ಧಮಧೋಗಂ ಚ ಪಿತ್ತಂ
ವಹ್ನಿರತೋನ್ಯಥಾ || ಇತಿ || ಅತ್ರೋಚ್ಯತೇ—ಪಿತ್ತಮಗ್ನೇಃ ಸ್ವಂ
ತತಾಧಿಷ್ಠಾನಮ್ | ತಥಾ ಚೋಕ್ತಂ ತಂತ್ರಾಂತರೇ | ಅಗ್ನಿ
ರ್ಭಿನ್ನ ಗುಣೈರ್ಯುಕ್ತಃ ಪಿತ್ತಂ ಭಿನ್ನಗುಣೈಸ್ತಥಾ || ದ್ರವಂ
ಸ್ನಿಗ್ಧಮಧೋಗಂಚ ಪಿತ್ತಂ ವಹ್ನಿರಥೋನ್ಯಥಾ || ತಸ್ಮಾತ್ತೇ
ಜೋಮಯಂ ಪಿತ್ತಂ ಪಿತ್ತೋಷ್ಮಾ ಯಃ ಸಶಕ್ತಿಮಾನ್ || ಸ ಸಂ
ಚರತಿ ಕುಕ್ಷಿಸ್ಥಃ ಸರ್ವತೋಧಮನೀ ಮುಖೈಃ || ಸಕಾಯಾಗ್ನಿಃ
ಸಕಾಯೋಷ್ಮಾ ಸಪಕ್ತಾ ಸಚ ಜೀವನಮ್ || ಅನನ್ಯಗತಿರಿತ್ಯೇ
ವಂ ದೇಹೇಕಾಯಾಗ್ನಿ ರುಚ್ಯತೇ ||) (ಅನ್ಯಚ್ಚ) ನಾಮಪಾ
ರ್ಶ್ವಾಶ್ರಿತಂ ನಾಭೇಃ ಕಿಂಚಿತ್ಸೋಮಸ್ಯ ಮಂಡಲಮ್ || ತನ್ಮ
ಧ್ಯೇ ಮಂಡಲಂ ಸೌಮ್ಯಂ ತನ್ಮಧ್ಯೇಽಗ್ನಿರ್ವ್ಯವಸ್ಥಿತಃ || ಜರಾ

ಯಯು ಮಾತ್ರ ಪ್ರಚ್ಛನ್ನಃ ಕಾಚಕೋಶಸ್ಥದೀಪವತ್ ॥ (ತಥಾ ಚ ಮಧುಕೋಶೆ) ದ್ರವತೇಜಃ ಸಮುದಾಯಾತ್ಮಕಸ್ಯಾಪಿ ಪಿತ್ತಸ್ಯ ತೇಜೋಭಾಗೋಽಗ್ನಿರಿತಿ। ತೇನ ಪಿತ್ತಮಪ್ಯಗ್ನಿ ವನ್ಮನ್ಯತೇ। ಅತಿ ತಾಪಿತಾಽಯೋಗೋಲಕವತ್ । ಪರಮಾರ್ಥತಸ್ತು ಅಗ್ನಿಃ ಪಿತ್ತಾದ್ಭಿನ್ನ ಏವೇತಿ ಸಿದ್ಧಾಂತಃ। (ಅತ ಏವಾಹ ರಸಪ್ರದೀಪೇ) ಜಾಠರೋ ಭಗವಾನಗ್ನಿರೀಶ್ವರೋಽನ್ನಸ್ಯಪಾಚಕಃ ॥ ಸೌಕ್ಷ್ಮ್ಯಾದ್ರಸಾನಾಽಽದದಾನೋ ವಿವಕ್ತುಂನೈವಶಕ್ಯತೇ ॥ ನಾಭೇರ್ಮಧ್ಯೇ ಶರೀರಸ್ಯ ವಿಶೇಷಾತ್ಸೋಮಮಂಡಲಮ್ ॥ ಸೋಮಮಂಡಲಮಧ್ಯಸ್ಥಂ ವಿದ್ಯಾತ್ಸೂರ್ಯಸ್ಯ ಮಂಡಲಮ್ ॥ ಪ್ರದೀಪವತ್ತತ್ರನ್ಯಾಣಾಂ ಸ್ಥಿತೋ ಮಧ್ಯೇ ಹುತಾಶನಃ ॥ ಸೂರ್ಯೋ ದಿವಿ ಯಥಾತಿಷ್ಠಂ ಸ್ತೇಜೋ ಯುಕ್ತೈಃ ಗಭಸ್ತಿಭಿಃ ॥ ವಿಶೇಷಯತಿ ಸರ್ವಾಣಿ ಪಲ್ವಲಾನಿ ಸರಾಂಸಿಚ ॥ ತದ್ವಚ್ಛರೀರಿಣಾಂ ಭುಕ್ತಂ ಜ್ವಲನೋ ನಾಭಿಮಾಶ್ರಿತಃ ॥ ಮಯೂಖೈಃ ಪಚತೇ ಕ್ಷಿಪ್ರಂ ನಾನಾವ್ಯಂಜನ ಸಂಸ್ಕೃತಮ್ ॥ ಸ್ಥೂಲಕಾಯೇಷು ಸತ್ವೇಷು ಯವಮಾತ್ರಃ ಪ್ರಮಾಣತಃ ॥ ಹ್ರಸ್ವಕಾಯೇಷು ಸತ್ವೇಷು ತಿಲಮಾತ್ರಃ ಪ್ರಮಾಣತಃ ॥ ಕ್ರಿಮಿ ಕೀಟ ಪತಂಗೇಷು ಬಾಲಮಾತ್ರೋಽವತಿಷ್ಠತೇ ॥ ”

“ ಪಾಚಕ ಪಿತ್ತವು ತಿಂದ ಪದಾರ್ಥವನ್ನು ಪರಿಪಾಕ ಮಾಡುತ್ತದೆ. ಶೇಷ ಅಗ್ನಿ (ಮಹಾಭೂತಾಗ್ನಿ ತಥಾ ಧಾತ್ವಗ್ನಿ) ಗಳ ಬಲವನ್ನು ವೃದ್ಧಿಪಡಿಸುತ್ತದೆ. ರಸ, ಮೂತ್ರ, ಮಲಗಳನ್ನು ಬೇರೆಬೇರೆ ಮಾಡುತ್ತದೆ. ಈ ಪಾಚಕನಾಮಕ ಪಿತ್ತವು ಆಮಾಶಯ ಮತ್ತು ಪಕ್ವಾಶಯಗಳಲ್ಲಿರತಕ್ಕ ಭೋಜ್ಯ, ಭಕ್ಷ್ಯ, ಚರ್ವ್ಯ, ಲೇಹ್ಯ, ಚೂಷ್ಯ, ಪೇಯಾಖ್ಯ ಷಟ್ಪ್ರಕಾರದ ಭೋಜನವನ್ನೂ ಪಕ್ವಮಾಡುತ್ತದೆ. ರಸ, ಮಲ, ಮೂತ್ರ ಹಾಗೂ ದೋಷಗಳನ್ನು ಬೇರೆಬೇರೆ ಮಾಡುವದು. ಅಗ್ನ್ಯಾಶಯದಲ್ಲಿರತಕ್ಕ ಈ ಪಿತ್ತವು ತನ್ನ ಶಕ್ತಿಯಿಂದ ರಸವನ್ನು ವರ್ಣಯುಕ್ತವನ್ನಾಗಿ ಮಾಡುತ್ತಾ-ಹೃದಯಸ್ಥಿತ ಕಫ ಮತ್ತು ತಮೋಗುಣವನ್ನು ದೂರಪಡಿಸುತ್ತಾ, ರೂಪವನ್ನು ಗ್ರಹಣಮಾಡುತ್ತಾ, ಪ್ರಭೆಯನ್ನು ಪ್ರಕಾಶಪಡಿಸುತ್ತಾ, ಶರೀರದ ಚಂದನಾದಿ ಲೇಪಗಳನ್ನು ಪರಿಪಾಕಮಾಡುತ್ತಾ-ಈ ವಿಧವಾದ ಅಗ್ನಿಯ ಕರ್ಮದ್ವಾರಾ ವಿಶೇಷ ಪಿತ್ತಸ್ಥಾನಗಳಿಗೆ ಸಹಾಯಮಾಡುತ್ತಾ ಅಂದರೆ ಉಳಿದ ಯಕೃತ್, ಪ್ಲೀಹಾದಿ ಪಿತ್ತದ ಸ್ಥಾನಗಳನ್ನು ಹೊಂದಿ, ಆಯಾಯ ಸ್ಥಾನಗಳಲ್ಲಿನ ರಸಗಳಿಗೆ ವರ್ಣವನ್ನು ಕೊಡುವ ಮುಂತಾದ ಕಾರ್ಯಗಳಿಂದ ಉಪಕಾರ ಮಾಡು

ತ್ತದೆ. ಹೀಗೆಯೇ ಉಳಿದ ಮಹಾಭೂತಾಗ್ನಿ ಮತ್ತು ಧಾತ್ವಗ್ನಿಗಳ ಬಲವನ್ನು ವೃದ್ಧಿಪಡಿಸುತ್ತದೆ. ಯಾಕೆಂದರೆ ಚರಕದಲ್ಲಿ—ಪೃಥ್ವೀಸಂಬಂಧೀ, ಜಲಸಂಬಂಧೀ, ಅಗ್ನಿಸಂಬಂಧೀ, ವಾಯುಸಂಬಂಧೀ, ಆಕಾಶಸಂಬಂಧೀ ೫ ವಿಧವಾದ ಊಷ್ಮಾಗಳೆಂಬ ಅಗ್ನಿಗಳಿವೆ. (ವಾಗ್ಭಟದಲ್ಲಿ) ದೋಷ ಧಾತು ಮಲಾದಿಗಳ ಊಷ್ಮಾ ಅಗ್ನಿಯಾಗಿದೆ. (ಆತ್ರೇಯ ಋಷಿಯ ಮತವು) ಪಾಚಕಪಿತ್ತವು ರಸಾದಿ ಸಪ್ತಧಾತುಗಳಲ್ಲಿ ಪ್ರಾಪ್ತವಾಗಿ ಅಗ್ನಿಗಳ ಬಲವನ್ನು ವೃದ್ಧಿಪಡಿಸುತ್ತದೆ. (ಮನೆಯಲ್ಲಿಟ್ಟಿರುವ ರತ್ನವು ಖದ್ಯೋತದಂತೆ ದೂರದಿಂದ ಹೊಳೆಯುತ್ತದೆ. ಅದೇ ದೀಪಕದ ಜ್ಯೋತಿಯಿಂದ ದೂರದವರಿಗೂ ಪ್ರಕಾಶಮಾಡುತ್ತಾ ಇದೆ. ಇದರಂತೆಯೇ) ಅಗ್ನ್ಯಾಶಯದಲ್ಲಿರತಕ್ಕ ಪಾಚಕನಾಮಕ ಅಗ್ನಿಯ ತೇಜದಿಂದಲೇ ಸಂಪೂರ್ಣ ಅಗ್ನಿಯೂ ಬಲವಾಗುತ್ತದೆ. ಅನ್ನದ ಪರಿಪಾಕವನ್ನು ಮಾಡತಕ್ಕ ಪಾಚಕಾಗ್ನಿಯು ಸರ್ವಅಗ್ನಿಗಳಲ್ಲಿ ಪ್ರಧಾನವಾದದ್ದೆಂದು ತಿಳಿಯಲ್ಪಟ್ಟದೆ. ಯಾಕೆಂದರೆ ಎಲ್ಲಕ್ಕೂ ಇದೇ ಆಧಾರವಾಗಿದೆ. ಇದರ ವೃದ್ಧಿ ಕ್ಷಯದಿಂದಲೇ ಸಂಪೂರ್ಣವಾದ ಅಗ್ನಿಯು ವೃದ್ಧಿಯನ್ನೂ ಕ್ಷಯವನ್ನೂ ಪಡಿಯುತ್ತದೆ. (ಇಲ್ಲಿ ಸಂದೇಹವೇನೆಂದರೆ—ಪಿತ್ತಕ್ಕಿಂತಲೂ ಬೇರೆಯಾದ ಅಗ್ನಿಯೆಂಬದು ಇದೆಯೋ? ಅಥವಾ ಪಿತ್ತವೇ ಅಗ್ನಿಯಾಗಿದೆಯೋ?) ಪಿತ್ತದ ಊಷ್ಮಾದಿ ಗುಣಗಳಿಂದ ಆಹಾರದ ಪರಿಪಾಕವೂ, ರಸಕ್ಕೆ ವರ್ಣತ್ವವೂ, ಮತ್ತು ದರ್ಶನಾದಿ ಕರ್ಮಗಳದ್ವಾರಾ ನಿಶ್ಚಯವಾಗುವದೇನೆಂದರೆ ಪಿತ್ತದ ಹೊರತು ಬೇರೆ ಅಗ್ನಿ ಇಲ್ಲವೆಂಬುದೇ! ಈ ಕಾರಣದಿಂದ ಅಗ್ನಿರೂಪವಾದ ಪಿತ್ತಕ್ಕೇನೇ ಸ್ಥಾನಭೇದದಿಂದ—ಪಾಚಕ, ರಂಜಕ, ಸಾಧಕ, ಆಲೋಚಕ, ಭ್ರಾಜಕಗಳೆಂಬ ಹೆಸರಿದೆ. ಹೀಗೆಯೇ ವಾಗ್ಭಟದಲ್ಲಿಯೂ:—ಪಾಚಕಪಿತ್ತವು ತಿಲಪ್ರಮಾಣದಲ್ಲಿದೆ. ವಿಕಾರರಹಿತವಾದ ಪಾಚಕಪಿತ್ತವು ಪರಿಪಾಕ, ಊಷ್ಮಾ, ದರ್ಶನ ಇವುಗಳ ಮೂಲಕ ಉಪಕಾರ ಮಾಡುತ್ತಾ ಇದೆ. ಕ್ಷುಧಾ, ತೃಷಾ, ರುಚಿ, ಪ್ರಭಾ, ಮೇಧಾ, ಬುದ್ಧಿ, ಶೂರತಾ, ಶರೀರದ ಕೋಮಲತಾ ಇವುಗಳಿಂದ ಉಪಕಾರ ಮಾಡತಕ್ಕದ್ದೂ, ಪಕ್ವಾಶಯ ಮತ್ತು ಆಮಾಶಯಗಳಲ್ಲಿರತಕ್ಕದ್ದೂ ಪಿತ್ತವೇ! ಅದು ೫ ವಿಧವಾಗಿದೆ. ಪಂಚಮಹಾಭೂತಾತ್ಮಕವಾಗಿದ್ದಾಗ್ಯೂ ಅಧಿಕ ತೈಜಸ ಗುಣವುಳ್ಳದ್ದಾಗಿದೆ. ಕರಗುವದರಿಂದ ರಹಿತವಾದ ಪರಿಪಾಕಾದಿ ಕರ್ಮಗಳಿಂದ ಅಗ್ನಿಯೆಂದು ಕರಿಯಲ್ಪಡತಕ್ಕದ್ದೂ, ಅನ್ನದ ಪರಿಪಾಕ ಮಾಡತಕ್ಕದ್ದೂ, ಮಲ ಮತ್ತು ಕಿಟ್ಟವನ್ನು ಪ್ರತ್ಯೇಕಿಸತಕ್ಕದ್ದೂ ಆದ ಪಿತ್ತವು ಆಮಾಶಯ ಮತ್ತು ಪಕ್ವಾಶಯಗಳಲ್ಲಿ ಇದ್ದು ಉಳಿದ ಪಿತ್ತಗಳಿಗೆ ಬಲವನ್ನೀಯುವದರಿಂದ ಉಪಕಾರ ಮಾಡುತ್ತದೆ. ಇದು ಪಾಚಕನಾಮಕ ಪಿತ್ತವು. (ಈಗ ಸಂದೇಹವೇನೆಂದರೆ—

ಪಿತ್ತಕ್ಕೂ ಅಗ್ನಿಗೂ ಭೇದವಿಲ್ಲದಿದ್ದರೆ ಘೃತವು ಪಿತ್ತವನ್ನು ಶಮನಮಾಡತಕ್ಕದ್ದಾಗಿಯೂ, ಅಗ್ನಿಯನ್ನು ಪ್ರಜ್ವಲಿತ ಮಾಡತಕ್ಕದ್ದಾಗಿಯೂ ಹೇಗೆ ಆಗುತ್ತದೆ ? ಮತ್ಸ್ಯವು ಪಿತ್ತವನ್ನುಂಟುಮಾಡುತ್ತದೆ, ಪರಂತು ಅಗ್ನಿಯನ್ನು ಉತ್ಪತ್ತಿಮಾಡಲಾರದು. ಇದು ಹೇಗೆ ಸಾಧ್ಯ ? ಮತ್ತು ಪಿತ್ತದ ಅಧಿಕತಾದಿಂದ ಅಗ್ನಿ ತೀಕ್ಷ್ಣವಾಗುತ್ತದೆ ಇದು ಹೇಗೆ ಸಾಧ್ಯ ? ಕಫ ವಾತಪಿತ್ತಗಳು ಸಮವಾಗಿರುವದರಿಂದ ಸಮಾಗ್ನಿಯಾಗುತ್ತದೆ ಇದೂ ಹೇಳತಕ್ಕದ್ದಲ್ಲ; ಪಿತ್ತವು ಕರಗತಕ್ಕದ್ದು, ಸ್ನಿಗ್ಧ ಮತ್ತು ಕೆಳಕ್ಕೆ ಹೋಗತಕ್ಕದ್ದು ಆಗಿದೆ; ಪರಂತು ಅಗ್ನಿಯು ಇದಕ್ಕೆ ವಿಪರೀತವಾಗಿದೆ.) ಇದರ ಉತ್ತರವೇನೆಂದರೆ—ಪಿತ್ತವು ಅಗ್ನಿಯ ನಿರಂತರ ವಾಸಸ್ಥಾನವು. ಹಾಗೆಯೇ ಗ್ರಂಥಾಂತರದಲ್ಲಿ—ಅಗ್ನಿಗೆ ಬೇರೇಗುಣಗಳೂ, ಪಿತ್ತಕ್ಕೆ ಬೇರೆ ಗುಣಗಳೂ ಇವೆ. ಕರಗತಕ್ಕದ್ದು, ಸ್ನಿಗ್ಧ, ಕೆಳಕ್ಕೆ ಹೋಗತಕ್ಕದ್ದು ಪಿತ್ತವು, ಪರಂತು ಅಗ್ನಿಯು ಇದಕ್ಕೆ ವಿಪರೀತವಾಗಿದೆ. ಈ ಕಾರಣದಿಂದ ಪಿತ್ತವು ತೈಜಸರೂಪಿನದು, ಪಿತ್ತದ ಊಷ್ಮಾ, ಅದು ಶಕ್ತಿಯುಳ್ಳದ್ದು. ಅದು ಕೋಶದಲ್ಲಿದ್ದುಕೊಂಡು ನಾಡೀಮುಖದಿಂದ ಸಂಪೂರ್ಣ ಶರೀರದಲ್ಲಿಯೂ ಹಬ್ಬುತ್ತದೆ. ಅದು ಶರೀರದ ಅಗ್ನಿಯು, ಶರೀರದ ಊಷ್ಮಾ ಆಗಿದೆ. ಪರಿಪಾಕಮಾಡತಕ್ಕದ್ದೂ, ಜೀವರೂಪವೂ ಆಗಿದೆ. ಒಂದೇ ಗತಿಯನ್ನುಳ್ಳದ್ದು; ಈಪ್ರಕಾರವಾಗಿ ಶರೀರದಲ್ಲಿ ಇದು ಶರೀರದ ಅಗ್ನಿಯೆಂದು ಕರಿಯಲ್ಪಡುತ್ತಿದೆ. ಇನ್ನೂ ಹೇಳಿರುವದೇನೆಂದರೆ—ನಾಭಿಯ ವಾಮಕುಕ್ಷಿಯಲ್ಲಿ ಸಣ್ಣ ಚಂದ್ರಮಂಡಲವಿದೆ. ಅದರ ಮಧ್ಯದಲ್ಲಿ ಸೂರ್ಯಮಂಡಲವಿದೆ. ಅದರಲ್ಲಿ ಸ್ಫಟಿಕ ಪಾತ್ರೆಯಲ್ಲಿ ಸ್ಥಿರವಾದ ದೀಪದಂತೆ ಕೇವಲ ಜರಾಯು (ಪರದೆ) ವಿನಿಂದ ಮುಚ್ಚಲ್ಪಟ್ಟಿರುವ ಅಗ್ನಿ ಇರುತ್ತದೆ. ಹೀಗೆಯೇ ಮಧುಕೋಶದಲ್ಲಿ—ದ್ರವ ಮತ್ತು ತೇಜದ ಸಮುದಾಯರೂಪವನ್ನುಳ್ಳ ಪಿತ್ತದ ತೇಜೋಭಾಗವು ಅಗ್ನಿಯು. ಈ ಕಾರಣದಿಂದ ಅತಿಯಾಗಿ ಕಾಯಲ್ಪಟ್ಟ ಲೋಹ ಗೋಳದಂತೆ ಪಿತ್ತವೂ ಅಗ್ನಿಯ ತುಲ್ಯವಾಗಿ ತಿಳಿಯಲ್ಪಡುತ್ತದೆ. ಪರಂತು ನ್ಯಾಯವಾದ ವಿಷಯವು ಪಿತ್ತಕ್ಕಿಂತಲೂ ಅಗ್ನಿಯು ಭಿನ್ನವಾಗಿದೆ ಎಂಬದೆ ಸಿದ್ಧಾಂತವು. ರಸಪ್ರದೀಪದಲ್ಲಿ—ಉದರದಲ್ಲಿರತಕ್ಕ ಅನ್ನದ ಪರಿಪಾಕ ಮಾಡತಕ್ಕ ಭಗವಾನ್ ಅಗ್ನಿ ಸೂಕ್ಷ್ಮವಾಗಿ ರಸಗಳನ್ನು ಗ್ರಹಿಸುತ್ತಾ ಇರುವದು ವಿಭಾಗಿಸಲ್ಪಡಲಾಗುವದಿಲ್ಲ; ಶರೀರದ ನಾಭಿಯಲ್ಲಿ ಚಂದ್ರಮಂಡಲವೂ, ಅದರ ಮಧ್ಯದಲ್ಲಿ ಸೂರ್ಯಮಂಡಲವೂ ಇದ್ದು, ಅದರಲ್ಲಿ ದೀಪದಂತೆ ಮನುಷ್ಯರ ಜಠರಾಗ್ನಿಯಿರುವದು. ಯಾವರೀತಿ ಆಕಾಶದಲ್ಲಿ ಸ್ಥಿತನಾದ ಸೂರ್ಯನು ತನ್ನ ತೇಜೋರೂಪ ಕಿರಣಗಳಿಂದ ಸಂಪೂರ್ಣ ತಟಾಕಾದಿಗಳನ್ನು ಒಣಗಿಸುತ್ತಾನೋ ಹಾಗೆಯೇ ನಾಭಿಯಲ್ಲಿರತಕ್ಕ ಅಗ್ನಿಯು ತನ್ನ ಕಿರ

ಣಗಳಿಂದ ಮನುಷ್ಯರ ಅನೇಕಪ್ರಕಾರದ ವ್ಯಂಜನಯುಕ್ತ ಭೋಜನವಸ್ತುವನ್ನು ಶೀಘ್ರವಾಗಿ ಪಕ್ವಮಾಡುತ್ತಾನೆ. ಆ ಅಗ್ನಿಯು ಸ್ಥೂಲಶರೀರಿಗಳಿಗೆ ಯವಾಕೃತಿಯಿಂದಲೂ, ಸಣ್ಣ ಶರೀರಗಳಿಗೆ ತಿಲಾಕೃತಿಯಿಂದಲೂ ಇದ್ದು, ಕ್ರಿಮಿಕೀಟಾದಿಗಳ ಶರೀರದಲ್ಲಿ ಕೂದಲಿನಷ್ಟು ಸೂಕ್ಷ್ಮವಾಗಿರುತ್ತದೆ. ''

'' ರಂಜಕಂ ನಾಮ ಯತ್ಪಿತ್ತಂ ತದ್ರಸಂ ಶೋಣಿತಂ ನಯೇತ್ ॥ ಯತ್ತುಸಾಧಕಸಂಜ್ಞಂತತ್, ಕುರ್ಯಾದ್ಬುದ್ಧಿಂ, ಧೃತಿಂ, ಸ್ಮೃತಿಮ್ ॥ ಯದಾಲೋಚಕ ಸಂಜ್ಞಂ ತದ್ರೂಪ ಗ್ರಹಣಕಾರಕಮ್ ॥ ಭ್ರಾಜಕಂ ಕಾಂತಿಕಾರಿಸ್ಯಾಲ್ಲೇಪಾಭ್ಯಂಗಾದಿ ಪಾಚಕಮ್ ॥ ''

'' ರಂಜಕವೆಂಬ ಪಿತ್ತವು ರಸವನ್ನು ರುಧಿರವನ್ನಾಗಿ ಮಾಡುತ್ತದೆ. ಸಾಧಕಪಿತ್ತವು—ಬುದ್ಧಿ, ಮೇಧಾ, ಸ್ಮೃತಿಗಳನ್ನುತ್ಪತ್ತಿ ಮಾಡುತ್ತದೆ. ಯಾವ ಪಿತ್ತದ ಮೂಲಕವಾಗಿ ರೂಪಗ್ರಹಣ ಮಾಡಲ್ಪಡುತ್ತದೆಯೋ ಅದು ಆಲೋಚಕ ಪಿತ್ತವು. ಭ್ರಾಜಕ ಪಿತ್ತವು ಶರೀರದ ಶೋಭೆಯನ್ನುಂಟುಮಾಡತಕ್ಕದ್ದು. ಇದು ಲೇಪ ಮತ್ತು ಶರೀರಕ್ಕೆ ಹಚ್ಚಿಕೊಳ್ಳುವ ತೈಲಾದಿಗಳನ್ನು ಪರಿಪಾಕ ಮಾಡುತ್ತದೆ. ''

ಶ್ಲೇಷ್ಮ ಸ್ವರೂಪ:—ಶ್ಲೇಷ್ಮಾಶ್ವೇತೋ ಗುರುಸ್ನಿಗ್ಧಃ ಪಿಚ್ಛಿಲಃ ಶೀತಲಸ್ತಥಾ ॥ ತಮೋಗುಣಾಧಿಕಃ ಸ್ವಾದುರ್ವಿದಗ್ಧೋ ಲವಣೋಭವೇತ್ ॥

'' ಶ್ಲೇಷ್ಮವು—ಶ್ವೇತ, ಗುರುವಾದದ್ದು, ಸ್ನಿಗ್ಧ, ಪಿಚ್ಛಿಲ, ಶೀತಲವಾದದ್ದು, ತಮೋಗುಣವುಳ್ಳದ್ದು, ಸ್ವಾದುರಸದ್ದು, ವಿದಗ್ಧವೂ, ಲವಣರಸವೂ ಆಗಿದೆ. '' ಇದೂ ೫ ವಿಧವು.

'' ಕಫಸ್ಯೇತಾನಿನಾಮಾನಿಕ್ಲೇದನಶ್ಚಾವಲಂಬನಃ ॥
ರಸನಃ ಸ್ನೇಹನಶ್ಚಾಪಿ ಶ್ಲೇಷ್ಮಣಃ ಸ್ಥಾನಭೇದತಃ ॥ ''

'' ಕ್ಲೇದನ, ಅವಲಂಬನ, ರಸನ, ಸ್ನೇಹನ, ಶ್ಲೇಷ್ಮಣಗಳೆಂದು ಶ್ಲೇಷ್ಮವು ೫ ವಿಧವು. ''

'' ಆಮಾಶಯೇ ಚ ಹೃದಯೇ ಕಂಠೇ ಶಿರಸಿ ಸಂಧಿಷು ॥ ಸ್ಥಾನೇಷ್ವೇಷು ಮನುಷ್ಯಾಣಾಂ ಶ್ಲೇಷ್ಮಾ ತಿಷ್ಠತ್ಯನುಕ್ರಮಾತ್ ॥ ಇತಿ ಪ್ರಾಯೇಣ ದೋಷಾಣಾಂ ಸ್ಥಾನಾನ್ಯೇಕೀಕೃತಾತ್ಮನಾಮ್ ॥ ವ್ಯಾಪಿನಾಮಪಿಜಾನೀಯಾತ್ ಕರ್ಮಾಣಿ ಚ ಪೃಥಕ್ ಪೃಥಕ್ ॥ ತೇ ವ್ಯಾಪಿನೋಽಪಿ ಹೃನ್ನಾಭ್ಯೋರಧೋ ಮಧ್ಯೋರ್ಧ್ವ ಸಂಶ್ರಯಾಃ ॥ ''

"ಆಮಾಶಯದಲ್ಲಿ ಕ್ಲೇದನ, ಹೃದಯದಲ್ಲಿ ಅವಲಂಬನ, ಕಂಠದಲ್ಲಿ ರಸನ, ಶಿರಸ್ಸಿನಲ್ಲಿ ಸ್ನೇಹನ, ಸಂಧಿಗಳಲ್ಲಿ ಶ್ಲೇಷ್ಮಣಗಳೆಂಬ ಶ್ಲೇಷ್ಮಗಳಿರುತ್ತವೆ. ಈಪ್ರಕಾರ ಸಂಪೂರ್ಣ ಶರೀರದಲ್ಲಿ ವ್ಯಾಪ್ತವಾಗಿರತಕ್ಕದ್ದಾದರೂ ವಿಕಾರರಹಿತವಾದ ವಾಯು ಕಫಗಳ ವಿಶೇಷ ಸ್ಥಾನ ಮತ್ತು ಬೇರೆಬೇರೆ ಕಾರ್ಯಗಳನ್ನು ತಿಳಿಯಬೇಕು. ಸಂಪೂರ್ಣ ಶರೀರದಲ್ಲಿ ವ್ಯಾಪ್ತವಾಗಿದ್ದರೂ ಹೃದಯ, ನಾಭಿಯು ಅಧೋಭಾಗ ಮಧ್ಯ ಮತ್ತು ಊರ್ಧ್ವಭಾಗದಲ್ಲಿ ವಾತ ಪಿತ್ತ ಕಫಗಳಿರುತ್ತಾ ಇರುವವು."

"ಕ್ಲೇದನಃ ಕ್ಲೇದಯತ್ಯನ್ನ ಮಾತ್ಮಶಕ್ತ್ಯಾಽಪರಾಣ್ಯಪಿ || ಅನುಗೃಹ್ಣಾತಿ ಚ ಶ್ಲೇಷ್ಮ ಸ್ಥಾನಾನ್ಯುದಕ ಕರ್ಮಣಾ || (ಅಪರಾಣ್ಯಪಿ ಶ್ಲೇಷ್ಮ ಸ್ಥಾನಾನಿ ಹೃದಯಾದಿನೀ ಮಾರ್ಗೇಣ ಗತ್ವಾ ತತ್ರ ತತ್ರ ಹೃದಯಾವಲಂಬನ ಸಂಧಾರಣ ರಸಗ್ರಹಣ ಸಮಸ್ತೇಂದ್ರಿಯತರ್ಪಣ ಸಂಧಿಸಂಶ್ಲೇಷಣಾ ದ್ಯುದಕಕರ್ಮಾಭಿ ರನುಗೃಹ್ಣಾತಿ ಉಪಕರೋತಿ) ||"

"ಕ್ಲೇದನನಾಮಕ ಶ್ಲೇಷ್ಮವು ಅನ್ನವನ್ನು ನೀರಾಗಿ ಮಾಡುತ್ತದೆ, ತನ್ನ ಶಕ್ತಿಯಿಂದ ಶ್ಲೇಷ್ಮದ ಬೇರೇ ಸ್ಥಾನಗಳೆಂಬ ಹೃದಯಾದಿಗಳನ್ನೂ ಜಲಕರ್ಮದ್ವಾರಾ ಸಹಾಯ ಮಾಡುತ್ತದೆ. (ಅಂದರೆ ಅನ್ನವನ್ನು ನೀರಾಗಿ ಮಾಡಿ, ಒಟ್ಟಾಗಿ ಸೇರಿದ್ದ ಅನ್ನವನ್ನು ಭಿನ್ನಭಿನ್ನವಾಗಿ ಮಾಡುತ್ತದೆ. ಶ್ಲೇಷ್ಮದ ಇತರ ಸ್ಥಾನಗಳಾದ ಹೃದಯಾದಿ ಸ್ಥಾನಗಳಲ್ಲಿ ಹೋಗಿ ಆಯಾಯ ಸ್ಥಾನಗಳಲ್ಲಿ ಹೃದಯದ ಅವಲಂಬನ ಮಾಡುವಿಕೆ, ಶಿರಸ್ಸು, ಭುಜಾದಿಗಳ ಸಂಧಿಸ್ಥಾನ ಇವುಗಳನ್ನು ಧಾರಣೆಮಾಡುವಿಕೆ, ರಸಗ್ರಹಣ ಮಾಡುವಿಕೆ ಸಂಪೂರ್ಣ ಇಂದ್ರಿಯಗಳನ್ನು ತೃಪ್ತಿಮಾಡುವಿಕೆ, ಸಂಧಿಗಳನ್ನು ಜೋಡಿಸುವಿಕೆ ಇತ್ಯಾದಿ ಜಲಕರ್ಮಗಳಿಂದ ಉಪಕಾರ ಮಾಡುತ್ತದೆ.

"ರಸ ಯುಕ್ತಾತ್ಮವೀರ್ಯೇಣ ಹೃದಯಸ್ಯಾವಲಂಬನಮ್ ||
ತ್ರಿಕ ಸಂಧಾರಣಂ ಚಾಪಿ ವಿದಧಾತ್ಯವಲಬಂನಃ ||"

"ಹೃದಯದಲ್ಲಿರತಕ್ಕ ಅವಲಂಬನನಾಮಕ ಶ್ಲೇಷ್ಮವು ಹೃದಯನ್ನವಲಂಬನ ಮಾಡಿಕೊಂಡು, ಶಿರ ಮತ್ತು ಎರಡು ಭುಜಗಳ ಸಂಧಿಗಳನ್ನು ಧರಿಸುತ್ತಾ ಇದೆ."

"ಉಭಾವಪಿ ತತಸ್ಸಾಮ್ಯಾತಿಷ್ಠತಶ್ಚಾಂತಿಕೆ ಯತಃ ||
ರಸಾನ್ವಿತಾ ಹಿ ಜಾನೀತೋ ರಸನಾ ರಸನಾ ಸಮಾ ||
(ರಸನಾ ರಸನೇಂದ್ರಿಯಂ, ರಸನಃ ಕಂಠಸ್ಯ ಕಫಃ)"

" ರಸಯುಕ್ತ ಜಿಹ್ವಾ ಮತ್ತು ಕಂಠಸ್ಥ ರಸನಶ್ಲೇಷ್ಮ ಈ ಎರಡೂ ಚಂದ್ರಗುಣಯುಕ್ತನಿಕಟಸ್ಥಗಳೆನ್ನಾಗಿ ತಿಳಿಯಬೇಕು. "

" **ಸ್ನೇಹನಃ ಸ್ನೇಹದಾನೇನ, ಸಮಸ್ತೇಂದ್ರಿಯತರ್ಪಣಃ ||**

**ಶ್ಲೇಷ್ಮಣಸ್ಸರ್ವಸಂಧೀನಾಂ ಸಂಶ್ಲೇಷಂ ವಿದಧಾತ್ಯಸೌ ||** "

" ಸ್ನೇಹನನಾಮಕ ಶ್ಲೇಷ್ಮವು ಸ್ನೇಹವಸ್ತುವನ್ನಿತ್ತು ಸಂಪೂರ್ಣೇಂದ್ರಿಯಗಳನ್ನೂ ತೃಪ್ತಿಪಡಿಸುತ್ತದೆ. ಶ್ಲೇಷ್ಮಣನಾಮಕ ಶ್ಲೇಷ್ಮವು ಎಲ್ಲಾ ಶರೀರದ ಸಂಧಿಗಳನ್ನೂ ಜೋಡಿಸುತ್ತಾ ಇದೆ. "

**ಧಾತುಗಳು:—" ಏತೇ ಸಪ್ತ ಸ್ವಯಂ ಸ್ಥಿತ್ವಾ ದೇಹಂ ದಧತಿ ಯನ್ನೃಣಾಮ್ || ರಸಾ ಸೃಙ್ಮಾಂಸ ಮೇದೋಽಸ್ಥಿ ಮಜ್ಜಾ ಶುಕ್ರಾಣಿ ಧಾತವಃ ||** "

" ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜಾ, ವೀರ್ಯಗಳೆಂಬ ೭ ಧಾತುಗಳೂ ಇದ್ದುಕೊಂಡು ಮನುಷ್ಯರ ಶರೀರಗಳನ್ನು ಧರಿಸುತ್ತಾ ಇವೆ. "

" **ಪ್ರೀಣನಂ ಜೀವನಂ ಲೇಪಃ ಸ್ನೇಹೋ ಧಾರಣ ಪೂರಣೇ ||**

**ಗರ್ಭೋತ್ಪಾದಶ್ಚ ಕರ್ಮಾಣಿ ಧಾತೂನಾಂ ಕಥಿತಾನಿ ಹಿ ||** "

" ರಸದಿಂದ ಪ್ರೀಣನೆಯೂ, ರಕ್ತದಿಂದ ಜೀವಧಾರಣೆ, ಮಾಂಸದಿಂದ ಲೇಪನ, ಮೇದಸ್ಸಿನಿಂದ ಸ್ನಿಗ್ಧವಾಗಿಡುವಿಕೆ, ಅಸ್ಥಿಯಿಂದ ಧಾರಣೆ, ಮಜ್ಜೆಯಿಂದ ಪೂರಣ (ತುಂಬುವಿಕೆ) ವೀರ್ಯದಿಂದ-ಗರ್ಭೋತ್ಪಾದನೆ ಈರೀತಿ ಕಾರ್ಯಗಳು. "

**ರಸಕ್ರಿಯಾ—" ಸಮ್ಯಕ್ಪಕ್ವಸ್ಯ ಭುಕ್ತಸ್ಯ ಸಾರೋ ನಿಗದಿತೋ ರಸಃ || ಸ ತು ದ್ರವಃ ಸಿತಃ ಶೀತಃ ಸ್ವಾದುಃ ಸ್ನಿಗ್ಧ ಶ್ಚಲೋಭವೇತ್ || (ಸಾರೋ ಯಥಾ ಗುಡ, ಮಧೂಕಪುಷ್ಪ, ಬಬ್ಬೂಲತ್ವ ಗ್ಬದರೀಮೂಲಾದಿ ಭವಃ ಸಾರೋ ಮದಿರಾ)** "

" ಬಳ್ಳೇಪ್ರಕಾರ ಪರಿಪಾಕವಾದ ಭೋಜನದ ಸಾರಾಂಶವೇ ರಸವು. ಅದು-ದ್ರವ, ಶ್ವೇತ, ಶೀತಲ, ಮಧುರ, ಸ್ನಿಗ್ಧ, ಚಂಚಲವಾದದ್ದು; (ಸಾರವೆಂದರೆ) ಗುಡ, ಮಧೂಕಪುಷ್ಪ, ಜಾಲೀಚಕ್ಕೆ, ಬಾರೆಯಬೇರು ಮುಂತಾದ್ದರಿಂದಾದ ಸಾರಾಂಶ ಮದಿರಾ ಎಂಬ ವಸ್ತುವಿನಂತೆ ಬಳ್ಳೇ ಪರಿಪಕ್ವಾನ್ನದ ಸಾರಾಂಶವು ರಸವೆಂದೆನ್ನಲ್ಪಡುವದು. "

" **ಆರುಹ್ಯ ಧಮನೀ ರ್ಗತ್ವಾಧಾತೂನ್ ಸರ್ವಾನಯಂ ರಸಃ ||**

**ಪುಷ್ಣಾತಿ ತವಸುಸ್ಥ್ರೀಯೈ ರ್ವ್ಯಾಪ್ನೋತಿ ಚ ತನುಂ ಗುಣೈಃ ||**

ಮಂದವಹ್ನಿ ವಿದಗ್ಧಸ್ತು ಕಟ್ವಮ್ಲೋ ಭವೇದ್ರಸಃ ॥ ಸಕುರ್ಯಾದ್ಬಹುಲಾನ್ ರೋಗಾನ್ ವಿಷಕೃತ್ಯಂ ಕರೋತ್ಯಪಿ ॥ ”

“ ಈ ರಸವು ಮೇಲಕ್ಕೇರಿ ನಾಡಿಗಳನ್ನು ಶೇರಿ ಸಂಪೂರ್ಣ ಧಾತುಗಳನ್ನು ಪುಷ್ಟಿಮಾಡುವದು. ಇದರನಂತರ ಇದು ತನ್ನ-ಶೀತ, ಸ್ನಿಗ್ಧ, ಪುಷ್ಟಿಮಾಡುವಿಕೆ, ಈ ಗುಣಗಳಿಂದ ಶರೀರವನ್ನು ವ್ಯಾಪಿಸಿಕೊಂಡಿರುವದು. ಮಂದಾಗ್ನಿಯಿಂದ ವಿಕಾರಯುಕ್ತವಾದ ರಸ, ಕ್ಷಾರ, ಕಹಿ ಆಗುತ್ತದೆ. ಅದು ರೋಗಗಳನ್ನುಂಟುಮಾಡಿ, ವಿಷತುಲ್ಯವಾಗುತ್ತದೆ. ”

ರಕ್ತಕ್ರಿಯಾ—“ ಯದಾ ರಸೋಯಕೃದ್ಯಾತಿ ತತ್ರ ರಂಜಕ ಪಿತ್ತತಃ ॥ ರಾಗಂ ಪಾಕಂ ಚ ಸಂಪ್ರಾಪ್ಯ ಸ ಭವೇದ್ರಕ್ತ ಸಂಜ್ಞಕಃ ॥ ರಕ್ತಂ ಸರ್ವಶರೀರಸ್ಥಂ ಜೀವಸ್ಯಾಧಾರಮುತ್ತಮಮ್ ॥ ಸ್ನಿಗ್ಧಂ ಗುರು ಚಲಂ ಸ್ವಾದು ವಿದಗ್ಧಂ ಪಿತ್ತವದ್ಭವೇತ್ ॥ ಜೀವೋ ವಸತಿ ಸರ್ವಸ್ಮಿನ್ ದೇಹೇ ತತ್ರ ವಿಶೇಷತಃ ॥ ವೀರ್ಯೇ ರಕ್ತೇ ಮಲೇ ಯಸ್ಮಿನ್ ಕ್ಷೀಣೇ ಯಾತಿ ಕ್ಷಯಂ ಕ್ಷಣಾತ್ ॥ ”

“ ರಸವು ಯಕೃತ್‌ನಲ್ಲಿ ಬಂದು ಶೇರಲಾಗಿ ಅಲ್ಲಿ ರಂಜಕವೆಂಬ ಪಿತ್ತದಿಂದ ವರ್ಣವನ್ನೂ, ಪರಿಪಾಕವನ್ನೂ ಪಡೆದು, ರಕ್ತವಾಗುತ್ತದೆ. ರುಧಿರವು ಸಂಪೂರ್ಣ ಶರೀರದಲ್ಲಿ ಇರತಕ್ಕ ಜೀವನ ಉತ್ತಮವಾದ ಆಧಾರವೂ, ಸ್ನಿಗ್ಧವೂ, ಗುರುವೂ, ಚಂಚಲವೂ, ಮಧುರವೂ ಆಗಿದೆ. ಪರಂತು ವಿಕಾರಕ್ಕೆ ಪ್ರಾಪ್ತವಾದ ರುಧಿರವು ಪಿತ್ತದಂತೆ ಹುಳಿಯಾಗುತ್ತದೆ. ಜೀವದ ಉತ್ತಮಾಧಾರವು ವೀರ್ಯದಲ್ಲಿಯೂ, ರಕ್ತದಲ್ಲಿಯೂ, ಮಲದಲ್ಲಿಯೂ ಸ್ಥಿತವಾಗಿದೆ. ಇವುಗಳು ಕ್ಷೀಣವಾಗುವದರಿಂದ ಜೀವವೂ ಕ್ಷಯವಾಗುವದು. ”

ಮಾಂಸಪೇಶಿಗಳು—“ ಯಥಾರ್ಥಮೂಷ್ಮಣಾ ಯುಕ್ತೋ ವಾಯುಃ ಸ್ರೋತಾಂಸಿ ದಾರಯೇತ್ ॥ ಅನುಪ್ರವಿಶ್ಯ ಪಿಶಿತಂ ಪೇಶೀರ್ವಿಭಜತೇ ತಥಾ ॥ ”

“ ಊಷ್ಮದಿಂದ ಯುಕ್ತವಾದ ವಾಯುವು ಸ್ರೋತೋ ಮಾರ್ಗಗಳ ಮೂಲಕವಾಗಿ ಮಾಂಸದಲ್ಲಿ ಪ್ರವೇಶಿಸಿ, ಪ್ರಯೋಜನಾನುಸಾರ ಪೇಶೀ (ಮಾಂಸಪಿಂಡ) ಗಳನ್ನು ವಿಭಾಗಮಾಡುವದು. ”

“ ಮಾಂಸಪೇಶ್ಯಃ ಸಮಾಖ್ಯಾತಾ ನೃಣಾಂ ಪಂಚಶತಾನಿ ಹಿ ॥ ತಾಸಾಂ ಶತಾನಿ ಚತ್ವಾರಿ ಶಾಖಾಸು ಕಥಿತಾನ್ಯಥಾ ॥ ಕೋಷ್ಠೇ ಷಡುತ್ತರಾ ಷಷ್ಟಿಃ ಕಥಿತಾ ಮುನಿಪುಂಗವೈಃ ॥ ಗ್ರೀವಾಯಾ ಊರ್ಧ್ವಗಾಸ್ತಾಸ್ತು ಚತುಸ್ತ್ರಿಂಶತ್ಪ್ರಕೀರ್ತಿತಾಃ ॥ ”

"ಮನುಷ್ಯರಿಗೆ ೫೦೦ ಮಾಂಸ ಪೇಶೀಗಳಿವೆ. ಇವುಗಳಲ್ಲಿ ೪೦೦ ಕೈಕಾಲುಗಳಲ್ಲಿಯೂ, ಕೋಷ್ಠದಲ್ಲಿ ೬೬ ಕಂಠದ ಮೇಲ್ಭಾಗದಲ್ಲಿ ೩೪ ಇರುವವು."

"ಏಕೈಕಸ್ಯಾಂತು ಪಾದಾಂಗುಲ್ಯಾಂ ತಿಸ್ರಸ್ತಿಸ್ರಸ್ತಾಃ, ಪಂಚದಶ, ಪಾದಾಗ್ರೇ ದಶ, ಪಾದೋಪರಿ ಕೂರ್ಚ ಸನ್ನಿವಿಷ್ಟಾ ದಶ, ಗುಲ್ಫತಲಯೋರ್ದಶ, ಗುಲ್ಫಜಾನುನೋರಂತರೇ ವಿಂತತಿಃ, ಜಾನುನಿ ಪಂಚ, ಊರಾ ವಿಂಶತಿಃ, ವಂಕ್ಷಣೇ ದಶ, ಏವಮೇಕಸ್ಮಿನ್ಸಕ್ಥ್ನಿ ಶತಂ ಭವಂತಿ, ಏತೇನೇತರಸಕ್ಥಿ ಬಾಹೂ ಚ ವ್ಯಾಖ್ಯಾತಾ॥"

"ಕಾಲಿನ ಬಂದೊಂದು ಬೆರಳಿನಲ್ಲಿಯೂ ೩-೩ ಪೇಶೀಗಳಿವೆ. ಈಪ್ರಕಾರ ೫ ಬೆರಳಲ್ಲಿಯೂ ೧೫, ಪಾದದ ಮೇಲ್ಭಾಗದಲ್ಲಿ ೧೦, ಪಾದದಮೇಲ್ಗಡೆ ಕೂರ್ಚಸ್ಥಾನಕ್ಕೆ ಶೇರಿ ೧೦, ಗುಲ್ಫತಲದಲ್ಲಿ ೧೦, ಗಣ್ಣಿಗೂ ಮೊಳಕಾಲಿಗೂ ಮಧ್ಯೆ ೨೦, ಮೊಳಕಾಲಲ್ಲಿ ೫, ತೊಡೆಯಲ್ಲಿ ೨೦, ಜಂಘಾಸಂಧಿಯಲ್ಲಿ ೧೦, ಈಪ್ರಕಾರ ಕಾಲ್ಬೆರಳಿನಿಂದ ಜಂಘೆಯವರಿಗೆ ಒಂದು ಕಾಲಿನಲ್ಲಿ ೧೦೦ ಪೇಶೀಗಳಿವೆ, ಇದೇರೀತಿಯಲ್ಲಿ ಮತ್ತೊಂದು ಕಾಲು, ಕೈಗಳೆರಡೂ ಶೇರಿ ೪೦೦ ಪೇಶೀಗಳು ಕೈಕಾಲುಗಳಲ್ಲಿರುವವು."

"ಗುದೇ ತಿಸ್ರಃ, ಶೋಫಸ್ಯೈಕಾ, ಸೇವನ್ಯಾಮೇಕಾ, ವೃಷಣಯೋರ್ದ್ವೇ, ಸ್ಫಿಜೋಃ ಪಂಚ, ಪಂಚ, ವಸ್ತಿಮೂರ್ಧನಿ ದ್ವೇ, ಉದರೇ ಪಂಚ, ನಾಭ್ಯಾಮೇಕಾ, ಪೃಷ್ಠೋರ್ಧ್ವಂ ಸನ್ನಿವಿಷ್ಟಾ ಉಭಯತಃ ಪಂಚ, ಪಂಚ ದೀರ್ಘಾ, ಪಾರ್ಶ್ವಯೋಃ ಷಟ್, ವಕ್ಷಸಿ ದಶ, ಅಕ್ಷಕಾಂಸಾಪ್ರತಿ ಸಮಂತಾತ್ ಸಪ್ತ, ಅಂಸಾಸ್ಕಂಧಾ, ಹೃದಿ ದ್ವೇ, ಯಕೃತಿ ಪ್ಲೀಹಿ ದ್ವೇ, ನಾಸಾಯಂ ದ್ವೇ, ನೇತ್ರಯೋರ್ದ್ವೇ ಗಂಡಯೋಶ್ಚತಸ್ರಃ ತುಂಡಕೇ ದ್ವೇ ॥"

"ಗುದದಲ್ಲಿ ೩, ಲಿಂಗದಲ್ಲಿ ೧, ಲಿಂಗದ ಕೆಳಗಿನ ಹೊಲಿಗೆಯಲ್ಲಿ ೧, ಅಂಡಕೋಶದಲ್ಲಿ ೨, ಎರಡು ನಿತಂಬಗಳಲ್ಲಿ ೫-೫ ಮೂತ್ರಾಶಯದ ಮೇಲ್ಗಡೆ ೨, ಉದರದಲ್ಲಿ ೫, ನಾಭಿಯಲ್ಲಿ ೧ ಬೆನ್ನಿನಮೇಲೆ ಎರಡು ಕಡೆಗೂ ಹಬ್ಬಿರುವದರಲ್ಲಿ ೫-೫ ಉದ್ದನೆ ಎಲುಬುಗಳಲ್ಲಿ ೬, ಹೃದಯದಲ್ಲಿ ೧೦, ಅಕ್ಷಕಾಂಸ (ಸ್ಕಂಧಗಳ) ಆಸಪಾಸ್ ೭, ಎದೆಯಲ್ಲಿ ೨, ಯಕೃತ್‌ನಲ್ಲಿ ೨, ಪ್ಲೀಹದಲ್ಲಿ ೨, ತುಂಡಕವೆಂಬ ಸ್ಕಂಧದ ಹತ್ತಿರನ ಕೊಳವಿಯಲ್ಲಿ ೨ ಈರೀತಿ ೬೬ ಇರುವವು."

"ಗ್ರೀವಾಯಾಶ್ಚತಸ್ರಃ, ಹನ್ವೋರಷ್ಟೌ, ಕಂಠಮಣಾ ಏಕಾ, ಗಲೇ ಏಕಾ, ತಾಲುನಿ ದ್ವೇ, ಜಿಹ್ವಾಯಾಮೇಕಾ, ಓಷ್ಠಯೋ

ದ್ವೇ, ನಾಸಾಯಂ ದ್ವೇ, ನೇತ್ರಯೊ ರ್ದ್ವೇ, ಗಂಡಯೊಶ್ಚತಸ್ರಃ, ಕರ್ಣಯೊರ್ದ್ವೇ, ಲಲಾಟೆ ಚತಸ್ರಃ, ಶಿರಸ್ಯೇಕಾ, ಏವಂ ಮಾಂಸಪೇಶ್ಯಃ ಪಂಚಶತಾನಿ ಭವಂತಿ || ”

“ಗ್ರೀವಾದಲ್ಲಿ ೪, ಎರಡು ಹನುಗಳಲ್ಲಿ ೮, ಕಂಠದಮಣಿಯಲ್ಲಿ ೧, ಳದಲ್ಲಿ ೧, ತಾಲುವಿನಲ್ಲಿ ೨, ಜಿಹ್ವಾದಲ್ಲಿ ೧, ಎರಡು ತುಟಿಗಳಲ್ಲಿ ೨, ನಾಸಿಕಾದಲ್ಲಿ ೨, ನೇತ್ರಗಳ ಮೇಲ್ಗಡೆ ೨, ಕಪೋಲದಲ್ಲಿ ೪, ಕಿವಿಗಳಲ್ಲಿ ೨, ಹಣೆಯಲ್ಲಿ ೪, ಶಿರಸ್ಸಿನಲ್ಲಿ ೧, ಹೀಗೆ ಎಲ್ಲಾ ಶೇರಿ ೫೦೦ ಮಾಂಸಪೇಶಿಗಳಾಗುವವು.”

“ಸ್ತ್ರೀಣಾಮಪಿ ಭವಂತ್ಯೇತಾಃ ಕಿಂತು ವಿಂಶತಿರುತ್ತರಾಃ || ಗರ್ಭಾಶಯೇ ಗರ್ಭಮಾರ್ಗೇ, ಯೋನಾ ಚ ಸ್ತನಯೋರಪಿ || ಗರ್ಭಾಶಯೇ ಚತಸ್ರಃ, ಗರ್ಭಚ್ಛಿದ್ರ ಸಂಸ್ಥಿತಾ ಶುಕ್ರಾರ್ತ್ತವಪ್ರವೇಶಿನ್ಯಸ್ತಿಸ್ರಃ, ಯೋನ್ಯಾವಭ್ಯಂತರತೋ ಮುಖಾಶ್ರಿತೇ ಪ್ರಶ್ರಿತೇ ದ್ವೇ ಸ್ತನಯೋಃ, ಪಂಚ, ಪಂಚ ಯೌವನೆ ತಾಸಾಂ ವೃದ್ಧಿರ್ಭವತಿ || ”

“ಸ್ತ್ರೀಯರಿಗೂ ಇದೇರೀತಿ ೫೦೦ ಪೇಶೀಗಳಿರುವವು, ಆದರೆ ಗರ್ಭಾಶಯ, ಗರ್ಭಮಾರ್ಗ ಯೋನಿ ಸ್ತನಗಳಲ್ಲಿ ೨೦ ಪೇಶೀಗಳು ಹೆಚ್ಚಾಗಿರುವವು. ಗರ್ಭಾಶಯದಲ್ಲಿ ೪, ಗರ್ಭದ ಛಿದ್ರದಲ್ಲಿ ಸ್ಥಿತವಾದ ವೀರ್ಯ ಮತ್ತು ರಜಸ್ಸಿನ ಪ್ರವೇಶಮಾಡಿಸತಕ್ಕ ಸ್ಥಳದಲ್ಲಿ ೩, ಯೋನಿಯ ಮುಖದಕಡೆಗೆ ಹಬ್ಬಿರುವದರಲ್ಲಿ ೨, ಯೋನಿಯ ಹೊರಗಡೆ ಛಿದ್ರದ ಎರಡು ಪಾರ್ಶ್ವದಲ್ಲಿರುವ ಗೋಲವಾದ ಯೋನಿ ಕರ್ಣಿಕಾದಲ್ಲಿ ೨, ಎರಡು ಸ್ತನಗಳಲ್ಲಿಯೂ ೫-೫, ಇವು ಯುವಾವಸ್ಥೆ ಬಂದನಂತರ ವೃದ್ಧಿಯಾಗುವವು.”

“ಶಿರಾ ಸ್ನಾಯ್ವಸ್ಥಿ ಪರ್ವಾಣಿಸಂಧಯಶ್ಚ ಶರೀರಿಣಾಮ್ || ಪೇಶೀಭಿಸ್ಸಂವೃತಾನ್ಯೇವ ಬಲವಂತಿ ಭವಂತಿ ಹಿ || ”

“ಮನುಷ್ಯರ ಶಿರಾ, ಸ್ನಾಯು, ಎಲುಬು, ಗಣ್ಣುಗಳು, ಸಂಧಿ, ಇವೆಲ್ಲಾ ಮಾಂಸಪೇಶೀಗಳಿಂದ ಸುತ್ತಲ್ಪಟ್ಟಿರುವವು.”

ಮೇದಸ್ಸಿನ ಕ್ರಿಯಾ:—“ಯನ್ಮಾಂಸಂ ಸ್ವಾಗ್ನಿನಾ ಪಕ್ವಂ ತನ್ಮೇದ ಇತಿ ಕಥ್ಯತೇ || ತದತೀವ ಗುರು ಸ್ನಿಗ್ಧಂ ಬಲಕಾರ್ಯತಿ ಬ್ರಂಹಣಮ್ || ”

“ತನ್ನ ಅಗ್ನಿಯಿಂದ ಪಕ್ವವಾದ ಮಾಂಸವು ಮೇದವಾಗುತ್ತದೆ. ಇದು ಬಹು ಗುರು, ಸ್ನಿಗ್ಧ, ಬಲಕಾರಿ, ಮತ್ತು ಶರೀರವನ್ನು ವೃದ್ಧಿಮಾಡುವದಾಗುತ್ತದೆ.

ಅಸ್ಥಿ ಕ್ರಿಯಾ:—“ ಮೇದೋ ಯತ್ಸ್ವಾಗ್ನಿನಾ ಪಕ್ವಂ ವಾಯುನಾ ಚಾತಿ ಶ್ಲೇಷಿತಮ್ ‖ ತದಾಸ್ತಿ ಸಂಜ್ಞಾಂ ಲಭತೇ ಸ ಸಾರಃ ಸರ್ವವಿಗ್ರಹೇ ‖ ಅಭ್ಯಂತರ ಗತೈಃ ಸಾರೈ ಯಥಾ ತಿಷ್ಠಂತಿ ಭೂರುಹಾಃ ‖ ಅಸ್ಥಿ ಸಾರೈ ಸ್ತಥಾ ದೇಹಾದ್ಧ್ರಿಯಂತೇ ದೇಹಿನೋ ಧೃವಮ್ ‖ ತಸ್ಮಾಚ್ಚಿರ ವಿನಶ್ಯೇಷು ತ್ವಙ್ಮಾಂಸೇಷು ಶರೀರಣಾಃ ‖ ಅಸ್ಥೀನಿ ನ ವಿನಶ್ಯಂತಿ ಸಾರಾ ಏತಾನಿ ಸರ್ವಥಾ ‖ ”

“ ತನ್ನ ಅಗ್ನಿಯಲ್ಲಿ ಪಕ್ವವಾದ ಮೇದಸ್ಸು ವಾಯುವಿನಿಂದ ಒಣಗಲ್ಪಟ್ಟು ಅಸ್ಥಿಯಾಗುತ್ತದೆ. ಅದೇ ಸಂಪೂರ್ಣ ಶರೀರದ ಸಾರಾಂಶವಾಗಿದೆ. ಹೇಗೆ ಮರವು ತನ್ನ ಒಳಗಿನ ಸಾರ ವಸ್ತುವಿನಿಂದ ಸ್ಥಿತವಾಗಿರುತ್ತದೆಯೋ ಅದೇರೀತಿ ಪ್ರಾಣಿಗಳ ಶರೀರವು ಅಸ್ಥಿರೂಪ ಸಾರಾಂಶದಿಂದ ಧರಿಸಲ್ಪಡುತ್ತಾ ಇದೆ. ಈ ಕಾರಣದಿಂದಲೇ ಮಾಂಸಾದಿಗಳು ನಷ್ಟವಾದರೂ ಅಸ್ಥಿಯು ನಷ್ಟವಾಗುವದಿಲ್ಲ ! ”

“ ಶಲ್ಯತಂತ್ರೇಽಸ್ಥಿ ಖಂಡಾನಾಂ ಶತಂ ತ್ರಯ ಮುದಾಹೃತಮ್‖ ಸ ವಿಂಶತಿ ಶತಂ ತ್ವಸ್ಥ್ನಾಂ ಶಾಖಾಸು ಕಥಿತಂ ಬುಧೈಃ‖ ಪಾರ್ಶ್ವಯೋಃ ಶ್ರೋಣೀಫಲಕೇ ವಕ್ಷಃ ಪೃಷ್ಠೋದರೇಷು ಚ ‖ ಜಾನೀಯಾದ್ಭಿಷಗೇತೇಷು ಶತಂ ಸಪ್ತದಶೋತ್ತರಮ್‖ ಗ್ರೀವಾಯಾಮೂರ್ಧ್ವಗಾಂ ವಿದ್ಯಾದಸ್ಥ್ನಾಂ ಷಷ್ಠಿ ತ್ರಿಸಂಯುತಮ್ ‖ ”

“ ಶಲ್ಯತಂತ್ರದಲ್ಲಿ ೩೦೦ ಅಸ್ಥಿಖಂಡಗಳು ಮನುಷ್ಯ ಶರೀರದಲ್ಲಿರುವವೆಂದು ನಿರೂಪಿಸಲ್ಪಟ್ಟಿದೆ. ಅವುಗಳ ಸ್ಥಾನವೂ—ಕೈಕಾಲುಗಳಲ್ಲಿ ೧೨೦, ಶ್ರೋಣಿಫಲಕ, ನಿತಂಬ, ಎದೆ, ಬೆನ್ನು, ಉದರ ಇವುಗಳಲ್ಲಿ ೧೧೭ ಕಂಠದ ಮೇಲ್ಭಾಗದಲ್ಲಿ ೬೩ ಇರುವಂತೆ ಹೇಳಲ್ಪಟ್ಟಿದೆ. ”

“ ಮಾಂಸಾನ್ಯಂತ್ರಾಣಿ ಬದ್ಧಾನಿ ಶಿರಾಭಿಸ್ನಾಯುಭಿಸ್ತಥಾ ‖
ಅಸ್ಥಿನ್ಯಾಲಂಬನಂ ಕೃತ್ವಾ ನ ಶೀರ್ಯಂತಿ ಪತಂತಿ ಚ ‖

“ ಸ್ನಾಯು, ನಾಡಿಗಳು, ಇವುಗಳಿಂದ ಬಂಧಿಸಲ್ಪಟ್ಟಿರುವ ಮಾಂಸ ಮತ್ತು ಕರಳುಗಳು ಈ ಅಸ್ಥಿಪಂಜರವನ್ನವಲಂಬನ ಮಾಡಿಕೊಂಡು ಇರುವದರಿಂದ ಅವು ಕ್ಷೀಣವಾಗುವದೂ ಇಲ್ಲ; ಬಿದ್ದುಹೋಗುವದೂ ಇಲ್ಲ. ”

ಮಜ್ಜಾ ಕ್ರಿಯಾ:—“ ಅಸ್ಥಿ ಯತ್ಸ್ವಾಗ್ನಿನಾ ಪಕ್ವಂ ತಸ್ಯ ಸಾರೋ ಭವೇದ್ಘನಃ ‖ ಯಃ ಸ್ವೇತವತ್ಪೃಥಗ್ಭೂತಃ ಸಮಜ್ಜೇತ್ಯಭಿಧೀಯತೇ ‖ ”

“ ತನ್ನ ಅಗ್ನಿಯಲ್ಲಿ ಪಕ್ವವಾದ ಎಲುಬಿನ ಸಾರವು ಸ್ವೇದದಂತೆ ಪ್ರತ್ಯೇಕವಸ್ತುವಾಗಿ ಮಜ್ಜಾ ಎಂದು ಹೇಳಲ್ಪಡುತ್ತದೆ. ”

" ಸ್ಥೂಲಾಸ್ಥಿಷು ವಿಶೇಷೇಣ ಮಜ್ಜಾತ್ವಭ್ಯಂತರೇ ಸ್ಥಿತಃ ॥ "

" ಈ ಮಜ್ಜೆಯು ಸ್ಥೂಲಾಸ್ಥಿಯ ಒಳಭಾಗದಲ್ಲಿರುತ್ತದೆ. "

" ಮಜ್ಜ್ಞಃ ಶುಕ್ರಸ್ಯ ಸಂಭವಃ ॥ "

" ಮಜ್ಜೆಯಿಂದ ಹುಟ್ಟತಕ್ಕದ್ದು ವೀರ್ಯವು. "

" ವಾಗ್ಭಟಃ॥ ಓಜಶ್ಚ ತೇಜೋಧಾತೂನಾಂ ಶುಕ್ರಾಂತಾನಾಂ ಪರಂ ಸ್ಮೃತಮ್ ॥ ಹೃದಯಸ್ಥಮಪಿ ವ್ಯಾಪಿ ದೇಹಸ್ಥಿತಿ ನಿಬಂಧನಮ್ ॥ ಯಸ್ಯಪ್ರವೃತ್ತಾ ದೇಹಸ್ಯ ತುಷ್ಟಿ ಪುಷ್ಟಿ ಬಲೋದಯಾಃ ॥ ಯನ್ನಾಶೇ ನಿಯತೋ ನಾಶೋ, ಯಸ್ಮಿಂಸ್ತಿಷ್ಠತಿ ಜೀವನಮ್ ॥ ನಿಷ್ಪದ್ಯಂತೇ ಯತೋ ಭಾವಾ ವಿವಿಧಾ ದೇಹಸಂಶ್ರಯಾಃ ॥ ಉತ್ಸಾಹ ಪ್ರತಿಭಾ ಧೈರ್ಯಂ ಲಾವಣ್ಯಸುಕುಮಾರತಾಃ ॥ "

" ವಾಗ್ಭಟದಲ್ಲಿ—ವೀರ್ಯಪರ್ಯಂತವಾಗಿ ಸಂಪೂರ್ಣ ಧಾತುಗಳ ಉತ್ಕೃಷ್ಟ ತೇಜಸ್ಸು ಓಜಸ್ಸೆಂದು ಕರಿಯಲ್ಪಡುತ್ತದೆ. ಅದು ಹೃದಯದಲ್ಲಿ ಇದ್ದು ಸರ್ವತ್ರ ವ್ಯಾಪಕವಾಗಿ ಶರೀರದ ಸ್ಥಿತಿಗೆ ಕಾರಣವಾಗಿದೆ. ಅದರ ವೃದ್ಧಿಯಾಗುವದರಿಂದಲೇ ಶರೀರದ ತುಷ್ಟಿ, ಪುಷ್ಟಿ, ಬಲವುಂಟಾಗುವವು. ಅದರ ನಾಶದಿಂದ ಅವಶ್ಯ ಮೃತ್ಯುವೇ ಆಗುವದು. ಅದರಿಂದಲೇ ಮನುಷ್ಯನು ಬದುಕುತ್ತಾನೆ. ಅದರ ಮೂಲಕವಾಗಿಯೇ ಶರೀರಸ್ಥಿತಗಳಾದ ಅನೇಕ ಪ್ರಕಾರದ-ಉತ್ಸಾಹ, ಪ್ರತಿಭಾ, ಧೈರ್ಯ, ಲಾವಣ್ಯ, ಸುಕುಮಾರತಾ ಇವೆಲ್ಲವೂ ಉತ್ಪನ್ನವಾಗುವವು. "

" ತತಃ ಸ್ಥೂಲೋ ಭಾಗೋ ರಸೋ ಮಾಸೇನ ಪುಂಸಾಂ ಶುಕ್ರಂ ಸ್ತ್ರೀಣಾಮಾರ್ತವಂ ಶುಕ್ರಂ ಚ ಭವತಿ । ಉಕ್ತಂ ಚ ಸುಶ್ರುತೇ ॥ ಏವಂ ಮಾಸೇನ ರಸಃ ಶುಕ್ರೀ ಭವತಿ । ಸ್ತ್ರೀಣಾಂಚೇತಿ ॥ ( ಚಕಾರಾತ್ ಸ್ತ್ರೀಣಾಮಪಿ ಶುಕ್ರಂ ಭವತಿ ಅತ ಏವೋಕ್ತಂ । ಸುಶ್ರುತೇ ) ॥ ಯೋಷಿತೋಽಪಿ ಸ್ರವತ್ಯೇವ ಶುಕ್ರಂ ಪುಂಸಃ ಸಮಾಗಮೇ ॥ ತತ್ರ ಗರ್ಭಸ್ಯ ಕಿಂಚಿತ್ತು ಕರೋತೀತಿ ನ ಚಿಂತ್ಯತೇ ॥ (ಏತೇನ ಸ್ತ್ರೀಣಾಂ ಸಪ್ತಮೋ ಧಾತುರಾರ್ತವಂ ಶುಕ್ರಮಪ್ಯಮಿತಿ ಬೋಧಿತವ್ಯಮ್ ॥ ಆಶಯಾಧಿಕ್ಯವತ್ ॥ "

" ಅದರನಂತರ ರಸದ ಸ್ಥೂಲಭಾಗವು ತಿಂಗಳು ತುಂಬುವದರಲ್ಲಿ ಪುರುಷರ ವೀರ್ಯವಾಗಿಯೂ, ಸ್ತ್ರೀಯರ ರಜಸ್ಸೂ ಮತ್ತು ವೀರ್ಯವಾಗಿಯೂ ಆಗುತ್ತದೆ. ಸುಶ್ರುತದಲ್ಲಿ ಇದೇ ವಿಷಯದಲ್ಲಿ—ಈಪ್ರಕಾರ ತಿಂಗಳೊಳಗಾಗಿ ರಸವು ವೀರ್ಯವಾಗುತ್ತದೆ. ಸ್ತ್ರೀಯರಿಗೂ ವೀರ್ಯವಾಗುತ್ತದೆ. ಇದರಿಂದಲೇ ಪುರುಷನ ಜತೇಲಿ ರತಿಕ್ರೀಡೆ ಮಾಡುವದರಿಂದ ಸ್ತ್ರೀಯರೂ ವೀರ್ಯವನ್ನು

ಬಿಡುತ್ತಾರೆ. ಪರಂತು ಆ ವೀರ್ಯವು ಗರ್ಭಧಾರಣೆಯ ವಿಷಯವಾಗಿ ಸ್ವಲ್ಪವೂ ಉಪಕಾರ ಮಾಡುವದಿಲ್ಲ; ಇದರಿಂದ—ಸ್ತ್ರೀಯರಿಗೆ ೭ನೇ ಧಾತು ಆರ್ತವವೆಂತಲೂ, ೮ನೇದೇ ವೀರ್ಯವೆಂತಲೂ ತಿಳಿಯಬೇಕು. ಯಾಕೆಂದರೆ ಅವರಿಗೆ ಒಂದು ಆಶಯವೂ ಅಧಿಕವಾಗಿಯೇ ಇದೆಯಷ್ಟೆ ?"

"ಶುಕ್ರಂ ಸೌಮ್ಯಂ ಸಿತಂ ಸ್ನಿಗ್ಧಂ ಬಲ ಪುಷ್ಟಿಕರಂ ಸ್ಮೃತಮ್ ||
ಗರ್ಭಬೀಜಂ ವಪುಃ ಸಾರೋ ಜೀವಸ್ಯಾಶ್ರಯ ಉತ್ತಮಃ ||"

"ವೀರ್ಯವು ಸೋಮಾತ್ಮಕ, ಶ್ವೇತ, ಸ್ನಿಗ್ಧ, ಬಲ ಪುಷ್ಟಿದಾಯಕ, ಗರ್ಭದಬೀಜ, ಶರೀರದ ಸಾರಭಾಗ, ಜೀವದ ಉತ್ತಮ ಸ್ಥಾನವೆಂದೆನ್ನಲ್ಪಡುವದು."

ಆಶಯಗಳು:—"ಉರೋರಕ್ತಾಶಯಸ್ತಸ್ಮಾದಧಃ ಶ್ಲೇಷ್ಮಾಶಯಃ ಸ್ಮೃತಃ || ಆಮಾಶಯಾಸ್ತು ತದಧಃ ತಲ್ಲಿಂಗಂ ಚರಕೋಽವದತ್—(ನಾಭಿಸ್ಥಾನಾಂತರೇ ಜಂತೋರಾಹುರಾಮಾಶಯಂ ಬುಧಾಃ || ಇತಿ ) ಆಮಾಶಯಾದಧಃ ಪಕ್ವಾಶಯಾದೂರ್ಧ್ವಂ ತು ಯಾ ಕಲಾ || ಗ್ರಹಣೀ ನಾಮ ಕಾಸ್ಯೈವ ಕಥಿತಃ ಪಾಚಕಾಶಯಃ || ಊರ್ಧ್ವಮಗ್ನ್ಯಾಶಯೋ ನಾಭೇ ರ್ಮಧ್ಯಭಾಗೇ ವ್ಯವಸ್ಥಿತಾ || ತಸ್ಯೋಪರಿ ತಿಲಂ ಜ್ಞೇಯಂ ತದಧಃ ಪವನಾಶಯಃ || ಪಕ್ವಾಶಯಸ್ತು ತದಧಃ ಸ ಏವ ತು ಮಲಾಶಯಃ || ತದಧಃ ಕಥಿತೋ ವಸ್ತಿಃ ಸ ಹಿ ಮೂತ್ರಾಶಯೋ ಮತಃ ||"

"ಎದೆಯು ರಕ್ತಾಶಯವು; ಅದರ ಕೆಳಭಾಗದಲ್ಲಿ ಶ್ಲೇಷ್ಮಾಶಯವು; ಅದರ ಕೆಳಗೆ ಆಮಾಶಯವು. ಇದರ ಲಕ್ಷಣವು ಚರಕದಲ್ಲಿ ಪ್ರಾಣಿಗಳ ನಾಭಿ ಮತ್ತು ಸ್ತನಗಳ ಮಧ್ಯದಲ್ಲಿ ಆಮಾಶಯವಿರುವದೆಂದಿದೆ. ಆಮಾಶಯದ ಕೆಳಗಡೆಯಲ್ಲಿ (ಪಕ್ವಾಶಯದ ಮೇಲ್ಗಡೆ) ಗ್ರಹಣೀ ಎಂಬ ಕಲಾ ಇರುವದು. ಅದೇ ಪಾಚಕಾಶಯವು. ನಾಭಿಯಮೇಲೆ ಎಡಭಾಗದಲ್ಲಿ ಅಗ್ನ್ಯಾಶಯವಿರುವದು. ಇದರ ಮೇಲ್ಗಡೆ ತಿಲವೆಂಬದಿದೆ. ಇದರ ಕೆಳಗೆ ಪವನಾಶಯವಿದೆ. ಇದರ ಕೆಳಗೆ ಪಕ್ವಾಶಯವಿದೆ. ಅದೇ ಮಲಾಶಯವು. ಅದರ ಕೆಳಗೆ ವಸ್ತಿ ಇದೆ. ಇದನ್ನೇ ಮೂತ್ರಾಶಯವೆನ್ನುವರು."

ಕಲಾ ಸ್ವರೂಪವು:—"ಸ್ನಾಯುಭಿಶ್ಚ ಪ್ರತಿಚ್ಛನ್ನಾನ್ ಸಂತತಾಂಶ್ಚ ಜರಾಯುಣಾ || ಶ್ಲೇಷ್ಮಣಾವೇಷ್ಟಿತಾಂ ಶ್ಚಾಪಿ ಕಲಾ ಭಾಗಾಂಸ್ತು ತಾನ್ ವಿದುಃ || ಧಾತ್ವಾಶಯಾಂತರೇ ಧಾತೋರ್ಯಃ ಕ್ಲೇದಸ್ತ್ವಧಿತಿಷ್ಠತಿ || ದೇಹೋಷ್ಮಣಾಭಿಪಕ್ವಶ್ಚ ಸಾ ಕಲೇತ್ಯಭಿಧೀಯತೇ ||"

"ಸ್ನಾಯುಗಳ ಮೂಲಕವಾಗಿ ಆಚ್ಛಾದಿತವಾಗಿ, ಗರ್ಭಾಶಯದಿಂದ ವ್ಯಾಪ್ತವಾದ ಶ್ಲೇಷ್ಮವೇಷ್ಟಿತ ಶರೀರದ ಭಾಗಕ್ಕೆ 'ಕಲಾ' ಎಂದು ಹೆಸರು. ಧಾತ್ವಾಶಯದ ಮಧ್ಯದಲ್ಲಿ ದೇಹದ ಊಷ್ಮಾದಿಂದ ಪಕ್ವವಾದ ಧಾತುವಿನ ಮಲವೇ ಕಲಾ ಎಂಬುವದು !"

"ತಾಃ ಸಪ್ತ, ಆದ್ಯಾ ಮಾಂಸಧರಾ ಪ್ರೋಕ್ತಾ, ದ್ವಿತೀಯಾ ರಕ್ತಧಾರಿಣೀ ‖ ಮೇದೋಧರಾ ತೃತೀಯಾ ತು ಚತುರ್ಥೀ ಶ್ಲೇಷ್ಮಧಾರಿಣೀ ‖ ಪಂಚಮೀ ತು ಮಲಂ ಧತ್ತೇ ಷಷ್ಠೀ ಪಿತ್ತಧರಾ ಮತಾ ‖ ರೇತೋ ಧರಾ ಸಪ್ತಮೀಸ್ಯಾ ದಿತಿ ಸಪ್ತ ಕಲಾಃ ಸ್ಮೃತಾಃ ‖"

"ಆ ಕಲಾಗಳು ೧ನೇದು ಮಾಂಸಧರಾ, ೨ನೇದು ರಕ್ತಧರಾ, ೩ನೇ ಮೇದೋಧರಾ, ೪ನೇ ಶ್ಲೇಷ್ಮಧರಾ, ೫ನೇ ಮಲಧರಾ, ೬ನೇ ಪಿತ್ತಧರಾ, ೭ನೇ ವೀರ್ಯಧರಾ, ಎಂಬವೇ !"

ಮರ್ಮಗಳು:—"ಸನ್ನಿಪಾತಃ ಶಿರಸ್ನಾಯು ಸಂಧಿ ಮಾಂಸಾಸ್ಥಿ ಸಂಭವಃ ‖ ಮರ್ಮಾಣಿ ತೇಷು ತಿಷ್ಠಂತಿ ಪ್ರಾಣಾಃ ಖಲು ವಿಶೇಷತಃ ‖ ಸಪ್ತೋತ್ತರಶತಂ ಸಂತಿ ದೇಹೇ ಮರ್ಮಾಣಿ ದೇಹಿನಾಮ್ ‖ ತಾನ್ಯೇಕಾದಶಮಾಂಸೇಸ್ಯು ರಷ್ಟಾವಸ್ಥಿಷು ಸಂತಿ ಹಿ ‖ ಸಂಧೀನಾಂ ವಿಂಶತಿಸ್ಥಾನಿ, ಸ್ನಾಯೂನಾಂ ಸಪ್ತವಿಂಶತಿಃ ‖ ಚತ್ವಾರಿಂಶತ್ತಥೈಕಂ ಚ ಶಿರಾ ಮರ್ಮಾಣಿ ತತ್ರತು ‖ ದ್ವಾವಿಂಶತಿಃ ಸಕ್ಥಿಯುಗೇ ತಾವಂತ್ಯೇವ ಭುಜದ್ವಯೇ ‖ ದ್ವಾದಶೋರಸಿ ಕುಕ್ಷೌ ಚ, ಪೃಷ್ಠದೇಶೇ ಚತುರ್ದಶ ‖ ಗ್ರೀವಾಯಾಮೂರ್ಧ್ವಭಾಗೇತು ಸಪ್ತತ್ರಿಂಶಚ್ಛತಾನಿ ಹಿ ‖ ಶರೀರೇ ತಾನಿ ಮರ್ಮಾಣಿ ಪಂಚಧಾ ಚ ಭವಂತಿ ತು ‖ ಸದ್ಯಃ ಪ್ರಾಣಹರಾಣಿ ಸ್ಯುಃ ಮರ್ಮಾಣ್ಯೇಕೋನವಿಂಶತಿಃ ‖ ಮರ್ಮದೇಶಾ ಸ್ತ್ರಯಸ್ತ್ರಿಂಶತ್ ಸ್ಯುಃ ಕಾಲಾಂತರಮಾರಕಾಃ ‖ ಚತ್ವಾರಿಂಶಚ್ಚ ಚತ್ವಾರಿ ವೈಕಲ್ಯಂ ಜನಯಂತಿ ಹಿ ‖ ಮರ್ಮಾಷ್ಟಕಂ ರುಜಾಕಾರಿ ವಿಶಲ್ಯಘ್ನಂತ್ರಿಕಂ ಮತಮ್ ‖"

"ಶಿರಾ, ಸ್ನಾಯು, ಸಂಧಿ, ಮಾಂಸ, ಮತ್ತು ಅಸ್ಥಿಗಳು ಒಂದೇ ಸ್ಥಾನದಲ್ಲಿ ಜೋಡಿಸಲ್ಪಟ್ಟಿರುವವೇ ಮರ್ಮಗಳು; ಇವುಗಳೇ ವಿಶೇಷತಯಾ ಪ್ರಾಣಾಧಾರ ಸ್ಥಾನಗಳು. ಪ್ರಾಣಿಗಳ ಶರೀರದಲ್ಲಿ ೧೦೭ ಮರ್ಮಗಳಿವೆ. ಮಾಂಸದಲ್ಲಿ ೧೧, ಅಸ್ಥಿಗಳಲ್ಲಿ ೮, ಸಂಧಿಗಳಲ್ಲಿ ೨೦, ಸ್ನಾಯುಗಳಲ್ಲಿ ೨೭, ನರಗಳಲ್ಲಿ ೪೧ ಈ ಕ್ರಮದಿಂದ ೧೦೭ ಮರ್ಮಗಳು. ಇವು ಶರೀರದಲ್ಲಿ ಎರಡು ಜಂಘಾಗಳಲ್ಲಿಯೂ ೨೨, ಎರಡು ಭುಜಗಳಲ್ಲಿಯೂ ೨೨, ಹೃದಯ ಮತ್ತು

ಕುಕ್ಷಿಯಲ್ಲಿ ೧೨, ಪೃಷ್ಠಭಾಗದಲ್ಲಿ ೧೪, ಗ್ರೀವಾದ ಮೇಲ್ಗಡೆ ೩೭; ಈ ಮರ್ಮಗಳಲ್ಲಿ ೫ ವಿಧಗಳಿವೆ. ಶೀಘ್ರ ಮರಣವನ್ನುಂಟು ಮಾಡುವವು ೧೯, ಕಾಲಾಂತರದಲ್ಲಿ ಕೊಲ್ಲುವವು ೩೩, ವಿಕಲತೆಯನ್ನುಂಟುಮಾಡುವವು ೪೪, ರೋಗವನ್ನುಂಟುಮಾಡುವವು ೮, ವಿಶಲ್ಯಘ್ನಗಳು ೩ ಈರೀತಿ ಇರುವವು. ''

ಸದ್ಯೋ ಮರಣಕರ ಮರ್ಮಗಳು ೧೯ ರಲ್ಲಿ- ಶೃಂಗಾಟಕ, ಅಧಿಪತಿ, ಶಂಖ, ಕಂಠ, ಶಿರಾ, ಗುದಾ, ಹೃದಯ, ವಸ್ತಿ, ನಾಭಿ ಈ ಮರ್ಮಗಳಲ್ಲಿ ಪೆಟ್ಟು ಬಿಡದರೆ ಶೀಘ್ರ ಮರಣವಾಗುವದಾದ್ದರಿಂದ ಇವುಗಳಲ್ಲಿ ಒಂದೊಂದ ನ್ನಾಗಿ ವಿವರಿಸುವೆವು:—

" ಘ್ರಾಣಶ್ರೋತ್ರಾಕ್ಷಿ ಜಿಹ್ವಾಸಂತರ್ಪಣಾನಾಂ ಶಿರಾಮುಖಾನಾಂ ಶಿರಸೋ ಮಧ್ಯೇ ಸಂಯೋಗಸ್ಥಾನಮ್ । ತಾನಿ ಚತ್ವಾರಿ ಶಿರಾ ಮರ್ಮಾಣಿ ಚತುರಂಗುಲಪರಿಮಾಣಾನಿ ಹತಾನಿ ಘ್ನಂತಿ ಸದ್ಯೋ ಮಾರಕಾಣಿ ಭವಂತಿ ॥ "

" ನಾಸಿಕಾ, ಕರ್ಣ, ನೇತ್ರ, ಜಿಹ್ವಾ ಇವುಗಳನ್ನು ತೃಪ್ತಿಪಡಿಸತಕ್ಕ ನಾಡಿಗಳ ಶಿರಸ್ಸಿನ ಮಧ್ಯಭಾಗ (ನೆತ್ತಿ) ದಲ್ಲಿ ಸಂಯೋಗಸ್ಥಾನವಿದೆ. ಅದರಲ್ಲಿ ನಾಲ್ಕು ಅಂಗುಲ ಪ್ರಮಾಣ ನಾಲ್ಕು ನಾಡಿಗಳ ಮರ್ಮಗಳಿಗೆ ಶೃಂಗಾಟಕವೆಂದೆನ್ನುವರು; ಅದು ಶೀಘ್ರವಾಗಿ ಮರಣಕರವಾದದ್ದು. ''

" ಅಧಿಪತಿರ್ಮಸ್ತಕಸ್ಯಾಭ್ಯಂತರೆ ಸಂಧಿಶಿರಸೋಃ ಸನ್ನಿಪಾತಃ ಉಪರಿಷ್ಟಾತ್ ರೋಮಾವರ್ತಃ, ಸ ಏಕಃ ಸಂಧಿ ಮರ್ಮೇದಮ ರ್ಧಾಂಗುಲ ಪ್ರಮಾಣಂ ಸದ್ಯೋ ಮಾರಕಮ್ ॥ "

" ಮಸ್ತಕದ ಒಳಗಿನ ನಾಡಿಗಳ ಸಂಧಿಯು ಮೇಲ್ಭಾಗದಲ್ಲಿ ರೋಮಾವರ್ತ (ಸುಳಿ) ಇದೆ. ಅದು ಅರ್ಧ ಅಂಗುಲದ ಸಂಧಿಮರ್ಮಕ್ಕೆ ಅಧಿಪತಿಯೆಂದು ಹೆಸರು. ಇದಕ್ಕೆ ಪೆಟ್ಟುಬಿದ್ದರೆ ಶೀಘ್ರವಾಗಿ ಪ್ರಾಣವು ಹೋಗುವದು. ''

" ಶಂಖಾ ಭ್ರುವೋರಧೋಪರಿ ಕರ್ಣಲಲಾಟಮಧ್ಯೇ ತಾವಾಸ್ತಿ ಅಸ್ಥಿ ಮರ್ಮಣೀ ಸಾರ್ಧಾಂಗುಲೇ ಮಾರಕೇ ॥ "

" ಹುಬ್ಬುಗಳೆರಡರ ಅಂತದ ಮೇಲ್ಗಡೆ ಕಿವಿ ಮತ್ತು ತಲೆಗಳಮೇಲೆ ೧॥ ಅಂಗುಲದ ಎರಡು ಅಸ್ಥಿ ಮರ್ಮವಿವೆ. ಅವುಗಳಿಗೆ ಪೆಟ್ಟು ತಗಲಿದರೆ ಸದ್ಯೋಮರಣವು. ''

" ಕಂಠ ಶಿರಾ ಮಾತೃಕಾಃ ಗ್ರೀವಾಯಾಮುಭಯಪಾರ್ಶ್ವಯೋ ಶ್ಚತಸ್ರಃ ಶಿರಾಸ್ತಾ ಅಷ್ಟಾ ಶಿರಾಮರ್ಮಾಣಿ ಚತುರಂಗುಲಾನಿ ಸದ್ಯೋ ಮಾರಕಾಣಿ ॥ "

"ಕಂಠದ ೨ ಪಾರ್ಶ್ವದಲ್ಲಿಯೂ ೪-೪ ನಾಡಿಗಳ ಕಂಠಶಿರಾ ಅಥವಾ ಶಿರಾಮಾತೃಕವೆಂದೆನ್ನುವರು. ೪ ಅಂಗುಲ ಪ್ರಮಾಣ ಈ ೮ ಶಿರಾ ಮರ್ಮವಿದೆ. ಇವುಗಳಲ್ಲಿ ಪೆಟ್ಟು ತಗಲಿದರೆ ಶೀಘ್ರವಾಗಿ ಮರಣವು."

"ಗುದಂ ಪ್ರಸಿದ್ಧಂ। ವಾತವರ್ಚೋ ನಿರಸನಂ, ಸ್ಥೂಲಾಂತ್ರ ಪ್ರತಿಬದ್ಧಂ ಗುದಂ ನಾಮ। ಏಕಂ ಮಾಂಸ ಮರ್ಮಚತುರಂಗಲಂ ಸದ್ಯೋ ಮಾರಕಮ್ ॥"

"ವಾಯು ಮತ್ತು ಮಲ ಹೊರಡತಕ್ಕ ದಪ್ಪನೇ ಕರುಳಿನಿಂದ ಬಂಧಿಸಲ್ಪಟ್ಟಿರುವ ಗುದವು ಪ್ರಸಿದ್ಧವಾದದ್ದು; ಅಲ್ಲಿ ೪ ಅಂಗುಲ ಪ್ರಮಾಣ ಮಾಂಸದ ಒಂದು ಮರ್ಮವಿದೆ. ಇದಕ್ಕೆ ಪೆಟ್ಟು ತಗಲಿದರೆ ಶೀಘ್ರವಾಗಿಯೇ ಮೃತ್ಯುವು!!"

"ಸ್ತನಯೋರ್ಮಧ್ಯಮಧಿಷ್ಠಾಯೋರಸ್ಯಾಮಾಶಯದ್ವಾರಂ, ಸತ್ವರಜಸ್ತಮ ಸಮಧಿಷ್ಠಾನಮ್। ಹೃದಯಂ ನಾಮ, ಶಿರಾಮರ್ಮಚತುರಂಗುಲಂ ಸದ್ಯೋ ಮಾರಕಮ್ ॥"

"ಎರಡು ಸ್ತನಗಳ ಮಧ್ಯೆ ಆಮಾಶಯದ ದ್ವಾರವಾದ, ಸತ್ವರಜಸ್ತಮೋ ಗುಣದ ಸ್ಥಾನವಾದ ಹೃದಯವಿದೆ. ಅಲ್ಲಿ ೪ ಅಂಗುಲದ ಪ್ರಮಾಣದಲ್ಲಿ ಪೆಟ್ಟುಬಿದ್ದರೆ ಶೀಘ್ರವಾಗಿ ಮರಣವನ್ನುಂಟುಮಾಡುವ ಶಿರಾಮರ್ಮವು!!"

"ವಸ್ತಿರ್ನಾಭಿಃ ಪೃಷ್ಠ ಕಟೀಗುದ ವಂಕ್ಷಣ ಶೇಫಸಾಮ್।
ಮಧ್ಯೇ ವಸ್ತಿ ತನು ತ್ವಕ್ಕ। ಏಕದ್ವಾರೋಹ್ಯಧೋಮುಖಃ।
ಸ್ನಾಯು ಮರ್ಮೇದಂ ಚತುರಂಗುಲಂ ಸದ್ಯೋ ಮಾರಕಮ್॥"

"ನಾಭಿ, ಪೃಷ್ಠ, ಕಟಿ, ಗುದ, ವಂಕ್ಷಣ ಮತ್ತು ಲಿಂಗಗಳ ಮಧ್ಯದಲ್ಲಿ ಸೂಕ್ಷ್ಮಚರ್ಮವುಳ್ಳ ಒಂದೇ ದ್ವಾರವುಳ್ಳ ಅಧೋಮುಖವುಳ್ಳ ವಸ್ತಿ (ಕಿಬ್ಬೊಟ್ಟೆ) ಎಂಬದಿದೆ. ಇದು ನಾಲ್ಕು ಅಂಗುಲದ ಪ್ರಮಾಣದ ಪೆಟ್ಟು ತಗಲಿದರೆ ಶೀಘ್ರವಾಗಿ ಮರಣವು!!"

"ನಾಭಿಃ ಪ್ರಸಿದ್ಧಾ, ಪಕ್ವಾಮಾಶಯಯೋರ್ಮಧ್ಯೇ ಶಿರಾ ಪ್ರಭಾವಾ ನಾಭಿರ್ನಾಮ ಶಿರಾ ಮರ್ಮೇದಂ ಚತುರಂಗುಲಂ ಸದ್ಯೋ ಮಾರಕಮ್ ॥"

"ಪಕ್ವಾಶಯ ಮತ್ತು ಆಮಾಶಯದ ಮಧ್ಯದಲ್ಲಿ ಶಿರಾಗಳಿಂದ ಉತ್ಪನ್ನವಾದ ನಾಭಿ (ಹೊಕ್ಕಳು) ಎಂದು ಪ್ರಸಿದ್ಧವಾದ ಮರ್ಮಸ್ಥಾನವು. ಇಲ್ಲಿ ೪ ಅಂಗುಲ ಪ್ರಮಾಣದ ಪೆಟ್ಟು ಬಿದ್ದರೆ ಸದ್ಯೋಮರಣವು."—ಇತ್ಯಾದಿ ಮರ್ಮಸ್ಥಾನಗಳ ವಿವರಣೆಯನ್ನು ವೈದ್ಯಶಾಸ್ತ್ರಗಳಿಂದ ತಿಳಿಯತಕ್ಕದ್ದು.

ಸಂಧಿಗಳು:—“ತೇ ದ್ವಿವಿಧಾಃ, ಚೇಷ್ಟಾವಂತಃ ಸ್ಥಿರಾಶ್ಚ || ಶಾಖಾಸು ಹನ್ವೋಃ ಕಟ್ಯಾಂ ಚ ಚೇಷ್ಟಾವಂತೋ ಭವಂತಿ ಹಿ || ಶೇಷಾಸ್ತು ಸಂಧಯಸ್ಸರ್ವೇ ಸ್ಥಿರಾ ಸ್ತುಜ್ಞೈರುದಾಹೃತಾಃ || ಕಥಿತಾ ದೇಹಿನಾಂ ದೇಹೇ ಸಂಧಯೋ ದ್ವಿಶತೇ ದಶ || ಶಾಖಾಸು ತೇಽಷ್ಟಷಷ್ಟಿಶ್ಚ ಕೋಷ್ಠೇತ್ವೇಕೋನ ಷಷ್ಟಿಕಾಃ || ಗ್ರೀವಾಯಾ ಮೂರ್ಧ್ವದೇಶೇ ತು ತ್ರ್ಯಶೀತಿಸ್ತೇ ಪ್ರಕೀರ್ತಿತಾಃ || ”

ಸಂಧಿಗಳು:—“ ಚಲಾಯಮಾನಗಳು, ನಿಶ್ಚಲಗಳೆಂಬೆರಡು ವಿಧಗಳು. ಕೈ, ಕಾಲು, ಹನುಸ್ಥಳಗಳು, ಕಟಿ ಇವುಗಳಲ್ಲಿರುವವು ಚೇಷ್ಟಾಯುಕ್ತಗಳು. ಅಂದರೆ ಚಲಿಸತಕ್ಕವುಗಳು; ಉಳಿದವುಗಳೆಲ್ಲವೂ ಸ್ಥಿರವಾದವುಗಳೇ ಆಗಿವೆ. ಈ ದೇಹದಲ್ಲಿ ಒಟ್ಟು ೨೧೦ ಸಂಧಿಸ್ಥಾನಗಳಿವೆ. ಕೈಕಾಲುಗಳಲ್ಲಿ ೬೮, ಕೋಷ್ಠದಲ್ಲಿ ೫೯, ಗ್ರೀವಾ ಮತ್ತು ಅದರ ಮೇಲ್ಭಾಗದಲ್ಲಿ ೮೩ ಇವೆ. ”

ಶಿರಾಗಳು:—“ಸಂಧಿಬಂಧನ ಕಾರಿಣ್ಯೋ ದೋಷಧಾತುವಹಾಃ ಶಿರಾಃ || ನಾಭ್ಯಾಂ ಸರ್ವಾನಿ ಬದ್ಧಾಸ್ತಾಃ ಪ್ರತನ್ವಂತಿ ಸಮಂತತಃ || ಶರೀರಂ ಸಕಲಂ ಚೈತಚ್ಛಿರಾಭಿಃ ಪೋಷ್ಯತೇ ಸದಾ || ಪ್ರಣಾಲೀಭಿ ರಿವಾರಾಮಾಃ ಕುಲ್ಯಾಭಿಃ ಕ್ಷೇತ್ರ ಧಾನ್ಯವತ್ ||”

“ಸಂಧಿಗಳನ್ನು ಬಂಧನಮಾಡತಕ್ಕಂಥಾ ಮತ್ತು ವಾತಪಿತ್ತಾದಿ ದೋಷಗಳನ್ನೂ, ರಸರಕ್ತಾದಿ ಧಾತುಗಳನ್ನೂ ಸ್ಥಳಾಂತರಕ್ಕೆ ಪೊಯ್ಯತಕ್ಕಂಥಾವುಗಳೇ ಶಿರಾಗಳು. ಸಂಪೂರ್ಣ ಶರೀರದಲ್ಲಿರುವ ಎಲ್ಲಾ ಶಿರಾಗಳೂ ನಾಭಿಸ್ಥಾನದಲ್ಲಿ ಬಂಧಿಸಲ್ಪಟ್ಟಿರುವವುಗಳಾಗಿ ಶರೀರದ ಎಲ್ಲಾ ಕಡೆಗೂ ಅಲ್ಲಿಂದಲೇ ವಿಸ್ತರಿಸುತ್ತಾ ಇವೆ. ಸಣ್ಣ ಸಣ್ಣ ನೀರಿನ ಕಾಲ್ವೆಗಳಿಂದ ತೋಟಗಳೂ, ಮೇಲಿನ ಕೆರೆಯಿಂದ ನೀರುಹಾಯಿಸಲು ಮಾಡಿರುವ ಅಲ್ಪವಾದ ಕಾಲುವೆಗಳ ಸಮೂಹದಿಂದ ಭತ್ತದ ಗದ್ದೆಗಳೂ ಪುಷ್ಟಿಯಾಗುತ್ತಾ ಇರುವಂತೆ ಈ ಶಿರಾಗಳ ಸಮೃದ್ಧಿಯಿಂದ ಶರೀರವು ಸದಾ ಪುಷ್ಟಿಯನ್ನು ಪಡಿಯುತ್ತಾ ಇದೆ. ”

“ ಪ್ರಸಾರಣಾಽಽಕುಂಚನಾದಿ ಕ್ರಿಯಾಭಿಃ ಸಂತತಂ ತನಾ || ಶಿರಾವಿವೋಪಕುರ್ವಂತಿ ತಾಃ ಸ್ಯುಃ ಸ್ಸಪ್ತಶತಾನಿತು || ಯಥಾ ದ್ರುಮದಲೇ ಸಾಕ್ಷಾತ್ ದೃಶ್ಯಂತೇ ಪ್ರತತಾ ಶಿರಾಃ || ತಥೈವ ದೇಹಿನೋ ದೇಹೇ ವರ್ತಂತೇ ಸಕಲಾ ಶಿರಾಃ || ನಾಭಿಸ್ಥಾಃ ಪ್ರಾಣಿನಾಂ ಪ್ರಾಣಾಃ ಪ್ರಾಣಾನ್ನಾಭಿರುಪಾಶ್ರಿತಾ || ಶಿರಾಭಿರಾವೃತಾ ನಾಭಿ ಶ್ಚಕ್ರನಾಭಿರಿವಾರಕೈಃ || ತದ್ಯಥಾ || ತಾಸಾಂ ಖಲು ಮೂಲ ಶಿರಾಶ್ಚತ್ವಾರಿಂಶತ್ | ತಾಸಾಂ ದಶ ವಾತವಹಾಃ, ದಶ

ಪಿತ್ತವಹಾಃ, ದಶ ಶ್ಲೇಷ್ಮವಹಾಃ, ದಶ ರಕ್ತವಹಾಃ । ತಾಸಾಂ ಖಲು ವಾತವಹಾನಾಂ ವಾತಸ್ಥಾನಗತಾನಾಂ ಸ ಪಂಚಸಪ್ತತಿ ಶತಾನಿ ಭವಂತಿ । ತಾವಂತ್ಯ ಏವ ಪಿತ್ತವಹಾಃ । ಪಿತ್ತ ಸ್ಥಾನ ಗತಾಃ । ಶ್ಲೇಷ್ಮವಹಾಸ್ತಾಃ ಶ್ಲೇಷ್ಮ ಸ್ಥಾನಗತಾಃ । ರಕ್ತವಹಾ ಯಕೃತ್ಪ್ಲೀಹಗತಾಃ । ಏವಂ ಶಿರಾ ಸಪ್ತಶತಾನಿ ಭವಂತಿ ॥ ”

“ ಉಬ್ಬುವಿಕೆ ಮತ್ತು ಮುದುರಿಕೊಳ್ಳುವಿಕೆ ಮುಂತಾದ ಕ್ರಿಯೆಗಳಿಂದ ಶಿರಾಗಳು ಶರೀರಕ್ಕೆ ತುಂಬಾ ಉಪಕಾರ ಮಾಡುತ್ತಾ ಇವೆ. ಶರೀರದಲ್ಲಿ ಒಟ್ಟು ೭೦೦ ಶಿರಾಗಳಿರುವವು. ವೃಕ್ಷದ ಎಲೆಯನ್ನು ನೋಡಿದರೆ ಅದರಲ್ಲಿ ಹಬ್ಬಿರತಕ್ಕ ನಾರುಗಳು ಸಾಕ್ಷಾತ್ ಕಂಡುಬರುತ್ತಾ ಇವೆಯಷ್ಟೆ? ಇದೇರೀತಿಯಲ್ಲಿ ಮನುಷ್ಯನ ಶರೀರದಲ್ಲಿ ಶಿರಾಗಳು ಸರ್ವತ್ರ ವ್ಯಾಪಿಸಿವೆ. ಜೀವಗಳ ಪ್ರಾಣವು ನಾಭಿಯಲ್ಲಿ ಸ್ಥಿತವಾಗಿದೆ. ಆ ಪ್ರಾಣಗಳ ಆಶ್ರಯಿಭೂತವಾದ ನಾಭಿಯೂ ಶಿರಾಗಳಿಂದ ಆವರಿಸಲ್ಪಟ್ಟಿದೆ. ಚಕ್ರದ ಗುಂಬವೆಂಬ ಕೇಂದ್ರಗತಗಳಾದ ಹಾರೇಕೋಲು (ಅರಾ) ಗಳು ಸರ್ವತ್ರ ಚಕ್ರದಲ್ಲಿ ಹಬ್ಬಿರುವಂತೆ ನಾಭಿಯೆಂಬ ಕೇಂದ್ರವನ್ನು ಈ ಶಿರಾಗಳು ಆಶ್ರಯಿಸಿಕೊಂಡಿವೆ. ಇವುಗಳಲ್ಲಿ ಮುಖ್ಯವಾದ ದೊಡ್ಡ ಶಿರಾಗಳು ೪೦ ಮಾತ್ರವಿವೆ. ಇವುಗಳಲ್ಲಿ ೧೦ ವಾತವಾಹಿಗಳು, ೧೦ ಪಿತ್ತವಾಹಿಗಳು, ೧೦ ಶ್ಲೇಷ್ಮವಾಹಿಗಳು, ೧೦ ರುಧಿರವಾಹಿಗಳು, ವಾತಸ್ಥಾನದಲ್ಲಿ ವಾತವನ್ನು ತೆಗದುಕೊಂಡು ಹೋಗತಕ್ಕ ಸಣ್ಣ ಶಿರಾಗಳು ಸೇರಿ ೧೭೫, ಪಿತ್ತಕ್ಕೂ ೧೭೫, ಶ್ಲೇಷ್ಮಕ್ಕೂ ೧೭೫, ರುಧಿರವಾಹಿಗಳು ೧೭೫. ಅಂತೂ ಒಟ್ಟು ೭೦೦ ಶಿರಾಗಳು ಸಂಪೂರ್ಣ ಶರೀರವನ್ನಾವರಿಸಿಕೊಂಡಿವೆ. ”

ಸ್ನಾಯುಗಳು:—“ ಮೇದಸಃ ಸ್ನೇಹಮಾದಾಯ ಶಿರಾ ಸ್ನಾಯುತ್ವಮಾಪ್ನುಯಾತ್ ॥ ಶಿರಾಣಾಂ ಹಿ ಮೃದುಃ ಪಾಕಃ, ಸ್ನಾಯೂನಾಂ ತು ತತಃ ಖರಃ ॥ ಸ್ನಾಯವೋ ಬಂಧನಾನಿ ಸ್ಯುಃ ದೇಹ ಮಾಂಸಾ ಸ್ಥಿಮೇದಸಾಮ್ ॥ ಸಂಧೀನಾಮಪಿಯತ್ತಾಸ್ತು ಶಿರಾಭ್ಯಾಃ ಸುದೃಢಾಃ ಸ್ಮೃತಾಃ ॥ ನಾವೆಯಥಾ ಫಲಕಾಸ್ತೀರ್ಣಾ ಬಂಧನೈರ್ಬಹುಭಿರ್ಯುತಾ ॥ ನಿಯುಕ್ತಾZ ಗಾಧ ಸಲಿಲೇ ಭವೇದ್ಭಾರಸಹಾ ಭೃಶಮ್ ॥ ಏವಮೇವ ಶರೀರೇZ ಸ್ಮಿನ್ ಯಾವಂತಸ್ಸಂಧಯಃ ಸ್ಮೃತಾಃ ॥ ಸ್ನಾಯುಭಿರ್ಬಹುಭಿರ್ಬದ್ಧಾಃ ತೇನ ಭಾರಸಹಾ ನರಾಃ ॥ ಶತಾನಿ ನವ ಜಾಯಂತೇ ಶರೀರೇ ಸ್ನಾಯವೋ ನೃಣಾಮ್ ॥ ತಾಸಾಂ ವಿವರಣಂ ಭೂಯಃ ಶಿಷ್ಯಾಃ ಶೃಣುತ ಯತ್ನತಃ ॥ ಶಾಖಾಸು ಷಟ್ ಶತಾ

ನಿಸ್ಯ ಕೋಷ್ಠೇ ತ್ರಿಂಶಚ್ಛತದ್ವಯಮ್ ॥ ಗ್ರೀವಾಯಾ ಮೂರ್ಧ್ವದೇಶೇತು ಸ್ನಾಯೂನಾಂ ಸಪ್ತತಿಃ ಸ್ಮೃತಾಃ ॥ ,

" ಶಿರಾಗಳು ಮೇದಸ್ಸಿನ ಸ್ನೇಹವನ್ನು ಶೇರಿಸಿಕೊಂಡಿರುವವು ಸ್ನಾಯುಗಳೆಂದೆನ್ನಲ್ಪಡುವವು. ಶಿರಾಗಳ ಪಾಕವು ಮೃದುವಾದದ್ದು; ಸ್ನಾಯುಗಳ ಪಾಕವು ಸಿರಾಗಳಿಗಿಂತಲೂ ಕಠೋರವಾಗಿರುವದು. ಸ್ನಾಯುಗಳ ಮೂಲಕ ಶರೀರದ ಮಾಂಸ, ಅಸ್ಥಿ, ಮೇದಸ್ಸುಗಳು ಸಂಧಿಬಂಧನ ಮಾಡಲ್ಪಟ್ಟಿರುವವು. ಈ ಕಾರಣದಿಂದ ಈ ಸ್ನಾಯುಗಳು ಶಿರಾಗಳಿಗಿಂತಲೂ ದೃಢವಾಗಿರುವವು. ಯಾವರೀತಿಯಲ್ಲಿ ಹಡಗು ಮರದ ಹಲಗೆಗಳ ತುಂಡುಗಳಿಂದ ವ್ಯಾಪ್ತವಾಗಿ ಬಹು ಬಂಧನಗಳಿಂದ ಯುಕ್ತವಾಗಿರುವದೋ ಮತ್ತು ಅಗಾಧವಾದ ಸಮುದ್ರದ ನೀರಿನಲ್ಲಿ ಬಿಡಲ್ಪಟ್ಟು ಬಹು ಭಾರವಾದ ಸಾಮಾನುಗಳನ್ನು ಹೊರುತ್ತಾ ಸಂಚರಿಸುವದೋ ಹಾಗೆಯೇ ಈ ಶರೀರದಲ್ಲಿರುವ ಎಲ್ಲಾ ಸಂಧಿಗಳೂ ಈ ಸ್ನಾಯುಗಳಿಂದ ಬಿಗಿಯಲ್ಪಟ್ಟಿರುವದರಿಂದ ಮನುಷ್ಯನು ಭಾರವನ್ನು ಸಹಾ ಹೊತ್ತುಕೊಂಡು ಸಂಚರಿಸ ಸಮರ್ಥನಾಗುತ್ತಾನೆ. ಮನುಷ್ಯನ ಶರೀರದಲ್ಲಿ ಸ್ನಾಯುಗಳು ೯೦೦ ಇವೆ. ಇವುಗಳಲ್ಲಿ ಕೈಕಾಲುಗಳಲ್ಲಿ ೬೦೦, ಕೋಷ್ಠಗಳಲ್ಲಿ ೨೩೦, ಕಂಠದಿಂದ ಮೇಲಕ್ಕೆ ೭೦, ಈರೀತಿಯಾಗಿ ಇರುವವು. "

**ಧಮನೀಗಳು:—**"ಧಮನ್ಯೋ ನಾಭಿತೋ ಜಾತಾಃ ಚತುರ್ವಿಂಶತಿ ಸಂಖ್ಯಯಾ ॥ ದಶೋರ್ಧ್ವಗಾ ದಶಾಽಧೋಗಾಃ ಶೇಷಾಸ್ತಿರ್ಯಗ್ಗತಾಃ ಸ್ಮೃತಾಃ ॥ "

" ನಾಭಿಯಿಂದ ಹುಟ್ಟಿರುವ ೨೪ ಧಮನೀಗಳಿರುವವು. ಅವುಗಳಲ್ಲಿ ೧೦ ಮೇಲಿನ ಶರೀರಕ್ಕೆ ಏರುವವು; ೧೦ ಕೆಳಗಿನ ಶರೀರದಲ್ಲಿ ಇಳಿದಿರುವವು, ಉಳಿದವು ನಾಭಿಯ ಸುತ್ತುಮುತ್ತೂ ವ್ಯಾಪಿಸಿರುವವು. "

**ಕಂಡರಾಗಳು:—**"ಮಹತ್ಯಃ ಸ್ನಾಯವಃ ಪ್ರೋಕ್ತಾಃ ಕಂಡರಾಸ್ತಾಸ್ತು ಷೋಡಶ ॥ ಪ್ರಸಾರಣಾಽಽಕುಂಚನಯೋ ದೃಷ್ಟಂ ತಾಸಾಂ ಪ್ರಯೋಜನಮ್ ॥ ಚತಸ್ರೋ ಹಸ್ತಯೋ ಸ್ತಾಸಾಂ ತಾವಂತ್ಯಃ ಪಾದಯೋಃ ಸ್ಮೃತಾಃ ॥ ಗ್ರೀವಾಯಾಮಪಿ ತಾವಂತ್ಯಃ ತಾವಂತ್ಯಃ ಪೃಷ್ಠ ಸಂಗತಾಃ ॥ ತತ್ರ ಪಾದ ಹಸ್ತಗತಾನಾಂ ಕಂಡರಾಣಾಂ ನಖಾಃ ಪ್ರರೋಹಾಃ । ಗ್ರೀವಾನಿ ಬಂಧನಾನಾಮಧೋಭಾಗ ಗತಾನಾಂ ಪ್ರರೋಹೋ ಮೇಢ್ರಃ ಪೃಷ್ಠನಿಬಂಧಾನಾಂ ಪ್ರರೋಹೋ ನಿತಂಬ ಮೂರ್ಧ್ವೋರು ವಕ್ಷೋಽಕ್ಷಿ ಸ್ತನಪಿಂಡಾಃ ॥ "

"ಬಹು ದೊಡ್ಡ ಸ್ನಾಯುಗಳಿಗೆ ಕಂಡರಾಗಳೆಂದು ಹೆಸರು; ನಮ್ಮ ಶರೀರದಲ್ಲಿ ಅವು ೧೬ ಇವೆ. ಅವುಗಳ ಪ್ರಯೋಜನವು ಹಿಗ್ಗುವಿಕೆ ಮತ್ತು ಮುದುರಿಕೊಳ್ಳುವ ಗುಣದಿಂದ ಶರೀರವನ್ನಾವರಿಸಿವೆ. ಇವುಗಳಲ್ಲಿ ೨ ಕೈಗಳಲ್ಲಿಯೂ, ಎರಡು ಕಾಲುಗಳಲ್ಲಿಯೂ, ಗ್ರೀವಾ (ಕಂಠ) ದಲ್ಲಿಯೂ, ಬೆನ್ನಿನಲ್ಲಿಯೂ ೪-೪ ರಂತೆ ಇರುವವು. ಅವುಗಳಲ್ಲಿ ಕೈಕಾಲುಗಳಲ್ಲಿರತಕ್ಕ ಕಂಡರಾಗಳಿಂದ ಉಗುರುಗಳು ಹುಟ್ಟಿವೆ. ಗ್ರೀವಾದಲ್ಲಿರುವದು ಕೆಳಭಾಗಕ್ಕೆ ಹೋಗಿರುವ ಕಂಡರಾದಿಂದ ಲಿಂಗವುತ್ಪನ್ನವಾಗುತ್ತದೆ. ಪೃಷ್ಠಭಾಗದಲ್ಲಿರುವ ಕಂಡರಾದಿಂದ—ನಿತಂಬ, ತಲೆ, ಎದೆ, ವಕ್ಷಃಸ್ಥಲ, ನೇತ್ರ, ಸ್ತನಪಿಂಡ ಇವು ಉತ್ಪನ್ನವಾಗುವವು."

ರಂಧ್ರಗಳು:—"ನೇತ್ರಶ್ರವಣನಾಸಾನಾಂ ದ್ವೇ ದ್ವೇ ರಂದ್ರೇ ಪ್ರಕೀರ್ತಿತೇ ॥ ಮುಖ ಮೇಹನ ಪಾಯೂನಾಂ ಏಕೈಕಂ ರಂಧ್ರಮುಚ್ಯತೇ ॥ ದಶಮಂ ಮಸ್ತಕೇ ಪ್ರೋಕ್ತಂ ರಂಧ್ರಾಣೀತಿ ನೃಣಾಂ ವಿದುಃ ॥ ಸ್ತ್ರೀಣಾ ಮನ್ಯಾನಿ ಚ ತ್ರೀಣಿ ಸ್ತನಯೋ ರ್ಗರ್ಭವರ್ತ್ಮನಿ ॥"

"ನೇತ್ರ, ಶ್ರವಣ, ನಾಸಿಕಾಗಳಲ್ಲಿ ೨-೨ ರಂಧ್ರಗಳೂ, ಮುಖ, ಲಿಂಗ, ಗುದಸ್ಥಾನಗಳಲ್ಲಿ ಒಂದೊಂದು ರಂಧ್ರವೂ ಇರುವದು. ಒಂದು ನೆತ್ತಿಯಲ್ಲಿದೆ; ಈಪ್ರಕಾರ ಪುರುಷರಿಗೆ ೧೦ ರಂಧ್ರಗಳಿವೆ. ಪರಂತು ಸ್ತ್ರೀಯರಿಗೆ ಇನ್ನು ಮೂರು ರಂಧ್ರಗಳು ಹೆಚ್ಚಾಗಿವೆ; ಸ್ತನಗಳಲ್ಲಿ ೨, ಗರ್ಭಾಶಯದಲ್ಲಿ ೧, ಈರೀತಿ ತಿಳಿಯತಕ್ಕದ್ದು."

ಸ್ರೋತೋ ಮಾರ್ಗಗಳು:—"ಮನಃ ಪ್ರಾಣಾನ್ನಪಾನೀಯ ದೋಷ ಧಾತೂಪಧಾತವಃ ॥ ಧಾತೂನಾಂ ಚ ಮಲಾಮೂತ್ರಂ ಮಲ ಮಿತ್ಯಾದಯಸ್ತಥಾ ॥ ಸಂಚರಂತಿ ಹಿ ಯೈರ್ಮಾರ್ಗೈಃ, ತಾನಿ ಸ್ರೋತಾಂಸಿ ಸಂಜಗುಃ ॥ ಬಹೂನಿ ತಾನಿ ಸಂಖ್ಯಾಯ ಶಕ್ಯಂ ತೇನೈವ ಭಾಷಿತುಮ್ ॥"

"ಮನಸ್ಸು, ಪ್ರಾಣ, ಅನ್ನ, ಜಲ, ಕಫ ಪಿತ್ತವಾಯುಗಳೆಂಬ ದೋಷಗಳು, ಧಾತುಗಳು, ಉಪಧಾತುಗಳು, ಧಾತುಗಳ ಮಲ, ಮೂತ್ರ, ವಿಷ್ಟಾ ಇತ್ಯಾದಿಗಳು ಶರೀರದಲ್ಲಿ ಯಾವ ಮಾರ್ಗದಲ್ಲಿ ಸಂಚರಿಸುತ್ತಿರುವವೋ ಇವೇ ಸ್ರೋತೋಮಾರ್ಗಗಳು. ಇವು ಅಸಂಖ್ಯಾತಗಳಾಗಿರುವದರಿಂದ ಸಂಖ್ಯೆಯಿಂದ ಗಣಿಸಲಾಗುವದಿಲ್ಲ."

ಜಾಲಾಗಳು:—"ನಿರಂತರ ರಂಧ್ರನಿಕರ ಕಲಿತಾನಿ ಸಮಾಹಿತಾನಿ ಚ ಜಾಲಾನೀವ ಜಾಲಾನಿ ॥ ಜಾಲಾನಿತು - ಶಿರಾಸ್ನಾಯು

ಮಾಂಸಾಸ್ಥ್ಯುದ್ಭವಂತಿ ಹಿ || ತಾನಿ ಚತ್ವಾರಿಚತ್ವಾರಿ ಸರ್ವಾಣ್ಯೇವ ಚ ಷೋಡಶ || ತಾನಿ ಮಣಿ ಬಂಧ ಗುದಸಂಸ್ಥಿತಾನಿ ಪರಸ್ಪರಾನಿ ಬದ್ಧಾನಿ, ಪರಸ್ಪರ ಸಂಶ್ಲಿಷ್ಟಾನಿ ಪರಸ್ಪರ ಗವಾಕ್ಷಿತಾನಿ ಚೇತಿಯೈರ್ಗವಾಕ್ಷಿತ ಮಿದಂ ಶರೀರಮ್ || ಅಯಮರ್ಥಃ || ಏಕಸ್ಮಿನ್ ಮಣಿಬಂಧೇ | ಏಕಂ ಜಾಲಂ ಶಿರಾಯಾಃ | ಅಪರಂಸ್ನಾಯೋಃ ತೃತೀಯಂ ಮಾಂಸಸ್ಯ ಚತುರ್ಥಮಸ್ಥ್ನಃ, ಏವಂ ಚತ್ವಾರಿಜಾಲಾನಿ ಏತೇನೇತರ ಮಣಿಬಂಧಾ ಗುಲ್ಫಾ ಚ ವ್ಯಾಖ್ಯಾತಾ || (ಗವಾಕ್ಷಿತಂ ವಿರಚಿತಂ ನಿರಂತರಜಾಲಾಕಾರರಂಧ್ರನಿಕರ ಪರಿಕಲ್ಪಿತ ಮಿತ್ಯರ್ಥಃ) || ”

“ಬಲೆಯಂತೆ ತುಂಬಿವೂ ಅವಕಾಶವಿಲ್ಲದಂತೆ ಛಿದ್ರಯುಕ್ತವಾದ ಮತ್ತು ಪರಸ್ಪರ ಸೇರಿರುವ ಜಾಲಗಳು ಈ ಶರೀರದಲ್ಲಿ ಕೆಲವಿರುವವು. ಶಿರಾ, ಸ್ನಾಯು, ಮಾಂಸ, ಅಸ್ಥಿಗಳಿಂದ ೪-೪ ಜಾಲಗಳುಂಟಾಗಿವೆ. ಒಟ್ಟು ೧೬ ಇವೆ. ಅವು ಮಣಿಬಂಧ, ಗುಲ್ಫಗಳಲ್ಲಿರುತ್ತಾ ಪರಸ್ಪರ-ಬಂಧಿಸಲ್ಪಟ್ಟು, ಕೂಡಲ್ಪಟ್ಟು, ಛಿದ್ರಮಯಗಳಾಗಿವೆ. ಇವುಗಳಿಂದ ಶರೀರವು ಛಿದ್ರಮಯವಾಗಿದೆ.”

**ಕೂರ್ಚಗಳು:**—“ಕೂರ್ಚಾ ತು ಹಸ್ತಯೋಃ ದ್ವೌ ತು, ತಾವಂತಾ ಪಾದಯೋರಪಿ || ಗ್ರೀವಾಯಾಮೇಕ ಏವ ಸ್ಯಾ ಮೇಢ್ರೇ ಸರ್ವೇಽಪಿ ಷಟ್ ಸ್ಮೃತಾಃ || ಕೂರ್ಚಾ ಅಪಿ ಶಿರಾಸ್ನಾಯುಮಾಂಸಾಸ್ಥಿ ಪ್ರಭವಾಃ ಸ್ಮೃತಾಃ || ”

“ಕೂರ್ಚಗಳು ಎರಡು ಕೈಗಳಲ್ಲಿಯೂ ೨, ಎರಡು ಕಾಲುಗಳಲ್ಲಿ ೨, ಲಿಂಗದಲ್ಲಿ ೧ ಈಪ್ರಕಾರ ಎಲ್ಲಾ ೬ ಕೂರ್ಚಗಳಿವೆ. ಈ ಕೂರ್ಚಗಳು—ಶಿರಾ, ಸ್ನಾಯು, ಮಾಂಸ, ಎಲುಬುಗಳಿಂದ ಉತ್ಪನ್ನವಾಗಿರುವವು.”

**ರಜ್ಜುಗಳು:**—ಪೃಷ್ಠವಂಶಸ್ಯೋಭಯತ್ರ ಮಹತ್ಯೋಮಾಂಸರಜ್ಜವಃ || ಚತಸ್ರೋ ಮಾಂಸಪೇಶೀನಾಂ ಬಂಧನಂ ತತ್ಪ್ರಯೋಜನಮ್ || ”

“ಪೃಷ್ಠವಂಶದ ಎರಡುಕಡೆಗೂ ದೊಡ್ಡ ದೊಡ್ಡ ಮಾಂಸಮಯಗಳಾದ ೪ ರಜ್ಜುಗಳು ಇರುವವು. ಅವುಗಳಿಂದ ಮಾಂಸಪೇಶೀಗಳು ಕಟ್ಟಲ್ಪಟ್ಟಿರುವವು.”

**ಹೊಲಿಗೆಗಳು:**—“ಸೇವನ್ಯಃ ಸಪ್ತ, ತಾಸಾಂ ತು ಭವೇಯುಃ ಪಂಚ ಮಸ್ತಕೇ || ಏಕಾ ಶೇಫಸಿ ಜಿಹ್ವಾಯಾಮೇಕ ವಿದ್ಯೋಃ ನ್ನತಾಃ ಕ್ವಚಿತ್ || ”

“ ಶರೀರದಲ್ಲಿ ಹೊಲಿಗೆಗಳು ೭ ಇರುವವು; ಮಸ್ತಕದಲ್ಲಿ ೫, ಲಿಂಗದಲ್ಲಿ ೧, ನಾಲಿಗೆಯಲ್ಲಿ ೧ ಈರೀತಿ ಇರುವವು. ಈ ಹೊಲಿಗೆಗಳನ್ನು ಚತುರನಾದ ವೈದ್ಯನು ಯಾವಾಗಲೂ ಬಿಚ್ಚಬಾರದು. ”

ಸಂಘಾತಗಳು:—“ ಚತುರ್ದಶಾಸ್ಥ್ನಾಂ ಸಂಘಾತಾಸ್ತೇಷಾಂ ತ್ರಯೋ ಗುಲ್ಫ ಜಾನು ವಂಕ್ಷಣೇಷು। ಏತೇನೇತರ ಸಕ್ಥಿ ಬಾಹೂ ಚ ವ್ಯಾಖ್ಯಾತೌ ‖ ತ್ರಿಕ ಶಿರಸೋರೇಕೈಕಮ್ ‖ ಅತ್ರ ತು ತ್ರಿಕ ಪದೇನ ಬಾಹೂ ಗ್ರೀವಾ ಸ್ಥಿ ಸಂಘಾತ ಉಚ್ಯತೇ ‖”

“ ಎಲುಬುಗಳ ೧೪ ಸಂಘಾತಗಳು (ಜೋಡಣೆಗಳು) ಇರುವವು. ಅವುಗಳಲ್ಲಿ-ಗುಲ್ಫ, ಜಾನು ವಂಕ್ಷಣಗಳಲ್ಲಿ ೧-೧ ಇರುವದು. ಇದೇರೀತಿಯಾಗಿ ಕಾಲು ಮತ್ತು ಕೈಗಳಲ್ಲಿಯೂ ತಿಳಿಯತಕ್ಕದ್ದು. ಇಲ್ಲಿ ತ್ರಿಕವೆಂದರೆ—ಬಾಹೂ, ಗ್ರೀವಾಗಳ ಎಲುಬುಗಳು ಹೇಳಲ್ಪಟ್ಟವೆ. ಅವುಗಳಲ್ಲಿಯೂ ಶಿರಸ್ಸಿನಲ್ಲಿಯೂ ಒಂದೊಂದಿದೆ. ”

ಸೀಮಂತಗಳು:—“ ಚತುರ್ದಶೈವ ಸೀಮಂತಾಃ ಕಥಿತಾ ಮುನಿಪುಂಗವೈಃ ‖ ಸಂಘಾತಾಃ ಕ್ಷೋಭಿತಾಯೈಸ್ತು ಸೀಮಂತಾ ಸ್ತೇ ಪ್ರಕೀರ್ತಿತಾಃ ‖ ”

“ ಶರೀರದಲ್ಲಿ ೧೪ ಸೀಮಂತಗಳವೆ; ಅಸ್ಥಿಗಳ ಮೂಲಕ ಸಂಘಾತವು ಹೊಲಿಯಲ್ಪಟ್ಟವುಗಳು ಸೀಮಂತಗಳು. ”

ತ್ವಕ್ಕುಗಳು:—“ ಕ್ಷೀರಸ್ಯ ಪಚ್ಯಮಾನಸ್ಯ ಯಥಾ ಸಂತಾನಿಕಾ ಭವೇತ್ ‖ ಪಚ್ಯಮಾನಸ್ಯ ಶುಕ್ರಸ್ಯ ರಜಸಶ್ಚ ತಥಾ ತ್ವಚಃ‖ ಪೂರ್ವಾರ್ವಭಾಸಿನೀ ತಾಸಾಂ, ಸಿಧ್ಮ ಸ್ಥಾನಂ ಚ ಸಾ ಸ್ಮೃತಾ‖”

“ ಪಕ್ವಮಾಡಲ್ಪಟ್ಟ ಹಾಲಿನಮೇಲೆ ಕೆನೆಯು ಹೆಪ್ಪುಗಟ್ಟುವಂತೆ ಪಕ್ವವಾದ ವೀರ್ಯ ಮತ್ತು ರಜಸ್ಸಿನಿಂದ ತ್ವಚಾ ಉತ್ಪನ್ನವಾಗುತ್ತದೆ. ಇವುಗಳಲ್ಲಿ ಮೊದಲನೇದು ಅವಭಾಸಿನೀ ಎಂದೆನ್ನಲ್ಪಡುವದು.

ಇಂತು ಶಾರೀರಕ್ರಮವೆಂಬ ಚತುರ್ಥಾಶಯವು.

---

## ಪಂಚಮಾಶಯವು.

### ದಿನಚರ್ಯಾಕಥನ.

ಈ ಕರ್ಮಭೂಮಿಯಲ್ಲಿ ಅವತರಿಸಿದ ಸ್ತ್ರೀಯೂ, ಪುರುಷನೂ ಯಾವ ರೀತಿಯಲ್ಲಿ ನಡದುಕೊಂಡರೆ ಇಹಲೋಕಸುಖಕ್ಕೂ, ಪಾರತ್ರಿಕ ಸುಖಕ್ಕೂ

ಭಾಗಿಯಾದೇವೆಂದು ವಿಚಾರಪೂರ್ವಕ ತಿಳಿದು, ಅದರಂತೆ ನಡದುಕೊಳ್ಳು ವದು ಸಕಲ ಪುರುಷಾರ್ಥಸಿದ್ಧಿಗೆ ಕಾರಣವಾಗುವದು. ಯಾಕೆಂದರೆ:—

"ದಿನ ಯಾಮಿನ್ಯಾ ಸಾಯಂ ಪ್ರಾತಃ, ಶಿಶಿರವಸಂತೌ ಪುನರಾ ಯಾತಃ॥ ಕಾಲಃ ಕ್ರೀಡತಿ ಗಚ್ಛತ್ಯಾಯುಃ, ತದಪಿ ನ ಮುಂಚ ತ್ಯಾಶಾ ವಾಯುಃ ॥"

"ದಿವಾರಾತ್ರಿಗಳೂ, ಸಾಯಂಕಾಲ ಪ್ರಾತಃಕಾಲಗಳೂ, ಶಿಶಿರಾದಿ ಋತುಗಳೂ ಬಂದರಹಿಂದೊಂದು ಕಳೆಯುತ್ತಾ, ನಮ್ಮ ಆಯುಕ್ಷೀಣವಾಗು ತ್ತಿದೆ; ಇಷ್ಟಾದರೂ ನಮ್ಮ ದುರಾಶಾ ಪಿಶಾಚಿಯು ತೊಲಗಲೇ ಇಲ್ಲ?" ನಾವು ಯಾವ ಕಾರ್ಯ ಮಾಡುವದರಿಂದ ಕೃತಕೃತ್ಯರಾಗುವೆವ್ರೋ ಅಂತಹ ಸತ್ಪ ಥದಲ್ಲಿ ನಡಿಯುವದು ಶ್ರೇಯಸ್ಕರವಾದದ್ದು. ಇದೇ ಆಶಯವನ್ನು ಶಾಸ್ತ್ರಗ ಳಲ್ಲಿ ನಮ್ಮ ಮಹರ್ಷಿಗಳು ಬಹುಪ್ರಕಾರವಾಗಿ ಉಪದೇಶಿಸಿರುತ್ತಾರೆ.

"ಸುಖಾರ್ಥಾಸ್ಸರ್ವಜಂತೂನಾಂ ಮತಾಃ ಸರ್ವಾಃ ಪ್ರವೃತ್ತಯಃ॥ ಸುಖಂ ಚ ನ ವಿನಾ ಧರ್ಮಾತ್ತಸ್ಮಾದ್ಧರ್ಮಪರೋ ಭವೇತ್ ॥"

"ಎಲ್ಲಾ ಪ್ರಾಣಿಗಳಿಗೂ 'ನಮಗೆ ಸುಖವಾಗಲಿ' ಎಂಬ ತಾತ್ಪರ್ಯವೇ ಇರುತ್ತದೆ. ಅದಕ್ಕಾಗಿ ಸುಖ ದೊರಿಯಲೆಂತಲೇ ವಿಧವಿಧ ಕಾರ್ಯಗಳನ್ನೂ ನಡಿಸುತ್ತಾ ಇರುತ್ತಾರೆ. ಸುಖವೆಂಬದೇನೋ ಧರ್ಮವಿಲ್ಲದಿದ್ದರೆ ಖಂಡಿತವಾ ಗಿಯೂ ದೊರಿಯುವದಿಲ್ಲ!! ಇದಕ್ಕಾಗಿ ಮನುಷ್ಯನು ಸದಾ ಧರ್ಮಪರನಾ ಗಿಯೇ ಇರಬೇಕು."

"ಮಾನವೋ ಯೇನ ವಿಧಿನಾ ಸ್ವಸ್ಥಸ್ತಿಷ್ಠತಿ ಸರ್ವದಾ ॥ ತಮೇವ ಕಾರಯೇದ್ವೈದ್ಯೋ ಯತಃ ಸ್ವಸ್ಥಂ ಸದೇಪ್ಸಿತಮ್ ॥"

"ಯಾವರೀತಿಯಾಗಿ ಮನುಷ್ಯನು ಸದೈವ ಆರೋಗ್ಯವಾಗಿರು ತ್ತಾನೋ ಹಾಗೆ ಅನುಕೂಲಿಸುವಂತೆ ವೈದ್ಯಶ್ರೇಷ್ಠನು—(ಸತ್ಪುರುಷರಿಗೆ ಈಪ್ಸಿತವಾದ) ಆರೋಗ್ಯವಿಧಾನವನ್ನು ಉಪದೇಶಿಸುತ್ತಿರಬೇಕು."

"ದಿನಚರ್ಯಾಂ ನಿಶಾಚರ್ಯಾಂ ಋತುಚರ್ಯಾಂ ಯಥೋದಿತಾಮ್ ॥ ಆಚರನ್ ಪುರುಷಃ ಸ್ವಸ್ಥಃ ಸದಾ ತಿಷ್ಠತಿ ನಾನ್ಯಥಾ ॥"

"(ದಿನಚರ್ಯಾ) ಪ್ರಾತಃ ಹಾಸಿಗೆಯಿಂದೆದ್ದ ಕಾಲದಿಂದ ಸಾಯಿಂಕಾಲ ದವರಿಗೆ ಆಚರಿಸತಕ್ಕ ಕೃತ್ಯಗಳು, ರಾತ್ರಿಯ ಕಾಲದ ಕರ್ತವ್ಯತಾ, (ಋತು ಚರ್ಯಾ) ವಸಂತಾದಿ ಷಡೃತುಗಳ ಸಮಯದಲ್ಲಿ ಯಾವರೀತಿ ನಡಕೊಳ್ಳುವದು ಆರೋಗ್ಯಕ್ಕೆ ಸಾಧಕವಾಗುತ್ತದೆಂಬದು, ಇವುಗಳನ್ನು ಶಾಸ್ತ್ರಮುಖವಾಗಿ ತಿಳಿದು ಆಚರಿಸುತ್ತಾ ಬರುವದರಿಂದಲೇ ಪುರುಷನು ನೀರೋಗಿಯಾಗಿರು ವನು. ಹಾಗೆ ವಿಚಾರವನ್ನು ಮಾಡದಿದ್ದರೂ, ಅಥವಾ ಶಾಸ್ತ್ರಪದ್ಧತಿಯಂದು

ಉಪದೇಶಿಸುವ ವಾಕ್ಯಗಳನ್ನು ತಿಳಿದು ಆಚರಿಸದೆ ಉಲ್ಲಂಘಿಸುವದರಿಂದಲೂ ಸುಖವುಂಟಾಗಲಾರದು. ''

" ಸ್ವಸ್ಥ '' ನೆಂಬ ವಿಷಯದಲ್ಲಿ ವಾಗ್ಭಟದ ಉಪದೇಶವು:—

**" ಸಮದೋಷಃ ಸಮಾಗ್ನಿಶ್ಚ ಸಮಧಾತು ಮಲ ಕ್ರಿಯಃ ||**
**ಪ್ರಸನ್ನಾತ್ಮೇಂದ್ರಿಯ ಮನಾಃ ಸ್ವಸ್ಥ ಇತ್ಯಭಿಧೀಯತೇ || "**

" ಯಾವ ಪುರುಷನಿಗೆ ವಾತ ಪಿತ್ತ ಕಫಗಳೆಂಬ ದೋಷಗಳು ಸಮವಾಗಿರುವವೊ, ಜಠರಾಗ್ನಿಯೂ ಸಮಸ್ಥಿತಿಯಿಂದ ತನ್ನ ವ್ಯಾಪಾರ ಮಾಡುತ್ತಿರುವದೋ, ರಸ ರಕ್ತ ಮಾಂಸ ಮೇದಾ ಮಜ್ಜಾಸ್ಥಿ ಶುಕ್ರಾಖ್ಯ ಸಪ್ತಧಾತುಗಳೂ, ಮಲಗಳ ವ್ಯವಹಾರವೂ ಸಮವಾಗಿರುವದೋ, ಆತ್ಮಾ ಇಂದ್ರಿಯಗಳು, ಮನಸ್ಸು ಸಹ ಪ್ರಸನ್ನವಾಗಿರುವವೋ ಆ ಪುರುಷನನ್ನೇ ಶಾಸ್ತ್ರಗಳಲ್ಲಿ " ಸ್ವಸ್ಥ '' (ಆರೋಗ್ಯವುಳ್ಳವನು) ಎಂದು ಹೇಳುವರು. ''

**ಪ್ರಾತಃಕೃತ್ಯ:—" ಬ್ರಾಹ್ಮೇ ಮುಹೂರ್ತೇ ಬುಧ್ಯೇತ ಸ್ವಸ್ಥೋ ರಕ್ಷಾರ್ಥಮಾಯುಷಃ || ತತ್ರ ಸರ್ವಾಘಶಾಂತ್ಯರ್ಥಂ ಸ್ಮರೇಚ್ಚ ಮಧುಸೂದನಮ್ || "**

" ಪ್ರತಿದಿನವೂ ಬೆಳಗಿನಜಾವದ ೪|| ಘಂಟೆ (ಬ್ರಾಹ್ಮೀಮುಹೂರ್ತ) ಯಲ್ಲಿ ಹಾಸಿಗೆಯಲ್ಲಿ ಎಚ್ಚರವಾದ ಸಂಗಡಲೇ ಎದ್ದು ಬಿಡಬೇಕು; ಆಯುವಿನ ರಕ್ಷಾರ್ಥವಾಗಿಯೂ, ಪಾಪಕ್ಷಯಾರ್ಥವಾಗಿಯೂ ಶ್ರೀಮನ್ನಾರಾಯಣನನ್ನು ಏಕಾಗ್ರತೆಯಿಂದ ಧ್ಯಾನಮಾಡತಕ್ಕದ್ದು. ''

**" ಆಯುಷ್ಯ ಮುಷಸಿ ಪ್ರೋಕ್ತಂ ಮಲಾದೀನಾಂ ವಿಸರ್ಜನಮ್ ||**
**ತದಂತ್ರ ಕೂಜನಾಧ್ಮಾನೋದರ ಗೌರವ ವಾರಣಮ್ || "**

" ಆ ಕಾಲದಲ್ಲಿ ಮಲ, ಮೂತ್ರ, ವಾಯು ಇವುಗಳನ್ನು ವಿಸರ್ಜಿಸುವದು ಆಯುರ್ವೃದ್ಧಿಕರವಾದದ್ದು. ಇದು ಹೊಟ್ಟೆಯಲ್ಲಿನ ಶಬ್ದ, ದುಂಡರಿಸುವಿಕೆ, ನೋತ, ಆಧ್ಮಾನ, ಉದರ ವೃದ್ಧ್ಯಾದಿ ವ್ಯಾಧಿಗಳು ಇವುಗಳನ್ನು ನಾಶಮಾಡುವದು. ''

ಯಾಕೆಂದರೆ:—

**" ಆಟೋಪ ಶೂಲಾ ಪರಿಕರ್ತಿಕಾಚ | ಸಂಗಃ ಪುರೀಷಸ್ಯ ತಥೋರ್ಧ್ವವಾತಃ || ಪುರೀಷ ಮಾರ್ಗಾದಥವಾ ನಿರೇತಿ | ಪುರೀಷವೇಗೇನ ಹತೇ ನರಸ್ಯ || "**

" ಆಟೋಪರೋಗ, ಶೂಲಿ, ಗುದಸ್ಥಾನದಲ್ಲಿ ಕತ್ತಿಯಿಂದ ಇರಿದಂತಾಗುವ ವ್ಯಥೆ, ಮುಖದ್ವಾರದಲ್ಲಿ ಹುಳಿದೇಗು, ಊರ್ಧ್ವವಾಯು ಇತ್ಯಾದಿ ರೋಗಗಳು ಮಲಾವರೋಧನದಿಂದುಂಟಾಗುತ್ತವೆ. ''

" ವಾತ ಮೂತ್ರ ಪುರೀಷಾಣಾಮ್ ಸಂಗೋಧ್ಮಾನಂ ಕ್ಲಮೋ ರುಜಾ || ಜಠರೇ ವಾತಜಾ ಶ್ಚಾನ್ಯೇರೋಗಾಸ್ಯು ರ್ವಾತ ನಿಗ್ರಹಾತ್||

" ಅಧೋವಾಯುವನ್ನು ನಿಗ್ರಹಮಾಡುವದರಿಂದ—ವಾಯು ಮೂತ್ರ ಮಲಗಳು ಬೆರಿಯುವಿಕೆ, ಆಧ್ಮಾನವಾಯು, ಆಯಾಸ, ಉದರದಲ್ಲಿ ಇನ್ನೂ ವಾತವಿಕಾರ ರೋಗಗಳು ಉಂಟಾಗುವವು. "

" ವಸ್ತಿ ಮೇಹನಯೋಃ ಶೂಲಂ ಮೂತ್ರಕೃಚ್ಛ್ರಂ ಶಿರೋರುಜಾ ||
ವಿನಾಮೋ ವಂಕ್ಷಣಾನಾಹಃ ಸ್ಯಾಲ್ಲಿಂಗಂ ಮೂತ್ರನಿಗ್ರಹೇ || "

" ಕಿಬ್ಬೊಟ್ಟೆ, ಲಿಂಗ ಇವುಗಳಲ್ಲಿ ಶೂಲಿಯುಂಟಾಗುವಿಕೆ, ಮೂತ್ರದ ತಡೆ, ಶಿರಸ್ಸಿನಲ್ಲಿ ವ್ಯಥಾ, ಶರೀರ ಬಿದ್ದಂತಾಗುವಿಕೆ, ಪಕ್ಕಗಳಲ್ಲಿ ನೋತ-ಇವೆಲ್ಲವೂ ಮೂತ್ರರೋಧನದಿಂದಾಗುತ್ತವೆ. "

ಇದಕ್ಕಾಗಿಯೇ ವಾತ ಮೂತ್ರ ಪುರೀಷಾದಿಗಳನ್ನು ವಿಸರ್ಜಿಸುವ ಕಾಲದಲ್ಲಿ ಸ್ವಲ್ಪವೂ ತಡಿಯದೆ ವಿಸರ್ಜಿಸಬೇಕು.

" ನ ವೇತಶೋಽನ್ಯ ಕಾರ್ಯಃ ಸ್ಯಾನ್ನ ವೇಗಾನ್ನೀರಯೇದ್ಬಲಾತ್ ||
ಕಾಮ ಶೋಕ ಭಯ ಕ್ರೋಧಾನ್ಮನೋ ವೇಗಾನ್ವಿದಾರಯೇತ್ || "

" ಮಲಾದಿಗಳ ವೇಗಕಾಲದಲ್ಲಿ ಬೇರೆ ಕಾರ್ಯಗಳಿಗೆ ಹೋಗಬಾರದು; ಬಲಾತ್ಕಾರಪೂರ್ವಕವಾಗಿ ಮಲಾದಿಗಳನ್ನು ವಿಸರ್ಜಿಸುವ ಯತ್ನವನ್ನೂ ಮಾಡಬಾರದು. ಆದರೆ ಸುಖಾರ್ಥಿಯು-ಕಾಮ, ಶೋಕ, ಭಯ, ಕ್ರೋಧ, ಲೋಭ, ಮೋಹ, ಅಹಂಕಾರ, ಈರ್ಷ್ಯೆ, ಅಧೃತಿ ಇತ್ಯಾದಿ ಮನಸ್ಸಿನ ವೇಗಗಳನ್ನು ನಿರಂತರವೂ ನಿರೋಧಿಸುತ್ತಾ ಇರಬೇಕು. "

" ಗುದಾದಿ ಮಲಮಾರ್ಗಾಣಾಂ ಶೌಚಂ ಕಾಂತಿ ಬಲಪ್ರದಮ್||
ಪವಿತ್ರಕರಮಾಯುಷ್ಯ ಮಲಕ್ಷ್ಮೀಕಲಿ ಪಾಪಹೃತ್ || ಪ್ರಕ್ಷಾಲನಂ ಮತಂ ಪಾಣ್ಯೋಃ ಪಾದಯೋಃ ಶುದ್ಧಿಕಾರಣಮ್ || ಮಲ ಶ್ರಮಹರಂ ವೃಷ್ಯಂ ಚಕ್ಷುಷ್ಯಂ ರಾಜಸಾಪಹಮ್ || "

" ಮಲಮೂತ್ರಾದಿ ನಿವೃತ್ತಿಯನಂತರ ಗುದಾದಿ ಮಲಮಾರ್ಗಗಳನ್ನು ಜಲದಿಂದ ಶುದ್ಧಿಕರಿಸಿಕೊಳ್ಳಬೇಕು—ಇದು ಸೌಂದರ್ಯತಾ, ಬಲ, ಪವಿತ್ರತಾ, ಆಯುರ್ವೃದ್ಧಿ ಇವನ್ನುಂಟುಮಾಡುತ್ತದೆ. ಹಾಗೆಯೇ ದಾರಿದ್ರ್ಯ, ಆಲಸ್ಯ, ಪಾಪ ಮುಂತಾದವನ್ನು ಹರಿಸುತ್ತದೆ. ಗುದಾದಿ ಶುದ್ಧೀಕರಣಾನಂತರ ಪಾದಗಳು, ಕೈಗಳು ಇವನ್ನು ಜಲದಿಂದ ಪವಿತ್ರೀಕರಿಸಿಕೊಳ್ಳಬೇಕು. ಇದರಿಂದ—ಮಲಶ್ರಮಹರ, ವೃಷ್ಯ, ನೇತ್ರಗಳಿಗೆ ಹಿತವಾದದ್ದು, ರಾಜಸಗುಣವನ್ನು ಹರಿಸುತದೆ. "

ದಂತಧಾವನಮ್:—“ಭಕ್ಷಯೇದ್ದಂತಪವನಂ ದ್ವಾದಶಾಂಗುಲಮಾಯತಮ್ ॥ ಕನಿಷ್ಠಿಕಾಗ್ರವತ್ಸ್ಥೂಲಂ ಋಜ್ವಗ್ರಂಥಿ ತಥಾವ್ರಣಮ್ ॥ ಏಕೈಕಂ ಘರ್ಷಯೇದ್ದಂತಂ ಮೃದುನಾ ಕೂರ್ಚಕೇನ ತು ॥ ದಂತಶೋಧನ ಚೂರ್ಣೇನ ದಂತಮಾಂಸಾನ್ಯಬಾಧಯನ್ ॥ ”

“ದ್ವಾದಶಾಂಗುಲ ಉದ್ದವುಳ್ಳ, ಕಿರಿಬೆರಳಿನ ತುದಿಯಷ್ಟು ದಪ್ಪನಾದ, ಕೋಮಲವಾದ, ಗ್ರಂಥಿಗಳು, ಹುಳುಕೂ ಇಲ್ಲದ ದಂತಕಾಷ್ಠದಿಂದ ಒಂದೊಂದೇ ಹಲ್ಲನ್ನು ನಿದಾನವಾಗಿ ಘರ್ಷಣಮಾಡುತ್ತಾ ದಂತಧಾವನ ಮಾಡಬೇಕು. ದಂತಮಂಜನ ಚೂರ್ಣದಿಂದ ಆ ಕೋಮಲ ಕೂರ್ಚಕ (ದಂತಕಾಷ್ಠವನ್ನು ಜಜ್ಜಿಕೊಂಡಿರುವದ) ದಿಂದ ದಂತಮಾಂಸಗಳಿಗೆ ಪೀಡೆಯಾಗದಂತೆ ಉಜ್ಜುತ್ತಾ ಬರಬೇಕು. ”

“ಕ್ಷೌದ್ರ ತ್ರಿಕಟುಕಾಕ್ತೇನ ತೈಲ ಸಿಂಧುಭವೇನ ವಾ ॥
ಚೂರ್ಣೇನ ತೇಜೋವತ್ಯಾಶ್ಚ ದಂತಾನ್ನಿತ್ಯಂ ವಿಶೋಧಯೇತ್ ॥”

“ಜೇನುತುಪ್ಪ ಶುಂಠಿ ಮೆಣಸು ಹಿಪ್ಪಲಿಯಚೂರ್ಣ ಸೇರಿಸಿಯಾಗಲೀ, ಸೈಂಧವಲವಣ ಮತ್ತು ತಿಲತೈಲವನ್ನು ಸೇರಿಸಿಯಾಗಲೀ, ತೇಜೋವತೀ ಚೂರ್ಣದಿಂದಲಾಗಲೀ ಉಜ್ಜಿಕೊಳ್ಳುವದು. ”

“ಮಧೂಕೋ ಮಧುರೇ ಶ್ರೇಷ್ಠಃ, ಕರಂಜಃ ಕಟುಕೇ ತಥಾ॥ ನಿಂಬಃ ಸ್ಯಾತ್ತಿಕ್ತಕೇ ಶ್ರೇಷ್ಠಃ, ಕಷಾಯೇ ಖದಿರಸ್ತಥಾ ॥ ಸಮಯಂ ತು ಸಮಾಲೋಕ್ಯ ದೋಷಂ ಚ ಪ್ರಕೃತಿಂ ತಥಾ ॥ ಯಥೋಚಿತೈ ರಸೈ ರ್ವೀರ್ಯೈಃ, ಯುಕ್ತಂ ದ್ರವ್ಯಂ ಪ್ರಯೋಜಯೇತ್ ॥ ತೇನಾಸ್ಯ ಮುಖವೈರಸ್ಯ ದಂತ ಜಿಹ್ವಾಸ್ಯಜಾ ಗದಾಃ ॥ ರುಚಿ ವೈಶದ್ಯ ಲಘುತಾ ನ ಭವಂತಿ ಭವಂತಿ ಚ ॥ ”

“ದಂತಧಾವನಕ್ಕೆ ಮಧುಕಾಷ್ಠಗಳಲ್ಲಿ ಮಧೂಕವೂ, ಖಾರವಾದ್ದರಲ್ಲಿ ಕರಂಜವೂ, ಕಹಿಮೂಲಿಕೆಗಳಲ್ಲಿ ಬೇವೂ, ವಗರುರಸದಲ್ಲಿ ಖದಿರವೃಕ್ಷವೂ ಶ್ರೇಷ್ಠವು. ಕಾಲಬಲವನ್ನೂ, ದೋಷಗಳ ಪ್ರಕೋಪಾದಿಗಳನ್ನೂ ತಿಳಿದುಕೊಂಡು, ಯಥೋಚಿತ ರಸ ವೀರ್ಯಯುಕ್ತ ಕಾಷ್ಠದಿಂದ ದಂತಧಾವನವನ್ನು ಮಾಡತಕ್ಕದ್ದು. ಇದರಿಂದ ಮುಖದ ವಿರಸತ್ವವೂ, ದಂತಜಿಹ್ವಾಮುಖಾದಿಗಳ ರೋಗಗಳೂ ನಾಶವಾಗುವವಲ್ಲದೆ ರುಚಿಯನ್ನೂ, ವೈಶದ್ಯವನ್ನೂ, ಲಘುತ್ವವನ್ನೂ ಉಂಟುಮಾಡುವದು. ”

“ಅರ್ಕೇ ವೀರ್ಯಂ ವಟೇ ದೀಪ್ತಿಃ ಕರಂಜೇ ವಿಜಯೋ ಭವೇತ್॥
ಪ್ಲಕ್ಷೇ ಚೈವಾರ್ಥ ಸಂಪತ್ತಿ ರ್ಬದರ್ಯಾಂ ಮಧುರೋ ಧ್ವನಿಃ ॥

ಖದಿರೇ ಮುಖಸೌಗಂಧ್ಯಂ, ಬಿಲ್ವೇ ತು ವಿಪುಲಂ ಧನಮ್ ||
ಉದುಂಬರೇ ತು ವಾಕ್ಸಿದ್ಧಿಃ ಆಮ್ರೇತ್ವಾರೋಗ್ಯಮೇವ ಚ ||
ಕದಂಬೇ ತು ಧೃತೀ ರ್ಮೇಧಾ, ಚಂಪಕೇತು ದೃಢಾಮತಿಃ ||
ಶಿರೀಷೇ ಕೀರ್ತಿ ಸೌಭಾಗ್ಯಂ, ಆಯುರಾರೋಗ್ಯಮೇವಚ ||
ಅಪಾಮಾರ್ಗೇ ಧೃತಿರ್ಮೇಧಾ, ಪ್ರಜ್ಞಾ ಶಕ್ತಿ ಸ್ತಥಾ ಧ್ವನಿಃ||
ದಾಡಿಮ್ಯಾಂ ಸುಂದರಾಕಾರಃ, ಕುಕುಭೇ ಕುಟಜೇ ತಥಾ || ಜಾ
ತೀ ತಗೆರ ಮಂದಾರ್ಕೈ ದುಸ್ಸ್ವಪ್ನಂ ಚ ವಿನಶ್ಯತಿ || ಗುವಾಕ ಸ್ತಾ
ಲ ಹಿಂತಾಲಾ ಕೇತಕಶ್ಚ ಬೃಹತ್ತೃಣಃ || ಖರ್ಜೂರಂ ನಾರಿಕೇ
ಳಂ ಚ ಸಪ್ತೈತೇ ತೃಣರಾಜಕಾಃ || ತೃಣರಾಜ ಸಮುತ್ಪನ್ನಂ
ಯಃ ಕುರ್ಯಾದ್ದಂತಧಾವನಮ್ || ನರಶ್ಚಾಂಡಾಲಯೋನಿಃ ಸ್ಯಾ
ದ್ಯಾವದ್ಗಂಗಾ ನ ಪಶ್ಯತಿ || ''

"ದಂತಕಾಷ್ಠಗಳನ್ನಾಗಿ ಉಪಯೋಗಿಸುವ ಅರ್ಕದಿಂದ--ವೀರ್ಯ, ಪರಾಕ್ರಮ, ವಟದಿಂದ-ಪ್ರಕಾಶ, ಹೊಂಗೆಯಿಂದ-ವಿಜಯ, ಪ್ಲಕ್ಷದಿಂದ-ಧನ ಪ್ರಾಪ್ತಿ, ಬದರಿಯಿಂದ - ಮಧುರಸ್ವರ, ಖದಿರದಿಂದ - ಮುಖಸುಗಂಧ, ಬಿಲ್ವ ದಿಂದ-ವಿಪುಲಧನ, ಅತ್ತಿಯಿಂದ-ವಾಕ್ಸಿದ್ಧಿ, ಮಾವಿನಿಂದ-ಆರೋಗ್ಯ, ಕದಂ ಬದಿಂದ - ಧೈರ್ಯವೃದ್ಧಿ, ಸಂಪಿಗೆಯಿಂದ - ದೃಢಮತಿ, ಶಿರೀಷದಿಂದ-ಕೀರ್ತಿ, ಸೌಭಾಗ್ಯ, ಆಯುರ್ವೃದ್ಧಿ, ಆರೋಗ್ಯ, ಉತ್ತರಣೆಯಿಂದ-ಧೈರ್ಯ, ಗ್ರಹ ಣಶಕ್ತಿ, ಸುಂದರಶಬ್ದ, ದಾಳಿಂಬೆಯಿಂದ-ಸುಂದರತ್ವವುಂಟಾಗುವದು. ಕಕು ಭ, ಕುಟಜ, ಜಾತೀ, ತಗರ, ಮಂದಾರಗಳಿಂದ ದುಸ್ವಪ್ನದೋಷಹರವಾಗು ತ್ತದೆ. ಆದರೆ—ಗುವಾಕ, ತಾಲ, ಹಿಂತಾಲ, ಕೇತಕಿ, ಬಹುತೃಣ, ಖರ್ಜೂ ರ, ನಾರಿಕೇಳ ಈ ೭ ತೃಣರಾಜಗಳೆಂದೆನ್ನಲ್ಪಡುವವು. ಇವುಗಳಿಂದ ದಂತ ಧಾವನ ಮಾಡಿದರೆ ಗಂಗೆಯಿರುವವರಿಗೂ ಚಂಡಾಲನಾಗುವನು. ''

"ನ ಖಾದೇಗ್ಗಲ ತಾಲೋಷ್ಠ ಜಿಹ್ವಾ ದಂತ ಗದೇಷುತತ್ ||
ಮುಖಸ್ಯ ಪಾಕೇ ಶೋಥೇ ಚ ಶ್ವಾಸ ಕಾಸ ವಮಿಷು ಚ ||
ದುರ್ಬಲೋ ಜೀರ್ಣಭುಕ್ತಶ್ಚ ಹಿಕ್ಕಾಮೂರ್ಛಾ ಮದಾನ್ವಿತಃ||
ಶಿರೋ ರುಜಾರ್ತ್ತ ಸ್ತೃಷಿತಃ ಶ್ರಾಂತಃ ಪಾನ ಕ್ಲಮಾನ್ವಿತಃ ||
ಅರ್ದಿತಃ ಕರ್ಣಶೂಲೀ ಚ ನೇತ್ರರೋಗೀ ನವಜ್ವರೀ || ವರ್ಜ
ಯೇದ್ದಂತ ಕಾಷ್ಠಂ ತು ಹೃದಾಮಯ ಯುತೋ ಪಿವಾ || '

"ಪರಂತು—ಗಲ, ತಾಲು, ಓಷ್ಠ, ನಾಲಿಗೆ, ದಂತಗಳಲ್ಲಿ ರೋಗವಿ ರುವವನು, ಮುಖಪಾಕವುಳ್ಳವನು, ಶೋಭೆಯುವನು, ಶ್ವಾಸಕಾಸರೋಗಿ, ವಮನರೋಗಿ, ದುರ್ಬಲ, ಅಜೀರ್ಣರೋಗಿ, ಬಿಕ್ಕಳಿಕೆಯುಳ್ಳವನು, ಮೂರ್ಛಾ

ರೋಗಿ, ಮದರೋಗಿ, ಶಿರೋಪೀಡಾತುರನು, ವ್ಯಾಕುಲನು, ಬಾಯಾರಿಕೆಯಲ್ಲಿ ಬಳಲಿದವನು, ಮದ್ಯಪಾನದ ಗ್ಲಾನಿಯುವನು, ಅರ್ದಿತರೋಗಿ, ಕರ್ಣಶೂಲಿಯುವನು, ನೇತ್ರರೋಗಿ, ನವೀನ ಜ್ವರವುಳ್ಳವನು, ಹೃದಯರೋಗಿ ಇವರು ದಂತಧಾವನೆಯನ್ನು ಮಾಡಬಾರದು. ''

" ಜಿಹ್ವಾ ನಿರ್ಲೇಖನಂ ಹೈಮಂ ರಾಜತಂ ತಾಮ್ರಜಂ ತಥಾ ॥
ಘಾಟಿತಂ ಮೃದುವತ್ಕಾಷ್ಠಂ ಮೃದು ಪತ್ರಮಯಂ ತಥಾ ॥
ದಶಾಂಗುಲಂ ಮೃದು ಸ್ನಿಗ್ಧಂ ತೇನ ಜಿಹ್ವಾಂ ಲಿಖೇತ್ಸುಖಮ್॥
ತಜ್ಜಿಹ್ವಾ ಮಲ ವೈರಸ್ಯ ದುರ್ಗಂಧ ಜಡತಾ ಹರಮ್ ॥ ''

" ಆಗ ನಾಲಿಗೆಯನ್ನುಜ್ಜುವದಕ್ಕಾಗಿ—ಬಂಗಾರ, ಬೆಳ್ಳಿ ಅಥವಾ ತಾಮ್ರದಿಂದ ಮಾಡಿದ ಅಥವಾ ಕೋಮಲವಾದ ದಂತಕಾಷ್ಠದ ಅಥವಾ ಅದರ ಎಲೆಯು—೧೦ ಅಂಗುಲ ಉದ್ದವಿರುವ, ಕೋಮಲ, ಸ್ನಿಗ್ಧವಾದ್ದರಿಂದ ನಾಲಿಗೆಯನ್ನುಜ್ಜಿ ತೊಳೆಯುವದರಿಂದ-ನಾಲಿಗೆಯ ಮಲ, ನೀರಸತಾ, ದುರ್ಗಂಧ, ಜಡತಾ ಇವು ನಾಶವಾಗುವವು. ''

ಗಂಡೂಷ ವಿಧಿ:—" ಗಂಡೂಷಮಪಿ ಕುರ್ವೀತ ಶೀತೇನ ಪಯಸಾ ಮುಹುಃ ॥ ಕಫ ತೃಷ್ಣಾ ಮಲಹರಂ ಮುಖಾಂತಃ ಶುದ್ಧಿಕಾರಕಮ್ ॥ ಸುಖೋಷ್ಣೋದಕ ಗಂಡೂಷಃ ಕಫಾ ರುಚಿ ಮಲಾಪಹಃ ॥ ದಂತ ಜಾಡ್ಯಹರ ಶ್ಚಾಪಿಮುಖಲಾಘವ ಕಾರಕಃ ॥ ವಿಷಮೂರ್ಛಾ ಮದಾರ್ತಾನಾಂ ಶೋಷಿಣಾಂ ರಕ್ತಪಿತ್ತಿನಾಮ್ ॥ ಕುಪಿತಾಕ್ಷಿ ಮಲ ಕ್ಷೀಣ ರೂಕ್ಷಾಣಾಂ ಸ ನ ಶಸ್ಯತೇ॥ ಮುಖಪ್ರಕ್ಷಾಲನಂ ಶೀತಪಯಸಾ ರಕ್ತಪಿತ್ತಜಿತ್ ॥ ಮುಖಸ್ಯ ಪೀಡಿಕಾ ಶೋಷ ನೀಲಿಕಾ ವ್ಯಂಗ ನಾಶನಮ್ ॥ ಕುರ್ಯಾದ್ವಾಪಿ ಕದುಷ್ಣೇನ ಪಯಸಾ ಸ್ಯವಿಶೋಧನಮ್ ॥ ಕಫ ವಾತ ಹರಂ ಸ್ನಿಗ್ಧಂ ಮುಖಶೋಷ ವಿನಾಶನಮ್ ॥ ''

" ತಣ್ಣೀರಿನಿಂದ ಬಾಯಿಮುಕ್ಕಳಿಸುವದು ಒಳ್ಳೇದು-ಇದರಿಂದ ಕಫ, ತೃಷ್ಣಾ (ಬಾಯಾರಿಕೆ) ಮಲ ಇವುಗಳು ನಾಶವಾಗುವವು. ಬಿಸಿನೀರಿನಲ್ಲಿ ಬಾಯಿ ಮುಕ್ಕಳಿಸುವದರಿಂದ-ಕಫ, ಅರುಚಿ, ಮಲ ಮತ್ತು ಹಲ್ಲುಗಳ ಜಡತ್ವ ಇವು ನಾಶವಾಗುವವು; ಮುಖಲಾಘವವನ್ನುಂಟು ಮಾಡುತ್ತದೆ; ಪರಂತು ವಿಷ, ಮೂರ್ಛಾ, ಮದ, ರಕ್ತಪಿತ್ತ, ನೇತ್ರರೋಗ, ಕುಪಿತವಾದ ಮಲ, ಕ್ಷೀಣತಾ, ಕ್ಷತರೋಗಿಗಳಿಗೆ ಬಿಸಿನೀರಿನಿಂದ ಬಾಯಿ ಮುಕ್ಕಳಿಸುವದು ಉಚಿತವಾದದ್ದಲ್ಲ. ಥಣ್ಣೀರಿನಿಂದ ಬಾಯಿ ತೊಳೆಯುವದರಿಂದ-ರಕ್ತಪಿತ್ತ, ಮುಖದಮೇಲೇಳುವ ಗುಳ್ಳೆಗಳು, ಮಣಾನೀಲಿಕಾ ಎಂಬ ಮಚ್ಚೆಗಳು,

ಬಂಗು ಇವು ನಾಶವಾಗುವವು. ಸ್ವಲ್ಪ ಬಿಸಿನೀರಿನಲ್ಲಿ ಮುಖವನ್ನು ತೊಯುವದರಿಂದ—ಕಫ, ವಾತ ನಾಶನವೂ, ಸ್ನಿಗ್ಧವೂ, ಮುಖಶೋಷಹರವೂ ಆಗುವದು. ”

**ನಸ್ಯ ವಿಧಿಃ:—“ ಕಟು ತೈಲಾದಿ ನಸ್ಯಾರ್ಥೇ ನಿತ್ಯಾಭ್ಯಾಸೇನ ಯೋಜಯೇತ್ ‖ ಪ್ರಾತಃ ಶ್ಲೇಷ್ಮಣಿ ಮಧ್ಯಾಹ್ನೇ ಪಿತ್ತೇ ಸಾಯಂ ಸಮೀರಣೇ ‖ ಸುಗಂಧವದನಾಃ ಸ್ನಿಗ್ಧಾ ನಿಃಸ್ವನಾ ವಿಮಲೇಂದ್ರಿಯಾಃ ‖ ನಿರ್ವಲೀ ಪಲಿತವ್ಯಂಗಾ ಭವೇಯು ರ್ನಸ್ಯ ಶೀಲಿನಃ ‖ ”**

“ ಪ್ರತಿದಿನವೂ ಕಟುತ್ತೈಲ (ಬೇವಿನಯಣ್ಣೆ) ಮುಂತಾದವುಗಳನ್ನು ಸ್ವಲ್ಪಮಟ್ಟಿಗೆ ಮೂಗಿನಲ್ಲಿ ನಸ್ಯವಾಗಿ ಉಪಯೋಗಿಸುವದರಿಂದ—ಪ್ರಾತಃ ಕಾಲದ ನಸ್ಯದಿಂದ ಶ್ಲೇಷ್ಮವನ್ನೂ, ಮಧ್ಯಾಹ್ನದ ನಸ್ಯವು ಪಿತ್ತವನ್ನೂ, ಸಾಯಿಂಕಾಲದ ನಸ್ಯವು ವಾಯುವನ್ನೂ ನಾಶಮಾಡುವದು. ಈ ನಸ್ಯದ ಅಭ್ಯಾಸವುಳ್ಳವನಿಗೆ ಮುಖದಲ್ಲಿ ಸುಗಂಧವುಂಟಾಗುವದು. ಸ್ವರವು ಉತ್ತಮವಾಗುವದು. ಇಂದ್ರಿಯಗಳು ನಿರ್ಮಲಗಳಾಗುವವು. ಈ ನಸ್ಯಸೇವಿಗಳು ವಲೀಫಲಿತರಹಿತರಾಗಿಯೂ, ವ್ಯಂಗಾ (ಬಂಗು) ದಿ ರೋಗವಿಲ್ಲದವರಾಗಿಯೂ ಆಗುವರು. ”

**ಅಂಜನ ವಿಧಿಃ:—“ ಸೌವೀರಮಂಜನಂ ನಿತ್ಯಂ ಹಿತಮಕ್ಷ್ಣೋಃ ಸ್ತತೋ ಭವೇತ್ ‖ ಲೋಚನೇ ಭವತ ಸ್ತೇನ ಮನೋಜ್ಞೇ ಸೂಕ್ಷ್ಮ ದರ್ಶನೇ ‖ ಸ್ರೋತೋಂಜನಂ ಮತಂ ಶ್ರೇಷ್ಠಂ ವಿಶುದ್ಧಂ ಸಿಂಧುಸಂಭವಮ್ ‖ ದೃಷ್ಟೇಃ ಕಂಡೂಮಲಹರಂ, ದಾಹ ಕ್ಲೇದ ರುಜಾಪಹಮ್ ‖ ಅಕ್ಷ್ಣೋರೂಪಾವಹಂ ಚೈವ ಸಹತೇ ಮಾರುತಾತಪೌ ‖ ನೇತ್ರರೋಗಾ ನ ಜಾಯಂತೇ ತಸ್ಮಾದಂಜನ ಮಾಚರೇತ್ ‖ ರಾತ್ರೌ ಜಾಗರಿತಃ ಶ್ರಾಂತಶ್ಛರ್ದಿತೋ ಭುಕ್ತವಾಂಸ್ತಥಾ ‖ ಜ್ವರಾತುರಃ ಶಿರಸ್ನಾತೋ ನಾಕ್ಷ್ಣೋರಂಜನಮಾಚರೇತ್ ‖ ”**

“ ನೇತ್ರಗಳಿಗೆ ಹಿತಕಾರಿಯಾದ ಬಿಳೀಸುರುಮಾ ಎಂಬ ಔಷಧವನ್ನು ನೇತ್ರಾಂಜನವಿಡುವದೊಳ್ಳೇದು. ಇದನ್ನು ಅಂಜನವಿಡುವದರಿಂದ—ನೇತ್ರಗಳು ಸುಂದರಗಳಾಗಿಯೂ, ಸೂಕ್ಷ್ಮದೃಷ್ಟಿಯುಳ್ಳವುಗಳಾಗಿಯೂ ಆಗುತ್ತವೆ. ಸಿಂಧುನಾಮಕ ಪರ್ವತದಲ್ಲಿ ಹುಟ್ಟುವ ಕರೀಸುರುಮಾ ಎಂಬ ಔಷಧಿಯು ಅಂಜನಮಾಡುವದಕ್ಕೆ ಶ್ರೇಷ್ಠವಾದದ್ದು. ಇದನ್ನು ಅಂಜನವಿಡುವದರಿಂದ—ನೇತ್ರಗಳಲ್ಲಿನ ತುರಿಕೆ, ಮಲ, ದಾಹ, ಕ್ಲೇದ ಮುಂತಾದ ರೋಗ

ನಾಶನವಾಗುವವು. ನೇತ್ರಗಳು ಸುಂದರವಾಗುವವು. ವಾಯುವನ್ನೂ, ಬಿಸಿಲನ್ನೂ ತಡಿಯುವವು. ನೇತ್ರದಲ್ಲಿ ಯಾವ ರೋಗವೂ ಹುಟ್ಟುವದಿಲ್ಲ. ಇದರಿಂದ ಅಂಜನವನ್ನಿಡುವದು ಉಚಿತವಾದದ್ದು. ಪರಂತು ಜ್ವರಾತುರನು, ಶಿರಸ್ಸಿನಲ್ಲಿ ಸ್ನಾನಮಾಡುವವನೂ, ರಾತ್ರಿಯಲ್ಲಿ ಜಾಗರಣೆಮಾಡಿದವನೂ, ಆಯಾಸಗೊಂಡವನೂ, ವಮನಮಾಡಿದವನೂ, ಭೋಜನಮಾಡಿದವನೂ ಸಹ ಅಂಜನವನ್ನು ಹಚ್ಚಬಾರದು. ''

**ಕ್ಷೌರಕರ್ಮ:—" ಪಂಚರಾತ್ರಾನ್ನಖ ಶ್ಮಶ್ರು ಕೇಶ ರೋಮಾಣಿ ಕರ್ತ್ತಯೇತ್ || ಕೇಶ ಶ್ಮಶ್ರು ನಖಾದೀನಾಂ ಕರ್ತ್ತನಂ ಸಂಪ್ರಸಾಧನಮ್ || ಪೌಷ್ಟಿಕಂ ಧನಮಾಯುಷ್ಯಂ ಶೌಚ ಕಾಂತಿ ಕರಂ ಪರಮ್ || ಉತ್ಪಾಟಯೇತ್ತು ಲೋಮಾನಿ ನಾಸಾಯಾಂ ನ ಕದಾಚನ|| ತದುತ್ಪಾಟನತೋ ದೃಷ್ಟೇ ದೌರ್ಬಲ್ಯಂ ತ್ವರಯಾಭವೇತ್ || "**

" ೫ ದಿನಕ್ಕೊಂದುಸಲ ಕ್ಷೌರಕರ್ಮವನ್ನು ಮಾಡಿಸಬೇಕು. ಇದರಿಂದ-ಶೋಭಾ, ಪುಷ್ಟಿ, ಧನ, ಆಯು, ಶುಚಿ, ಕಾಂತಿ ಇವು ಉಂಟಾಗುವವು; ಆದರೆ ನಾಸಿಕಾದಲ್ಲಿರುವ ರೋಮಗಳನ್ನು ಎಂದೆಂದಿಗೂ ಕೀಳಸಬಾರದು, ಅದರಿಂದ ದೃಷ್ಟಿಯು ಶೀಘ್ರವಾಗಿ ನ್ಯೂನವಾಗುವದು. ''

**ಕೇಶಪ್ರಸಾಧನಮ್:—" ಕೇಶಪಾಶೇ ಪ್ರಕುರ್ವೀತ ಪ್ರಸಾಧನ್ಯಾ ಪ್ರಸಾಧನಮ್ || ಕೇಶಪ್ರಸಾಧನಂ ಕೈಶ್ಯಂ ರಜೋ ಜಂತು ಮಲಾಪಹಮ್ || "**

" ಬಾಚಣಿಗೆಯಿಂದ ತಲೆಯ ಕೂದಲನ್ನು ಬಾಚುವದರಿಂದ—ಕೇಶವೃದ್ಧಿ, ಉತ್ತಮತಾ ಆಗುವದು. ಧೂಳು, ಹೇನು ಮುಂತಾದರ ನಿವಾರಣೆಯೂ ಉಂಟಾಗುತ್ತದೆ. ''

**ದರ್ಪಣದರ್ಶನಮ್:—" ಆದರ್ಶಾಲೋಕನಂ ಪ್ರೋಕ್ತಂ ಮಾಂಗಲ್ಯಂ ಕಾಂತಿಕಾರಕಮ್|| ಪೌಷ್ಟಿಕಂ ಬಲ್ಯಮಾಯುಷ್ಯಂ ಪಾಪಾಽಲಕ್ಷ್ಮೀ ವಿನಾಶನಮ್ || "**

" ದರ್ಪಣದರ್ಶನದಿಂದ—ಮಂಗಲ, ಕಾಂತಿ, ಪುಷ್ಟಿ, ಬಲ, ಆಯು ಇವುಗಳುಂಟಾಗುವವು; ಪಾಪ, ದೌರ್ಭಾಗ್ಯ ಇವುಗಳನ್ನು ತೊಲಗಿಸುವದು. ''

**ವ್ಯಾಯಾಮಕರಣಮ್:—" ಲಾಘವಂ ಕರ್ಮಸಾಮರ್ಥ್ಯಂ ವಿಭಕ್ತಘನಗಾತ್ರತಾ || ದೋಷಕ್ಷಯೋಽಗ್ನಿವೃದ್ಧಿಶ್ಚ ವ್ಯಾಯಾಮಾದುಪಜಾಯತೇ || ವ್ಯಾಯಾಮ ದೃಢಗಾತ್ರಸ್ಯ ವ್ಯಾಧಿರ್ನಾ**

ಸ್ತಿ ಕದಾಚನ ॥ ವಿರುದ್ಧಂ ವಾ ವಿದಗ್ಧಂ ವಾ ಭುಕ್ತಂ ಶೀಘ್ರಂ
ವಿಪಚ್ಯತೇ॥ ಭವಂತಿ ಶೀಘ್ರಂ ನೈತಸ್ಯ ದೇಹೇ ಶಿಥಿಲತಾದಯಃ॥
ನ ಚೈನಂ ಸಹಸಾಽಕ್ರಮ್ಯ ಜರಾ ಸಮಧಿರೋಹತಿ॥ ನ ಚಾಸ್ತಿ
ಸದೃಶಂ ತೇನ ಕಿಂಚಿತ್ಸ್ಥೌಲ್ಯಾಪಕರ್ಷಕಮ್॥ಸ ಸದಾ ಗುಣಮಾ
ಧತ್ತೇ ಬಲಿನಾಂ ಸ್ನಿಗ್ಧಭೋಜನಾಮ್॥ ವಸಂತೇ ಶೀತಸಮಯೇ
ಸುತರಾಂ ಸ ಹಿತೋಪಮಃ ॥ ಅನ್ಯದಾಪಿ ಚ ಕರ್ತವ್ಯೋ ಬಲಾ
ರ್ಧೇನ ಯಥಾಬಲಮ್ ॥ ಹೃದಯಸ್ಥೋ ಯದಾ ವಾಯುರ್ವ
ಕ್ತ್ರಂ ಶೀಘ್ರಂ ಪ್ರಪದ್ಯತೇ ॥ ಮುಖಂ ಚ ರೋಷಂ ಲಭತೇ
ತದ್ಬಲಾರ್ಧಸ್ಯ ಲಕ್ಷಣಮ್ ॥ ಕಿಂವಾ ಲಲಾಟೇ ನಾಸಾಯಾಂ
ಗಾತ್ರ ಸಂಧಿಷು ಕಕ್ಷಯೋಃ ॥ ಯದಾ ಸಂಜಾಯತೇ ಸ್ವೇದೋ
ಬಲಾರ್ಧಂ ತು ತದಾದಿಶೇತ್ ॥ ಭುಕ್ತವಾನ್ ಕೃತ ಸಂಭೋ
ಗಃ ಕಾಸೀ ಶ್ವಾಸೀ ಕೃಶಃ ಕ್ಷಯೀ ॥ ರಕ್ತಪಿತ್ತೀ ಕ್ಷತೀ ಶೋ
ಷೀ ನ ತಂ ಕುರ್ಯಾತ್ಕದಾಚನ ॥ ಅತಿವ್ಯಾಯಾಮತಃ ಕಾಸೋ
ಜ್ವರ ಶ್ಛರ್ದಿಃ ಶ್ರಮಃ ಕ್ಲಮಃ ॥ ತೃಷ್ಣಾ ಕ್ಷಯಃ ಪ್ರತಮ
ಕೋ ರಕ್ತಪಿತ್ತಂ ಚ ಜಾಯತೇ ॥

“ ವ್ಯಾಯಾಮ ಮಾಡುವದರಿಂದ—ದೇಹ ಲಘುವಾಗುವಿಕೆ, ಕರ್ಮಸಾಮರ್ಥ್ಯ, ಶರೀರವು ಸುಭಕ್ತಾಂಗವುಳ್ಳದ್ದಾಗುವಿಕೆ, ದೋಷಗಳ ನಾಶ, ಜಠರಾಗ್ನಿಯ ವೃದ್ಧಿ ಇವು ಆಗುತ್ತವೆ; ಇದರಿಂದ ವ್ಯಾಯಾಮಶೀಲನಾಗಿ ದೃಢಶರೀರವುಳ್ಳವನಿಗೆ ಯಾವ ರೋಗವೂ ಬರುವದಿಲ್ಲ; ವಿರುದ್ಧ ತಥಾ ವಿದಗ್ಧ ಭೋಜನ ದೋಷವೂ ವ್ಯಾಯಾಮದಿಂದ ಶೀಘ್ರವಾಗಿ ಪಚನವಾಗುತ್ತದೆ. ದೇಹದಲ್ಲಿ ಶಿಥಿಲತಾದಿ ಲಕ್ಷಣಗಳು ಶೀಘ್ರವಾಗಿ ಉಂಟಾಗುವದಿಲ್ಲ; ಏಕಾಏಕೀ ವೃದ್ಧಾವಸ್ಥೆಯು ವ್ಯಾಯಾಮಶೀಲನನ್ನು ಆಕ್ರಮಿಸುವುದಿಲ್ಲ! ಸ್ಥೂಲತ್ವವನ್ನು ನಾಶಮಾಡುವದಕ್ಕೆ ಈ ವ್ಯಾಯಾಮದ ಹೊರ್ತು ಔಷಧವೇ ಇಲ್ಲ! ಬಲವಾನ್ ಪುರುಷನಿಗೂ, ಸ್ನಿಗ್ಧ (ಜಿಡ್ಡುಳ್ಳ) ಪದಾರ್ಥಸೇವಿಗೂ ವ್ಯಾಯಾಮವು ಸದೈವ ಗುಣಕಾರಿಯಾದದ್ದು. ಇದು ವಸಂತ ಮತ್ತು ಶೀತಋತುಗಳಲ್ಲಿ ಅತ್ಯಂತ ಹಿತಕಾರಿಯು. ಅನ್ಯಋತುಗಳಲ್ಲಿಯೂ ಬಲಾನುಸಾರವಾಗಿ ಬಲಾರ್ಧ (ಹೃದಯಸ್ಥಿತ ವಾಯುವು ಶೀಘ್ರವಾಗಿ ಮುಖದಲ್ಲಿ ಬರತೊಡಗಿ, ಮುಖ ಬಣಗುತ್ತಾ ಬರುವಿಕೆ; ಅಥವಾ ಮಸ್ತಕ, ನಾಸಿಕಾ, ಶರೀರದ ಸಂಧಿಸ್ಥಾನಗಳು, ಬಗಲುಗಳು ಇವುಗಳಲ್ಲಿ ಬೆವರು ಬರತೊಡಗಿದರೆ ಅದಕ್ಕೆ ಬಲಾರ್ಧವೆಂದೆನ್ನುವರು.) ಕ್ಕಾಗಿ ಮಾಡಬೇಕು. ಭೋಜನ ಮತ್ತು ಮೈಥುನ ಮಾಡಿದವನೂ, ದುರ್ಬಲನೂ, ಕಾಸರೋಗಿ, ಶ್ವಾಸರೋಗಿ, ಕ್ಷಯರೋಗಿ,

ರಕ್ತಪಿತ್ತವುಳ್ಳವನು, ಕ್ಷತನೂ, ಶೋಷಿರೋಗಿಯೂ ಸಹ ಯಾವಾಗಲೂ ವ್ಯಾಯಾಮವನ್ನು ಮಾಡಬಾರದು. ಅಧಿಕವಾಗಿ ವ್ಯಾಯಾಮ ಮಾಡುವದರಿಂದ ಕೆಮ್ಮು, ಜ್ವರ, ವಾಂತಿ, ಶ್ರಮ, ಗ್ಲಾನಿ, ದಾಹ, ಕ್ಷಯ, ಪ್ರತಮಕವೆಂಬ ಬಿಕ್ಕಳಿಕೆ, ರಕ್ತಪಿತ್ತ ಇವು ಉಂಟಾಗುತ್ತವೆ."

ಅಭ್ಯಂಗಸ್ನಾನ:—"ಅಭ್ಯಂಗಂ ಕಾರಯೇನ್ನಿತ್ಯಂ ಸರ್ವೇಷ್ವಂಗೇಷು ಪುಷ್ಟಿದಮ್ ॥ ಶಿರಃ ಶ್ರವಣ ಪಾದೇಷು ತಂ ವಿಶೇಷೇಣ ಶೀಲಯೇತ್॥ಸಾರ್ಷಪಂ, ಗಂಧತೈಲಂ ಚ ಯತ್ತೈಲಂ ಪುಷ್ಪವಾಸಿತಮ್ ॥ ಅನ್ಯದ್ರವ್ಯಯುತಂ ತೈಲಂ ನ ದುಷ್ಯತಿ ಕದಾಚನ ॥ ಅಭ್ಯಂಗೋ ವಾತ ಕಫ ಹೃಚ್ಛ್ರಮಶಾಂತಿ ಬಲಂ ಸುಖಮ್॥ ನಿದ್ರಾ ವರ್ಣ ಮೃದು ತ್ವಾಯುಷ್ಕುರುತೇ ದೇಹ ಪುಷ್ಟಿಕೃತ್ ॥ ಅಭ್ಯಂಗಃ ಶ್ಶೀಲತೋ ಮೂರ್ಧ್ನಿ ಸಕಲೇಂದ್ರಿಯ ತರ್ಪಕಃ ॥ ದೃಷ್ಟಿಪುಷ್ಟಿ ಕರೋ ಹನ್ತಿ ಶಿರೋಭೂವಿಗತಾನ್ ಗದಾನ್ ॥ ಕೇಶಾನಾಂ ಬಹುತಾಂ ದಾರ್ಢ್ಯಂ ಮೃದುತಾಂ ದೀರ್ಘತಾಂ ತಥಾ ॥ ಕೃಷ್ಣತಾಂ ಕುರುತೇ ಕುರ್ಯಾಚ್ಛಿರಸಾಂ ಪೂರ್ಣತಾ ಮಪಿ ॥ ನ ಕರ್ಣರೋಗಾ ನ ಮಲಂ ನ ಚ ಮನ್ಯಾಹನುಗ್ರಹಃ ॥ ನೋಚ್ಚೈಃ ಶ್ರುತಿ ರ್ನ ಭಾಧಿರ್ಯಂ ಸ್ಯಾನ್ನಿತ್ಯಂ ಕರ್ಣಪೂರಣಾತ್ ॥ ರಸಾದ್ಯೈಃ ಪೂರಣಂ ಕರ್ಣೇ ಭೋಜನಾತ್ ಪ್ರಾಕ್ ಪ್ರಶಸ್ಯತೇ ॥ ತೈಲಾದ್ಯೈಃ ಪೂರಣಂ ಕರ್ಣೇ ಭಾಸ್ಕರೇಽಸ್ತಮುಪಾಗತೇ ॥ ಪಾದಾಭ್ಯಂಗಶ್ಚ ತತ್ ಸ್ಥೈರ್ಯ ನಿದ್ರಾ ದೃಷ್ಟಿಪ್ರಸಾದಕೃತ್ ॥ ಪಾದಸುಪ್ತಿಂ ಶ್ರಮ ಸ್ತಂಭ ಸಂಕೋಚ ಸ್ಫುಟನಂ ಪ್ರಣುತ್ ॥"

"ಸಂಪೂರ್ಣ ಅಂಗಗಳಲ್ಲಿ ಪುಷ್ಟಿಗೋಸ್ಕರವಾಗಿ ನಿತ್ಯವೂ ತೈಲಮರ್ದನ ಮಾಡಿಸುತ್ತಾ ಇರಬೇಕು. ಪರಂತು—ಮಸ್ತಕ ಕಿವಿಗಳು, ಪಾದಗಳಲ್ಲಿ ಬಿಡದೇ ತೈಲಮರ್ದನವನ್ನು (ನಿತ್ಯವೂ) ಮಾಡಿಸಲೇಬೇಕು. ಬಿಳೀ ಸಾಸವೆಯಣ್ಣೆ, ಅಗರಾದಿಗಳಿಂದ ಸುಗಂಧಿತವಾದ ವಸ್ತುಸಂಯೋಜನದಿಂದ ಅಗ್ನಿಸಾಧಿತವಾದ ತೈಲಗಳು, ಪುಷ್ಪವಾಸನಾಯುಕ್ತ ತೈಲ ಅಥವಾ ಬೇರೆ ಹಿತಕಾರೀ ಮೂಲಿಕೆಗಳಿಂದ ಸಾಧಿತವಾದ ತೈಲ ಇವು ಯಾವಾಗಲೂ ದೋಷಾವಹವಾದವುಗಳಲ್ಲ; ತೈಲ ಮರ್ದನದಿಂದ ಕಫ, ವಾಯು, ಶ್ರಮಗಳ ನಾಶನವೂ, ಕಾಂತಿ, ಬಲ, ಸುಖ, ನಿದ್ರಾ, ವರ್ಣೋತ್ಕರ್ಷ, ಕೋಮಲತಾ, ಆಯು, ಶರೀರದಪುಷ್ಟಿ ಇವುಗಳನ್ನುಂಟುಮಾಡುವದು. ಶಿರಸ್ಸಿನಲ್ಲಿ ತೈಲಮರ್ದನದಿಂದ ಸಕಲೇಂದ್ರಿಯ ತೃಪ್ತಿಯೂ, ದೃಷ್ಟಿಪಟುತ್ವವೂ, ಶಿರೋ

ರೋಗ ನಾಶನವೂ ಆಗುವದಲ್ಲದೆ, ತಲೆಯ ಕೂದಲು ಬೆಳೆದು, ದೃಢವಾಗಿ, ಕೋಮಲವಾಗಿ, ದೀರ್ಘವಾಗಿ, ಕಪ್ಪಾಗಿ ವೃದ್ಧಿಯಾಗುವದು. ಮೆದಳಿಗೆ ಶಕ್ತಿಯೂ, ಶಿರಸ್ಸಿಗೆ ಪುಷ್ಟಿಯೂ ಆಗುವದು. ಪ್ರತಿದಿನವೂ ಕಿವಿಗಳಲ್ಲಿ ತೈಲವನ್ನು ಹಾಕುವದರಿಂದ—ಕರ್ಣರೋಗ, ಮಲ, ಮನ್ಯಾ (ಎಂಬ ಕುತ್ತಿಗೆಯ ಹಿಂದಿನ ನಾಡಿಯು) ಸ್ತಂಭ, ಹನುಗ್ರಹ, ಬಹು ಜೋರಿನಿಂದ ಶಬ್ದವನ್ನು ಕೇಳುವಿಕೆ, ಬಧಿರತಾ ಇವುಗಳುಂಟಾಗುವದಿಲ್ಲ; ಕಿವಿಯಲ್ಲಿ ರಸಾದಿಗಳನ್ನು ಹಾಕುವುದಾದರೆ ಭೋಜನಕ್ಕೆ ಪೂರ್ವದಲ್ಲಿ, ಯಣ್ಣೆಯನ್ನು ಸೂರ್ಯಾಸ್ತ ಕಾಲದನಂತರ ಹಾಕಬೇಕು. ಪಾದಗಳಲ್ಲಿ ನಿತ್ಯವೂ ತೈಲಮರ್ದನದಿಂದ— ಪಾದಗಳಿಗೆ ಸ್ಥಿರತಾ, ನಿದ್ರಾ, ದೃಷ್ಟಿಯಪ್ರಸಾಧನ ವುಂಟಾಗುವದು. ಪಾದ ಸುಪ್ತಿ ಎಂದರೆ ಸ್ಪರ್ಶಜ್ಞಾನವಿಲ್ಲದಿರುವಿಕೆ, ಶ್ರಮ, ಸ್ತಂಭ, ಸಂಕೋಚ, ಒಡಿಯುವಿಕೆ ಇವುಗಳನ್ನು ಹರಿಸುತ್ತದೆ.

" ವ್ಯಾಯಾಮ ಕ್ಷುಣ್ಣವಪುಷಂ ಪದ್ಭ್ಯಾಂ ಸಮ್ಮರ್ದಿತಂ ತಥಾ ‖ ವ್ಯಾಧಯೋ ನೋಪಸರ್ಪಂತಿ ವೈನತೇಯ ಮಿವೋರಗಾಃ ‖ ಲೋಮಕೂಪಂ ಶಿರಾಜಾಲಂ ಧಮನೀಭಿಃ ಕಲೇವರೇ ‖ ತರ್ಪಯೇದ್ಬಲಮಾದತ್ತೇ ಸ್ನೇಹಯುಕ್ತೋ ಽವಗಾಹನೇ ‖ ಅದ್ಭಿಃ ಸಂಸಿಕ್ತ ಮೂಲಾನಾಂ ತರೂಣಾಂ ಪಲ್ಲವಾದಯಃ ‖ ವರ್ಧಂತೇ ಹಿ ತಥಾ ನೃಣಾಂ ಸ್ನೇಹ ಸಂಸಿಕ್ತ ಧಾತವಃ ‖ ನವಜ್ವರೀ ಅಜೀರ್ಣೀ ಚ ನಾಭ್ಯಕ್ತವ್ಯಃ ಕಥಂ ಚನ ‖ ತಥಾ ವಿರಿಕ್ತೋ ವಾಂತಶ್ಚ ನಿರೂಢೋ ಯಶ್ಚ ಮಾನವಃ ‖ ಪೂರ್ವಯೋಃ ಕೃಚ್ಛ್ರತಾ ವ್ಯಾಧೇ ರಸಾಧ್ಯತ್ವ ಮಥಾಪಿವಾ ‖ ಶೇಷಾಣಾಂ ನತ್ವಿಹ ಪ್ರೋಕ್ತಾ ವಹ್ನಿಸಾದಾದಯೋ ಗದಾಃ ‖ "

" ವ್ಯಾಯಾಮಶೀಲನಿಗೂ, ಪಾದಸಮ್ಮರ್ದನಶೀಲನಿಗೂ (ಗರುಡನಿಗೆ ಸರ್ಪನಂತೆ) ರೋಗಗಳು ದೂರವಾಗಿ ಓಡುವವು. ಶರೀರದಲ್ಲಿ ತೈಲವನ್ನು ಚ್ಚಿಸಿ ಸ್ನಾನಮಾಡುವದರಿಂದ ರೋಮಕೂಪಗಳೂ, ಶಿರಾಜಾಲಗಳೂ, ಧಮನೀಗಳೂ ಇವುಗಳ ಮೂಲಕ ಶರೀರಕ್ಕೆ ಪುಷ್ಟಿಯನ್ನುಂಟು ಮಾಡುವದರಿಂದ, (ಜಲಸೇಚನ ಮಾಡಲ್ಪಟ್ಟ ವೃಕ್ಷಗಳಿಗೆ ಚಿಗಿರು ಮುಂತಾದವು ಹೇಗೆ ವೃದ್ಧಿಯಾಗುವವೋ ಹಾಗೆ) ಸ್ನೇಹಮರ್ದನಪೂರ್ವಕ ಅಭ್ಯಂಗ ಮಾಡುವವನೂ ಸರ್ವಧಾತು ಪ್ರವೃದ್ಧಿಪೂರ್ವಕವಾಗಿ ಪುಷ್ಟಿಯನ್ನು ಪಡಿಯುವನು. ಪರಂತು ನವೀನ ಜ್ವರದಲ್ಲಿಯೂ, ಅಜೀರ್ಣದಲ್ಲಿಯೂ ತೈಲವನ್ನು ಮರ್ದಿಸಲಾಗದು. ಇದರಿಂದ ಇವು ಕೃಚ್ಛ್ರ ಸಾಧ್ಯ ಅಥವಾ ಅಸಾಧ್ಯವಾಗುವವು. ವಿರೇಚನ, ವಮನವಾಗುವವನಿಗೂ ತೈಲಮರ್ದನವು ಹಿತಕಾರಿಯಲ್ಲ. "

ಉದ್ವರ್ತನ ಕರ್ಮ:—“ ಉದ್ವರ್ತನಂ ಕಫಹರಂ ಮೇದೋಘ್ನಂ ಶುಕ್ರದಂ ಪರಮ್ ॥ ಬಲ್ಯಂ ಶೋಣಿತಕೃಚ್ಚಾಪಿ ತ್ವಕ್ಪ್ರಸಾದ ಮೃದುತ್ವ ಕೃತ್ ॥ ಮುಖಲೇಪಾದ್ದೃಢಂ ಚಕ್ಷುಃ ಪೀನೋ ಗಂಡಸ್ತಥಾನನಮ್ ॥ ಕಾಂತಮವ್ಯಂಗ ಪಿಡಕಂ ಭವೇತ್ಕಮಲ ಸನ್ನಿಭಮ್ ॥ ”

“ ಹಚ್ಚಿಕೊಂಡ ತೈಲನಿವಾರಣೆಗಾಗಿ ಶೀಗೆ ಹೆಸರುಹಿಟ್ಟು ಮುಂತಾದ್ದರಿಂದ ಉದ್ವರ್ತನ ಮಾಡುವದರಿಂದ—ಕಫ, ಮೇದಸ್ಸುಗಳ ನಾಶನವೂ, ವೀರ್ಯ, ಬಲ, ರುಧಿರಗಳ ವೃದ್ಧಿ, ಚರ್ಮದ ಕೋಮಲತ್ವವೂ, ಉತ್ತಮತ್ವವೂ ಇವುಗಳು ಉಂಟಾಗುವವು. ಮುಖಕ್ಕೆ ಉದ್ವರ್ತನ ಮಾಡುವದರಿಂದ— ನೇತ್ರಗಳು ದೃಢವಾಗಿಯೂ, ಕಪೋಲಗಳು ಪೀನಗಳಾಗಿಯೂ ಆಗುತ್ತವೆ; ಮುಖವು ಸುಂದರವಾಗಿಯೂ, ವ್ಯಂಗಪಿಡಕಾದಿಗಳಿಂದ ರಹಿತವಾಗಿಯೂ, ಕಮಲಸನ್ನಿಭವಾಗಿಯೂ ಆಗುತ್ತವೆ.

ಸ್ನಾನಕರಣಮ್:—“ ದೀಪನಂ ವೃಷ್ಯ ಮಾಯುಷ್ಯಂ ಸ್ನಾನ ಮೋಜೋ ಬಲಪ್ರದಮ್ ॥ ಕಂಡೂ ಮಲ ಶ್ರಮ ಸ್ವೇದ ತಂದ್ರಾ ತೃಡ್ದಾಹ ಪಾಕನುತ್ ॥ ಬಾಹ್ಯೈಶ್ಚ ಸೇಕೈಃ ಶೀತಾದ್ಯೈಃ ಊಷ್ಮಾಂತರ್ಯಾತಿ ಪೀಡಿತಃ ॥ ನರಸ್ಯ ಸ್ನಾನಮಾತ್ರಸ್ಯ ದೀಪ್ಯತೇ ತೇನ ಪಾವಕಃ ॥ ಶೀತೇನ ಪಯಸಾ ಸ್ನಾನಮ್ ರಕ್ತಪಿತ್ತ ಪ್ರಶಾಂತಿ ಕೃತ್ ॥ ತದೇವೋಷ್ಣೇನ ತೋಯೇನ ಬಲ್ಯಂ ವಾತ ಕಫಾಪಹಮ್ ॥ ಶಿರಃಸ್ನಾನಮಚಕ್ಷುಷ್ಯಮತ್ಯುಷ್ಣೇನಾಂಭಸಾ ಸದಾ ॥ ವಾತಶ್ಲೇಷ್ಮಪ್ರಕೋಪೇ ತು ಹಿತಂ ತಚ್ಚ ಪ್ರಕೀರ್ತಿತಮ್ ॥ ”

“ ಸ್ನಾನಮಾಡುವದರಿಂದ—ಅಗ್ನಿದೀಪನವೂ, ವೀರ್ಯ, ಆಯು, ಓಜೋವೃದ್ಧಿ, ಬಲವೃದ್ಧಿಯುಂಟಾಗಿ, ಮೈತುರಿ, ಮಲ, ಶ್ರಮ, ಸ್ವೇದ, ತಂದ್ರಾ, ದಾಹ, ಪಾಕ ಇವುಗಳನ್ನು ನಾಶಮಾಡುತ್ತದೆ. ಶೀತಲ ಜಲ ಸೇಚನಮಾಡುವದರಿಂದ ಹೊರಗಿನ ಉಷ್ಮಾ ತಡಿಯಲ್ಪಟ್ಟು, ಶರೀರದ ಒಳಗೆ ಸೇರಿಕೊಳ್ಳುವದು. ಇದರಿಂದ ಕೇವಲ ಸ್ನಾನಮಾತ್ರದಿಂದಲೇ ಮನುಷ್ಯನ ಜಠರಾಗ್ನಿಯು ದೀಪನವನ್ನು ಪಡಿಯುತ್ತದೆ. ಶೀತಲ ಜಲಸ್ನಾನದಿಂದ ರಕ್ತಪಿತ್ತದ ಶಾಂತಿಯಾಗುತ್ತದೆ. ಉಷ್ಣ ಜಲಸ್ನಾನವು ಬಲವೃದ್ಧಿ, ವಾತ ಕಫದ ನಾಶವಾಗುತ್ತದೆ. ಬಹಳ ಬಿಸೀನೀರಿನಿಂದ ಶಿರಃಸ್ನಾನ ಮಾಡಿದರೆ ನೇತ್ರಗಳಿಗೆ ಅಹಿತವಾಗುತ್ತದೆ. ಪರಂತು ವಾತ ಶ್ಲೇಷ್ಮ ಪ್ರಕೋಪದಲ್ಲಿ ಅದು ಹಿತವಾಗಿದ್ದು. ”

" ಅಶೀತೇನಾಂಭಸಾ ಸ್ನಾನಂ ಪಯಃ ಪಾನಂ ನವಾಃ ಸ್ತ್ರಿಯಃ ||
ಏತಾ ದ್ವಾ ಮಾನವಾಃ ಪಥ್ಯಂ ಸ್ನಿಗ್ಧಮಲ್ಪಂ ಚ ಭೋಜನಮ್ ||"

" ಮಂದೋಷ್ಣ ಜಲದಿಂದ ಸ್ನಾನಮಾಡುವಿಕೆ, ದುಗ್ಧಪಾನ, ನವೀನ ಸ್ತ್ರೀ, ಹಾಗೆಯೇ ಸ್ನಿಗ್ಧ (ಜಿಡ್ಡುಳ್ಳ) ಸ್ವಲ್ಪ ಭೋಜನ ಇವೇ ಮಾನವರಿಗೆ ಪಥ್ಯವಾದವುಗಳು."

" ಯಃ ಸದಾಮಲಕೈಃ ಸ್ನಾನಂ ಕರೋತಿ ಸ ವಿನಿಶ್ಚಿತಮ್|| ವಲೀಪಲಿತ ನಿರ್ಮುಕ್ತೋ ಜೀವೇದ್ವರ್ಷಶತಂನರಃ || ಸ್ನಾನಂ ಜ್ವರೇ ಽತಿಸಾರೇ ಚ ನೇತ್ರಕರ್ಣಾನಿಲಾರ್ತಿಷು || ಆಧ್ಮಾನ ಪೀನಸಾಜೀರ್ಣಭುಕ್ತವತ್ಸು ಚ ಗರ್ಹಿತಮ್|| ಸ್ನಾನಸ್ಯಾನಂತರಂ ಸಮ್ಯಗ್ವಸ್ತ್ರೇಣಾಂಗಸ್ಯ ಮಾರ್ಜನಮ್ || ಕಾಂತಿಪ್ರದಂ ಶರೀರಸ್ಯ ಕಂಡೂ ತ್ವಗ್ದೋಷನಾಶನಮ್ || "

" ಯಾವ ಮನುಷ್ಯನು ಸದೈವ ನೆಲ್ಲೀಚಟ್ಟನ್ನರದು ಶರೀರಕ್ಕೆ ಮರ್ದಿಸಿಕ್ಕೊಂಡು ಸ್ನಾನಮಾಡುವನೋ ಅವನು-ವಲೀಪಲಿತರಹಿತನಾಗಿ, (ಅಂದರೆ ಮುಖದಲ್ಲಿ ತೆರೆಗಳಿಲ್ಲದೆ, ಕೂದಲು ಪಕ್ವವಾಗದೆ ಇದ್ದು) ನೂರು ವರ್ಷಗಳವರಿಗೆ ಬದುಕುತ್ತಾನೆ. ಪರಂತು—ಜ್ವರಾತುರನೂ, ಅತಿಸಾರ ರೋಗಿ, ನೇತ್ರ ಕಿವಿ ವಾಯುರೋಗಿಯೂ, ಆಧ್ಮಾನವೆಂಬ ವಾತವ್ಯಾಧಿಯುಳ್ಳವನೂ, ಪೀನಸರೋಗಿ, ಅಜೀರ್ಣವುಳ್ಳವನೂ, ಹಾಗೆಯೇ ಆಗಲೇ ಭೋಜನಮಾಡಿರುವವನೂ ಸಹ ಸ್ನಾನವನ್ನು ಮಾಡಬಾರದು. ಸ್ನಾನಮಾಡಿದ ಸಂಗಡಲೇ ಒಳ್ಳೇ ವಸ್ತ್ರದಿಂದ ಶರೀರವನ್ನು ಒರಸಿಕ್ಕೊಳ್ಳಬೇಕು. ಇದರಿಂದ-ಕಾಂತಿಯುಂಟಾಗುವದು, ಶರೀರದ ಕಡತ, ಚರ್ಮದೋಷ ಇವು ನಾಶವಾಗುವವು."

" ನ ಸ್ನಾನಶಾಟ್ಯಾ ಸ್ಪೃಶೇದುತ್ತಮಾಂಗಮ್ " (ಚರಕ)

" ಸರ್ವದಾ ಉಟ್ಟುಕ್ಕೊಳ್ಳುತ್ತಾ ನೀಚಾಂಗ ಮಲದೂಷಿತವಾದ, ಹಾಗೆಯೇ ಆಗಲೇ ಒದ್ದೆಮಾಡಿರುವ ವಸ್ತ್ರದಿಂದ ಉತ್ತಮಾಂಗ (ವೆಂಬ ಮೆದಳಿನ ಸ್ಥಾನ) ವನ್ನು ಸ್ಪರ್ಶ ಸಹಾ ಮಾಡಬಾರದು ! ! "

☞ ಸಾವಿರಾರು ವರ್ಷಗಳ ಹಿಂದಿನ ನಮ್ಮ ಪೂರ್ವಜರಾದ ಆತ್ರೇಯ ಮಹರ್ಷಿಗಳ ವಿಜ್ಞಾನಕ್ಕೊ, ಈಗಿನ ನವನಾಗರಿಕತನದ ಕಾಲದ್ದಕ್ಕೊ ಎಷ್ಟು ಅಂತರವಿರುವದೆಂಬುದನ್ನು ಸ್ವಲ್ಪ ಗಮನಿಸಿರಿ ! ! ಉತ್ತಮಾಂಗವು ಮೆದಳು Brain ಇರತಕ್ಕ ಸ್ಥಳವು. ಅದನ್ನು ಸಾಮಾನ್ಯ ವಸ್ತ್ರದಿಂದ ಸ್ಪರ್ಶಮಾಡಬಾರದೆಂದು ಚರಕಸಂಹಿತೆಯು ಸೂತ್ರಸ್ಥಾನದ ಲನೇ ಅಧ್ಯಾಯದಲ್ಲಿ ಬೋಧಿಸಿದ್ದಾರೆ. ಇಂತಾದ್ದರಲ್ಲ ನಮ್ಮ ಪೂರ್ವಜರು ನಾಗರಿಕತೆಯೆಂಬ ಪರ್ವತ ಶಿಖರವನ್ನು ಎಷ್ಟು ಮೇಲಕ್ಕೆ ಹತ್ತಿದ್ದರು, ನಾವು ಈಗ ಆ ಪರ್ವತದ ಯಾವ ಸ್ಥಳದಲ್ಲಿದ್ದೇವೆ ಎಂಬದನ್ನು ಈಗಿನವರು ಯೋಚಿಸತಕ್ಕದ್ದು ನ್ಯಾಯವಲ್ಲವೆ?

ವಸ್ತ್ರಧಾರಣೆ:—“ಕೌಶೇಯರ್ಕೌರ್ಣಿಕ ವಸ್ತ್ರಂ ಚ ರಕ್ತವಸ್ತ್ರಂ ತಥೈವ ಚ ॥ ವಾತಶ್ಲೇಷ್ಮಹರಂ ತತ್ತು ಶೀತಕಾಲೇ ವಿಧಾರಯೇತ್ ॥ ಮೇಧ್ಯಂ ಸುಶೀತಂ ಪಿತ್ತಘ್ನಂ ಕಷಾಯಂ ವಸ್ತ್ರಮುಚ್ಯತೇ ॥ ತದ್ಧಾರಯೇದುಷ್ಣಕಾಲೇ ತತ್ರಾಪಿ ಲಘುಶಸ್ಯತೇ॥ ಶುಕ್ಲಂ ತು ಶುಭದಂ ವಸ್ತ್ರಂ ಶೀತಾತಪ ನಿವಾರಣಮ್ ॥ ನ ಚೋಷ್ಣಂ ನ ಚ ವಾಶೀತಂ ತತ್ತು ವರ್ಷಾಸು ಧಾರಯೇತ್ ॥”

“ರೇಶ್ಮೆಯ ವಸ್ತ್ರಗಳೂ, ಉಣ್ಣೆಯ ವಸ್ತ್ರಗಳೂ, ರಕ್ತವಸ್ತ್ರವೂ ಸಹ ವಾತ ಮತ್ತು ಶ್ಲೇಷ್ಮಹಾರಕಗಳು; ಇವನ್ನು ಶೀತಕಾಲದಲ್ಲಿ ಧರಿಸತಕ್ಕದ್ದು. ಕಷಾಯ (ಕಾವೀಬಟ್ಟೆ) ವಸ್ತ್ರವು ಪವಿತ್ರವೂ, ಶೀತಲವೂ, ಪಿತ್ತನಾಶಕವೂ ಆಗಿದೆ; ಇದನ್ನು ಉಷ್ಣಕಾಲದಲ್ಲಿ ಧರಿಸಬೇಕು. ಇದರಲ್ಲಿಯೂ ತೆಳುವಾದದ್ದು ಪ್ರಶಸ್ತವಾದದ್ದು. ಶುಕ್ಲ (ಬಿಳೀ) ವಸ್ತ್ರವು ಕಲ್ಯಾಣಕಾರಿಯು; ಇದು ಶೀತವನ್ನೂ, ಬಿಸಿಲನ್ನೂ ನಿವಾರಿಸುತ್ತದೆ. ಇದು ಅತಿ ಉಷ್ಣವೂ ಅಲ್ಲ; ಅತಿ ಶೀತವೂ ಅಲ್ಲ! ಇದನ್ನು ವರ್ಷಋತುವಿನಲ್ಲಿ ಧಾರಣೆ ಮಾಡತಕ್ಕದ್ದು.”

“ಯಶಸ್ಯಂ ಕಾಮ್ಯಮಾಯುಷ್ಯಂ ಶ್ರೀಮುದಾನಂದ ವರ್ಧನಮ್ ॥ ತ್ವಚ್ಯಂ ವಶೀಕರಂ ರುಚ್ಯಂ ನವ ನಿರ್ಮಲ ಮಂಬರಮ್॥ ಕದಾಪಿ ನ ಜನೈಃ ಸದ್ಭಿರ್ಧಾರ್ಯಂ ಮಲಿನ ಮಂಬರಮ್ ॥ ತತ್ತು ಕಂಡೂ ಕ್ರಿಮಿಕರಂ ಗ್ಲಾನ್ಯಲಕ್ಷ್ಮೀಕರಂ ಪರಮ್॥”

“ನವೀನವಾದ ನಿರ್ಮಲಾಂಬರಧಾರಣೆಯಿಂದ—ಯಶಸ್ಸೂ, ಕಾಮೋದ್ದೀಪನವೂ, ಆಯುರ್ವೃದ್ಧಿ, ಲಕ್ಷ್ಮೀ, ಚರ್ಮಕ್ಕೆ ಹಿತ, ವಶೀಕರಣ, ರುಚಿಯನ್ನುತ್ಪತ್ತಿ ಮಾಡುವಿಕೆ ಇತ್ಯಾದಿ ಸದ್ಗುಣಗಳಿವೆ. ಮಲಿನ ವಸ್ತ್ರವನ್ನು ಎಂದೆಂದಿಗೂ ಧರಿಸಬಾರದು; ಇದು-ಮೈನವೆ, ಕ್ರಿಮಿ, ಗ್ಲಾನಿ, ಶೋಭಾಹೀನತೆ, ದಾರಿದ್ರ್ಯ ಇವನ್ನುಂಟುಮಾಡುವದು.”

ಅನುಲೇಪನಂ:—“ಕುಂಕುಮಂ ಚಂದನಂ ಚಾಪಿ ಕೃಷ್ಣಾಗರು ಚ ಮಿಶ್ರಿತಮ್ ॥ ಉಷ್ಣಂ ವಾತ ಕಫ ಧ್ವಂಸಿ ಶೀತಕಾಲೇ ತದಿಷ್ಯತೇ ॥ ಚಂದನಂ ಘನಸಾರೇಣ ವಾಲಕೇನ ಚ ಮಿಶ್ರಿತಮ್ ॥ ಸುಗಂಧಿ ಪರಮಂ ಶೀತಮುಷ್ಣಕಾಲೇ ಪ್ರಶಸ್ಯತೇ ॥ ಚಂದನಂ ಘುಸೃಣೋಪೇತಂ ಮೃಗನಾಭಿ ಸಮಾಯುತಮ್ ॥ ನ ಚೋಷ್ಣಂ ನ ಚ ವಾ ಶೀತಂ ವರ್ಷಾಕಾಲೇ ತದಿಷ್ಯತೇ ॥ ಅನುಲೇಪಸ್ತೃಷಾ ಮೂರ್ಛಾ ದುರ್ಗಂಧ ಸ್ವೇದ ದಾಹಜಿತ್ ॥ ಸೌಭಾಗ್ಯ

**ತೇಜಸ್ತ್ವಗ್ವರ್ಣಂ ಪ್ರೀತ್ಯೋಜೋ ಬಲವರ್ಧನಃ || ಸಸ್ನಾನರ್ಹ ಲೋಕಾನಾಮನುಲೇಪೋಽಪಿ ನೋ ಹಿತಃ || ''**

"ಕೇಸರಿ, ಚಂದನ, ಕೃಷ್ಣಾಗರು ಇವನ್ನು ಕೇರಿಸಿದ ಗಂಧಾನುಲೇಪನವು—ಉಷ್ಣ, ವಾತ ಕಫನಾಶಕವಾದ್ದರಿಂದ, ಇದು ಶೀತಕಾಲಕ್ಕೆ ಸುಖಕರವಾದದ್ದು; ಕೇಸರಿ, ಚಂದನ, ಪಚ್ಚಕರ್ಪೂರ, ಲಾಮಂಚಾದಿಗಳು, ಇವು ಕೂಡಿದ ಗಂಧಾನುಲೇಪನವು-ಅತ್ಯಂತ ಶೀತಲವಾದ್ದರಿಂದ ಇದರ ಉಪಯೋಗವು ಉಷ್ಣಕಾಲದಲ್ಲಿ ಪ್ರಶಸ್ತವಾದದ್ದು; ಚಂದನ, ಕೇಸರಿ, ಕಸ್ತೂರಿ ಇವು ಕೂಡಿದ ಗಂಧವು ಉಷ್ಣವೂ ಅಲ್ಲ, ಶೀತವೂ ಅಲ್ಲದಿರುವದರಿಂದ, ಇದರ ಲೇಪನವು ವರ್ಷಾಋತುವಿನಲ್ಲಿ ಉಪಯೋಗವು. ಈ ಅನುಲೇಪನ ಮಾಡುವದರಿಂದ-ತೃಷಾ, ಮೂರ್ಛಾ, ದುರ್ಗಂಧ, ಸ್ವೇದ, ದಾಹ ಇವುಗಳು ನಾಶವಾಗುವವು. ಸೌಭಾಗ್ಯ, ತೇಜಸ್ಸು, ತ್ವಚಾಕ್ಕೆ ವರ್ಣ, ಪ್ರೀತಿ, ಓಜಸ್ಸು, ಬಲ ಇವನ್ನುಂಟು ಮಾಡುವದು; ಪರಂತು ಯಾವ ಮನುಷ್ಯರಿಗೆ ಸ್ನಾನ ಮಾಡುವದು ನಿಷೇಧಿಸಲ್ಪಟ್ಟಿದೆಯೋ ಅವರಿಗೆ ಅನುಲೇಪನವೂ ನಿಷೇಧವಾದದ್ದು. ''

**ಪುಷ್ಪಾದಿಧಾರಣೆ:—" ಸುಗಂಧಿ ಪುಷ್ಪ ಪತ್ರಾಣಾಂ ಧಾರಣಂ ಕಾಂತಿಕಾರಕಂ || ಪಾಪ ರಕ್ಷೋಗ್ರಹ ಹರಂ ಕಾಮದಂ ಶ್ರೀವಿವರ್ಧನಮ್ || ದೇಹಸ್ಯ ರೋಮಕೂಪಾನಾಂ ತೃಪ್ತಿಂ ತೇಜೋ ವಿವರ್ಧನಮ್ ||**

"ಸುಗಂಧಯುಕ್ತವಾದ—ಮಲ್ಲಿಕಾ, ಚಂಪಕ, ಬಕುಳ, ಪಾರಿಜಾತಾದಿ ಪುಷ್ಪಗಳ ಮತ್ತು ಮರುಗ, ದವನ, ಪಚ್ಚೆತೆನೆ ಮುಂತಾದ ಪತ್ರಗಳ ಮಾಲಿಕಾ ಧಾರಣೆಮಾಡುವದರಿಂದ ಕಾಂತಿ, ಕಾಮ್ಯ, ಲಕ್ಷ್ಮೀಕರವಾದದ್ದು; ಪಾಪ, ರಾಕ್ಷಸ, ಗ್ರಹ ಇವುಗಳ ನಾಶನಮಾಡುವದು, ದೇಹಸ್ಥ ರೋಮಕೂಪಾದಿ ಬಾಹ್ಯೇಂದ್ರಿಯಗಳಿಗೆ ತೃಪ್ತಿಯನ್ನೂ, ತೇಜಸ್ಸನ್ನೂ ಉಂಟುಮಾಡುತ್ತದೆ. ''

**ಆಭೂಷಣಾಲಂಕಾರ:—" ಭೂಷಣೈ ರ್ಭೂಷಯೇ ದಂಗಂ, ಯಥಾ ಯೋಗ್ಯಂ ವಿಧಾನತಃ || ಶುಚಿ ಸೌಭಾಗ್ಯ ಸಂತೋಷ ದಾಯಕಂ ಕಾಂಚನಂ ಸ್ಮೃತಮ್ || ಗ್ರಹದೃಷ್ಟಿಹರಂ ಪುಷ್ಟಿಕರಂ ದುಃಖಸ್ಯ ನಾಶನಮ್ || ಪಾಪದಾರ್ಭಾಗ್ಯಶಮನಂ ರತ್ನಾಭರಣ ಧಾರಣಮ್ ||**

**ಮಾಣಿಕ್ಯಂ ತರಣೇಃ ಸುಜಾತಮಮಲಂ ಮುಕ್ತಾಫಲಂ ಶೀತಗೋರ್ಮಾಹೇಯಸ್ಯ ಚ ವಿದ್ರುಮೋ ನಿಗದಿತಃ ಸೌಮ್ಯಸ್ಯ ಗಾರುತ್ಮಕಮ್ ||**

ದೈವೇಜ್ಯಸ್ಯ ಚ ಪುಷ್ಯರಾಗಮಸುರಾ ಚಾರ್ಯಸ್ಯ ವಜ್ರಂ ಶನೇ
ರ್ನೀಲಂ ನಿರ್ಮಲ ಮನ್ಯಯೋಃ ಶ್ಚ ಗದಿತೇ ಗೋಮೇದ ವೈಡೂರ್ಯಕೇ ॥ "

" ವಿಧಿಪೂರ್ವಕವಾಗಿ ಯಥಾಯೋಗ್ಯ ಆ ಭೂಷಣಗಳಿಂದ ಅಂಗಗಳನ್ನು ಶೋಭಿತಮಾಡಿಕೊಳ್ಳಬೇಕು. ಸುವರ್ಣದ ಒಡವೆಗಳ ಧಾರಣೆಯಿಂದ—ಪವಿತ್ರತಾ, ಸೌಭಾಗ್ಯ, ಸಂತೋಷವುಂಟಾಗುತ್ತದೆ. ರತ್ನಧಾರಣೆಯು-ಗ್ರಹದೃಷ್ಟಿ, ದುಸ್ವಪ್ನ, ಪಾಪ, ದೌರ್ಭಾಗ್ಯಗಳನ್ನು ನಾಶಮಾಡಿ, ಪುಷ್ಟಿಯನ್ನುಂಟುಮಾಡುವದು. ಸೂರ್ಯನಿಗೆ ಮಾಣಿಕ್ಯವೂ, ಚಂದ್ರನಿಗೆ ಮುಕ್ತಾಫಲವೂ, ಅಂಗಾರಕನಿಗೆ ಹವಳವೂ, ಬುಧನಿಗೆ ಗಾರುತ್ಮಕ ಮಣಿಯೂ, ಗುರುವಿಗೆ ಪುಷ್ಯರಾಗವೂ, ಶುಕ್ರನಿಗೆ ವಜ್ರವೂ, ಶನಿಗೆ ನೀಲಮಣಿಯೂ, ರಾಹುವಿಗೆ ಗೋಮೇದಿಕವೂ, ಕೇತುವಿಗೆ ವೈಡೂರ್ಯವೂ ಪ್ರೀತಿಕರವಾದದ್ದು; ಆಯಾಯ ರತ್ನಧಾರಣೆಯಿಂದ ಗ್ರಹಗಳ ಪೀಡಾನಾಶನವೂ, ಇಷ್ಟಾರ್ಥಸಿದ್ಧಿಯೂ ಲಭಿಸುವದು. "

" ವಾಸ ಸ್ಸುಗಂಧ ರತ್ನಾನಾಂ ಧಾರಣಂ ಪ್ರೀತಿವರ್ಧನಮ್ ॥
ರಕ್ಷೋಘ್ನಮರ್ಥ್ಯ ಮಾಜಸ್ಯಂ ಸೌಭಾಗ್ಯಕರ ಮುತ್ತಮಮ್ ॥"

" ಸುಂದರವಾದ ವಸ್ತ್ರಗಳು, ಪುಷ್ಪಮಾಲಾ, ಚಂದನ, ಅತ್ತರ್ ಮುಂತಾದವುಗಳು, ರತ್ನಗಳು ಇವುಗಳನ್ನು ಧರಿಸುವದು—ಪ್ರೀತಿ, ಧನ, ಓಜಸ್ಸು, ಸೌಭಾಗ್ಯಗಳನ್ನು ವೃದ್ಧಿಪಡಿಸಿ, ರಾಕ್ಷಸಗ್ರಹ ನಾಶಕವಾಗುತ್ತದೆ. "

" ಸತತಂ ಸಿದ್ಧಮಂತ್ರಸ್ಯ ಮಹೌಷಧ್ಯಸ್ತಥೈವಚ ॥ ರೋಚನಾ ಸರ್ಷಪಾದೀನಾಂ ಮಾಂಗಲ್ಯಾನಾಂ ಚ ಧಾರಣಮ್ ॥ ಆಯುರ್ಲಕ್ಷ್ಮೀ ಕರಂ ರಕ್ಷೋಹರಂ ಮಂಗಲದಂ ಶುಭಮ್ ॥ ಹಿಂಸ್ರಾದಿ ಭಯವಿಧ್ವಂಸಿ ವಶೀಕರಣ ಕಾರಕಮ್ ॥ "।

" ಸಿದ್ಧಮಂತ್ರ, ಮಹೌಷಧಿ, ಮಾಂಗಲಿಕ ಗೋರೋಚನ, ಬಿಳೀಸಾಸವೆ, ಯಂತ್ರಗಳ ಧಾರಣೆಮಾಡುವದು—ಆಯು, ಲಕ್ಷ್ಮೀಸಹಿತ ಮಂಗಲವನ್ನುಂಟುಮಾಡುವದು; ರಾಕ್ಷಸ, ಭೂತ ಭೇತಾಳ ದೆವ್ವ ಪೀಡೆ ಪಿಶಾಚಿಗಳ ಭಯ ನಾಶವಾಗುವದು. ವಶೀಕರಣಕಾರಕವೂ ಆಗಿದೆ. "

ಭೋಜನ ವಿಧಿ:—" ತತೋ ಭೋಜನಲಾಯಾಂ ಕುರ್ಯಾನ್ಮಾಂಗಲ್ಯ ದರ್ಶನಮ್ ॥ ತಸ್ಯ ಪ್ರದರ್ಶನಂ ನಿತ್ಯಂ ಆಯುರ್ಧರ್ಮ ವಿವರ್ಧನಮ್ ॥ ಲೋಕೇಽಸ್ಮಿ ಮಂಗಲಾನ್ಯಷ್ಟಾ ಬ್ರಾಹ್ಮಣೋ ಗೌ ರ್ಹುತಾಶನಃ ॥ ಪುಷ್ಪ ಸ್ರಕ್ಸರ್ಪಿರಾ ದಿತ್ಯ ಆಪೋ ರಾಜಾ ತಥಾಷ್ಟಮಃ ॥ "

" ಭೋಜನ ಕಾಲದಲ್ಲಿ ಮಂಗಲ ಪದಾರ್ಥಗಳ ದರ್ಶನವನ್ನು ಮಾಡಬೇಕು; ಇವುಗಳ ದರ್ಶನದಿಂದ—ಆಯುರ್ಧರ್ಮಗಳ ವೃದ್ಧಿಯಾಗುವದು. ಈ ಲೋಕದಲ್ಲಿ ೮ ಮಂಗಲ ವಸ್ತುಗಳಿವೆ:— ಬ್ರಾಹ್ಮಣ, ಗೋವು, ಅಗ್ನಿ, ಪುಷ್ಪಮಾಲಾ, ಘೃತ, ಸೂರ್ಯ, ಜಲ, ರಾಜಾ ಇವೇ ಮಂಗಲಾಷ್ಟಕಗಳು ! ! "

" ಪಾದುಕಾ ರೋಹಣಂ ಕುರ್ಯಾತ್ ಪೂರ್ವಂ ಭೋಜನತಃ ಪರಮ್ ॥ ಪಾದರೋಗಹರಂ ವೃಷ್ಯಂ ಚಕ್ಷುಷ್ಯಂ ಚಾಯುಷೋ ಹಿತಮ್ ॥ ಶರೀರೆ ಜಾಯತೇ ನಿತ್ಯಂ ವಾಂಛಾ ನ್ಯಾಣಾಂ ಚತುರ್ವಿಧಾ ॥ ಬುಭುಕ್ಷಾ ಚ ಪಿಪಾಸಾ ಚ ಸುಷುಪ್ಸಾ ಚ ರತಿಸ್ಪೃಹಾ ॥ ಭೋಜನೇಚ್ಛಾ ವಿಘಾತಾತ್ಸ್ಯಾದಂಗಮರ್ದೋಽ ರುಚಿರ್ಭ್ರಮಃ ॥ ತಂದ್ರಾಲೋಚನ ದೌರ್ಬಲ್ಯಂ ಧಾತುದಾಹೋ ಬಲಕ್ಷಯಃ ॥ ವಿಘಾತೇನ ಪಿಪಾಸಾಯಾಃ ಶೋಷಃ ಕಂಠಾಸ್ಯಯೋ ರ್ಭವೇತ್ ॥ ಶ್ರವಣಸ್ಯಾವರೋಧಶ್ಚ ರಕ್ತಶೋಷೋ ಹೃದಿ ವ್ಯಥಾ ॥ ನಿದ್ರಾ ವಿಘಾತತೋ ಜೃಂಭಾ ಶಿರೋಲೋಚನಗೌರವಮ್ ॥ ಅಂಗೆ ಮರ್ದಸ್ತಥಾ ತಂದ್ರಾ ಸ್ಯಾದನ್ನಾಪಾಕ ಏವ ಚ ॥ "

" ಭೋಜನಕ್ಕೆ ಮೊದಲೂ, ಅನಂತರವೂ (ಅಂದರೆ ಸ್ನಾನವಾಡಿ, ಮಡಿಮಾಡನಂತರ, ಪುನಃ ಹೊರಗೆ ಮೈಲಿಗೆಯ ಪೋಷಾಕು ಹಾಕುವವರಿಗೆ) ಪಾದುಕಾ (ಹಾವಿಗೆ) ಗಳನ್ನು ಹಾಕಿಕೊಳ್ಳುತ್ತಾ ಇರಬೇಕು. ಇದನ್ನು ಉಪಯೋಗಿಸುವದರಿಂದ—ಪಾದಗಳ ರೋಗನಾಶವೂ, ವೀರ್ಯವೃದ್ಧಿಯೂ, ನೇತ್ರಗಳಿಗೂ, ಆಯುವಿಗೂ ಹಿತವಾದದ್ದು. "

☞ ಇಲ್ಲಿ ತಿಳಿಯಬೇಕಾದ ವಿಷಯವೇನೆಂದರೆ:— ಚರಕದಲ್ಲಿ—"ಛತ್ರೀದಂಡೀ, ಮೌಳೀ, ಸೋಪಾನಸ್ಕೋ ಯುಗಮಾತ್ರ ದೃಗ್ವಿಚರೇತ್ " ಅಂದರೆ ಹೊರಗೆ ಸಂಚರಿಸುವಾಗ-ಛತ್ರಿಯನ್ನು ಹಿಡಿದುಕೊಂಡು, ದಂಡವೆಂಬ ಕೈಯ್ಯಲ್ಲಿ ಸುಂದರವಾದ ಕೋಲು (ಸೋಟಾ) ಹಿಡದುಕೊಂಡು, ತಲೆಗೆ ಏನಾದರೂ ಸುತ್ತಿಕೊಂಡು, ಪಾದರಕ್ಷಾ ಧರಿಸಿದವನಾಗಿ, ಯುಗಮಾತ್ರದೃಕ್-ದಾರಿಯಲ್ಲಿ ೩ ಗಜಗಳ ದೂರದವರಿಗೂ ದೃಷ್ಟಿಪ್ರಸಾರ ಪೂರ್ವಕವಾಗಿ (ಅಲ್ಲಿರುವ ಪದಾರ್ಥಗಳನ್ನು ನೋಡಿಕೊಳ್ಳುತ್ತಾ) ಸಂಚರಿಸಬೇಕೆಂದು ವಿಧಿಸಲ್ಪಟ್ಟಿದೆ. (ಮನುಸ್ಮೃತಿಯಲ್ಲಿ ಸಹ) ಕೊನೇ ಪರ್ಯಾಯದ ವಿಷಯವಾಗಿ "ದೃಷ್ಟಿಪೂತಂ ನ್ಯಸೇತ್ಪಾದಂ" (ದೃಷ್ಟಿಪ್ರಸಾರದಿಂದ ಪವಿತ್ರವೆಂದರಿತ ಸ್ಥಳದಲ್ಲಿಯೇ ಪಾದಗಳನ್ನಿಡುತ್ತಾ ಸಂಚರಿಸಬೇಕೆಂದಿದೆ.) ವಾಗ್ಭಟದಲ್ಲಿ:—" ಸಾತಪತ್ರ ಪದತ್ರಾಣೋ ವಿಚರೇದ್ಯುಗಮಾತ್ರದೃಕ್ ॥ " ಛತ್ರಿಯನ್ನು ಹಿಡಿದುಕೊಂಡು, ಪದತ್ರಾಣ-ಉಪಾನಹ (ಪಾದರಕ್ಷೆ) ಗಳನ್ನು ಧರಿಸಿಕೊಂಡು, ಯುಗ-೩ ಗಜಮಾತ್ರ ದ್ರಿಷ್ಟಿಯಿಂದ ರಸ್ತೆಯನ್ನು ನೋಡಿಕೊಳ್ಳುತ್ತಾ ಸಂಚರಿಸಬೇಕು " ಎಂತಲೂ, " ನಿಶಿ ಚಾತ್ಯಯಿಕೇ

ಕಾರ್ಯೇ ಛತ್ರೀ ಮೌಲೀ ಸಹಾಯವಾನ್ ||" ರಾತ್ರಿಯಲ್ಲಿ ಅವಸರ ಕಾರ್ಯಕ್ಕಾಗಿ ಹೋಗ ಬೇಕಾದರೆ-ಛತ್ರಿಯನ್ನು ಧರಿಸಿಕೊಂಡು, ತಲೆಗೆ ಸುತ್ತಿಕೊಂಡು, ಸಹಾಯಕರೊಡನೆ ಹೊರಡಬೇಕು" ಎಂತಲೂ ಹೇಳಲ್ಪಟ್ಟಿದೆ. ಇದರಲ್ಲಿ ಇತರ ಸಮಯಗಳಲ್ಲೆಲ್ಲ ಪಾದ ರಕ್ಷಾಧಾರಣೆಯೂ, ಸ್ನಾನಮಾಡಿದ ಮಡಿಯಾದ ಸಮಯದಲ್ಲಿ "ಭೋಜನಾತ್ಪೂರ್ವಂ ಪರಂ ಚ ಪಾದುಕಾ (ಹಾವಿಗೆ) ರೋಹಣಮಾಡುವಿಕೆಯೂ, ವಿಧಿಸಲ್ಪಟ್ಟಿದೆ. ವಾಗ್ಭಟ ದಲ್ಲಿ "ಶಿರಃಶ್ರವಣಪಾದೇಷು ತಂ ವಿಶೇಷೇಣ ಶೀಲಯೇತ್" ಅಂದರೆ ನಿತ್ಯವೂ ತೈಲಮ ರ್ದನೆಯು ಶಿರಸ್ಸಿನಲ್ಲಿಯೂ, ಕಿವಿಗಳಲ್ಲಿಯೂ, "ಪಾದಗಳಲ್ಲಿಯೂ ಮಾಡಲೇಬೇಕು" ಎಂಬ ವಾಕ್ಯವೂ, ಚರಕದಲ್ಲಿ "ಮಲಾಯತನೇ ಷ್ವಭೀಕ್ಷ್ಣಂ ಪಾದಯೋಶ್ಚ ವೈ ಮಲ್ಯ ಮಾದಧ್ಯಾತ್" ಮಲಸ್ಥಾನಗಳಾದ ಗುದ, ಕಣ್ಣು, ಮೂಗು ಮುಂತಾದವುಗಳನ್ನೂ ಪಾದಗಳನ್ನೂ ನಿರ್ಮಲವಾಗಿ ಇಡಬೇಕು ಎಂಬ ವಾಕ್ಯವೂ ವಿಚಾರಾರ್ಹವಾದದ್ದು! ಸಾವಿರಾರು ವರ್ಷ ಪೂರ್ವದ ನಮ್ಮ ಆದ್ಯಪಿತೃಗಳಾದ ಮಹರ್ಷಿಗಳು-ದೇಹಕ್ಕೆ ಅತ್ಯವ ಶ್ಯಕಾಂಗವಾದ "ಪಾದ" ಗಳ ರಕ್ಷಣೆಗಾಗಿ—ಎಲ್ಲಾ ಸಮಯದಲ್ಲಿ ಜೋಡು, ಮೆಟ್ಟು, ಬೂಟ್ಸ್, ಸ್ಲಿಪ್ಪರ್ ಮುಂತಾದ ಪಾದರಕ್ಷೆಗಳಂತೆ, ಮಡಿಯ ಕಾಲದಲ್ಲಿಯೂ ಹಾವಿಗೆಗಳನ್ನು ಹಾಕಲೇಬೇಕಲ್ಲದೆ ಬರೀಕಾಲಿನಲ್ಲಿ ಎಂದೆಂದಿಗೂ ನಡಿಯಲೇಕೂಡದು ಎಂದು ಬೋಧಿಸುತ್ತಿದ್ದಾರೆ. ಈಗಿನಕಾಲದ ನವನಾಗರಿಕರು ಇಂತಹ ನಮ್ಮ ಹಿರಿಯರ ಘನವಾದ, ಮತ್ತು ನಾಗರಿಕತೆಯ ಶಿಖರಾರೋಹಣ ಮಾಡಿದ ಸ್ಥಿತಿಗೆ ಗಮನಿಕೆಯನ್ನು ಕೊಟ್ಟು, ನಮ್ಮ ದೇಶೀಯರೂ ಸಹ ಔತ್ತರೀಯರಂತೆ ಸ್ನಾನಾದಿ ಮಡಿಯ ಕಾಲದಲ್ಲಿ ಹಾವಿಗೆಗಳನ್ನು ಧರಿಸುತ್ತಾ ನಮ್ಮ ಹಿರಿಯರ ಉಪದೇಶ ವಾಕ್ಯಗಳಿಗಾಗಿ ಗೌರವವನ್ನೂ ಕೊಟ್ಟು, ಅದರ ಗುಣಗಳಿಗೂ ಪಾತ್ರರಾಗುವರೆಂದು ತಿಳಿಯುತ್ತೇವೆ.

"ಮನುಷ್ಯರ ಶರೀರದಲ್ಲಿ ಸದೈವ ಹಸಿವು, ಬಾಯಾರಿಕೆ, ನಿದ್ರಾ, ಮೈಥುನಗಳೆಂಬ ೪ ಪ್ರಕಾರದ ಇಚ್ಛಾ ಆಗುತ್ತವೆ; ಇದರಲ್ಲಿ ಭೋಜನಮಾ ಡಬೇಕೆಂಬ ಇಚ್ಛೆಯನ್ನು ತಡಿಯುವದರಿಂದ—ಅಂಗಗಳಲ್ಲಿ ಪಡತ, ಅರುಚಿ, ಶ್ರಮ, ತಂದ್ರಾ, ಕಣ್ಣುಗಳಲ್ಲಿ ದುರ್ಬಲತ್ವ, ಧಾತುಗಳಲ್ಲಿ ಜೀರ್ಣತಾ ಇವು ಉಂಟಾಗುವವು; ಬಾಯಾರಿಕೆಯನ್ನು ತಡಿಯುವದರಿಂದ ಕಂಠನಾಳ ಮತ್ತು ಬಾಯಿ ಒಣಗುವಿಕೆ, ಕಿವಿ ಮಂದೈಸುವಿಕೆ, ರಕ್ತ ಒಣಗುವಿಕೆ, ಹೃದಯದಲ್ಲಿ ಪೀಡಾ ಇವು ಉಂಟಾಗುವವು; ನಿದ್ರೆಯನ್ನು ತಡಿಯುವದರಿಂದ—ಆಕಳಿಕೆ, ತಲೆಭಾರ, ಕಣ್ಣುಗಳು ಭಾರವಾಗಿರುವಿಕೆ, ಶರೀರದ ಎಮಿಕೆಗಳು ಕತ್ತರಿಸಿ ದಂತಾಗುವಿಕೆ, ತಂದ್ರಾ, ಅಜೀರ್ಣ ಇವು ಉಂಟಾಗುವವು."

**ಭೋಜನಪ್ರಕರಣಮ್:—"ಬುಭುಕ್ಷಿತೋ ನ ಯೋಽ ಶ್ನಾತಿ ತಸ್ಯಾಹಾರೇಂಧನ ಕ್ಷಯಾತ್ || ಮಂದೀಭವತಿ ಕಾಯಾಗ್ನಿ ರ್ಯಥಾ ಚಾಗ್ನಿರ್ನಿರಿಂಧನಃ ||**

**ಆಹಾರಂ ಪಚತಿ ಶಿಖೀ |**
**ದೋಷಾನಾಹಾರವರ್ಜಿತಃ ಪಚತಿ ||**

**ದೋಷಕ್ಷಯೇ ಹಿ ಧಾತೂನ್ ।**
**ಪ್ರಾಣಾನ್ ಧಾತುಕ್ಷಯೇ ಪಚತಿ ॥ "**

" ಹಸಿವುಂಟಾದಾಗ ಯಾವನು ಭೋಜನ ಮಾಡುವದಿಲ್ಲವೋ ಅವನ ಆಹಾರರೂಪಿಯಾದ ಕಟ್ಟಿಗೆಯು ಇಲ್ಲದ್ದರಿಂದ ಇಂಧನರಹಿತವಾದ ಅಗ್ನಿಯಂತೆ ಜಠರಾಗ್ನಿಯು ಮಂದವಾಗುತ್ತದೆ. ಈ ಜಠರಾಗ್ನಿಯು ಮೊದಲು ಆಹಾರ ವನ್ನು ಪಕ್ವಮಾಡುತ್ತದೆ; ಆಹಾರವು ಶಿಕ್ಕದಿದ್ದರೆ ದೋಷಗಳನ್ನು ಸುಡಲಾ ರಂಭಿಸುತ್ತದೆ; ಹಾಗೆ ದೋಷಗಳೂ ನಾಶವಾದನಂತರವೂ ಆ ಅಗ್ನಿಗೆ ಆಹಾರ ರೂಪೀ ಇಂಧನವಿಲ್ಲದಿದ್ದರೆ ರಸ, ರಕ್ತ, ಮಾಂಸ, ಮಜ್ಜಾಸ್ಥಿ ಮೇಧಾ ಶು ಕ್ರಾಖ್ಯ ಸಪ್ತಧಾತುಗಳನ್ನೂ ಒಂದೊಂದಾಗಿ ಸುಡಲಾರಂಭಿಸುತ್ತದೆ. ಕೊನೆಗೆ ಪ್ರಾಣಗಳನ್ನೇ ನಾಶಮಾಡಿಬಿಡುತ್ತದೆ. ಅಂದರೆ ನಿರಾಹಾರವ್ರತವೆಂದು ಉಪ ವಾಸ ಮಾಡುವವರು ಈ ವಿಷಯವನ್ನು ಚೆನ್ನಾಗಿ ವಿಚಾರ ಮಾಡಬೇಕು. "

**" ಆಹಾರಃ ಪ್ರೀಣನಃ ಸದ್ಯೋ ಬಲಕೃದ್ದೇಹಧಾರಣಃ ॥ ಸ್ಮೃ ತ್ಯಾಯುಃ ಶಕ್ತಿವರ್ಣೌಜಃ ಸತ್ವಶೋಭಾ ವಿವರ್ಧನಃ ॥ "**

" ಆಹಾರ ಸೇವನೆಯು ತೃಪ್ತಿಕಾರಿ, ಆಗಲೇ ಬಲವನ್ನುಂಟುಮಾಡು ವದು, ಶರೀರವನ್ನು ಧಾರಣೆ ಮಾಡುವದು, ಸ್ಮೃತಿ, ಆಯು, ಶಕ್ತಿ, ವರ್ಣ, ಓಜ, ಸತ್ವ, ಶೋಭಾ ಇವುಗಳನ್ನು ವೃದ್ಧಿಪಡಿಸುವದು. "

**" ನಾರತ್ನಪಾಣಿಃ, ನಾಸ್ನಾತೋ, ನೋಪಹತ ವಾಸಾ, ನಾಽಜಪಿ ತ್ವಾ, ನಾಹುತ್ವಾ, ದೇವತಾಭ್ಯೋಽನಾನಿರೂಪ್ಯ, ಪಿತೃಭ್ಯೋ, ನಾಽದತ್ವಾ, ಗುರುಭ್ಯೋ, ನಾತಿಥಿಭ್ಯೋ ನೋಪಾಶ್ರಿತೇಭ್ಯೋ, ನಾಪುಣ್ಯಗಂಧೋ, ನಾಮಾಲೀ, ನಾಪ್ರಕ್ಷಾಲಿತ ಪಾಣಿ ಪಾದ ವದನೋ, ನಾಽಶುದ್ಧ ಮುಖೋ, ನೋದಙ್ಮುಖೋ, ನವಿಮ ನಾ ಭಕ್ತಾ ಶಿಷ್ಯಾ ಶುಚಿ ಕ್ಷುದಿತ ಪರಿಚರೋ, ನಾಪಾತ್ರೀಷ್ವಮೇ ಧ್ಯಾಸು, ನಾದೇಶೇ ನಾಽಕಾಲೇ, ನಾಕೀರ್ಣೇ, ನಾಽದತ್ವಾ ಗ್ರಮ ಗ್ನಯೇ ನಾಪ್ರೋಕ್ಷಿಪ್ರೋಕ್ಷಣೋದಕೈಃ, ನಮಂತ್ರೈರನಭಿ ಮಂತ್ರಿತಂ, ನಕುತ್ಸಯನ್ । ನಕುತ್ಸಿತಂ, ನಪ್ರತಿಕೂಲೋ ಪಹಿತಮನ್ನ ಮಾಸದೀತ ॥ " (ಚರಕ)**

" ರತ್ನಾದಿ ಭೂಷಣಗಳ ಧರಿಸದೆ, ಸ್ನಾನಮಾಡದೆ, ಹರಕುವಸ್ತ್ರವ ನ್ನುಟ್ಟು, ಗಾಯಿತ್ರೀ ಜಪಿಸದೆ, ಹವನಮಾಡದೆ, ದೇವತೆಗಳಿಗೆ ಭಾಗವೀಯದೆ, ಪಿತೃಗಳೆಂಬ ವೃದ್ಧರನ್ನು ಸೇವಿಸದೆ, ಗುರು ಆಚಾರ್ಯ ಮುಂತಾದ ಹಿರಿಯರು ಅತಿಥಿ, ಉಪಾಶ್ರಿತರು ಮುಂತಾದವರನ್ನು ಬಿಟ್ಟು, ದುರ್ಗಂಧಯುಕ್ತನಾಗಿ, ಮಾಲಾಧಾರಣೆ ಮಾಡದೆ, ಹಸ್ತಪಾದಾದಿಗಳನ್ನು ತೊಳೆದುಕೊಳ್ಳದೆ, ಅಪ್ರಸ

ನ್ನಚಿತ್ತನಾಗಿ, ಅನ್ನವರ್ಜಿತವಾದ, ದುಷ್ಟವಾದ, ಅಪವಿತ್ರವಾದ, ಭೃತ್ಯವರ್ಗವು ಕ್ಷುದಿತವಾಗಿರುವಾಗ, ಪಾತ್ರೆಗಳಿಲ್ಲದೆ, ಅಪವಿತ್ರ ಪಾತ್ರೆಗಳನ್ನಿಟ್ಟುಕೊಂಡು, ದೇಶಕಾಲವೈಪರೀತ್ಯದಿಂದ (ಅಂದರೆ ಸ್ಮಶಾನಾದಿದೇಶ ಅಪರರಾತ್ರಿ ಮುಂತಾದ ಕಾಲ) ಪ್ರಸ್ಫುಟಸ್ಥಾನವಿಲ್ಲದೆ, ಅಗ್ನಿಯಲ್ಲಿ ಆಹುತಿಯನ್ನು ಕೊಡದೆ, ಮಂತ್ರಪೂತವಿಲ್ಲದೆ, ಮಂತ್ರಾಭಿಮಂತ್ರವಿಲ್ಲದೆ, ನಿಂದಾತ್ಮಕ ಭಾಷಣೆಗಳಿಂದ ಕೂಡಿ, ನಿಂದಿತಗಳಾದ ಶತ್ರುಸತ್ರಾನ್ನಾದಿಗಳನ್ನೂ ಇತ್ಯಾದಿ ಗುಣವಿಶಿಷ್ಟವಾದ ಭೋಜನವನ್ನು ಮಾಡಬಾರದು. ''

" ಯಥೋಕ್ತ ಗುಣಸಂಪನ್ನಂ ನರಃ ಸೇವೇತ ಭೋಜನಮ್ ॥ ವಿಚಾರ್ಯ ದೇಶಕಾಲಾದೀ ಕಾಲಯೋ ರುಭಯೋರಪಿ ॥ ಸಾಯಂಪ್ರಾತ ರ್ಮನುಷ್ಯಾಣಾಂ ಅಶನಂ ಶ್ರುತಿ ಬೋಧಿತಮ್ ॥ ನಾನ್ತರಾ ಭೋಜನಂ ಕುರ್ಯಾತ್ ಅಗ್ನಿಹೋತ್ರ ಸಮೋವಿಧಿಃ ॥ ಯಾಮ ಮಧ್ಯೇನ ಭೋಕ್ತವ್ಯಂ ಯಾಮಯುಗ್ಮಂ ನ ಲಂಘಯೇತ್ ॥ ಯಾಮ ಮಧ್ಯೇ ರಸೋತ್ಪತ್ತಿಃ ಯಾಮಯುಗ್ಮಾದ್ಬಲಕ್ಷಯಃ ॥ ಕ್ಷುತ್ಸಂಭವತಿ ಪಕ್ವೇಷು ರಸದೋಷ ಮಲೇಷು ಚ ॥ ಕಾಲೇ ವಾ ಯದಿ ವಾ ಕಾಲೇ ಸೋಽನ್ನಕಾಲ ಉದಾಹೃತಃ ॥ ''

'' ಯಥೋಕ್ತ ಗುಣಯುಕ್ತವಾದ ಭೋಜನವನ್ನು ದೋಷ, ಸಮಯಾದಿಗಳ ವಿಚಾರದಿಂದ ಪ್ರಾತಃಕಾಲವೂ, ಸಾಯಂಕಾಲವೂ ಮಾಡತಕ್ಕದ್ದು. ಮಧ್ಯದಲ್ಲಿ ಮಾಡಬಾರದು; ಈ ವಿಧಿಯು ಅಗ್ನಿಹೋತ್ರದ ಸಮಾನವಾದದ್ದು. ಮೊದಲನೇ ಪ್ರಹರ (ಜಾವ) ಕಳದನಂತರ ೨ನೇ ಪ್ರಹರ ಕಳಿಯುವದರೊಳಗಾಗಿ ಭೋಜನ ಮಾಡಲೇಬೇಕು. ಯಾಕೆಂದರೆ— ಮೊದಲನೇ ಪ್ರಹರದಲ್ಲಿ ರಸದ ಉತ್ಪತ್ತಿಯಾಗುತ್ತದೆ, ಎರಡನೇ ಪ್ರಹರವೂ ಕಳದರೆ ಬಲ ನಾಶವಾಗುತ್ತದೆ. ಇದಕ್ಕಾಗಿ ಯಾಮ ಯುಗ್ಮದವರಿಗೆ ಊಟ ಮಾಡದೆ ಇರಬಾರದು. ಅಂದರೆ ಮೊದಲು ಮಾಡಿದ ಊಟಕ್ಕೂ ಎರಡನೇ ಊಟಕ್ಕೂ ಮಧ್ಯಕಾಲದಲ್ಲಿ ಈ ವಿಧಿಯನ್ನು ಅನುಸರಿಸಬೇಕು. ಸಮಯದಲ್ಲಿ ಅಥವಾ ಅಸಮಯದಲ್ಲಿ ರಸ, ದೋಷ, ಮಲಗಳು ಪರಿಪಾಕವಾಗುವದರಿಂದ ಯಾವಾಗ ಕ್ಷುಧಾ ಉಂಟಾಗುತ್ತದೆಯೋ ಆಗಲೇ ಭೋಜನ ಮಾಡಬೇಕೆಂದು ಮತಾಂತರ ವಿಷಯವು. ನ್ಯಾಯವಾದ ಕ್ಷುಧಾ ಉಂಟಾಗದೆ ಮೇಲೆಮೇಲೆ ಊಟಮಾಡುವಿಕೆಯಿಂದ ಅನೇಕ ದೋಷಗಳುಂಟಾಗುತ್ತವೆ ಎಂಬದನ್ನು ತಿಳಿಯಬೇಕು. ''

"ಉದ್ಗಾರ ಶುದ್ಧಿ ರುತ್ಸಾಹೋ ವೇಗೋತ್ಸರ್ಗೋ ಯಥೋದಿತಃ ||
ಲಘುತಾ ಕ್ಷುತ್ಪಿಪಾಸಾಚ ಜೀರ್ಣಹಾರಸ್ಯ ಲಕ್ಷಣಮ್ ||"

"ತೇಗುಬರುವದರ ಶುದ್ಧಿ, ಉತ್ಸಾಹ, ಯಥಾಯೋಗ್ಯವಾಗಿ ಮಲಮೂತ್ರಾದಿ ವೇಗಗಳ ತ್ಯಾಗ, ಶರೀರವು ಲಘುವಾಗಿರುವಿಕೆ, ಕ್ಷುತ್ಪಿಪಾಸೆಗಳುಂಟಾಗುವಿಕೆ ಇದು ಪರಿಪಾಕವಾದ ಆಹಾರದ ಲಕ್ಷಣವು."

"ಆಹಾರಸ್ತು ರಹಃ ಕುರ್ಯಾತ್ ನಿರ್ಹಾರಮಪಿ ಸರ್ವದಾ || ಉಭಾಭ್ಯಾಂ ಲಕ್ಷ್ಮ್ಯಪೇತಃ ಸ್ಯಾತ್ ಪ್ರಕಾಶೇ ಹೀಯತೇ ಶ್ರಿಯಾ ||
ಆಹಾರನಿರ್ಹಾರ ವಿಹಾರಯೋಗಾಃ, ಸದೈವ ಸದ್ಭಿರ್ವಿಜನೇ ವಿಧೇಯಾಃ ||"

"ಮನುಷ್ಯನು ಭೋಜನವನ್ನೂ, ಹಾಗೆಯೇ ಮಲಮೂತ್ರಾದಿಗಳ ತ್ಯಾಗವನ್ನೂ ಸದೈವ ನಿರ್ಜನಸ್ಥಾನದಲ್ಲಿ ಮಾಡತಕ್ಕದ್ದು; ಇದರಿಂದ ಸಂಪತ್ತು ವೃದ್ಧಿಯಾಗುತ್ತದೆ; ಎಲ್ಲರ ಮುಂದೆಯೂ ಮಾಡುವದರಿಂದ ಸಂಪತ್ತು ನಾಶವಾಗುವದು. ಆಹಾರ ಮತ್ತು ಮಲಮೂತ್ರದತ್ಯಾಗ ಹಾಗೆಯೇ ವಿಹಾರ ಇವು ಸದಾ ನಿರ್ಜನಸ್ಥಾನದಲ್ಲಿಯೇ ಮಾಡತಕ್ಕವುಗಳೆಂದು ಹೇಳಲ್ಪಟ್ಟಿದೆ."

ಭೋಜನ ಪಾತ್ರೆಯು:—"ದೋಷಘ್ನದೃಷ್ಟಿದಂ ಪಥ್ಯಂ ಹೈಮಂ ಭೋಜನ ಭಾಜನಮ್ || ರಾಪ್ಯಂ ಭವತಿ ಚಾಕ್ಷುಷ್ಯಂ ಪಿತ್ತಹೃತ್ಕಫ ವಾತಕೃತ್ || ಕಾಂಸ್ಯಂ ಬುದ್ಧಿಪ್ರದಂ ರುಚ್ಯಂ ರಕ್ತಪಿತ್ತ ಪ್ರಸಾದನಮ್ || ಪೈತ್ತಲಂ ವಾತಕೃದ್ರೂಕ್ಷ ಮುಷ್ಣಂ ಕೃಮಿ ಕಫ ಪ್ರಣುತ್ || ಆಯಸೇ ಕಾಚಪಾತ್ರೇ ಚ ಭೋಜನಂ ಸಿದ್ಧಿ ಕಾರಕಮ್ || ಶೋಥ ಪಾಂಡು ಹರಂ ಬಲ್ಯಂ ಕಾಮಿಲಾ ಪಹಮುತ್ತಮಮ್ || ಶೈಲೇಯೇ ಮೃಣ್ಮಯೇ ಪಾತ್ರೇ ಭೋಜನಂ ಶ್ರೀನಿವಾರಣಮ್ || ಧಾರೂದ್ಭವೇ ವಿಶೇಷೇಣ ರುಚಿದಂ ಶ್ಲೇಷ್ಮಕಾರಿ ತು || ಪಾತ್ರಂ ಪತ್ರಮಯಂ ರುಚ್ಯಂ ದೀಪನಂ ವಿಷಪಾಪನುತ್ || ಜಲಪಾತ್ರಂ ತು ತಾಮ್ರಸ್ಯ ತದಭಾವೇ ಮೃದೋಹಿತಮ್ || ಪವಿತ್ರಂ ಶೀತಲಂ ಪಾತ್ರಂ ರಚಿತಂ ಸ್ಫಟಿಕೇನ ಯತ್ || ಕಾಚೇನ ರಚಿತಂ ತದ್ವತ್ತಥಾ ವೈದೂರ್ಯ ಸಂಭವಮ್ ||"

"ಸುವರ್ಣದ ಭೋಜನ ಪಾತ್ರೆಯು—ದೋಷಗಳ ನಾಶಕ, ದೃಷ್ಟಿವರ್ಧಕ, ಪಥ್ಯಕರವಾದದ್ದು; ಬೆಳ್ಳಿಯ ಪಾತ್ರೆಯು—ನೇತ್ರಗಳಿಗೆ ಹಿತ, ಪಿತ್ತನಾಶಕ, ಕಫವಾತಗಳನ್ನುಂಟು ಮಾಡುವದು. ಕಂಚಿನ ಪಾತ್ರೆಯು—ಬುದ್ಧಿಪ್ರದ, ರುಚಿಕಾರಕವಾದರೂ ರಕ್ತಪಿತ್ತವನ್ನು ಹುಟ್ಟಿಸುತ್ತದೆ. ಹಿತ್ತಾಳೆಯ ಪಾತ್ರೆಯು—ವಾತಕಾರಕ, ರೂಕ್ಷ, ಉಷ್ಣ, ಕ್ರಿಮಿ ಕಫಗಳ ನಾಶ

ಕವಾದದ್ದು. ಕಬ್ಬಿಣದ ಮತ್ತು ಗಾಜಿನ ಪಾತ್ರೆಯು—ಸಿದ್ಧಿದಾಯಕ, ಬಲಕಾರಕ, ಶೋಭಾ ಪಾಂಡು ಕಾಮಲಾರೋಗ ನಾಶಕವಾದದ್ದು; ಕಲ್ಲಿನ ತಥಾ ಮಣ್ಣಿನ ಪಾತ್ರೆಯಲ್ಲಿ ಊಟಮಾಡುವಿಕೆಯು ಸಂಪತ್ತನ್ನು ನಾಶಮಾಡುವದು, ಮರದ ಪಾತ್ರೆಯು—ರುಚಿಕಾರಕವಾದರೂ, ಕಫವನ್ನುಂಟುಮಾಡುವದು; ಎಲೆಗಳಲ್ಲಿ ಊಟಮಾಡುವಿಕೆ—ರುಚಿಕಾರಕ, ಜಠರಾಗ್ನಿದೀಪಕ, ವಿಷ ಮತ್ತು ಪಾಪದ ನಾಶಕವಾದದ್ದು; ನೀರು ಕುಡಿಯುವದಕ್ಕಾಗಿ ತಾಮ್ರದ ಪಾತ್ರವೇ ಉಚಿತವಾದದ್ದು; ಮೃತ್ತಿಕಾ, ಸ್ಫಟಿಕ, ವೈಡೂರ್ಯ ಪಾತ್ರೆಗಳು ಪವಿತ್ರವೂ, ಶೀತಲವೂ ಆಗಿವೆ.”

**ಭೋಜನಕ್ರಮ:**—“ಭೋಜನಾಗ್ರೇ ಸದಾ ಪಥ್ಯಂ ಲವಣಾರ್ದ್ರಕ ಭಕ್ಷಣಮ್ ॥ ಅಗ್ನಿ ಸಂದೀಪನಂ ರುಚ್ಯಂ ಜಿಹ್ವಾ ಕಂಠ ವಿಶೋಧನಮ್ ॥”

“ಭೋಜನಕ್ಕೆ ಪೂರ್ವಭಾವಿಯಾಗಿ ಸೈಂಧವಲವಣ ಮತ್ತು ಹಸೀ ಶುಂಠಿಯನ್ನರೆದು ಸೇವಿಸುವದು ಪರಮಹಿತವು; ಇದು—ಅಗ್ನಿದೀಪ್ತಿಯನ್ನುಂಟುಮಾಡಿ, ರುಚಿಯನ್ನೂ, ನಾಲಿಗೆ ಕಂಠನಾಳ ಇವುಗಳ ಶೋಧನೆಯನ್ನೂ ಮಾಡುತ್ತದೆ.”

“ಅಶ್ನೀಯಾತ್ತನ್ಮನಾ ಭೂತ್ವಾ ಪೂರ್ವಂ ತು ಮಧುರಂ ರಸಮ್॥
ಮಧ್ಯೇಽಮ್ಲ ಲವಣೌ ಪಶ್ಚಾತ್ ಕಟುತಿಕ್ತ ಕಷಾಯಕಾನ್ ॥
ಫಲಾನ್ಯಾದೌ ಸಮಶ್ನೀಯಾತ್ ದಾಡಿಮಾದೀನಿ ಬುದ್ಧಿಮಾನ್ ॥
ಗುರು ಪಿಷ್ಟಮಯಂ ದ್ರವ್ಯಂ ತಂಡುಲಾನ್ ಪೃಥುಕಾನಪಿ ॥ ನ
ಜಾತು ಭುಕ್ತವಾನ್ ಖಾದೇನ್ಮಾತ್ರಾಂ ಖಾದೇದ್ಬುಭುಕ್ಷಿತಃ ॥
ಘೃತಪೂರ್ವಂ ಸಮಾಶ್ನೀಯಾತ್ ಕಠಿನಂ ಪ್ರಾಕ್ತತೋ ಮೃದು॥
ಅಂತೇ ಪುನರ್ದ್ರವಾಶೀ ತು ಬಲಾದ್ರೋಗೇಣ ಮುಂಚತಿ ॥”

“ಮನಸ್ಸನ್ನು ನಿರ್ಮಲವಾಗಿಟ್ಟುಕೊಂಡು ಮೊದಲು ಮಧುರರಸವನ್ನೂ, ಮಧ್ಯದಲ್ಲಿ ಹುಳಿ ಮತ್ತು ಲವಣಯುಕ್ತ ಪದಾರ್ಥಗಳನ್ನೂ ಅನಂತರ ಕಟು ತಿಕ್ತ ಕಷಾಯ ರಸ ಪದಾರ್ಥಗಳನ್ನೂ ಭುಜಿಸಬೇಕು. ದಾಳಿಂಬೆ, ಮಾವು ಮುಂತಾದ ಫಲಗಳನ್ನು ಭೋಜನಕಾಲದಲ್ಲಿ ಮೊದಲೇ ತಿನ್ನಬೇಕು. ಗುರುದ್ರವ್ಯವಾದ ಹಿಟ್ಟಿನ ಪದಾರ್ಥಗಳು, ಅಕ್ಕಿಯ ವಿಕಾರಗಳು, ಅವಲಕ್ಕಿ ಮುಂತಾದವುಗಳು ಭೋಜನದ ಅಂತದಲ್ಲಿ ಎಂದೆಂದಿಗೂ ತಿನ್ನಬಾರದು; ಹಸಿದುಕೊಂಡಿದ್ದರೂ ಇವುಗಳನ್ನು ಅಲ್ಪಮಾತ್ರ ಭುಜಿಸತಕ್ಕದ್ದು; ಮೊದಲು ಘೃತಪೂರ್ವಕವಾಗಿ ಕಠಿಣ ವಸ್ತುಗಳನ್ನೂ, ಮಧ್ಯದಲ್ಲಿ ಕೋಮಲ ಪದಾರ್ಥಗಳನ್ನೂ, ಕೊನೆಗೆ ದ್ರವದ್ರವ್ಯಗಳನ್ನೂ ಸೇವಿಸಬೇಕು.

ಈರೀತಿ ಭೋಜನ ಮಾಡುವದರಿಂದ—ಬಲವೂ, ಸ್ವಸ್ಥತಾ ಇವು ಉಂಟಾಗುವವು. ''

" ಸಾಮನಸ್ಯಂ ಬಲಂ ಪುಷ್ಟಿಮುತ್ಸಾಹಂ ವೃದ್ಧಿಮಾಯುಷಃ || ಸ್ವಾದು ಸಂಜನಯತ್ಯನ್ನ ಮಸ್ವಾದು ಚ ವಿಪರ್ಯಯಮ್ || ಅತ್ಯುಷ್ಣಾನ್ನಂ ಬಲಂ ಹಂತಿ ಶೀತಂಶುಷ್ಕಂ ಚ ದುರ್ಜರಮ್|| ಅತಿಕ್ಲಿನ್ನಂ ಗ್ಲಾನಿಕರಂ ಯುಕ್ತ್ಯಾಯುಕ್ತಂ ಹಿ ಭೋಜನಮ್ || ಅತಿದ್ರುತಾಶಿತಾ ಹಾರೇ ಗುಣಾನ್ ದೋಷಾನ್ ನ ವಿಂದತಿ || ಭೋಜ್ಯಂ ಶೀತಮಹೃದ್ಯಂ ಚ ಸ್ಯಾದ್ವಿಲಂಬಿತ ಮಶ್ನಿತಃ || ''

" ಸ್ವಾದುಯುಕ್ತ ಅನ್ನವು—ಮನಸ್ಸಿನ ಪ್ರಫುಲ್ಲತಾ, ಬಲ, ಪುಷ್ಟಿ, ಆಯುರ್ವೃದ್ಧಿ ಇವುಗಳನ್ನುಂಟು ಮಾಡುತ್ತದೆ. ಸ್ವಾದುರಹಿತವಾದ ಅನ್ನವು ಇವುಗಳಿಗೆ ವಿರೋಧವಾದ ಗುಣಗಳನ್ನು ಮಾಡುತ್ತದೆ. ಅತ್ಯಂತ ಬಿಸಿ ಅನ್ನವು ಬಲನಾಶಕವು, ಅತ್ಯಂತ ಶೀತವಾದ, ಒಣಗಿದ ಅನ್ನವು ದುರ್ಜರ (ಕಠಿಣವಾಗಿ ಪಚನವಾಗತಕ್ಕದ್ದು) ವು. ಅತ್ಯಂತವಾಗಿ ಬೆಂದ ಅನ್ನವು ಗ್ಲಾನಿಕಾರಕವಾದದ್ದು; ಇದರಿಂದ ವಿಧಿಪೂರ್ವಕವಾಗಿ ಊಟಮಾಡಬೇಕು. ಬಹು ಬೇಗಬೇಗ ಭೋಜನ ಮಾಡುವದರಿಂದ ಗುಣದೋಷಗಳು ಗೊತ್ತಾಗುವದಿಲ್ಲ; (ಬಾಯಿಯಲ್ಲಿ ಹಲ್ಲುಗಳಿಂದ ಕ್ರಮವಾಗಿ ಅಗಿದು ಅಲ್ಲಿನ ಜೊಲ್ಲಿನಿಂದ ರಸರೂಪವಾಗಿ ಮಾಡದೆ ನುಂಗುವದರಿಂದ ಈ ಕೆಲಸವೆಲ್ಲವನ್ನೂ ಆಹಾರಕೋಶಸ್ಥವಾದ ಯಂತ್ರಗಳೇ ಮಾಡಬೇಕಾಗುತ್ತದೆ. ಇದರಿಂದ ಅವು ಬೇಗ ಸವಿದು ದುರ್ಬಲವಾಗುವದರಿಂದ ಇಂತವರಿಗೆ ಅನೇಕ ರೋಗಗಳು ಸಿದ್ಧವಾಗಿರುತ್ತವೆ. ಹಲ್ಲುಗಳನ್ನು ಸದುಪಯೋಗಪಡಿಸುವದೇ ಸೃಷ್ಟಿಯು ನಿಯಮಕ್ಕೆ ತಕ್ಕದ್ದು.) ಬಹು ಸಿದಾನವಾಗಿ ಊಟಮಾಡುವದರಿಂದ ಭೋಜನ ಶೀತಲವಾಗಿಯೂ, ಸ್ವಾದುರಹಿತವಾಗಿಯೂ ಆಗುತ್ತದೆ. ''

" ಮಂದಾನಲೋ ನರೋ ದ್ರವ್ಯಂ ಮಾತ್ರಾ ಗುರು ವಿವರ್ಜಯೇತ್ || ಸ್ವಭಾವತಶ್ಚ ಗುರುಯತ್ ತಥಾ ಸಂಸ್ಕಾರತೋ ಗುರು || ಮಾತ್ರಾ ಗುರುಸ್ತುಮುದ್ಗಾದಿ ರ್ಮಾಷಾದಿಃ ಪ್ರಕೃತೇ ರ್ಗುರುಃ|| ಸಂಸ್ಕಾರಗುರು ಪಿಷ್ಟಾನ್ನಂ ಪ್ರೋಕ್ತಮಿತ್ಯುಪ ಲಕ್ಷಣಮ್ || ''

" ಮಂದಾಗ್ನಿಯುಕ್ತನಾದ ಮನುಷ್ಯನು ಮಾತ್ರಾ ಗುರುಅನ್ನ, ಸ್ವಭಾವವಾಗಿ ಗುರ್ವನ್ನ, ಸಂಸ್ಕಾರಜ ಗುರ್ವನ್ನ ಈ ಮೂರು ವಿಧವಾದ ಗುರ್ವಾಹಾರಗಳನ್ನೂ ಬಿಟ್ಟುಬಿಡಬೇಕು; ಇದರಲ್ಲಿಮಾತ್ರಾಗುರು ಹೆಸರು ಬೇಳೆ ಮುಂತಾದವು, ಅಂದರೆ ಸ್ವಲ್ಪ ಹೆಚ್ಚಾಗಿ ತಿಂದನಂತರ ಅದು ಪಕ್ವವಾಗದಂಥಾದ್ದಾಗುತ್ತದೆ, ಸ್ವಭಾವವಾಗಿ ಗುರು ಉದ್ದು ಮುಂತಾದವು, ಇವನ್ನು ಸ್ವಲ್ಪ

ತಿಂದರೂ ಪಚನವಾಗುವದಿಲ್ಲ; ಸಂಸ್ಕಾರಜ ಗುರು ಹಿಟ್ಟಿನಿಂದ ಮಾಡಿರುವ ಕಡುಬು ಮುಂತಾದವು. ಇವೂ ಸಹ ಮೇಲಿನದರಂತೆಯೇ!"

"ಆಹಾರಂ ಷಡ್ವಿಧಂ ಚೋಷ್ಯಂ, ಪೇಯಂ, ಲೇಹ್ಯಂ, ತಥೈವ ಚ ॥ ಭೋಜ್ಯಂ, ಭಕ್ಷ್ಯಂ, ತಥಾ ಚರ್ವ್ಯಂ ಗುರು ವಿದ್ಯಾದ್ಯಥೋತ್ತರವತ್ ॥"

"ಆಹಾರವು ೧ ಚೋಷ್ಯ (ಕಬ್ಬು, ದಾಳಿಂಬರೆ, ಕಿತ್ತಲೇಹಣ್ಣು ಮುಂತಾದವು), ೨ ಪೇಯ (ಪಾನಕ, ಶರ್ಬತ್ ಮುಂತಾದವು), ೩ ಲೇಹ್ಯ (ಶಿಖರಿಣೀ ಮಜ್ಜಿಗೇಕಡೀ ಮುಂತಾದದ್ದು), ೪ ಭೋಜ್ಯ (ಅನ್ನ ಬೇಳೇ ತೊವ್ವೆ ಮುಂತಾದವು), ೫ ಭಕ್ಷ್ಯ (ಲಡ್ಡು, ಜಿಲೇಬಿ ಮುಂತಾದವು), ೬ ಚರ್ವ್ಯ (ಅವಲಕ್ಕಿ, ಹುರಿಗಡ್ಲೆ ಮುಂತಾದ ಘಟ್ಟಪದಾರ್ಥಗಳು), ಗಳೆಂದು ೬ ವಿಧಗಳಾಗಿದೆ. ಇವು ಮೊದಲಿನದರಿಂದಲೂ ಒಂದಕ್ಕೊಂದು ಯಥೋತ್ತರವಾಗಿ ಗುರುಪದಾರ್ಥಗಳು!"

"ಗುರೂಣಾಮರ್ಧ ಸೌಹಿತ್ಯಂ ಲಘೂನಾಂ ತೃಪ್ತಿ ರಿಷ್ಯತೇ ॥ ದ್ರವೋ ದ್ರವೋತ್ತರಶ್ಚಾಪಿ ನ ಮಾತ್ರಾ ಗುರುರಿಷ್ಯತೇ ॥"

"ಗುರುಪದಾರ್ಥಗಳಿಂದ ಅರ್ಧತೃಪ್ತಿಯನ್ನೂ, ಲಘುಪದಾರ್ಥಗಳಿಂದ ಪೂರಾ ತೃಪ್ತಿಯನ್ನೂ ಮಾಡತಕ್ಕದ್ದು; ಅಂದರೆ ಗುರುಪದಾರ್ಥಗಳಾದ—ಉದ್ದು, ಹಿಟ್ಟಿನ ಪದಾರ್ಥಗಳು ಇವುಗಳನ್ನು ಅರ್ಧತೃಪ್ತಿಯಲ್ಲಿಯೇ ಬಿಟ್ಟುಬಿಟ್ಟು, ಲಘುಪದಾರ್ಥಗಳಾದ—ಹೆಸರು ಮುಂತಾದವುಗಳನ್ನು ಪೂರಾ ತೃಪ್ತಿಯವರಿಗೂ ಸೇವಿಸಬಹುದು. ದ್ರವಪದಾರ್ಥಗಳಾದ ಪೇಯವನ್ನೂ, ದ್ರವೋತ್ತರವಾದ ಮಜ್ಜಿಗನ್ನ ಮುಂತಾದ್ದನ್ನೂ ಮಾತ್ರಾಕ್ಕಿಂತಲೂ ಹೆಚ್ಚಾದರೂ ಗುರುಪದಾರ್ಥವಾಗುವದೆಂಬ ಭಯವಿಲ್ಲ; ಬೇಕಾದಷ್ಟು ಸೇವಿಸಬಹುದು."

"ಪೇಯ ಲೇಹ್ಯಾದಿ ಭಕ್ಷ್ಯಾಣಾಂ ಗುರುರ್ವಿದ್ಯಾದ್ಯಥೋತ್ತರಮ್ ॥ ದ್ರವ್ಯಾಢ್ಯಮಪಿ ಶುಷ್ಕಂ ತು ಸಮ್ಯಗೇವೋಪಪದ್ಯತೇ ॥ ವಿಶುಷ್ಕಮನ್ನಮಭ್ಯಸ್ತಂ ನ ಪಾಕಂ ಸಾಧುಗಚ್ಛತಿ ॥ ಪಿಂಡೀಕೃತಮಸಂಕ್ಲಿನ್ನಂ ವಿದಾಹಮುಪಗಚ್ಛತಿ ॥"

"ಪೇಯ ಮತ್ತು ಲೇಹ್ಯ ಮುಂತಾದವು ಉತ್ತರೋತ್ತರ ಗುರುಪದಾರ್ಥಗಳು; ಈ ಅಧಿಕದ್ರವ ದ್ರವ್ಯದಿಂದ ಕೂಡಿರುವ ಶುಷ್ಕಪದಾರ್ಥವೂ, ಸ್ರೋತೋಮಾರ್ಗವನ್ನು ತಡಿಯುವ ಪದಾರ್ಥವೂ ಸರಿಯಾಗಿ ಪರಿಪಾಕವನ್ನು ಪಡಿಯುತ್ತವೆ. ಕೇವಲ ಶುಷ್ಕಾನ್ನವನ್ನು ಉಂಡರೆ ಇದು ಸಮವಾಗಿ ಪರಿಪಾಕವನ್ನು ಪಡಿಯುವದಿಲ್ಲ; ಯಾಕೆಂದರೆ ಅದಕ್ಕೆ ಆರ್ದ್ರತಾ ಇಲ್ಲದ್ದರಿಂದ ವಿದಗ್ಧವಾಗುತ್ತದೆ, ಇದಕ್ಕಾಗಿ ಕ್ರಮವರಿತು ಭೋಜನ ಮಾಡತಕ್ಕದ್ದು."

"ಶುಷ್ಕಂ ವಿರುದ್ಧಂ ವಿಷ್ಟಂಭಿ ವಹ್ನಿ ವ್ಯಾಪದಕೃದ್ಭವೇತ್ ‖"

"ಶುಷ್ಕವಾದ ಅವಲಕ್ಕಿ, ಚಕ್ಕುಲಿ ಮುಂತಾದವೂ, ವಿರುದ್ಧವೆಂಬ-ಸಂಯೋಗ ವಿರುದ್ಧಗಳೆಂದು ಶಾಸ್ತ್ರಗಮ್ಯವಾದ ಪದಾರ್ಥಗಳೂ, ವಿಷ್ಟಂಬಿ-ಕಡ್ಲಿ, ಮಸೂರ (ಚನ್ನಂಗಿ) ಮುಂತಾದವೂ ಜಠರಾಗ್ನಿಯನ್ನು ಮಂದಪಡಿಸುವವು; ಇದಕ್ಕಾಗಿ ಇವುಗಳನ್ನು ಕೇವಲಾಲ್ಪಮಾತ್ರ ಸೇವಿಸಬಹುದು, ವಿರುದ್ಧವೆಂಬ ಸಂಯೋಗ ವಿರುದ್ಧ ಪದಾರ್ಥಗಳು ವಿಷತುಲ್ಯಗಳೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟವೆ. ಅದಕ್ಕಾಗಿ ಅವುಗಳನ್ನು ತ್ಯಜಿಸಲೇಬೇಕು."

"ನಭುಕ್ತ್ವಾ, ನರದೈಶ್ಛಿತ್ವಾ, ನ ನಿಶಾಯಾಂ, ನ ವಾ ಬಹೂನ್ ‖
ನ ಜಲಾಂತರಿತಾನ್, ಅದ್ಭಿಃ ಸಕ್ತೂನ್ನದ್ಯಾನ್ನ ಕೇವಲಾನ್ ‖ ಪುನದಾ೯ನಂ ಪೃಥಕ್ಪಾನಂ, ಸಾಮಿಷಂ, ಪಯಸಾ ನಿಶಿ ‖ ದಂತಚ್ಛೇದನಮುಷ್ಣಂ ಚ ಸಪ್ತ ಸಕ್ತುಷು ವರ್ಜಯೇತ್ ‖ ಸಕ್ತೂನಾಮಾಶು ಜೀರ್ಯೇತ ಮೃದುತ್ವಾದವಲೇಹಿಕಃ ‖"

"ಹಿಟ್ಟಿನ ಪದಾರ್ಥಗಳ ಭೋಜನ ವಿಷಯದಲ್ಲಿ—೧ ಭೋಜನದ ನಂತರವೂ, ೨ ಹಲ್ಲುಗಳಿಂದ ಕಡಿಯುತ್ತಲೂ, ೩ ರಾತ್ರಿಯಲ್ಲಿಯೂ, ೪ ಮಾತ್ರಕ್ಕಿಂತ ಅಧಿಕವಾಗಿಯೂ, ೫ ಜಲವನ್ನು ಕುಡಿಯುತ್ತಲೂ, ೬ ಕೇವಲ ಜಲದಲ್ಲಿಯೇ ಕೇರಿಸಿಯೂ, ೭ ಕೇವಲ ಪಿಷ್ಟಪದಾರ್ಥವನ್ನೂ ನಿಷೇವಿಸಬಾರದು. ಈ ಹಿಟ್ಟಿನ ಪದಾರ್ಥಗಳಲ್ಲಿ ೭ ಸಂಗತಿಯನ್ನು ಬಿಟ್ಟುಬಿಡಬೇಕು; ೧ ಪುನದಾ೯ನ-ಬಂದುಸಲ ತಿಂದನಂತರ ಪುನಃ ಕೊಡಲ್ಪಟ್ಟದ್ದು, ಪೃಥಕ್ಪಾನಂ-ಬೇರೆ ನೀರು ಕುಡಿಯುವಿಕೆ, ಸಾಮಿಷಂ-ಮಾಂಸದಜತೇಲಿ ತಿನ್ನುವದು, ಪಯಸಾ-ಹಾಲಿನಜತೇಲಿ ತಿನ್ನುವದು, ನಿಶಿ-ರಾತ್ರಿಕಾಲದಲ್ಲಿ ತಿನ್ನುವದು, ದಂತಚ್ಛೇದನಂ-ಹಲ್ಲುಗಳಿಂದ ಕಿತ್ತು ತಿನ್ನುವದು, ಉಷ್ಣಂ-ಬಿಶಿಮಾಡಿಕೊಂಡು ತಿನ್ನುವದು. ಹೀಗೆ ೭ ವಿಧವಾಗಿಯೂ ಹಿಟ್ಟಿನ ಪದಾರ್ಥವು ಜಠರಾಗ್ನಿಗೆ ಹಾನಿಕಾರಕವೆಂದು ಹೇಳುತ್ತಾರೆ. (ರಾತ್ರಿಯಲ್ಲಿ ತಿನ್ನುವ ಪದಾರ್ಥವು ಹಗಲಿನಕ್ಕಿಂತಲೂ ಬೇಗ ಪಚನವಾಗುವದಿಲ್ಲವೆಂಬುದೇ ಇಲ್ಲಿನ ತಾತ್ಪರ್ಯವು.) ಸುಶ್ರುತದಲ್ಲಿ—'ಹಿಟ್ಟಿನ ಪದಾರ್ಥದ ಅವಲೇಹವು ಲಘುವಾಗುವದರಿಂದ ಶೀಘ್ರವಾಗಿ ಪರಿಪಾಕವನ್ನು ಪಡಿಯುತ್ತದೆ' ಎಂದು ಹೇಳಲ್ಪಟ್ಟದೆ."

"ಯಥಾ ಕಾಲೇತಿಮಾತ್ರಂ ಯತ್ತದ್ಭವೇದ್ವಿಷಮಾಶನಮ್ ‖
ಬಹುಸ್ತೋಕಮಕಾಲೇ ವಾ ಜ್ಞೇಯಂ ತದ್ವಿಶಮಾಶನಮ್ ‖"

"ಸುಸಮಯದಲ್ಲಿ ಅಧಿಕಮಾತ್ರಾದಿಂದ (ಸ್ವಲ್ಪ ಹೆಚ್ಚಾಗಿ) ಭೋಜನ ಮಾಡುವಿಕೆಯು ವಿಷಮಾಶನವು; ಸಮಯವಲ್ಲದಾಗ ಅಧಿಕವಾಗಿಯಾಗಲೀ,

ಕೇವಲಾಲ್ಪವಾಗಿಯಾಗಲೀ ಭೋಜನಮಾಡುವಿಕೆಯೂ ಸಹ ವಿಷಮಾಶನವೇ ಆಗುತ್ತದೆ. ''

" ಆಲಸ್ಯ ಗೌರವಾಟೋಪ ಶಬ್ದಾಂಶ್ಚ ಕುರುತೇಽಧಿಕಮ್ ॥
ಹೀನಮಾತ್ರಂ ತನೋಃ ಕಾರ್ಶ್ಯಂ ಕರೋತಿಚ ಬಲಕ್ಷಯಮ್ ॥"

" ಅಧಿಕವಾಗಿ ಊಟಮಾಡುವಿಕೆಯಿಂದ—ಆಲಸ್ಯ, ಶರೀರ ಭಾರಿಯಾಗುವಿಕೆ, ಹೊಟ್ಟೆಯಲ್ಲಿ ಗುಡುಗುಡು ಶಬ್ದ, ಅಥವಾ ವಾಯುಪ್ರಕೋಪ ಇವನ್ನುಂಟುಮಾಡುತ್ತದೆ. ಅಲ್ಪಮಾತ್ರ ಊಟಮಾಡುವದರಿಂದ—ಶರೀರದ ದುರ್ಬಲತ್ವ, ಬಲದ ನಾಶನವೂ ಉಂಟಾಗುತ್ತದೆ; ಅಧಕ್ಕಾಗಿ ಮಿತವಾಗಿ ಭುಜಿಸಬೇಕು. ''

" ಅಪ್ರಾಪ್ತಕಾಲೇ ಭುಂಜಾನೋ ಹ್ಯಸಮರ್ಥತನು ರ್ನರಃ ॥
ತಾಂಸ್ತಾನ್ವ್ಯಾಧೀನವಾಪ್ನೋತಿ ಮರಣಂ ಚಾಧಿಗಚ್ಛತಿ ॥ ಕಾ
ಲೇಽತೀತೇಽಶ್ನತೋ ಜಂತೋಃ ವಾಯುನೋಪಹತೇಽನಲೇ ॥
ಕೃಚ್ಛ್ರಾದ್ವಿಪಚ್ಯತೇ ಭುಕ್ತಂ ನ ಸ್ಯಾದ್ಭೋಕ್ತುಂ ಪುನಃ ಸ್ಪೃಹಾ ॥ "

" ಅಪ್ರಾಪ್ತ ಕಾಲವೆಂದರೆ ಭೋಜನಮಾಡಲು ನಿಯತವಾದ ಕಾಲಕ್ಕಿಂತಲೂ ಬಹು ಮುಂಚಿತವಾಗಿಯೇ ಭೋಜನ ಮಾಡುವವನಿಗೆ ಶರೀರವು ಅಸಮರ್ಥವಾಗುತ್ತದೆ. ಇದರಿಂದ—ಶಿರಃಪೀಡಾ, ವಿಷೂಚಿಕಾ, ಅಲಸಕ, ವಿಲಂಬಿಕಾ ಮುಂತಾದ ರೋಗಗಳು ಹುಟ್ಟುವವು. ಈ ರೋಗಗಳ ಆಧಿಕ್ಯದಿಂದ ಮರಣವೂ ಉಂಟಾಗುವದು. ಭೋಜನಕ್ಕೆ ನಿಯತವಾದ ಕಾಲ ಕಳೆದು ಬಹುಕಾಲದವರಿಗೂ ಆಹಾರವಿಲ್ಲದಿದ್ದು ಕಾಲಾತಿಕ್ರಮಣವಾದಮೇಲೆ ಭೋಜನ ಮಾಡುವದರಿಂದ—ವಾಯುವಿನಮೂಲಕ ಜಠರಾಗ್ನಿಯು ನಷ್ಟವಾಗುವದರಿಂದ, ತಿಂದ ಅನ್ನವು ಬಹು ಸಾವಕಾಶದಿಂದ ಪಕ್ವವಾಗುವದು; ಮತ್ತೆ ಭೋಜನ ಮಾಡತಕ್ಕ ಇಚ್ಛೆಯೂ ಇರುವದಿಲ್ಲ, ಅದಕ್ಕಾಗಿ ಕಾಲಾನುಸಾರವಾಗಿ ಭೋಜನಮಾಡುವದೊಳ್ಳೇದು. ''

" ಕುಕ್ಷೇರ್ಭಾಗದ್ವಯಂ ಭೋಜ್ಯೈ ಸ್ತೃತೀಯೇ ವಾರಿಪೂರಯೇತ್ ॥ ವಾಯೋಃ ಸಂಚಾರಣಾರ್ಥಾಯ ಚತುರ್ಥಮವಶೇಷಯೇತ್ ॥ ರಸೇನಾನ್ನಸ್ಯ ರಸನಾ ಪ್ರಥಮೇ ನೋಪತರ್ಪಿತಾ॥ ನ ತಥಾ ಸ್ವಾದುಮಾಪ್ನೋತಿ ತತಃ ಶೋಧ್ಯಾಂಬುನಾಂತರಾ ॥
ಅತ್ಯಂಬುಪಾನಾನ್ನ ವಿಪಚ್ಯತೇಽನ್ನ ಮನಂಬುಪಾನಾಚ್ಚ ಸ ಏವ ದೋಷಃ ॥ ತಸ್ಮಾನ್ನರೋ ವಹ್ನಿ ವಿವರ್ಧನಾಯ ಮುಹುರ್ಮುಹು ರ್ವಾರಿ ಪಿಬೇದಭೂರಿ ॥ "

" ಆಹಾರಕೋಶದ ೨ ಭಾಗವನ್ನು ಭೋಜನದಿಂದಲೂ, ೩ನೇ ಭಾಗವನ್ನು ಜಲದಿಂದಲೂ ಪೂರ್ಣಮಾಡಬೇಕು; ೪ನೇ ಭಾಗವನ್ನು ವಾಯುಸಂಚಾರಕ್ಕಾಗಿ ಬಿಡಬೇಕು. ಭೋಜನ ರಸದಿಂದ ಮೊದಲು ತೃಪ್ತಿಯನ್ನು ಪಡದಿರುವ ನಾಲಿಗೆಯಲ್ಲಿ ಮತ್ತೆ ಬೇರೆ ಸ್ವಾದು ಪ್ರಾಪ್ತವಾಗುವದಿಲ್ಲ; ಇದಕ್ಕಾಗಿ ಮಧ್ಯೆಮಧ್ಯೆ ನೀರು ಕುಡಿಯುತ್ತಾ, ನಾಲಿಗೆಯನ್ನು ಶೋಧನಮಾಡುತ್ತಾ ಬರಬೇಕು. ಬಹು ಜಲವನ್ನು ಕುಡಿಯುವದರಿಂದಲೂ, ಹಾಗೆಯೇ ಜಲವನ್ನೇ ಕುಡಿಯದೆ ಇರುವದರಿಂದಲೂ ಜಠರಾಗ್ನಿಯ ಪ್ರವೃದ್ಧಿಯುಂಟಾಗದೆ, ಆಹಾರವು ಪರಿಪಕ್ವವಾಗುವದಿಲ್ಲ; ಇದಕ್ಕಾಗಿ ಭೋಜನ ಸಮಯದಲ್ಲಿಯೇ ಅಗ್ನಿಯವೃದ್ಧ್ಯರ್ಥವಾಗಿ ಆಗಾಗ್ಗೆ ಸ್ವಲ್ಪಸ್ವಲ್ಪ ನೀರನ್ನು ಕುಡಿಯುತ್ತಾ ಬರಬೇಕು. "

" ಭುಕ್ತಸ್ಯಾದೌ ಜಲಂ ಪೀತಂ ಕಾರ್ಶ್ಯಂ ಮಂದಾಗ್ನಿದೋಷಕೃತ್ ॥ ಮಧ್ಯೇಽಗ್ನಿದೀಪನಂ ಶ್ರೇಷ್ಠಮ್ ಅಂತೇ ಸ್ಥೌಲ್ಯ ಕಫಪ್ರದಮ್ ॥ (ಅನ್ಯಚ್ಚ) ಸಮಸ್ಥೂಲಿ ಕೃಶಾ ಭುಕ್ತ ಮಧ್ಯಾಂತಃ ಪ್ರಥಮಾಂಬುಪಾಃ ॥ ತೃಷಿತಸ್ತು ನಚಾಶ್ನೀಯಾತ್, ಕ್ಷುಧಿತೋ ನ ಪಿಬೇಜ್ಜಲಮ್ ॥ ತೃಷಿತಸ್ತು ಭವೇದ್ಗುಲ್ಮೀ ಕ್ಷುಧಿತಸ್ತು ಜಲೋದರೀ ॥ "

" ಭೋಜನದ ಆದಿಯಲ್ಲಿ ನೀರು ಕುಡಿಯುವದರಿಂದ ದುರ್ಬಲತ್ವ, ಮಂದಾಗ್ನಿಗಳುಂಟಾಗುವವು. ಭೋಜನ ಮಧ್ಯದಲ್ಲಿ ನೀರು ಕುಡಿದರೆ ಅಗ್ನಿಯದೀಪ್ತಿಯಾಗುತ್ತದೆ; ಅಂತದಲ್ಲಿ ನೀರು ಕುಡಿಯುವದರಿಂದ-ಸ್ಥೂಲತಾ ಮತ್ತು ಕಫವೃದ್ಧಿಗಳಾಗುವವು; ಇದಕ್ಕಾಗಿ ಭೋಜನ ಮಧ್ಯದಲ್ಲಿ ಆಗಾಗ್ಗೆ ಸ್ವಲ್ಪಸ್ವಲ್ಪ ನೀರು ಕುಡಿಯುತ್ತಾ ಬರುವದು ಜಠರಾಗ್ನಿಪ್ರದೀಪ್ತಿಗೆ ಕಾರಣವು. ಇದೇ ವಿಷಯವು ವಾಗ್ಭಟದಲ್ಲಿ:—ಭೋಜನದ ಮಧ್ಯದಲ್ಲಿ, ಅಂತದಲ್ಲಿ, ಆದಿಯಲ್ಲಿ ಜಲಪಾನ ಮಾಡುವದರಿಂದ ಕ್ರಮವಾಗಿ--ಸಮತ್ವ, ಸ್ಥೂಲತ್ವ, ಕೃಶತ್ವಗಳುಂಟಾಗುವವೆಂದು ಮೇಲಿನ ವಿಷಯವನ್ನೇ ಪುಷ್ಟೀಕರಿಸುತ್ತದೆ. ಬಾಯಾರಿದವನು ನೀರನ್ನೇ ಕುಡಿಯಬೇಕಲ್ಲದೆ, ಹಾಗೆ ಮಾಡದೆ ಊಟಮಾಡುವದೂ, ಹಾಗೆಯೇ ಕ್ಷುಧಾತುರನು (ಭೋಜನವನ್ನೇ ಮಾಡದೆ) ನೀರು ಕುಡಿಯುವದು ಪ್ರಶಸ್ತವಾದದ್ದಲ್ಲ. ಬಾಯಾರಿಕೆಯಲ್ಲಿ (ನೀರು ಕುಡಿಯದೆ) ಊಟಮಾಡುವದರಿಂದ ಗುಲ್ಮರೋಗವೂ, ಹಸಿಗೊಂಡಿರುವಾಗ (ಊಟಮಾಡದೆ) ನೀರು ಕುಡಿಯುವದರಿಂದ ಜಲೋದರ ರೋಗವೂ ಪ್ರಾಪ್ತವಾಗುತ್ತದೆ. "

" ವಿದಾಹೀನ್ಯನ್ಯಪಾನಾನಿ ಯಾನಿ ಭುಙ್ಕ್ತೇ ಹಿ ಮಾನವಃ ॥ ತದ್ವಿದಾಹ ಪ್ರಶಾಂತ್ಯರ್ಥಮ್ ಭೋಜನಾಂತೇ ಪಯಃ ಪಿಬೇತ್ ॥ ಕುರ್ಯಾತ್ಕ್ಷೀರಾಂತಮಾಹಾರಂ ನದಧ್ಯಂತಂ ಕದಾಚನ ॥ ಲವಣಾಮ್ಲ ಕಟೂಷ್ಣಾನಿ ವಿದಾಹೀನ್ಯತ್ರಿ ಯಾನಿ ತು ॥ ತದ್ದೋಷಂ ಹರ್ತುಮಾಹಾರಮ್ ಮಧುರೇಣ ಸಮಾಪಯೇತ್ ॥ "

" ಮನುಷ್ಯನು ದಾಹಕಾರಿ ಅನ್ನ ಮತ್ತು ಪೇಯಪದಾರ್ಥಗಳನ್ನು ಭೋಜನ ಮಾಡುವನು; ಅವುಗಳ ಶಾಂತ್ಯರ್ಥವಾಗಿ ಭೋಜನದ ಅಂತಭಾಗದಲ್ಲಿ ಹಾಲನ್ನು ಕುಡಿಯಲೇಬೇಕು. ಇದೇ ವಿಷಯವನ್ನು ಬ್ರಹ್ಮಪುರಾಣದಲ್ಲಿ:—ಭೋಜನ ಅಂತವು ಹಾಲು ಕುಡಿಯುವದರಿಂದ ಮುಗಿಯಬೇಕಲ್ಲದೆ, ಮೊಸರನ್ನು ಅಂತದಲ್ಲಿ ಸೇವಿಸಬಾರದು; ಯಾಕೆಂದರೆ—ಲವಣ, ಆಮ್ಲ, ಕಟು, ಉಷ್ಣ ಮತ್ತು ದಾಹಕಾರಿ ಪದಾರ್ಥಗಳು ನಮ್ಮ ಆಹಾರದಲ್ಲಿದ್ದೇ ಇವೆ; ಇವುಗಳ ದೋಷವನ್ನು ಶಾಂತಿಪಡಿಸುವದಕ್ಕಾಗಿ ಎಲ್ಲಾ ಭೋಜನ ಮಾಡಿದಮೇಲೆ ಕೊನೆಗೆ ಶಿಷ್ಟಪುರುಷನು ಹಾಲನ್ನು ಕುಡಿದೇ ಭೋಜನವನ್ನು ಮುಗಿಸಬೇಕಲ್ಲದೆ (ಮೊಸರು, ಮಜ್ಜಿಗೆ ಮುಂತಾದವನ್ನು ಅಂತದಲ್ಲಿ ಸೇವಿಸಬಾರದು; ಮಧ್ಯಕಾಲದಲ್ಲಿ ಸೇವಿಸಬಹುದು ಎಂದಿದೆ.) "

" ಏವಂ ಭುಕ್ತ್ವಾ ಸಮಾಚಾಮೇ ದ್ರೂಕ್ಷ ಗ್ರಹಣಪೂರ್ವಕಮ್॥ ಭೋಜನೇ ದಂತಲಗ್ನಾನಿ ನಿಹಂತ್ಯಾಚಮನಂ ಚರೇತ್ ॥ ದಂತಾಂತರ ಗತಂಚಾನ್ನಂ ಶೋಧನೇನಾಹರೇಚ್ಛನೈಃ ॥ ಕುರ್ಯಾದನಿರ್ಹೃತಂ ತದ್ಧಿಮುಖಸ್ಯಾನಿಷ್ಟಗಂಧತಾಮ್ ॥ ದಂತಲಗ್ನಮನಿರ್ಹಾರ್ಯಂ ಲೇಪಂ ಮನ್ಯೇತ ದಂತವತ್ ॥ ನ ತತ್ರ ಬಹುಶಃ ಕುರ್ಯಾತ್ ಯಂತ್ರಂನಿ ರ್ಹರಣಂ ಪ್ರತಿ ॥ "

" ಈಪ್ರಕಾರ ಭೋಜನಮಾಡಿ, ಯಾವದಾದರೂ ರೂಕ್ಷಪದಾರ್ಥವನ್ನುಜ್ಜಿ ಕೈತೊಳದುಕೊಳ್ಳುವದು. (ಘೃತಾದಿ ಸಂಸರ್ಗ ವಿನಾಶಕ್ಕಾಗಿ ಎಂದರಿಯಬೇಕು.) ಭೋಜನ ಮಾಡುತ್ತಿದ್ದಾಗ ಹಲ್ಲುಗಳ ಮಧ್ಯೆ ಶಿಕ್ಕಿಕೊಂಡಿರುವ ವಸ್ತುಗಳನ್ನು ತೆಗದುಹಾಕಿ, ಚನ್ನಾಗಿ ಬಾಯಿ ಮುಕ್ಕಳಿಸಿ ಆಚಮನ ಮಾಡಬೇಕು. ದಂತ ಮಧ್ಯದಲ್ಲಿ ಪ್ರವಿಷ್ಟವಾಗಿರುವ ಅನ್ನಾದಿಗಳನ್ನು ಕಡ್ಡಿಯಿಂದ ಮೆಲ್ಲಮೆಲ್ಲಗೆ ತೆಗಿಯಲೇ ಬೇಕು, ಯಾಕೆಂದರೆ ಅವು ಅಲ್ಲಿಯೇ ಕೊಳಿಯುತ್ತಾ ದುರ್ಗಂಧವುಂಟಾಗುವದು. ದಂತಕ್ಕೆ ಹತ್ತಿರುವ ಲೇಪವನ್ನೂ ದಂತದಂತೆ ತಿಳಿದು ಅದನ್ನು ಕಳದುಕೊಳ್ಳುವದಕ್ಕಾಗಿ ಯತ್ನಮಾಡಬೇಕು. "

" ಆಚಮ್ಯ ಜಲಯುಕ್ತಾಭ್ಯಾಂ ಪಾಣಿಭ್ಯಾಂ ಚಕ್ಷುಷೀ ಸ್ಪೃಶೇತ್ ॥ ಭುಕ್ತ್ವಾಪಾಣಿತಲಂ ಘೃಷ್ಟ್ವಾ ಚಕ್ಷುಷೋ ದೀಯತೇ ಯದಿ ॥ ಅಚಿರೇಣೈವ ತದ್ವಾರಿ ತಿಮಿರಾಣಿ ವ್ಯಪೋಹತಿ ॥ "

" ಕೈತೊಳಕೊಂಡು ಜಲಯುಕ್ತ ಕೈಗಳನ್ನು ಖಾಂತರ ನೇತ್ರಗಳೆಡನ್ನು ಸ್ಪರ್ಶಮಾಡಬೇಕು; ಯಾಕೆಂದರೆ ಆ ಜಲವು ಶೀಘ್ರವಾಗಿ ನೇತ್ರಗಳ ಅಂಧಕಾರ (ತಿಮಿರ) ವನ್ನು ದೂರಪಡಿಸುವದು. "

" ಜೀರ್ಣಜನ್ನೇ ವರ್ಧತೇ ವಾಯುಃ, ವಿದಗ್ಧೇ ಪಿತ್ತಮೇಧತೇ ||
ಭುಕ್ತಮಾತ್ರೆ ಕಫಶ್ಚಾಪಿ ಕ್ರಮೋಽಯಂ ಭೋಜನೋಪರಿ ||
ಭುಕ್ತಮಾತ್ರಸ್ಯ ತು ಸ್ವಪ್ನಾದ್ಧನ್ತ್ಯಗ್ನಿಂ ಕುಪಿತಃ ಕಫ ಇತಿವಚನಾತ್ || ಅನಾಯಾಸಪ್ರದಾಯೀನಿ ಕುರ್ಯಾತ್ಕಾರ್ಯಾಣ್ಯತಂದ್ರಿತಃ ||
ನ ತು ಸ್ವಪ್ಯಾತ್ || "

" ಭೋಜನ ಪರಿಪಕ್ವವಾಗುತ್ತಿರುವಾಗ ವಾತವೃದ್ಧಿಯೂ, ಸ್ವಲ್ಪ ಪರಿಪಾಕವಾದಾಗ ಪಿತ್ತವೃದ್ಧಿಯೂ, ಭೋಜನದ ಅಂತದಲ್ಲಿ ಕಫವೃದ್ಧಿಯೂ ಆಗುತ್ತದೆ. ಊಟಮಾಡಿದ ಸಂಗಡಲೇ ಮಲಗುವದರಿಂದ ಕುಪಿತವಾದ ಕಫವು ಜಠರಾಗ್ನಿಯನ್ನು ನಾಶಮಾಡುತ್ತದೆ. ಇದಕ್ಕಾಗಿ ಭೋಜನಮಾಡಿದ ಕೂಡಲೆ ಪರಿಶ್ರಮರಹಿತವಾದ ಕಾರ್ಯಗಳನ್ನು ಮಾಡುತ್ತಾ ಜಾಗ್ರತನಾಗಿಯೇ ಇರಬೇಕಲ್ಲದೆ, ನಿದ್ರಿಸಬಾರದು. "

ತಾಂಬೂಲಚರ್ವಣಮ್:—" ಧೂಮೇನಾಪೋಹ್ಯ ಹೃದ್ಯೈರ್ವಾ ಕಷಾಯಕಟುತಿಕ್ತಕೈಃ || ಪೂಗಕರ್ಪೂರಕಸ್ತೂರೀಲವಂಗಸುಮನಃ ಫಲೈಃ || ಫಲೈಃ ಕಟುಕಷಾಯೈರ್ವಾ ಮುಖವೈಶದ್ಯಕಾರಿಭಿಃ || ತಾಂಬೂಲಪತ್ರಸಹಿತೈಃ ಸುಗಂಧೈರ್ವಾ ವಿಚಕ್ಷಣಃ || "

" ಭೋಜನಾಂತರ ಹುಟ್ಟುವ ಕಫಹರಾರ್ಥವಾಗಿ—ಅಗರು, ಊದಬತ್ತಿ ಮುಂತಾದವುಗಳ ಹೊಗೆಯು ಪ್ರಸರಿಸುವಂತೆ ಮಾಡಬೇಕು, (ಹೀಗೆ—ಅಪೋಹ್ಯ-ಕಫವನ್ನು ದೂರೀಕರಣಮಾಡಿ) ಮನಸ್ಸಿಗೆ ಹಿತವಾದ ಅಥವಾ ಕಟುತಿಕ್ತ ಕಷಾಯ ರಸಯುಕ್ತವಾದ ಫಲಗಳನ್ನು ಸ್ವಲ್ಪಮಟ್ಟಿಗೆ ಸೇವಿಸಬೇಕು. ಇದರಿಂದ ಬಾಯಿ ನಿರ್ಮಲವಾಗುತ್ತದೆ. ಅಥವಾ ಅಡಕೆ, ಪಚ್ಚಕರ್ಪೂರ, ಕಸ್ತೂರಿ, ಲವಂಗ, ಜಾಕಾಯಿ, ಯಾಲಕ್ಕಿ ಮುಂತಾದವುಗಳಿಂದ ತಾಂಬೂಲವನ್ನು ಸೇವಿಸಬೇಕು. "

" ರತಾ, ಸುಪ್ತೋತ್ಥಿತೇ ಸ್ನಾನೇ, ಭುಕ್ತೇ ವಾಂತೇ ಚ ಸಂಗರೇ||
ಸಭಾಯಾಂ ವಿದುಷಾಂ ರಾಜ್ಞಾಂ ಕುರ್ಯಾತ್ತಾಂಬೂಲಚರ್ವಣಮ್||"

" ಮೈಥುನದ ಸಮಯದಲ್ಲಿ, ನಿದ್ರೆಯ ಅಂತದಲ್ಲಿ, ಸ್ನಾನದ ಭೋಜನದ ಕೊನೆಗೆ, ವಮನದ ಅಂತಕ್ಕೆ, ಪರಿಶ್ರಮದ ಅಂತಕ್ಕೆ, ಪಂಡಿತರ ಹಾಗೂ ರಾಜರ ಸಭೆಯಲ್ಲಿ—ತಾಂಬೂಲ ಭಕ್ಷಣವನ್ನು ಮಾಡತಕ್ಕದ್ದು. "

**ತಾಂಬೂಲಗುಣಾಃ**—"ತಾಂಬೂಲ ಮುಕ್ತಂ ಶೀತೋಷ್ಣಂ ರೋಚನಂ ತುವರಂ ಸರಮ್ ‖ ತಿಕ್ತಂ ಕ್ಷಾರೋಷಣಂ ಕಾಮ ರಕ್ತಪಿತ್ತಕರಂ ಲಘು ‖ ವಶ್ಯಂ ಶ್ಲೇಷ್ಮಾಸ್ಯ ದೌರ್ಗಂಧ್ಯಂ ಮಲವಾತ ಶ್ರಮಾಪಹಮ್ ‖ ಮುಖ ವೈಶದ್ಯ ಸೌಗಂಧ್ಯ ಕಾಂತಿ ಸೌಷ್ಠವ ಕಾರಕಮ್ ‖ ಹನೂ ದಂತ ಮಲಧ್ವಂಸಿ ಜಿಹ್ವೇಂದ್ರಿಯ ವಿಶೋಧನಮ್ ‖ ಮುಖಪ್ರಸೇಕಶಮನಂ ಮ ಲಾಮಯ ವಿನಾಶನಮ್ ‖ ನವಂ ತದೇವಮಧುರಂ, ಕಷಾ ಯಾನುರಸಂ ಗುರು ‖ ಬಲಾಸ ಜನನಂ ಪ್ರಾಯಃ ಪತ್ರಶಾಕಗು ಣಂ ಸ್ಮೃತಮ್‖ ಪರ್ಣೇ ಪುರಾಣಮುಕಟು ಕ್ಷುಲ್ಲಕಂ ತನು ಪಾಂ ಡುರಮ್ ‖ ವಿಶೇಷಾದ್ಗುಣವದ್ವೈದ್ಯಮನ್ಯದ್ಧೀನಗುಣಂ ಸ್ಮೃ ತಮ್ ‖"

"ವಿಳ್ಯದೆಲೆಯು—ತೀಕ್ಷ್ಣ, ಉಷ್ಣ, ರುಚಿಕಾರಕ, ಕಷಾಯ ರಸ ವುಳ್ಳದ್ದು, ಸಾರಕ, ತೀಕ್ಷ್ಣಕ್ಷಾರ, ಕಟು, ಕಾಮ ತಥಾ ರಕ್ತಪಿತ್ತಕಾರಕ, ಲಘುವಾಗಿ ವಶೀಕರಣ ಮಾಡತಕ್ಕದ್ದು, ಕಫ, ಮುಖ ದುರ್ಗಂಧ, ಮುಖ ಮಲ, ವಾಯು, ಶ್ರಮಗಳ ನಾಶಕ, ಮುಖಕ್ಕೆ ಸ್ವಚ್ಛತಾ, ಸುಗಂಧಕಾಂತಿ ಸೌಂದರ್ಯಗಳನ್ನುಂಟು ಮಾಡುವದೂ, ದವಡೆ ಮತ್ತು ಹಲ್ಲುಗಳ ಮಲನಾಶ ಕವೂ, ನಾಲಿಗೆಯನ್ನು ಶೋಧಿಸತಕ್ಕದ್ದೂ, ಮುಖದ ಜೊಲ್ಲನ್ನೂ, ಗಳರೋ ಗಗಳನ್ನೂ ನಾಶಮಾಡತಕ್ಕದ್ದೂ ಆಗಿದೆ. ಎಳೇ ಚಿಗರೆಲೆಯು-ಸ್ವಲ್ಪ ವಗರು ರಸವುಳ್ಳದ್ದಾಗಿ-ಮಧುರ, ಗುರು, ಕಫಕಾರಕ, ಹಾಗೂ ಪತ್ರಶಾಕದಂತೆ ಗುಣ ವುಳ್ಳದ್ದು. ತೀರಾಬಲಿತಿರುವ ಹಣ್ಣೆಲೆಯು-ಕಟುರಸರಹಿತವಾದದ್ದು, ಲಘು, ಸ್ವಲ್ಪ ಪಾಂಡುರ ವರ್ಣವುಳ್ಳದ್ದಾಗಿರುತ್ತದೆ. ಅತಿ ಗುಣಕಾರಿಯು, ಬೇರೆ ಎಲೆಗಳು ಇದಕ್ಕಿಂತಲೂ ಹೀನಗುಣವುಳ್ಳವುಗಳು."

**ಪೂಗಗುಣಾಃ**—"ಪೂಗಂ ಗುರು ಹಿಮಂ ರೂಕ್ಷಂ, ಕಷಾ ಯಂ ಕಫ ಪಿತ್ತನುತ್ ‖ ಮೋಹನಂ ದೀಪನಂ ರುಚ್ಯ ಮಾಸ್ಯ ವೈರಸ್ಯ ನಾಶನಮ್ ‖ ಪೂಗಂ ಸ್ಯಾದ್ದೃಢಮಧ್ಯಂಯುತ್, ಸ್ವಿ ನ್ನಂ ವಾಪಿ ತ್ರಿದೋಷನುತ್ ‖ ಸರಸಂ ಗುರ್ವಭಿಷ್ಯಂದಿ ತದ್ ಭೃ ಶಂ ವಹ್ನಿನಾಶನಮ್ ‖"

"ಅಡಕೆಯು—ಗುರು, ಶೀತಲ, ರೂಕ್ಷ, ಕಷಾಯ ರಸವುಳ್ಳದ್ದು, ಕಫ ಪಿತ್ತನಾಶಕ, ಮದಕಾರಕ, ಅಗ್ನಿದೀಪಕ, ರುಚಿಕಾರಕ, ಮುಖದ ವಿರಸತ್ವವನ್ನು ನಾಶಮಾಡತಕ್ಕದ್ದು, ಗರ್ಭದಲ್ಲಿ ದೃಢವಾಗಿದ್ದು ಬೇಯಿಸಿದ ಅಡಕೆಯು ತ್ರಿದೋಷನಾಶಕವಾದದ್ದು. ಬೇಯಿಸದ ಹಸೀ ಅಡಕೆಯು-- ಗುರು, ಅಭಿಷ್ಯಂದೀ, ಜಠರಾಗ್ನಿಯನ್ನು ಮಂದವನ್ನಾಗಿ ಮಾಡುತ್ತದೆ."

**ತಾಂಬೂಲ ಚರ್ವಣ ಕ್ರಮ:**—" ಖದಿರಃ ಕಫಪಿತ್ತಘ್ನಃ ಚೂರ್ಣಂ ವಾತಬಲಾಸನುತ್ ‖ ಸಂಯೋಗಸ್ತ್ರಿದೋಷಘ್ನಂ ಸಾಮನಸ್ಯಂ ಕರೋತಿ ಚ ‖ ಮುಖವೈಶದ್ಯ ಸಾಗಂಧ ಕಾಂತಿ ಸಾಷ್ಠವ ಕಾರಕಮ್ ‖ ಪ್ರಭಾತೇ ಪೂಗಮಧಿಕಂ, ಮಧ್ಯಾಹ್ನೇ ಖದಿರಂ ತಥಾ ‖ ನಿಶಾಸು ಚೂರ್ಣಮಧಿಕಂ, ತಾಂಬೂಲಂ ಭಕ್ಷಯೇತ್ಸದಾ ‖ ಆಯುರಗ್ರೇ ಯಶೋ ಮೂಲೇ, ಲಕ್ಷ್ಮೀರ್ಮಧ್ಯೇ ವ್ಯವಸ್ಥಿತಾ ‖ ತಸ್ಮಾದಗ್ರಂ ತಥಾಮೂಲಂ ಮಧ್ಯಂ ಪರ್ಣಸ್ಯ ವರ್ಜಯೇತ್ ‖ ಪರ್ಣಮೂಲೇ ಭವೇದ್ವ್ಯಾಧಿಃ ಪರ್ಣಾಗ್ರೇ ಪಾಪಸಂಭವಃ ‖ ಮಧ್ಯಂ ಪರ್ಣಂ ಹರತ್ಯಾಯುಃ, ಶಿರಾ ಬುದ್ಧಿವಿನಾಶಿನೀ ‖ ಆದ್ಯಂ ವಿಷೋಪಮಂ ಪೀತಂ, ದ್ವಿತೀಯಂ ಭೇದಿ ದುರ್ಜರಮ್ ‖ ತೃತೀಯಾದನುಪಾತವ್ಯಂ, ಸುಧಾತುಲ್ಯಂ ರಸಾಯನಮ್ ‖ ತಾಂಬೂಲಂ ನಾತಿಸೇವೇತ, ನ ವಿರಕ್ತೋ ಬುಭುಕ್ಷಿತಃ ‖ ದೇಹದೃಕ್ಕೇಶ ದಂತಾಗ್ನಿಶ್ರೋತ್ರ ವರ್ಣ ಬಲಕ್ಷಯಃ ‖ ಶೋಷಃ ಪಿತ್ತಾನಿಲಾಸ್ರಂ ಸ್ಯಾದಿತಿ ತಾಂಬೂಲ ಚರ್ವಣಾತ್ ‖ ತಾಂಬೂಲಂ ನ ಹಿತಂ ದಂತ ದುರ್ಬಲೇಕ್ಷಣ ರೋಗಿಣಾಮ್ ‖ ವಿಷ ಮೂರ್ಛಾ ಮದಾರ್ತಾನಾಂ ಕ್ಷಯಿಣಾಂ ರಕ್ತಪಿತ್ತಿನಾಮ್ ‖ "

"ಕಾಚು—ಕಫ ಪಿತ್ತಗಳನ್ನು ನಾಶಮಾಡತಕ್ಕದ್ದು; ಸುಣ್ಣವು-ವಾಯು ಮತ್ತು ಕಫಗಳ ನಾಶಕವು, ಇದರಿಂದ ವೀಳ್ಯದೆಲೆ, ಅಡಕೆ, ಕಾಚು, ಸುಣ್ಣ ಇವು ಕೂಡುವದರಿಂದ ತ್ರಿದೋಷನಾಶಕರವು. ಮನಸ್ಸಿಗೆ ಪ್ರಸನ್ನತೆ, ಮುಖದ ನಿರ್ಮಲತೆ, ಸುಗಂಧ, ಕಾಂತಿ, ಸೌಂದರ್ಯ ಇವನ್ನುಂಟು ಮಾಡುತ್ತದೆ. ಪ್ರಾತಃಕಾಲ ತಾಂಬೂಲಸೇವನೆಯಲ್ಲಿ ಅಡಕೆಯನ್ನೂ, ಮಧ್ಯಾಹ್ನದಲ್ಲಿ ಕಾಚನ್ನೂ, ರಾತ್ರಿಯಲ್ಲಿ ಸುಣ್ಣವನ್ನೂ ಸ್ವಲ್ಪ ಹೆಚ್ಚಾಗಿ ಸೇರಿಸಬೇಕು. ವಿಳ್ಯದೆಲೆಯ ತುದಿಯಲ್ಲಿ ಆಯುಸ್ಸು, ಮೂಲಭಾಗದಲ್ಲಿ ಯಶಸ್ಸು, ಮಧ್ಯದಲ್ಲಿ ಲಕ್ಷ್ಮಿಯೂ ಇರುತ್ತವೆ. ಈ ಕಾರಣದಿಂದ ಆ ಮೂರು ಭಾಗಗಳನ್ನೂ ತ್ಯಜಿಸಬೇಕು. ಈ ಎಲೆಯ ಮೂಲಭಾಗವನ್ನು ಅಗಿಯುವದರಿಂದ ರೋಗ ಪ್ರಾಪ್ತಿಯಾಗುತ್ತದೆ, ತುದಿಯನ್ನು ತಿನ್ನುವದು ಪಾಪವು; ಕೇವಲ ವಿಳ್ಯದೆಲೆ ಸುಣ್ಣಗಳನ್ನು ಅಗಿಯುವದರಿಂದ ಆಯುವಿನ ನಾಶವಾಗುತ್ತದೆ. ಮತ್ತು ಈ ಎಲೆಯ ನಾರುಗಳನ್ನು ಸೇವಿಸುವದು ಬುದ್ಧಿಯ ನಾಶನವನ್ನುಂಟುಮಾಡುತ್ತದೆ. ಅಡಕೆಯೊಂದಿಗೆ ಕೂಡಿದ ತಾಂಬೂಲದ ಮೊದಲನೇ ರಸವು ವಿಷತುಲ್ಯವಾದದ್ದು; ೨ನೇ ರಸವು ಭೇದಕವು, ಕಠಿಣದಿಂದ ಪರಿಪಾಕವನ್ನು

ಪಡಿಯುತ್ತದೆ. ಅದಕ್ಕಾಗಿ ಈ ೨ ಸಲದ ರಸವನ್ನೂ ಉಗುಳಿಬಿಟ್ಟು ೩ನೇ ಸಲದ ರಸವನ್ನು ಸೇವಿಸಬೇಕು. ಇದು ಅಮೃತತುಲ್ಯವಾದ ಗುಣಕಾರಿ ಮತ್ತು ರಸಾಯನವು ! ! ! ವಿರೇಚನೌಷಧಸೇವಿಯೂ, ಹಸಗೊಂಡವನೂ ತಾಂಬೂಲಸೇವನೆಯನ್ನು ಹೆಚ್ಚಾಗಿ ಮಾಡಬಾರದು. ತಾಂಬೂಲವನ್ನು ಅಧಿಕವಾಗಿ ಸೇವಿಸುವದರಿಂದ—ಶರೀರ, ದೃಷ್ಟಿ, ಕೇಶ, ದಂತ, ಅಗ್ನಿ, ಶ್ರವಣೇಂದ್ರಿಯ, ವರ್ಣ, ಬಲ ಇವುಗಳನ್ನು ನಾಶಮಾಡುವದು. ಶೋಷ, ಪಿತ್ತ ವಾಯುಗಳನ್ನು ವೃದ್ಧಿಪಡಿಸುವದು. ದುರ್ಬಲನೂ, ದಂತರೋಗಿಯೂ, ಕಣ್ಣುಬೇನೆಯುವನೂ, ವಿಷಮೂರ್ಛಾಮದಾರ್ತರೂ, ಕ್ಷಯರೋಗಿಗಳೂ, ರಕ್ತಪಿತ್ತದವರೂ ತಾಂಬೂಲವನ್ನು ಸೇವಿಸಬಾರದು. ”

ಭೋಜನೋತ್ತರ ಕ್ರಿಯಾ:—“ ಭುಕ್ತ್ವಾ ಶತಪದಂ ಗಚ್ಛೇಚ್ಛನೈಸ್ತೇನ ತು ಜಾಯತೇ ॥ ಅಂಗ ಸಂಘಾತ ಶೈಥಿಲ್ಯಂ, ಗ್ರೀವಾ ಜಾನುಕಟೀ ಮುಖಮ್ ॥ ಭುಕ್ತ್ವೋಪವಿಶತಸ್ತಂದ್ರಾ, ಶಯಾನಸ್ಯ ತು ಪುಷ್ಟತಾ ॥ ಆಯುಶ್ಚಂಕ್ರಮಮಾಣಸ್ಯ, ಮೃತ್ಯುರ್ಧಾವತಿ ಧಾವತಃ ॥

ವಾಮದಿಶಾಯಾ ಮನಲೋ ।
ನಾಭೇರೂರ್ಧ್ವೇಽಸ್ತಿ ಜಂತೂನಾಮ್ ॥
ತಸ್ಮಾತ್ತು ವಾಮಪಾರ್ಶ್ವೇ ।
ಶಯೀತ ಭುಕ್ತಪ್ರಪಾಕಾರ್ಥಮ್ ॥ ”

“ ಭೋಜನಾನಂತರ ಮೆಲ್ಲಮೆಲ್ಲಗೆ ಶತಪದ (೧೦೦ ಹೆಜ್ಜೆ) ನಡಿಯಬೇಕು; ಇದರಿಂದ ಅಂಗಗಳ ಸಘನತಾ, ಗ್ರೀವಾ, ಜಾನು, ಕಟಿ ಮುಖಗಳಲ್ಲಿ ಲಘುತಾ ಆಗುತ್ತದೆ. ಭೋಜನಾನಂತರ-ಕುಳ್ಳಿರುವವನಿಗೆ ತಂದ್ರಾ, ಮಲಗುವವನಿಗೆ ಪುಷ್ಟತಾ, ಮೆಲ್ಲಮೆಲ್ಲಗೆ ಶತಪದ ನಡಿಯುವವನಿಗೆ ಆಯುಸ್ಸು, ಓಡುವವನಿಗೆ ಮೃತ್ಯು ಪ್ರಾಪ್ತವಾಗುತ್ತದೆ. ಮನುಷ್ಯನ ಎಡಪಾರ್ಶ್ವದಲ್ಲಿ ನಾಭಿಯ ಮೇಲ್ಭಾಗವೇ ಜಠರಾಗ್ನಿಯ ಸ್ಥಾನವು; ಈ ಕಾರಣದಿಂದ ಭೋಜನಪರಿಪಾಕಕ್ಕಾಗಿ ಎಡಮಗ್ಗುಲಲ್ಲಿ ಶಯನಮಾಡಬೇಕು. ”

ಶಯ್ಯಾ:—“ ತ್ರಿದೋಷಶಮನೀ ಖಟ್ವಾ ತೂಲೀ ವಾತಕಫಾಪಹಾ ॥ ಭೂಶಯ್ಯಾ ಬೃಂಹಣೀ ವೃಷ್ಯಾ ಕಾಷ್ಟಪಟ್ಟೀ ತು ವಾತಲಾ ॥ (ಅನ್ಯಚ್ಚ) ಭೂಶಯ್ಯಾ ವಾತಲಾ ತೀವ ರೂಕ್ಷಾ ಪಿತ್ತಾಽಸ್ರನಾಶಿನೀ ॥ ಭೂಶಯ್ಯಾ ಶಯನಂ ಹೃಷ್ಯಂ ಪುಷ್ಟಿ ನಿದ್ರಾ ಧೃತಿ ಪ್ರದಮ್ ॥ ಶ್ರಮಾ ನಿಲಹರಂ ವೃಷ್ಯಂ ವಿಪರೀತಮತೋಽನ್ಯಥಾ ॥ ”

" ಮಂಚದಮೇಲೆ ಮಲಗುವಿಕೆ—ತ್ರಿದೋಷನಾಶಕ, ಹತ್ತೀಹಾಸಿಗೆ-ವಾತಶ್ಲೇಷ್ಮ ನಾಶಕವು; ಪೃಥ್ವೀಶಯನವು-ಶರೀರದ ವೃದ್ಧಿ, ಪುಷ್ಟಿ; ಹಲಿಗೆಯಮೇಲೆ ಮಲಗುವದು ವಾಯುವಿನವೃದ್ಧಿ ಕಾರಕವು; (ಮತಾಂತರದಲ್ಲಿ) ಪೃಥ್ವೀಮೇಲೆ ಶಯನಮಾಡುವದರಿಂದ—ವಾಯುವೃದ್ಧಿ, ಕಫ ಮತ್ತು ರಕ್ತಪಿತ್ತದ ನಾಶಕವಾಗುತ್ತದೆ. ಉತ್ತಮಶಯ್ಯಾದಲ್ಲಿ ಮಲಗುವದರಿಂದ-ಮನಸ್ಸಿನ ಪ್ರಸನ್ನತಾ, ಪುಷ್ಟತಾ, ನಿದ್ರಾಧಾರಣಾಶಕ್ತಿ ವೃದ್ಧಿಯಾಗಿ, ಶ್ರಮ ವಾಯುನಾಶನವೂ, ವೀರ್ಯವೃದ್ಧಿಕರವೂ ಆಗುತ್ತದೆ. ನಿಕೃಷ್ಟಶಯ್ಯಾದಲ್ಲಿ ಶಯನಮಾಡಿದರೆ—ಇದರ ವಿಪರೀತ ಗುಣಗಳುಂಟಾಗುವವು. "

**ಸಂವಾಹನ (ಮೈಒತ್ತಿಸಿಕೊಳ್ಳುವಿಕೆ)—"ಸಂವಾಹನಂ ಮಾಂಸರಕ್ತ ತ್ವಕ್ಪ್ರಸಾದಕರಂ ಪರಮ್ ॥ ಪ್ರೀತಿ ನಿದ್ರಾಕರಂ ವೃಷ್ಯಂ ಕಫವಾತ ಶ್ರಮಾಪಹಮ್ ॥ "**

" ಸಂವಾಹನ (ಮೈ ಕೈ ಕಾಲು ಒತ್ತಿಸುವಿಕೆ) ದಿಂದ—ಮಾಂಸ, ರುಧಿರ, ತ್ವಚಾಗಳನ್ನು ಪ್ರಸನ್ನವನ್ನಾಗಿಡುವದು, ಪ್ರೀತಿ, ನಿದ್ರಾ, ವೀರ್ಯಗಳ ವೃದ್ಧಿಪಡಿಸುವದೂ, ಕಫ, ವಾತ, ಶ್ರಮಗಳ ನಾಶಕವೂ ಆಗಿದೆ. "

**ವಾಯುಗುಣ:—" ಪ್ರವಾತಂ ರೌಕ್ಷ್ಯ ವೈವರ್ಣ್ಯ ಸ್ತಂಭಕೃದ್ದಾಹ ಪಿತ್ತನುತ್ ॥ ಸ್ವೇದ ಮೂರ್ಛಾ ಪಿಪಾಸಾಘ್ನ ಮಪ್ರವಾತಮತೋಽನ್ಯಥಾ॥ ಸುಖಂ ಪ್ರವಾತಂ ಸೇವೇತ ಗ್ರೀಷ್ಮೇ ಶರದಿ ಚಾಂತರಾ ॥ ನಿರ್ವಾತಮಾಯುಷೇ ಸೇವ್ಯಮಾರೋಗ್ಯಾಯ ಚ ಸರ್ವದಾ ॥ ಪೂರ್ವೋಽನಿಲೋಗುರುಃ ಸೋಷ್ಣಃ ಸ್ನಿಗ್ಧಃ ಪಿತ್ತಾಸೃದೂಷಕಃ ॥ ವಿದಾಹೀ ವಾತಲಃ ಶ್ರಾಂತಿ ಕಫಶೋಷವತಾಂ ಹಿತಃ ॥ ಸ್ವಾದುಃ ಪಟುರಭಿಷ್ಯಂದೀ ತ್ವಗ್ದೋಷಾರ್ಶೋವಿಷಕೃಮೀನ್ ॥ ಸನ್ನಿಪಾತಂ ಜ್ವರಂ ಶ್ವಾಸಮಾಮವಾತಂ ಚ ಕೋಪಯೇತ್ ॥ ದಕ್ಷಿಣಃ ಪವನಃಸ್ವಾದುಃ ಪಿತ್ತರಕ್ತ ಹರೋಲಘುಃ ॥ ವೀರ್ಯೇಣ ಶೀತಲೋಬಲ್ಯಶ್ಚಕ್ಷುಷ್ಯೋ ನ ತು ವಾತಲಃ॥ ಪಶ್ಚಿಮಃ ಪವನಸ್ತೀಕ್ಷ್ಣಃ ಶೋಷಣೋ ಬಲಹೃಲ್ಲಘುಃ ॥ ಮೇದಃ ಪಿತ್ತಕಫಧ್ವಂಸೀ ಪ್ರಭಂಜನವಿವರ್ಧನಃ ॥ ಉತ್ತರೋ ಮಾರುತಃ ಶೀತಃ ಸ್ನಿಗ್ಧೋದೋಷಪ್ರಕೋಪಕೃತ್ ॥ ಕ್ಲೇದನಃ ಪ್ರಕೃತಿ ಸ್ಥಾನಾಂ, ಬಲದೋ ಮಧುರೋ ಮೃದುಃ॥ ಆಗ್ನೇಯೋ ದಾಹಕೃದ್ರೂಕ್ಷೋ ನೈರ್ಋತೋ ನ ವಿದಾಹಕೃತ್ ॥ ವಾಯವ್ಯಸ್ತು ಭವೇತ್ತಿಕ್ತ ಐಶಾನಃ ಕಟುಕಃ ಸ್ಮೃತಃ ॥ ವಿಷ್ವಗ್ವಾಯುರನಾಯುಷ್ಯಃ ಪ್ರಾಣಿನಾಂ ಬಹುರೋಗಕೃತ್ ॥ ಅತಸ್ತಂ ನೈವ**

ಸೇವೇತ ಸೇವಿತಃ ಸ್ಯಾನ್ನ ಶರ್ಮಣೇ || ವ್ಯಂಜನಸ್ಯಾನಲೋ ದಾಹ ಸ್ವೇದ ಮೂರ್ಛಾ ಶ್ರಮಾಪಹಃ || ತಾಲವೃಂತಭವೋ ವಾತಸ್ತ್ರಿ ದೋಷಶಮಕೋ ಮತಃ || ವಂಶವ್ಯಜನಜ ಸ್ತೀಕ್ಷ್ಣೋ ರಕ್ತಪಿತ್ತ ಪ್ರಕೋಪನಃ || ಚಾಮರೋ ವಸ್ತ್ರಸಂಭೂತೋ ಮಾಯೂರೋ ವೇತ್ರಜಸ್ತಥಾ|| ಏತೇ ದೋಷಜಿತಾ ವಾತಾಃ ಸ್ನಿಗ್ಧಾ ಹೃದ್ಯಾಃ ಸುಪೂಜಿತಾಃ || ”

“ ಅಧಿಕ ವಾಯು ಯುಕ್ತಸ್ಥಾನವು—ರೂಕ್ಷತಾ, ವಿವರ್ಣತಾ, ಸ್ತಂಭ ಕಾರಕವು; ದಾಹ, ಪಿತ್ತ, ಸ್ವೇದ, ಮೂರ್ಛಾ, ಪಿಪಾಸಾ ನಾಶಕವು; ವಾಯು ರಹಿತಸ್ಥಾನ ಇದಕ್ಕೆ ವಿಪರೀತ ಗುಣವುಳ್ಳದ್ದಾಗುತ್ತದೆ. ಗ್ರೀಷ್ಮಋತುವಿನಲ್ಲಿ ಶರತ್ಕಾಲಪರ್ಯಂತ ಸ್ವಲ್ಪಸ್ವಲ್ಪ ಸುಖದಾಯಕ ವಾಯುವಿನ ಸೇವನೆಯನ್ನು ಮಾಡಬೇಕು. ಆಯು ಮತ್ತು ಆರೋಗ್ಯದನಿಮಿತ್ತವಾಗಿ ವಾಯು ರಹಿತಸ್ಥಾನ (ಇದಿರು ವಾಯುವಿಲ್ಲದ ಸ್ಥಳ) ವನ್ನು ಸೇವಿಸಬೇಕು. ಪೂರ್ವದಿಕ್ಕಿನ ವಾಯುವು—ಗುರು, ಉಷ್ಣ, ಸ್ನಿಗ್ಧ, ಪಿತ್ತ ಮತ್ತು ರುಧಿರದೂಷಕ, ವಿದಾಹೀ, ವಾಯುಕಾರಕ, ದಣಿದವನಿಗೂ, ಕಫರಹಿತನಿಗೂ ಹಿತಕಾರಿಯು, ಸ್ವಾದು, (ಭೋಜನ ವಸ್ತುವನ್ನು ಮಧುರವನ್ನಾಗಿ ಮಾಡುವದು.) ಲವಣರಸಯುಕ್ತ, ಅಭಿಷ್ಯಂದೀಯಾದದ್ದು; ತ್ವಚಾದೋಷ, ಮೂಲವ್ಯಾಧಿ, ವಿಷ, ಕ್ರಿಮಿ, ಸನ್ನಿಪಾತ, ಜ್ವರ, ಶ್ವಾಸ, ಆಮವಾತ ಇವುಗಳನ್ನುಂಟು ಮಾಡುವದು; ದಕ್ಷಿಣದಿಶಾ ವಾಯುವು—ಸ್ವಾದು, ರಕ್ತಪಿತ್ತನಾಶಕ, ಲಘುವೀರ್ಯದಲ್ಲಿ ಶೀತಲ, ಬಲಕಾರಿ, ನೇತ್ರಗಳಿಗೆ ಹಿತವಾದದ್ದು, ವಾತಲವಾದದ್ದಲ್ಲ; ಪಶ್ಚಿಮದ ವಾಯುವು—ತೀಕ್ಷ್ಣ, ಒಣಗಿಸತಕ್ಕದ್ದು, ಬಲನಾಶಕ, ಲಘು, ಮೇದಸ್ಸು ಕಫ ಪಿತ್ತಗಳ ನಾಶಕ, ವಾತಕರವಾದದ್ದು; ಉತ್ತರದಿಕ್ಕಿನ ವಾಯುವು—ಶೀತಲ, ಸ್ನಿಗ್ಧ, ರೋಗಿಗಳ ದೋಷವನ್ನು ವೃದ್ಧಿಮಾಡತಕ್ಕದ್ದು, ಕ್ಲೇದನ, ಸ್ವಸ್ಥಪುರುಷರಿಗೆ ಬಲದಾಯಕ, ಮಧುರ, ಕೋಮಲವಾಗಿರುತ್ತದೆ. ಅಗ್ನಿಕೋಣದ ವಾಯುವು—ದಾಹವನ್ನುಂಟು ಮಾಡುವದು, ರೂಕ್ಷವಾದದ್ದು; ನೈರ್ಋತ್ಯಕೋಣದ ವಾಯುವು—ದಾಹಕಾರಕವಾದದ್ದಲ್ಲ; ವಾಯುಕೋಣದ ವಾಯು—ತಿಕ್ತರಸವುಳ್ಳದ್ದು, ಈಶಾನ್ಯದಿಕ್ಕಿನದು—ಕಟು ರಸವುಳ್ಳದ್ದು; ನಾಲ್ಕು ಕಡೆಯಿಂಧ ಬರುವ ವಾಯುವು—ಆಯುವಿನ ಹಾನಿಕಾರಕ, ಪ್ರಾಣಿಗಳಿಗೆ ಅನೇಕ ರೋಗಪ್ರದವಾದದ್ದು, ಇದಕ್ಕಾಗಿ ಅದರ ಸೇವನೆಯನ್ನು ಮಾಡಲಾಗದು; ಯಾಕೆಂದರೆ:—ಇದರಿಂದ ದುಃಖವಾಗುತ್ತದೆ. ಬೀಸಣಿಗೆಯ ವಾಯುವು—ದಾಹ, ಸ್ವೇದ, ಮೂರ್ಛಾ, ಭ್ರಮನಾಶಕವಾದದ್ದು; ತಾಳೇಗರೀ ಬೀಸಣಿಗೆಯ ವಾಯುವು-ತ್ರಿದೋಷನಾಶಕವಾದದ್ದು; ಬಿದರಿನ ಬೀಸ

ಣಿಗೆಯ ವಾಯುವು-ಉಷ್ಣ ಮತ್ತು ರಕ್ತಪಿತ್ತವನ್ನು ಮಾಡತಕ್ಕದ್ದು; ಚಾಮರ, ವಸ್ತ್ರ, ಮಯೂರ ರೆಕ್ಕೆ ಮತ್ತು ಬೆತ್ತದ ಬೀಸಣಿಗೆಯ ಗಾಳಿಯು--ತ್ರಿದೋಷನಾಶಕವೂ, ಸ್ನಿಗ್ಧ, ಹೃದಯಕ್ಕೆ ಹಿತಕಾರಿಯು; ಚಾಮರಾದಿ ಇವುಗಳ ವಾಯುವು—ಎಲ್ಲದಕ್ಕಿಂತಲೂ ಶ್ರೇಷ್ಠವಾದವುಗಳು!! ''

**ಅಧ್ಯಯನ ವಿಧಿಃ:**—" ನ ಸತೋ ನಗುರೂ ಪರಿವದೇತ್ || ನಾಶುಚಿರಭಿಚಾರಕರ್ಮ ಚೈತ್ಯಪೂಜ್ಯಪೂಜಾಧ್ಯಯನಮಭಿನಿವರ್ತಯೇತ್ || ನವಿದ್ಯುತ್ಸ್ವನಾರ್ತವೇಷು; ನಾಭ್ಯುದಿತಾಸು ದಿಕ್ಷು, ನಾಗ್ನಿಸಂಪ್ಲವೇ, ನ ಭೂಮಿಕಂಪೇ, ನ ಮಹೋತ್ಸವೇ, ನೋಲ್ಕಾಪಾತೇ, ನ ಮಹಾಗ್ರಹೋಪಗಮನೇ, ನ ನಷ್ಟ ಚಂದ್ರಾಯಾಂತಿಥೌ, ನ ಸಂಧ್ಯಯೋಃ, ನ ಮುಖಾದಗುರೋಃ, ನಾವಪತಿತಂ, ನಾತಿಮಾತ್ರಂ, ನತಾನ್ತಂ, ನವಿಸ್ವರಂ, ನಾನವಸ್ಥಿತಪದಂ, ನಾತಿದ್ರುತಂ, ನಾವಿಲಂಬಿತಂ, ನಾತಿಕ್ಲೀಬಂ, ನಾತ್ಯುಚ್ಚೈಃ, ನಾತಿನೀಚೈಃ ಸ್ವರೈರಧ್ಯಯನ ಮಭ್ಯಸೇತ್ || "

" ಸಜ್ಜನರ ತಥಾ ಗುರುಗಳ ನಿಂದೆಯನ್ನು ಮಾಡಬಾರದು; ಅಪವಿತ್ರನಾಗಿ ಮಾರಣಾದಿಪ್ರಯೋಗ, ಚೈತ್ಯಪೂಜಾ, ಪೂಜ್ಯಪೂಜಾ ಮತ್ತು ವೇದಾಧ್ಯಯನ ಇವುಗಳನ್ನು ಮಾಡಬಾರದು; ಅಸಮಯದಲ್ಲಿ ವಿದ್ಯುತ್ ಮಿಂಚುತ್ತಿರುವಾಗ, ದಿಕ್ಕುಗಳು ಅಭ್ಯುದಿತವಾಗುತ್ತಿರುವಾಗ, ಬೆಂಕಿ ಉರಿಯುತ್ತಿರುವಾಗ, ಭೂಕಂಪವಾಗುತ್ತಿರುವಾಗ, ಮಹೋತ್ಸವದಲ್ಲಿ, ಶಿಡ್ಲು ಬೀಳುತ್ತಿರುವಾಗ, ಮಹಾ ಗ್ರಹಗಳ ಸಂಚಾರ ಕಾಲದಲ್ಲಿ, ಅಮಾವಾಸ್ಯಾದಲ್ಲಿ, ಸಂಧ್ಯಾದ್ವಯಗಳಲ್ಲಿ, ಗುರುಗಳ ಮುಖದಿಂದ ಉಪದೇಶವಿಲ್ಲದೆ, ಒಹುಪತಿತಸ್ವರದಿಂದ, ಬಹುಮ್ಲಾನತ್ವದಿಂದ, ಸ್ವರವಿಲ್ಲದೆ, ಪದಗಳನ್ನು ಬಿಡಿಸದೆ, ಬಹು ತೀವ್ರವಾಗಿ, ಬಹು ವಿಲಂಬವಾಗಿ, ಬಹು ಕ್ಲೀಬತೆಯಿಂದ, ದೊಡ್ಡ ಸ್ವರದಿಂದ ಕೂಡಿ ಬಹು ಇಳಿದ ಸ್ವರದಿಂದ—ಇಂತಹ ಸ್ಥಿತಿಯಲ್ಲಿ ವೇದಾಧ್ಯಯನವನ್ನು ಮಾಡಬಾರದು. ''

**ದಿವಾಸ್ವಾಪನಮ್:**—" ದಿವಾಸ್ವಾಪಂ ನ ಕುರ್ವೀತ ಯತೋಽಸೌ ಸ್ಯಾತ್ಕಫಾವಹಃ || ಗ್ರೀಷ್ಮವರ್ಜ್ಯೇಷು ಕಾಲೇಷು ದಿವಾಸ್ವಪ್ನೋ ನಿಷಿಧ್ಯತೇ || ಉಚಿತೋ ಹಿ ದಿವಾ ಸ್ವಪ್ನೋ ನಿತ್ಯಂ ಯೇಷಾಂ ಶರೀರಿಣಾಮ್ || ವಾತಾದಯಃ ಪ್ರಕುಪ್ಯಂತಿ ತೇಷಾಮಸ್ವಪತಾಂ ದಿವಾ ||

ವ್ಯಾಯಾಮ ಪ್ರಮದಾಧ್ವವಾಹನರತಾ ಕ್ಲಾಂತಾನತೀಸಾರಿಣಃ |
ಶೂಲಿ ಶ್ವಾಸವತಸ್ತೃಷಾ ಪರಿಗತಾ ಹಿಕ್ಕಾ ಮರುತ್ಕ್ಷೀಣಿತಾ ||

ಕ್ಷೀಣಾನ್ ಕ್ಷೀಣಕಫಾಂಚ್ಛಿಶೂನ್ ಮದಹರ್ತಾನ್ ವೃದ್ಧಾನ್ ರಸಾಜೀರ್ಣಿನೋ। ರಾತ್ರೌ ಜಾಗರಿತಾನ್ ನರಾನ್ನಿರಶನಾನ್ ಕಾಮಂ ದಿವಾ ಸ್ವಾಪಯೇತ್ ॥

ದಿವಾ ವಾ ಯದಿ ವಾ ರಾತ್ರೌ ನಿದ್ರಾ ಸಾತ್ಮೀಕೃತಾ ತು ಯೈಃ ॥ ನ ತೇಷಾಂಸ್ವಪತಾಂ ದೋಷೋ ಜಾಗ್ರತಾಂ ಚೋಪಜಾಯತೇ॥ ಭೋಜನಾನಂತರಂ ನಿದ್ರಾ ವಾತಂ ಹರತಿ ಪಿತ್ತಹೃತ್ ॥ ಕಫಂ ಕರೋತಿ ವಪುಷಃ ಪುಷ್ಟಿಸೌಖ್ಯಂ ತನೋತಿ ಹಿ ॥ ಶಯನಂ ಪಿತ್ತನಾಶಾಯ ವಾತನಾಶಾಯ ಮರ್ದನವ್ ॥ ವಮನಂ ಕಫನಾಶಾಯ ಜ್ವರನಾಶಾಯ ಲಂಘನವ್ ॥ ಆಸೀನಂ ಘೃಣಿತಂ ಯತ್ತು ನಾಭಿಷ್ಯಂದಿ ನ ರೂಕ್ಷಣವ್ ॥"

"ಹಗಲಿನಲ್ಲಿ ನಿದ್ರಿಸಬಾರದು, ಕಫವುತ್ಪನ್ನವಾಗುತ್ತದೆ. ಪರಂತು ಗ್ರೀಷ್ಮಋತುವಿನಲ್ಲಿ ಹಗಲು ನಿದ್ರಿಸುವದು ವರ್ಜಿತವಲ್ಲ; ಯಾವ ಮನುಷ್ಯನಿಗೆ ಸದೈವ ಹಗಲು ಮಲಗುವ ಅಭ್ಯಾಸವಿದೆಯೋ ಅಂತವನು ಹಗಲಿನಲ್ಲಿ ನಿದ್ರಿಸದಿದ್ದರೆ ವಾತಾದಿಗಳು ಉಲ್ಬಣವಾಗುವವು. ವ್ಯಾಯಾಮ, ಮೈಥುನ ಮತ್ತು ಮಾರ್ಗಾಯಾಸದಿಂದ ವ್ಯಾಕುಲನೂ, ಅತಿಸಾರರೋಗಿ, ಶೂಲ ಶ್ವಾಸ ತೃಷಾ ಬಿಕ್ಕಳಿಕೆ ವಾತರೋಗಪೀಡಿತರೂ, ಕ್ಷೀಣರೂ, ಅಲ್ಪ ಕಫವುಳ್ಳವರೂ, ಬಾಲಕರೂ, ಮದ್ಯಮದದಿಂದ ಪೀಡಿತರೂ, ವೃದ್ಧರೂ, ಅಜೀರ್ಣಯುಕ್ತರೂ, ರಾತ್ರಿಕಾಲದಲ್ಲಿ ಜಾಗರಣೆ ಮಾಡಿದವರೂ, ಲಂಘನವನ್ನು ಮಾಡಿದವರೂ ಸಹ ಹಗಲಿನಲ್ಲಿ ನಿದ್ರಿಸುವದು ಹಿತವಾದದ್ದು. ಯಾರು ಹಗಲಿನಲ್ಲಿ ನಿದ್ರಿಸುತ್ತಾ, ರಾತ್ರಿಯಲ್ಲಿ ಜಾಗರಣೆ ಮಾಡುತ್ತಾ ಇರುವ ಅಭ್ಯಾಸವಮಾಡಿರುವರೋ ಅಂತವರಿಗೆ ಇದರಿಂದ ಯಾವ ದೋಷವೂ ಉಂಟಾಗುವದಿಲ್ಲ. ಭೋಜನವಾದನಂತರ ಮಲಗುವದರಲ್ಲಿ ವಾತ ಪಿತ್ತಗಳ ನಾಶನವೂ, ಕಫವೃದ್ಧಿಯೂ ಉಂಟಾಗುತ್ತದೆ. ಶರೀರದಲ್ಲಿ ಪುಷ್ಟಿಯನ್ನೂ, ಸುಖವನ್ನೂ ಕೊಡುತ್ತದೆ. ಪಿತ್ತದ ನಾಶನಾರ್ಥವಾಗಿ ಶಯನವೂ, ವಾಯುನಾಶಾರ್ಥವಾಗಿ ಅಂಗಮರ್ದನವೂ, ಕಫಹರಕ್ಕಾಗಿ ವಮನವೂ, ಜ್ವರನಿರ್ಮೂಲನಾರ್ಥವಾಗಿ ಲಂಘನವೂ ಉಚಿತವಾದದ್ದು. ಕುಳಿತುಕೊಂಡು ಅಂಗಮರ್ದನ ಮಾಡಿಸಿಕೊಳ್ಳುವಿಕೆಯು ಅಭಿಷ್ಯಂದಿಯೂ, ರೂಕ್ಷವೂ ಆಗಲಾರದು."

ಭೋಜನಾನಂತರ ಕರ್ತವ್ಯ:—"ಶಬ್ದಾನ್ ಸ್ಪರ್ಶಾಂಶ್ಚ ರೂಪಾಣಿ ರಸಾನ್ ಗಂಧಾನ್ ಮನಃ ಪ್ರಿಯಾನ್ ॥ ಭುಕ್ತವಾನಪಿ ಸೇವೇತ ತೇನಾನ್ನಂ ಸಾಧು ತಿಷ್ಠತಿ ॥"

"ಭೋಜನಾನಂತರದಲ್ಲಿ ಮನಸ್ಸಿಗೆ ಪ್ರಿಯವಾದ—ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳ ಸೇವನೆಯನ್ನು ಮಾಡತಕ್ಕದ್ದು; ಅಂದರೆ ಸಂಗೀತಾದಿ ಶಬ್ದ

ಶ್ರವಣ, ದಿವ್ಯವಾದ, ಸುಖಾನಂದಕರಗಳಾದ ವಸ್ತುಗಳನ್ನು ಸ್ಪರ್ಶಿಸುವಿಕೆ, ದಿವ್ಯ ರೂಪಲಾವಣ್ಯಯುಕ್ತರನ್ನು ಅವಲೋಕನ ಮಾಡುವಿಕೆ, ದಿವ್ಯ ಮಧುರರಸಯುಕ್ತಫಲ ಸೇವನೆ, ಗಂಧಾದ್ಯನುಲೇಪನಾ ಕಾರ್ಯಗಳು, ಇವುಗಳಿಂದ ಅನ್ನವು ಉದರದಲ್ಲಿ ಒಳ್ಳೇ ಸ್ಥಿತಿಯಿಂದ ನಿಲ್ಲುವದು. ''

" ಶಬ್ದಃ ಸ್ಪರ್ಶ ಸ್ತಥಾರೂಪಂ ರಸೋ ಗಂಧೋ ಜುಗುಪ್ಸಿತಃ ॥
ಭುಕ್ತ ಮಪ್ರಯತಂ ಚಾನ್ನಮತಿಹಾಸ್ಯಂ ಚ ವಾಮಯೇತ್ ॥ "

" ಭೋಜನಾನಂತರದಲ್ಲಿ ಮನಸ್ಸಿಗೆ ಅಪ್ರಿಯವಾದ ಶಬ್ದ ಸ್ಪರ್ಶರೂಪ ರಸಗಂಧಗಳ ಸೇವನೆಯಿಂದಲೂ, ಅಪವಿತ್ರ ಅನ್ನವನುಣ್ಣುವದರಿಂದಲೂ, ಬಹುವಾಗಿ ನಗುವದರಿಂದಲೂ ವಮನವಾಗಿ ಬಿಡುತ್ತದೆ. ''

" ಶಯನಂ ಚಾಸನಂ ಚಾತಿ ನ ಭಜೇನದ್ರವಾದಿಕಮ್ ॥ ನಾಗ್ನ್ಯಾತಪೌ ನ ಪ್ಲವನಂ ನ ಯಾನಂ ನಾಪಿವಾಹನಮ್ ॥ ವ್ಯಾಯಾಮಂ ಚ ವ್ಯವಾಯಂ ಚ ಧಾವನಂ ಯಾನಮೇವ ಚ ॥ ಯುದ್ಧಂ ಗೀತಂ ಚ ಪಾಠಂ ಚ ಮುಹೂರ್ತಂ ಭುಕ್ತವಾನ್ ಸ್ತ್ಯಜೇತ್ ॥ ''

" ಭೋಜನದ ನಂತರ—ಮಲಗುವಿಕೆ, ಸುಮ್ಮನೇ ಕೂರುವಿಕೆ, ಅತಿದ್ರವ ವಸ್ತುವನ್ನು ಪಾನಮಾಡುವಿಕೆ, ಅಗ್ನಿಯನ್ನು ಕಾಸುವಿಕೆ, ಬಿಸಲಿನಲ್ಲಿ ತಿರುಗುವಿಕೆ, ಈಜಾಡುವಿಕೆ, ಮಾರ್ಗದಲ್ಲಿ ನಡಿಯಲಾರಂಭಿಸುವಿಕೆ, ಕುದುರೆ ಮುಂತಾದ ಯಾನಗಳನ್ನು ಆರೋಹಿಸುವಿಕೆ, ಕಸರತ್ತು ಮಾಡುವಿಕೆ, ಮೈಥುನಮಾಡುವಿಕೆ, ಓಡುವಿಕೆ, ಗಾನಮಾಡುವಿಕೆ, ಪುಸ್ತಕಗಳನ್ನೋದುವಿಕೆ ಇವುಗಳನ್ನು ಒಂದು ಮುಹೂರ್ತಮಾತ್ರ ಬಿಡತಕ್ಕದ್ದು. ''

ಅಜೀರ್ಣಕಾರಣಮ್:—

" ಅತ್ಯಂಬು ಪಾನಾದ್ವಿಷಮಾಶನಾಚ್ಚ ।
ಸಂಧಾರಣಾತ್ಸ್ವಪ್ನ ವಿಪರ್ಯಯಾಚ್ಚ ॥
ಕಾಲೇಽಪಿ ಸಾತ್ಮ್ಯಂ ಲಘುಚಾಪಿಭುಕ್ತ ।
ಮನ್ನಂ ನ ಪಾಕಂ ಭಜತೇ ನರಸ್ಯ ॥
ಈರ್ಷ್ಯಾ ಭಯ ಕ್ರೋಧ ಸಮನ್ವಿತೇನ ।
ಲುಬ್ಧೇನ ರುಗ್ದೈನ್ಯ ನಿಪೀಡಿತೇನ ॥
ವಿದ್ವೇಷಯುಕೇನ ಚ ಸೇವ್ಯಮಾನ ।
ಮನ್ನಂ ನ ಸಮ್ಯಕ್ಪರಿಪಾಕಮೇತಿ ॥ "

" ಬಹು ಜಲವನ್ನು ಕುಡಿಯುವಿಕೆ, ವಿಷಮ ಭೋಜನವನ್ನು ಮಾಡುವಿಕೆ, ಮಲಮೂತ್ರಾದಿಗಳ ವೇಗವನ್ನು ತಡಿಯುವಿಕೆ, ಹಗಲು ನಿದ್ರಿಸುವಿಕೆ,

ಈ ಕಾರಣಗಳಿಂದ (ಮನುಷ್ಯನು ಸಮಯಾನುಸಾರವಾಗಿ, ಸಾತ್ಮ್ಯವಸ್ತುಗಳನ್ನು ಲಘುವಾಗಿ ಭುಜಿಸಿದ್ದರೂ) ಅನ್ನವು ಸರಿಯಾಗಿ ಪರಿಪಾಕಕ್ಕೆ ಪ್ರಾಪ್ತವಾಗುವದಿಲ್ಲ. ಈರ್ಷ್ಯೆಯಿಂದಲೂ, ಭಯದಿಂದಲೂ, ಕ್ರೋಧದಿಂದಲೂ, ಲೋಭದಿಂದಲೂ ಕೂಡಿರುವವನೂ, ರೋಗಿಯೂ, ದೀನತಾಯುಕ್ತನೂ, ದ್ವೇಷಭಾವಯುಕ್ತನೂ ಆಗಿರುವವರು ಭೋಜನ ಮಾಡಿದ ಅನ್ನವು ಸಮ್ಯಕ್ಪರಿಪಾಕವನ್ನು ಹೊಂದುವದಿಲ್ಲ. ''

**ಅಧ್ಯಶನಲಕ್ಷಣಮ್:**—" ಅಜೀರ್ಣೇ ಭುಜ್ಯತೇ ಯತ್ತು ತದಧ್ಯಶನಮುಚ್ಯತೇ || (ತನ್ನಿವಾರಯನ್ನಾಹ) ಪಾಗ್ಭುಕ್ತೇ ಚಾನಲೇ ಮಂದೇ ದ್ವಿರಹ್ನೋ ನ ಸಮಾಹರೇತ್ || ಪ್ರಾತರಾಶೀತ್ವಜೀರ್ಣೇ ತು ಸಾಯಮಾಶೇನ ದೂಷ್ಯತಿ || ಪೂರ್ವಂ ಭುಂಜ್ಯಾತ್ತು ವಿದಗ್ಧೇಽನ್ನೇ ಭುಂಜಾನೋ ಹಂತಿ ಪಾವಕಮ್ || ಸಾಯಮಾಶೀತ್ವಜೀರ್ಣೇ ತು ಪ್ರಾತರ್ಭುಕ್ತಂ ವಿಷೋಪಮಮ್ || ''

" ಅಜೀರ್ಣವಿರುತ್ತಾ ಪುನಃ ಭೋಜನ ಮಾಡುವಿಕೆಗೆ " ಅಧ್ಯಶನ '' ವೆಂದು ಹೆಸರು. (ಇದಕ್ಕೆ ನಿವಾರಣೆಯು) ಪ್ರಾತಃಕಾಲ ಮಾಡಿದ ಭೋಜನದಿಂದ ಅಜೀರ್ಣರೋಗ ಉಂಟಾಗಿದ್ದಲ್ಲಿ-ಆ ಹಗಲಿನಲ್ಲಿ ಮತ್ತೆ ಭೋಜನ ಮಾಡಬಾರದು; ಆ ದಿನದ ರಾತ್ರಿಯಲ್ಲಿ ಭೋಜನ ಮಾಡುವದರಿಂದ ದೋಷವೇನೂ ಉಂಟಾಗಲಾರದು. ಯಾಕೆಂದರೆ ಸುಶ್ರುತದಲ್ಲಿ:—ಪ್ರಾತಃಕಾಲ ಮಾಡಿದ ಭೋಜನದಿಂದ ಅಜೀರ್ಣ ಪ್ರಾಪ್ತವಾದರೆ ಆ ರಾತ್ರಿ ಭೋಜನ ಮಾಡಬಹುದು ಎಂದು ಹೇಳಿದ್ದಾನೆ. ಹಾಗೆಯೇ ರಾತ್ರಿಯಲ್ಲಿ ಉಂಡಅನ್ನವು ಸಮ್ಯಕ್ಪಚನವಾಗದೆ ಅಜೀರ್ಣವಾಗುವದಾದರೆ ಆ ಮರುದಿನ ಬೆಳಿಗ್ಗೆ ಭೋಜನ ಮಾಡುವದರಿಂದ ಜಠರಾಗ್ನಿಯು ನಷ್ಟವಾಗುತ್ತದೆ. ಯಾಕೆಂದರೆ— ರಾತ್ರಿಯಲ್ಲಿ ಮಾಡಲ್ಪಟ್ಟ ಭೋಜನದಿಂದುಂಟಾದ ಅಜೀರ್ಣ ರೋಗಿಗೆ ಮಾರನೆದಿನ ಬೆಳಿಗ್ಗೆ ಊಟಮಾಡುವಿಕೆಯು ವಿಷತುಲ್ಯವೆಂದು ಸುಶ್ರುತದಲ್ಲಿ ಹೇಳಲ್ಪಟ್ಟದೆ. ''

" ಭವೇದ್ಯದಿ ಪ್ರಾತರಜೀರ್ಣಶಂಕಾ |
ತದಾಭಯಾಂ ನಾಗರಸೈಂಧವಾಭ್ಯಾಮ್ ||
ವಿಚೂರ್ಣಿತಾಂ ಶೀತಜಲೇನ ಭುಕ್ತ್ವಾ |
ಭುಂಜೀತ ಚಾನ್ನಂ ಮಿತಮನ್ನಕಾಲೇ || ''

" ರಾತ್ರಿ ಊಟಮಾಡಿದ್ದರಿಂದ ಅಜೀರ್ಣವಾಗಿರುವದೆಂದು ಪ್ರಾತಃಕಾಲದಲ್ಲಿ ಗೊತ್ತಾದರೆ—ಶುಂಠಿ, ಸೈಂಧವಲವಣ, ಅಳಲೇಕಾಯಿಗಳನ್ನು ಚೂರ್ಣಮಾಡಿ ಶೀತಲ ಜಲದೊಂದಿಗೆ ಸೇವಿಸಿ, ಭೋಜನ ಸಮಯದಲ್ಲಿ ಸ್ವಲ್ಪಾಹಾರಮಾತ್ರ ಭುಜಿಸುವದು. ''

ದಿವಾಮೈಥುನವರ್ಜ್ಯಂ:—"ಆಯುಃ ಕ್ಷಯ ಭಯಾ ದ್ವಿದ್ವಾನ್ ನಾಹ್ನಿಸೇವೇತ ಕಾಮಿನೀಮ್ ‖ ಅವಶೋಯದಿ ಸೇವೇತ ತದಾಗ್ರೀಷ್ಮವಸಂತಯೋಃ ‖"

"ತಿಳಿದವನು ಹಗಲುಹೊತ್ತಿನಲ್ಲಿ ಸ್ತ್ರೀಸಂಸರ್ಗವನ್ನು ಮಾಡಬಾರದು, ಇದರಿಂದ ಆಯುಃಕ್ಷೀಣವಾಗುತ್ತದೆ. ಹಾಗೆ ತಡಿಯಲಾರದೆ, ಇಂದ್ರಿಯ ವಶೀಭೂತನಾದವನು ಗ್ರೀಷ್ಮ ಮತ್ತು ವಸಂತಋತುಗಳಲ್ಲಿ ದಿವಾ ಸ್ತ್ರೀಸಂಗ ಮಾಡಿದರೂ ದೋಷವಿಲ್ಲ."

"ಆಸ್ಯಾವರ್ಣ ಕಫ ಸ್ಥೌಲ್ಯ ಸೌಕುಮಾರ್ಯ ಸುಖಪ್ರದಾ ‖ ಅಧ್ವಾವರ್ಣ ಕಫಸ್ಥೌಲ್ಯ ಸೌಕುಮಾರ್ಯ ವಿನಾಶನಃ ‖ ಯತ್ತು ಚಂಕ್ರಮಣಂ ನಾತಿ ದೇಹಪೀಡಾ ಕರಂ ಭವೇತ್ ‖ ತದಾಯುರ್ಬಲ ಮೇಧಾಗ್ನಿ ಪ್ರದಮಿಂದ್ರಿಯಬೋಧನಮ್ ‖"

"ಕುಳಿತಿರುವದರಿಂದ—ವರ್ಣ, ಕಫ, ಸ್ಥೂಲತಾ, ಸುಕುಮಾರತಾ, ಸುಖ ಇವು ಉಂಟಾಗುವವು. ಸದೈವ ಮಾರ್ಗಭ್ರಮಣ ಮಾಡುವದರಿಂದ-ವರ್ಣ, ಕಫ, ಸ್ಥೌಲ್ಯ, ಸುಕುಮಾರತಾ ಇವುಗಳ ನಾಶನವುಂಟಾಗುವದು. ಶರೀರಕ್ಕೆ ಹೆಚ್ಚು ಪೀಡೆಯನ್ನು ಕೊಡದಂತೆ, ಮೆಲ್ಲಮೆಲ್ಲಗೆ ನಡಿಯುವದರಿಂದ-ಆಯು, ಬಲ, ಮೇಧಾ, ಅಗ್ನಿವೃದ್ಧಿ, ಇಂದ್ರಿಯಗಳಿಗೆ ಚೈತನ್ಯತಾ ಇವು ಉಂಟಾಗುವವು."

ಉಷ್ಣೀಷಧಾರಣೆ:—"ಉಷ್ಣೀಷಂ ಕಾಂತಿ ಕೃತ್ಕೇಶ್ಯಂ ರಜೋವಾತ ಕಫಾಪಹಮ್ ‖ ಲಘುತಶ್ಛಸ್ಯತೇ ಯಸ್ಮಾತ್ ಗುರುಪಿತ್ತಾಕ್ಷಿ ರೋಗಕೃತ್ ‖"

"ತಲೆಗೆ ಉಷ್ಣೀಷವೆಂಬ ರುಮಾಲು, ಪೇಟಾ ಮುಂತಾದವನ್ನು ಧರಿಸುವದರಿಂದ—ಕಾಂತಿ, ಕೂದಲುಗಳಿಗೆ ಹಿತ ಇವನ್ನು ಉಂಟುಮಾಡುವದು. ಧೂಳು, ವಾಯು, ಕಫಗಳನ್ನು ಹರಿಸುವದು; ಪರಂತು ತೂಕವಾಗಿಲ್ಲದ ಲಘುವಾದ ಉಷ್ಣೀಷವನ್ನೇ ಧರಿಸಬೇಕು. ಭಾರವಾದದ್ದು ಪಿತ್ತವನ್ನೂ, ನೇತ್ರರೋಗಗಳನ್ನೂ ಉಂಟುಮಾಡುತ್ತದೆ."

ಉಪಾನದ್ಧಾರಣಮ್:—"ಉಪಾನದ್ಧಾರಣಂ ನೇತ್ರ್ಯಂ ಮಾಯುಷ್ಯಂ ಪಾದರೋಗಹೃತ್ ‖ ಸುಖ ಪ್ರಚಾರ ಮೋಜಸ್ಯಂ ವೃಷ್ಯಂ ಚ ಪರಿಕೀರ್ತಿತಮ್ ‖ ಪಾದಾಭ್ಯಾ ಮನುಪಾನದ್ಭ್ಯಾಂ ಸದಾಚಂಕ್ರಮಣಂ ನೃಣಾಮ್ ‖ ಅನಾರೋಗ್ಯಮನಾಯುಷ್ಯಮಿಂದ್ರಿಯಘ್ನ ಮದೃಷ್ಟಿದಮ್ ‖"

"ಪಾದರಕ್ಷೆಗಳನ್ನು ಧರಿಸುವದರಿಂದ—ನೇತ್ರಗಳಿಗೆ ಹಿತ, ಆಯು ರ್ವೃದ್ಧಿಕರ, ಪಾದಗಳ ರೋಗನಾಶಕ, ಸುಖದಪ್ರಾಪ್ತಿ, ಓಜಸ್ಸು ತಥಾ ವೀರ್ಯವೃದ್ಧಿಯನ್ನು ಮಾಡುತ್ತದೆ. ಬರಿಗಾಲಿನಲ್ಲಿಯೇ ತಿರುಗುವಿಕೆಯಿಂದ-ಅನಾರೋಗ್ಯ, ಆಯುರ್ಹೀನತೆ, ಇಂದ್ರಿಯಗಳ ನಾಶ ತಥಾ ದೃಷ್ಟಿಪಾಟವ ಭಂಗ ಇವುಗಳುಂಟಾಗುವವು."

**ಛತ್ರಧಾರಣಮ್:—** "ಛತ್ರಸ್ಯ ಧಾರಣಂ ವರ್ಷಾ ಕಫ ವಾತ ರಜೋಽಪಹಮ್ ‖ ಹಿಮಘ್ನಂ ಹಿತಮಕ್ಷ್ಣೋಶ್ಚ ಮಾಂಗಲ್ಯ ಮಪಿ ಕೀರ್ತಿತಮ್ ‖"

"ಛತ್ರಿಯನ್ನು ಹಿಡಕೊಳ್ಳುವದರಿಂದ—ಮಳೆ, ಬಿಸಿಲು, ಧೂಳು, ಹಿಮ ಇವುಗಳ ನಾಶನ; ನೇತ್ರಹಿತ, ಮಂಗಲ ಇವುಗಳನ್ನುಂಟು ಮಾಡುತ್ತದೆ."

**ದಂಡಧಾರಣಮ್:—** "ಸತ್ವೋತ್ಸಾಹ ಬಲ ಸ್ಥೈರ್ಯ ಧೈರ್ಯ ತೇಜೋ ವಿವರ್ಧನಮ್ ‖ ಅವಷ್ಟಂಭಕರಂ ಚಾಪಿಭಯಘ್ನಂ ದಂಡಧಾರಣಮ್ ‖"

"ದಂಡವೆಂಬ ಸೋಟಾ ಕೈಯ್ಯಲ್ಲಿರಲು—ಸತ್ವ, ಉತ್ಸಾಹ, ಬಲ, ಸ್ಥಿರತಾ, ಶೂರತಾ, ತೇಜೋವೃದ್ಧಿ, ಅವಲಂಬದಾಯಕ, ಭಯ ನಾಶಕವಾಗುವದು."

**ವಾಹನಾನಿ:—** 'ಊರ್ಧ್ವಾಚ್ಛಾದನ ಸಂಯುಕ್ತಾ ಶಿಬಿಕಾ ಸರ್ವವಲ್ಲಭಾ ‖ ತಸ್ಯಾ ಮಾರೋಹಣಂ ನೃಣಾಂ ತ್ರಿದೋಷಶಮನಂ ಮತಮ್ ‖ ವಾತಶ್ಲೇಷ್ಮಮುದಾತಾರ್ನಾ ಮಹಿತಾ ಭ್ರಮಕೃತ್ತರಿಃ ‖ ಪಿತ್ತಾನಿಲಕರೋಹಸ್ತೀ ಲಕ್ಷ್ಮ್ಯಾಯುಃ ಪುಷ್ಟಿವರ್ಧನಃ ‖ ಘೋಟಕಾ ರೋಹಣಂ ವಾತಪಿತ್ತಾಗ್ನಿಃ ಶ್ರಮಕೃನ್ಮತಮ್ ‖ ಮೇದೋವರ್ಣ ಕಫಘ್ನಂ ಚ ಹಿತಂತದ್ಬಲಿನಾಂ ಪರಮ್‖"

"ಮೇಲಿನ ಆಚ್ಛಾದನೆಯುಳ್ಳ ಪಾಲಕಿಯು ಎಲ್ಲರಿಗೂ ಪ್ರಿಯವಾದದ್ದು. ಇದರಲ್ಲಿ ಏರುವಿಕೆಯಿಂದ ತ್ರಿದೋಷನಾಶವನ್ನುಂಟು ಮಾಡುವದು. ವಾತಶ್ಲೇಷ್ಮ ರೋಗಿಗಳಿಂದ ವ್ಯಾಕುಲರು ನಾವೆ (ದೋಣಿ) ಗಳನ್ನು ಹತ್ತುವದು ಹಾನಿಕಾರಕವು. ಇದರಿಂದ ಭ್ರಮೆಯೂ ಉಂಟಾಗುವದು. ಆನೆಯನ್ನೇರುವದರಿಂದ—ಪಿತ್ತ, ವಾಯು, ಸಂಪತ್ತು, ಆಯು, ಪುಷ್ಟಿತಾ ವೃದ್ಧಿಯಾಗುವವು. ಕುದುರೆಯನ್ನೇರುವದು—ವಾತ, ಪಿತ್ತ, ಅಗ್ನಿ, ಭ್ರಮೆ ಇವುಗಳನ್ನುಂಟು ಮಾಡುವದು. ಮೇದ, ವರ್ಣ, ಕಫ ನಾಶಕವಾದದ್ದು. ಇದು ಬಲವಾನ ಪುರುಷರಿಗೆ ಅತ್ಯಂತ ಹಿತವಾದದ್ದು."

ಆತಪಾದೀನಾಂಗುಣಾಃ:—"ಆತಪ ಸ್ವೇದಮೂರ್ಛಾರ್ಸೃಪಿತ್ತತೃಷ್ಣಾ ಕ್ಲಮಶ್ರಮಾನ್ ॥ ದಾಹಂ ವಿವರ್ಣತಾಂ ಕುರ್ಯಾದೇತಾನ್ ಛಾಯಾವ್ಯಪೋಹತಿ ॥ ವೃಷ್ಟಿರ್ವೃಷ್ಯಾ ಹಿಮಾ ಬಲ್ಯಾ ನಿದ್ರಾಲಸ್ಯ ವಿಧಾಯಿನೀ ॥ ಭಯಾವಹಾ ಮೋಹಕರೀ ಕುಹತಿಃ ಕಫವಾತಲಾ ॥ ಅಗ್ನಿರ್ವಾತ ಕಫಸ್ತಂಭ ಶೀತವೇಪಥುನಾಶನಃ ॥ ಆಮಾಭಿಷ್ಯಂದಿ ಶಮನೋ ರಕ್ತಪಿತ್ತ ಪ್ರಕೋಪನಃ ॥ ಸದ್ಯಃ ಶ್ಲೇಷ್ಮಕರೋ ಧೂಮೋನೇತ್ರಯೋರಹಿತೋ ಭೃಶಮ್ ॥ ಶಿರೋಗೌರವಕೃಚ್ಚಾಪಿ ವಾತಪಿತ್ತಂ ಚ ಕೋಪಯೇತ್ ॥"

"ಬಿಸಲು ಕಾಯಿಸುವದರಿಂದ—ಸ್ವೇದ, ಮೂರ್ಛಾ, ರಕ್ತ, ಪಿತ್ತ, ಗ್ಲಾನಿ, ಶ್ರಮ, ದಾಹ, ವಿವರ್ಣತಾ ಉತ್ಪನ್ನವಾಗುತ್ತದೆ. ಛಾಯಾನಿಷೇವಣೆಯಿಂದ—ಸ್ವೇದ, ಮೂರ್ಛಾ, ರಕ್ತ, ಪಿತ್ತ, ಗ್ಲಾನಿ, ಶ್ರಮ, ದಾಹಗಳ ನಾಶಪೂರ್ವಕ ವರ್ಣ ಉಂಟಾಗುವದು. ವೃಷ್ಟಿಯಿಂದ—ವೀರ್ಯ, ಶೀತಲತಾ, ಬಲ, ನಿದ್ರಾ, ಆಲಸ್ಯಗಳುಂಟಾಗುವವು. ಮಂಜಿನಿಂದ—ಭಯ, ಮೋಹ, ಕಫ, ವಾಯುಗಳಾಗುವವು. ಬೆಂಕಿಯಿಂದ—ವಾಯು, ಕಫ, ಸ್ತಂಭ, ಶೀತ, ಕಂಪನೆ ಇವುಗಳ ನಾಶವಾಗುವದು. ಆಮ ಮತ್ತು ಅಭಿಷ್ಯಂದದ ಶಾಂತಿಯೂ, ರಕ್ತಪಿತ್ತದ ಪ್ರಕೋಪವೂ ಆಗುತ್ತದೆ. ಹೊಗೆಯಿಂದ—ಶೀಘ್ರವಾಗಿ ಕಫದ ಉತ್ಪತ್ತಿಯೂ, ನೇತ್ರಗಳಿಗೆ ಅಹಿತವೂ, ಶಿರಸ್ಸಿಗೆ ಗುರುತ್ವವೂ, ವಾತಪಿತ್ತಗಳ ಪ್ರಕೋಪವೂ ಉಂಟಾಗುತ್ತದೆ.

ಇಂತು ದಿನಚರ್ಯಾ ಕಥನವೆಂಬ ಪಂಚಮಾಶಯವು.



## ಷಷ್ಠಾಶಯವು.

### ರಾತ್ರಿಚರ್ಯಾ ನಿರೂಪಣೆ.

ಹಿಂದಿನ ಆಶಯದಲ್ಲಿ ದಿನದ ಪೂರ್ವಾರ್ಧವಾದ ಹಗಲಿನ ಮನುಷ್ಯ ವ್ಯವಹಾರಗಳು ಹೇಳಲ್ಪಟ್ಟವು. ಈ ಬ್ರಹ್ಮಾಂಡದಲ್ಲಿ—ಸೂರ್ಯ ಚಂದ್ರ ಗ್ರಹ ನಕ್ಷತ್ರಾದಿಗಳೆಂಬ ಕೋಟಿಕೋಟಿ ಗೋಳಗಳನ್ನು ನಿರ್ಮಿಸಿ, ಅವುಗಳನ್ನು ಪರಸ್ಪರ ಆಕರ್ಷಣಾದಿ ಧರ್ಮವುಳ್ಳ ನಿಯಮಪರಿಪಾಲನೆಯಲ್ಲಿಟ್ಟು ರಕ್ಷಿಸುತ್ತಾ ಇರುವ ಪರಮೇಶ್ವರನ ಅಪಾರವಾದ ಶಕ್ತಿಪ್ರದರ್ಶನೆಯಿಂದ ಅಸ್ಮದಾದಿಗಳಿಗೆ ನ್ಯಾಯವಾದ ಭಗವದ್ಭಕ್ತಿ, ಜ್ಞಾನ, ವೈರಾಗ್ಯಾದಿಗಳು ಉಂಟಾಗುವಂತೆ ಬೋಧಿಸುತ್ತಿರುವಳೋ ಎಂಬಂತೆ "ರಾತ್ರಿನಾಮಕ" ಸ್ತ್ರೀಯು-(ಲೋಕದಲಿ

"ಬೈಯ್ಯಾಸ್ಕೋಪ್" ಯಂತ್ರದ ಮೂಲಕ ಅಂಧಕಾರಾವರಣದಲ್ಲಿ ಚಿತ್ರಪಟ ಚಲನಾತ್ಮಕ ಕೌಶಲ್ಯವನ್ನು ಪ್ರದರ್ಶಿಸುವಹಾಗೆ) ಆಗಿನ ನಿಬಿಡಾಂಧಕಾರ ವ್ಯಾಪ್ತವಾಗಿರುವ ಜಗತ್ತೆಂಬ ಬೈಯಸ್ಕೋಪ್ ಪ್ರದರ್ಶನಶಾಲೆಯಲ್ಲಿ—ಚಂದ್ರ ಕುಜ ಬುಧ ಗುರು ಶುಕ್ರ ಶನಿಗಳೆಂಬ ಗ್ರಹಗಳ ಮತ್ತು ಅನಂತಾನಂತ ನಕ್ಷತ್ರಗಳ ಪ್ರತಿಯೊಂದು ಪಂಗಡವೂ ಒಂದರಹಿಂದೊಂದು ಚಿತ್ರಪಟಗಳಂತೆ ಜರಗುತ್ತಾ, ಅಂತರಿಕ್ಷಾವರಣದಲ್ಲಿ ಪ್ರೇಕ್ಷಕರೆಲ್ಲರ ದೃಷ್ಟಿಪಥಕ್ಕೆ ಬೀಳುತ್ತಾ, ದೇದೀಪ್ಯಮಾನಗಳಾಗಿ ಜಗನ್ನಿಯಾಮಕನ ಚಾತುರ್ಯವನ್ನು ವ್ಯಕ್ತಿಪಡಿಸುವಂತೆಯೂ, ಈ ವಿಧವಾದ ಉದಯಾಸ್ತ ಧರ್ಮಗಳಿಂದ ಜಗತ್ತಿನ ನಶ್ವರತೆಯನ್ನು ತೋರ್ಪಡಿಸುವಂತೆಯೂ, ಹೀಗೆ ಸಮಸ್ತ ಸೃಷ್ಟಿಯೂ ಪರಮೇಶ್ವರನ ಅಸಾಧಾರಣವಾದ ನಿಯಮವನ್ನು ಉಲ್ಲಂಘಿಸದಂತೆ ತಮ್ಮ ತಮ್ಮ ವ್ಯಾಪಾರಬಂಧನದಿಂದ ಬದ್ಧರಾಗಿರುವಿಕೆಯನ್ನು ದಿಗ್ದರ್ಶನ ಮಾಡುವಂತೆಯೂ ಒಪ್ಪುತ್ತಿರುವಳು. ಆ ಕಾಲದಲ್ಲಿ ಈ ರಾತ್ರಿನಾಮಕ ಸ್ತ್ರೀಯು ಅಂಧಕಾರವೆಂಬ ಕರೀಶೀರೆಯನ್ನುಟ್ಟವಳಾಗಿ ಗ್ರಹನಕ್ಷತ್ರ ಸಮುದಾಯವೆಂಬ ಮೌಕ್ತಿಕಾಭರಣ ಸಮುದಾಯದಿಂದ ಅಲಂಕೃತಳಾಗಿರುತ್ತಿದ್ದಾಳೆ. ಹಗಲಿನ ರವಿಯ ಬಿಸಲಿನಲ್ಲಿ ಜನರೆಲ್ಲರೂ ವಿಧವಿಧವಾಗಿ ತಮ್ಮ ಕರ್ಮಗಳನ್ನು ಮಾಡುವದರಲ್ಲಿ ಬೇಸತ್ತು ಇರುವರಾದ್ದರಿಂದ ಈ ರಾತ್ರಿಯಲ್ಲಿ ವಿಶ್ರಾಂತಿಸುಖವನ್ನು ಅನುಭವಿಸುವಂತೆ ನಿದ್ರಾಂಗನಾಲೋಲರಾಗುತ್ತಿರುವದು ಸ್ವಭಾವವಾಗಿದೆ. ಆದರೂ ರಾತ್ರಿಯ ಪ್ರಥಮ ಯಾಮದಲ್ಲಿ ಬೇರೆಬೇರೆ ವ್ಯವಹಾರಗಳಿರುವವಾದ್ದರಿಂದ ಇದನ್ನು ಇಲ್ಲಿ ಬರಿಯುವೆವು.

"ಏತಾನಿ ಪಂಚ ಕರ್ಮಾಣಿ ಸಂಧ್ಯಾಯಾಂ ವರ್ಜಯೇದ್ಬುಧಃ ||
ಆಹಾರಂ ಮೈಥುನಂ ನಿದ್ರಾಂ ಸಂಪಾಠಂ ಗತಿಮಧ್ವನಿ || ಭೋ
ಜನಾಜ್ಜಾಯತೇ ವ್ಯಾಧಿಃ ಮೈಥುನಾದ್ಗರ್ಭ ವೈಕೃತಮ್ || ನಿ
ದ್ರಾಯಾ ನಿಃಸ್ವತಾ ಪಾಠಾದಾಯು ರ್ಹಾನಿರ್ಗತೇರ್ಭಯಮ್ ||"

"ಭೋಜನ ಮಾಡುವಿಕೆ, ಸ್ತ್ರೀಸಂಗ ಮಾಡುವಿಕೆ, ನಿದ್ರಿಸುವಿಕೆ, ಪುಸ್ತಕಗಳನ್ನು ಓದುವಿಕೆ, ಮಾರ್ಗಸಂಚಾರ—ಈ ಐದು ಕಾರ್ಯಗಳನ್ನು ಸಂಧ್ಯಾಸಮಯದಲ್ಲಿ ಅವಶ್ಯವಾಗಿ ವರ್ಜಿಸತಕ್ಕದ್ದು; ಭೋಜನ ಮಾಡುವದರಿಂದ ವ್ಯಾಧಿ ಸಂಭವಿಸುವದು, ಸ್ತ್ರೀಯರಲ್ಲಿ ಕ್ರೀಡಿಸುವದರಿಂದ ಗರ್ಭದಲ್ಲಿ ವಿಕಾರವು ಪ್ರಾಪ್ತವಾಗುವದು, ನಿದ್ರಿಸುವದರಿಂದ ದರಿದ್ರತ್ವವುಂಟಾಗುವದು, ಓದುವದರಿಂದ ಆಯುವಿನ ಹಾನಿ, ಹಾಗೆಯೇ ಗಮನಮಾಡುವದರಿಂದ ಭಯ ಉತ್ಪನ್ನವಾಗುವದು." ಇಲ್ಲಿ ಸಂಧ್ಯಾಕಾಲವೆಂದರೆ ಒಂದುಕಡೆ ಪ್ರಕಾಶವೂ ಮತ್ತೊಂದುಕಡೆ ಕತ್ತಲೆಯೂ ದ್ವಂದ್ವವಾಗಿ ಮಿಳಿತವಾಗತಕ್ಕ ಕಾಲ, ಆ ಅಸಮಯದಲ್ಲಿ ಮೇಲಿನ ಪಂಚಕರ್ಮಗಳೂ ನಿಷಿದ್ಧಗಳೆಂದು ಭಾವವು.

"ಜ್ಯೋತ್ಸ್ನಾ ಶೀತಾ ಸ್ಮರಾನಂದಪ್ರದಾ ತೃಟ್ ಪಿತ್ತ ದಾಹನುತ್||
ತತೋ ಹೀನ ಗುಣಃ ಕುರ್ಯಾದವಶ್ಯಾಯೋಽನಿಲಂ ಕಫಮ್ ||"

"ಬೆಳದಿಂಗಳು—ಶೀತಲವಾದದ್ದು, ಅತಏವ ಕಾಮೋದ್ದೀಪಕವು ಪಿತ್ತ, ತೃಟ್ (ನೀರಡಿಕೆ), ದಾಹ (ಮೈ ಉರಿ) ಇವುಗಳನ್ನು ನಿರ್ಮೂಲಮಾಡಿ ಮನುಷ್ಯರಿಗೆ ಆನಂದವನ್ನುಂಟು ಮಾಡುತ್ತದೆ. (ಈ ಬೆಳದಿಂಗಳನ್ನು ಎಷ್ಟೋ ಕವಿಗಳು ವಿಧವಿಧವಾಗಿ ವರ್ಣಿಸಿ ಇದರಲ್ಲಿ ಮನುಷ್ಯರ ಸಕಲ ತಾಪಗಳೂ ನಾಶವಾಗುವವೆಂದು ವರ್ಣಿಸಿದ್ದಾರೆ. "ಜನಾನಾಂ ಸಂತಾಪಂ ಸ್ಫುರದಮಲರಶ್ಮಿ ಶಶಧರಃ, ಸಮೂಲಂ ವಿಚ್ಛೇದಂ" ಎಂದು ಮುಂತಾಗಿ ಎಷ್ಟೋ ತಾಪಗಳನ್ನು ನಿರ್ನಾಮಮಾಡಿ ಪರಮಾನಂದವನ್ನೀಯುವದೆಂದು ಹೇಳಲ್ಪಟ್ಟದೆ.) ಹಿಮವು—ದಾಹಶಾಂತಿ, ಪಿತ್ತ ತೃಷಾನಾಶಕವಾದರೂ ವಾತ ಕಫಗಳನ್ನು ವೃದ್ಧಿಪಡಿಸುವದು. ಬೆಳದಿಂಗಳಷ್ಟು ಆನಂದಪ್ರದವಾದದ್ದಲ್ಲವೆಂದರಿಯಬೇಕು."

"ತಮೋ ಭಯಾವಹಂ ಮೋಹ ದಿಙ್ಮೋಹ ಜನಕಂ ಭವೇತ್ ||
ಪಿತ್ತ ಹೃತ್ಕಫ ಹೃತ್ಕಾಮವರ್ಧನಂ ಕ್ಲಮಕೃಚ್ಚ ತತ್ ||"

"ಅಂಧಕಾರವು—ಭಯ, ಮೋಹ, ದಿಗ್ಭ್ರಮೆ ಇವುಗಳನ್ನು ಉಂಟುಮಾಡುತ್ತದೆ. ಪಿತ್ತ, ಕಫಗಳನ್ನು ನಾಶಮಾಡುತ್ತದೆ. ಕಾಮವೃದ್ಧಿಕರವಾದದ್ದು. ಶರೀರದಲ್ಲಿ ಗ್ಲಾನಿಯನ್ನುಂಟು ಮಾಡುತ್ತದೆ."

"ರಾತ್ರೌ ಚ ಭೋಜನಂ ಕುರ್ಯಾತ್ ಪ್ರಥಮ ಪ್ರಹರಾಂತರೇ ||
ಕಿಂಚಿದೂನಂ ಸಮಶ್ನೀಯಾತ್ ದುರ್ಜರಂತತ್ರ ವರ್ಜಯೇ
ತ್ || ಅಜೀರ್ಣೇ ಭೋಜನಂ ಯಚ್ಚ ಯಚ್ಚ ಜೀರ್ಣೇ ನ ಭು
ಜ್ಯತೇ|| ರಾತ್ರೌ ನ ಭುಜ್ಯತೇ ಯಚ್ಚ ತೇನ ಜೀರ್ಯಂತಿ ಮಾನವಾಃ||"

"ರಾತ್ರಿಯ ಪ್ರಥಮ ಪ್ರಹರದಲ್ಲಿ ಸ್ವಲ್ಪ ಮಿತಿಯಾಗಿಯೇ ಭೋಜನ ಮಾಡಬೇಕು. ಕಠಿಣತ್ವದಿಂದ ಜೀರ್ಣಿಸುವಂತಹ ಭೋಜನವನ್ನು ರಾತ್ರಿ ಕಾಲದಲ್ಲಿ ಮಾಡಬಾರದು. ಯಾವಾತನು—ಅಜೀರ್ಣವಿರುವಾಗ ಭೋಜನ ಮಾಡುತ್ತಾ, ಅನ್ನ ಜೀರ್ಣಿಸಿ ಹಸಿವೆಯುಂಟಾದರೂ ಆಗ ಭೋಜನವನ್ನು ಮಾಡದೆ, ಹೀಗೆ ವಿರುದ್ಧಾಚರಣೆಯನ್ನು ಮಾಡುತ್ತಾ ರಾತ್ರಿಯ ಹೊತ್ತಿನಲ್ಲಿ ಉಪವಾಸದಿಂದಿರುತ್ತಾನೋ ಅವನು ಬೇಗ ಸವದು ವೃದ್ಧಾವಸ್ಥೆಯನ್ನು ಪಡೆಯುತ್ತಾನೆ. ಇದಕ್ಕಾಗಿ ರಾತ್ರಿಯ ಕಾಲದ ಭೋಜನವು ಶರೀರಕ್ಕೆ ಹಿತವಾದದ್ದು. ಹೀಗೆ ನಮ್ಮ ಆದ್ಯಮಹರ್ಷಿಗಳು ತಮ್ಮ ಅಮೋಘವಾದ ಶಾಸ್ತ್ರಗಳಲ್ಲಿ ನಮ್ಮ ಸುಖಗಳಿಗೆ ಅಗತ್ಯವಾದ ಸಮಸ್ತ ವಿಷಯಗಳನ್ನೂ ಬೋಧಿಸಿದ್ದಾರೆ. ಇವುಗಳನ್ನು ಅರಿಯುವದು ನಮಗೆ ಶ್ರೇಯಸ್ಕರವು."

ಈ ರಾತ್ರಿಕಾಲದ ಆನಂದಭಾರವನ್ನು ಸೂಚಿಸುತ್ತಾ ಭರ್ತೃಹರಿಯು:—

" ಸಂಸಾರೇಽಸ್ಮಿನ್ನಸಾರೇ ಕುನೃಪತಿ ಭವನ ದ್ವಾರ ಸೇವಾ ಕಳಂಕ ।
ವ್ಯಾಸಂಗ ವ್ಯಸ್ತ ಧೈರ್ಯಂ ಕಥಮಮಲಧಿಯೋ ಮಾನಸಂ ಸಂವಿದಧ್ಯುಃ॥
ಯದ್ಯೇತಾಃ ಪ್ರೋದ್ಯದಿಂದು ದ್ಯುತಿ ನಿಚಯ ಭೃತೋ ನ ಸ್ಯುರಂಭೋಜ ನೇತ್ರಾಃ ।
ಪ್ರೇಂಖತ್ಕಾಂಚೀ ಕಲಾಪಾಸ್ತನ ಭರ ವಿನಮನ್ಮಧ್ಯ ಭಾಜಸ್ತರುಣ್ಯಃ ॥"

" ಮಹಾ ತಾಪಹಾರಕನೆಂದು ಪ್ರಸಿದ್ಧವಾದ ಕಿರಣ ಸಮೂಹಗಳೊಂದಿಗೆ ಉದಿಸಿರುವ ಚಂದ್ರನ ಬೆಳದಿಂಗಳಂತೆ ಮನೋಹರಾಕೃತಿಯುಳ್ಳ ಕಮಲಾಕ್ಷಿಯರೂ, ಕ್ವಣನ್ನೂಪುರರಮ್ಯರಾಗಿ, ತಮ್ಮ ಸ್ತನಭಾರದಿಂದ ಅವನತ ಮಧ್ಯಪ್ರದೇಶವುಳ್ಳ ದಿವ್ಯ ಪ್ರಭಾಭಾಸುರಮೂರ್ತಿಗಳೂ ಆದ ಸ್ತ್ರೀಜನರು ಇರುತ್ತಿರಲು—ಈ ಅಸಾರವಾದ ಸಂಸಾರದಲ್ಲಿ ಕುತ್ಸಿತ ರಾಜಮಂದಿರದ ಪ್ರತೀಹಾರರೆಂಬ ಬಾಗಿಲು ಕಾಯುವವರ ಅನುವರ್ತನವೆಂಬ ಕಳಂಕ ವ್ಯಾಸಂಗದಿಂದ ವ್ಯಸ್ತವಾದ ಧೈರ್ಯವುಳ್ಳ ವಿದ್ವಾಜ್ಜನರು ಹೇಗೆ ಮಲಿನೀಭಾವಾಕುಲರಾಗುತ್ತಿದ್ದಾರೆ? " ಅಂದರೆ ರಾತ್ರಿಯು (ಚಂದ್ರಕಿರಣ, ಮಂದಮಾರುತ, ಚಿತ್ರಾದಿಗಳಿಂದಲಂಕೃತವಾದ ಅತ್ಯುನ್ನತ ಚಂದ್ರಶಾಲೆಗಳಲ್ಲಿ ನಿದ್ರಿಸುವಿಕೆ, ಅಲ್ಲಿನ ಅಗರುಬತ್ತಿಮುಂತಾದ್ದರ ಸುಗಂಧವೂ ಪುಷ್ಪಸ್ರಜಗಳ ಅತುಲಿತ ಸುವಾಸನೆಯು, ಇದರಮೇಲೆ ಸಂಗೀತಾದಿಶ್ರಾವ್ಯವಾದ ಸುಖವೂ, ದೀಪಗಳ ಕಾಂತಿಯೂ, ನವಯೌವನಾಲಂಕೃತ ತರುಣಿಯರ ಕಾಮೋತ್ತೇಜನಕರಗಳಾದ ಕಾಮುಕಥಾಲಾಪವೂ, ಲಭಿಸುತ್ತಿರುವ ರಾತ್ರಿಯ ಆನಂದಾತಿರೇಕವು ಅವರ್ಣನೀಯವಾದದ್ದೆಂದು ಭಾವವು. ಇಂತಹ ಸಂಪತ್ತನ್ನನುಭವಿಸುವಿಕೆಯು (" ನಜಾನೇ ಕಸ್ಯೈಷಾ ಪರಿಣತಿರುದಾರಸ್ಯ ತಪಸಃ " ಈ ಪರಿಪಾಕವೆಲ್ಲವೂ ಯಾವ ಉದಾರವಾದ ಪೂರ್ವಜನ್ಮಾರ್ಜಿತ ತಪಸ್ಸಿನ ಫಲವೆಂಬುದನ್ನು ತಿಳಿಯಲಾರೆನು " ಎಂದು ಹೇಳಿದ ಉಕ್ತಿಯಂತೆ) ಭಾಗ್ಯಶಾಲಿಯಾಗಿರುವವನಿಗೆ ದೊರಿಯತಕ್ಕದ್ದಲ್ಲದೆ, ಸಾಮಾನ್ಯ ಪುರುಷನು ಸ್ವಪ್ನದಲ್ಲಿ ಸಹಾ ಇಂತಹ ಪರಮಾನಂದಕರವಾದ ರಾತ್ರಿಯ ಸುಖವನ್ನು ಪಡಿಯಲಾರನೆಂದು ತಿಳಿಯಬೇಕು.

ಹಾಗೆಯೇ ಮತ್ತೊಂದುಕಡೆಯಲ್ಲಿ:—

" ಯದೇತತ್ಪೂರ್ಣೇಂದು ದ್ಯುತಿ ಹರಮುದಾರಾಕೃತಿ ಪರಮ್ ।
ಮುಖಾಬ್ಜಂ ತನ್ವಂಗ್ಯಾಃ ಕಿಲ ವಸತಿ ಯತ್ರಾಧರ ಮಧು ॥
ಇದಂತತ್ಕಿಂಪಾಕ ದ್ರುಮಫಲಮಿದಾನೀಮತಿರಸವತ್ ।
ವ್ಯತೀತೇಽಸ್ಮಿನ್ ಕಾಲೇ ವಿಷಮಿವ ಭವಿಷ್ಯತ್ಯಸುಖದಮ್ ॥ "

" ಯಾವ ಈ ಸಕಲಾನಂದಕಾರಕವಾದ, ಅತ್ಯಂತ ಉದಾರಾಕೃತಿಯುಳ್ಳ ಕಾಮಿನಿಯ ಮುಖಕಮಲವು ಪೂರ್ಣಚಂದ್ರನ ಕಿರಣದಲ್ಲಿರತಕ್ಕ ಶೀತಲತಾ, ದುಃಖನಾಶಕತ್ವ, ಮನೋಹರತ್ವ, ಮನಸಾಭೀಷ್ಟದಾಯಕತ್ವ ಮುಂತಾದ ಸಕಲ ಕಲ್ಯಾಣಗುಣಾಲಂಕೃತವಾಗಿದೆಯೋ ಇದೂ ಅಲ್ಲದೆ ಚಂದ್ರನಲ್ಲಿರುವ ಅಮೃತದಂತೆ ಈ ರಮಣೀಮಣಿಯಲ್ಲಿಯೂ ಅಧರಮಧುವು ಇದ್ದೇ ಇರುತ್ತದಷ್ಟೇ ? ಇವಳ ಮುಖಾಬ್ಜದಲ್ಲಿ ಸಹ ಪ್ರಸಿದ್ಧವಾದ ಮಕರಂದವು ಇದ್ದೇ ಇದೆ ? ಈ ಸಮಯದಲ್ಲಿ ಆ ಪದ್ಮಿನಿಯ ಮುಖಪದ್ಮವು ಅತಿರಸರುಚಿರವಾಗಿ ಬಾಲ ರಸಾಲಫಲದಂತೆ ಆನಂದದಾಯಕವಾಗಿದೆ. ಪರಂತು ಕಾಲ ಕಳೆದನಂತರ ಇದೇ ದುಃಖದಾಯಕವಾಗಿ ವಿಷತುಲ್ಯವಾಗುತ್ತದೆ. " ಅಂದರೆ ಎಲ್ಲಾ ಸುಖಗಳನ್ನೂ ಇಂದ್ರಿಯ ಸಮುದಾಯ ಮೂಲಕವಾಗಿ ಅನುಭವಿಸುತ್ತಿರುವ ಮನೋವೃತ್ತಿಗೆ ನಾವು ಹಿಂದಿನ ಆಶಯದಲ್ಲಿ ಹೇಳಿರುವಂತೆ " ಸುಖಸ್ಯಾನಂತರಂದುಃಖಮ್ " ಎಂಬದು ಪ್ರಾಪ್ತವಾಗಿ ನೀರಸಪ್ರಾಯವಾಗುತ್ತದೆಂದು ಧ್ವನಿತಾರ್ಥವು.

ಈ ರಾತ್ರಿಯ ಚಂದ್ರಜ್ಯೋತ್ಸ್ನೆಯಿಂದುಲ್ಲಸಿತವಾಗಿರುವ ಕಾಲದಲ್ಲಿ, ಜನಸಮುದಾಯ ದರ್ಶನಾದಿ ಕಳಂಕ ಶೂನ್ಯವಾಗಿರುವ ಅಂಧಕಾರಾಕೀರ್ಣ ಪುಷ್ಪಿತಲತಾ ಮಂಟಪದಲ್ಲಿ ಮೃದುಮಧುರ ಸುವಾಸನೆಯನ್ನು ತಂದು ಬೀರುತ್ತಿರುವ ಮಂದಮಾರುತ ಭರದಲ್ಲಿ—ಸಂಗೀತ, ಶ್ರವಣ, ಸುಗಂಧಾನುಲೇಪನ, ವಿಚಿತ್ರ ಪುಷ್ಪಸ್ರಜಗಳನ್ನು ಧರಿಸುವಿಕೆ, ಮಧುರವಾದ ಶೀಧು ಪಾನ ಮುಂತಾದ ಕಾಮೋದ್ದೀಪಿತ ಸಾಹಿತ್ಯಗಳು ಅನುಕೂಲವಾದಂತೆ—ಹಗಲಿನಲ್ಲಿ, ವಿಶೇಷ ಧಗೆಯನ್ನುಂಟು ಮಾಡುತ್ತಿರುವ ಬಿಸಲಿನ ಉಪಟಳದಲ್ಲಿ, ಜನ ಸಮುದಾಯದ ದರ್ಶನಾದಿಗಳಿಂದ ಜನಿತ ಶಂಕಾಕುಲಿತ ಚಿತ್ತರಾಗಿರುವಾಗ ಗಂಧ, ಮಾಲ್ಯಾದಿಗಳ ಧಾರಣೆಯೂ, ಸಂಗೀತವೂ, ರಾತ್ರಿಕಾಲದಂತೆ ಶ್ರಾವ್ಯವಾಗಿ ಆನಂದಪ್ರದವಾಗಿರಲಾರದು. ಅದರಲ್ಲಿಯೂ ಮುಗ್ಧಾಪಾಂಗ ಪ್ರಸಾರ ಮಾತ್ರದಲ್ಲಿಯೇ ಜಗತ್ತನ್ನು ಮೋಹಿತವನ್ನಾಗಿ ಮಾಡುತ್ತಿರುವ ಸ್ತ್ರೀಜನದ ರತಿಪ್ರೇರಕ ವ್ಯಾಪಾರಕ್ಕೆ ಹಗಲಿನ ಚಂಡಕಿರಣ (ಸೂರ್ಯ) ನ ಕಿರಣಜಾಲವು ಮಹಾ ಹಾನಿಯನ್ನುಂಟುಮಾಡಿ, ಶಂಕಾ, ದಿಗಿಲು ಮುಂತಾದ ಆತಂಕಗಳನ್ನುಂಟು ಮಾಡುತ್ತದೆಯಷ್ಟೇ ? ಇದಕ್ಕಾಗಿಯೇ ಶಾಸ್ತ್ರಕಾರರು " ಹಗಲಿನಲ್ಲಿ ವ್ಯವಾಯ (ರತಿ) ವನ್ನು ಮಾಡಲೇಬಾರದು " ಎಂದು ವಿಧಿಸುತ್ತಿದ್ದಾರೆ. ಇಲ್ಲಿ ಚಂದ್ರಕಿರಣ, ಮಂದಮಾರುತ, ಸಂಗೀತ, ಗಂಧಾನುಲೇಪನ, ಪುಷ್ಪಸ್ರಗ್ಧಾರಣೆ, ಮಧುಪಾನ ಮುಂತಾದ ಸಮಸ್ತ ಕಾಮಕಲಾಗಳನ್ನುದ್ದೀಪಕಗೊಳಿಸುವ ರಾತ್ರಿಯನ್ನು ಮುಖ್ಯ ಸಾಖ್ಯವನ್ನಾಗಿ ಸೂಚಿಸಿದೆವು. ಇಲ್ಲಿ ಹೇಳ

ಬೇಕಾಗಿರುವ "ಸ್ತ್ರೀಸೌಖ್ಯವರ್ಣನೆ" ಯನ್ನು ಮುಂದೆ ಅದಕ್ಕಾಗಿಯೇ ಬೇರೇ ಒಂದು ಆಶಯದಲ್ಲಿ ನಿರೂಪಿಸುವೆವಾದ್ದರಿಂದ ಇಲ್ಲಿ ಇಷ್ಟುಮಾತ್ರವೇ ಹೇಳಲ್ಪಟ್ಟಿತು.

ರಾತ್ರಿಯು ತನ್ನಲ್ಲಿರುವ ಅಂಧಕಾರವೆಂಬ ಅಪಾರ ಶಕ್ತಿಯುತಳಾಗಿರುವದರಿಂದ-ಈ ಕಾಲದಲ್ಲಿ ಜಾರರೂ, ಜಾರಿಣಿಯರೂ ತಮ್ಮತಮ್ಮ ಸಂಕೇತ ಸ್ಥಾನಗಳನ್ನು ಶೇರಿ ಸುಖಿಸುವದಕ್ಕಾಗಿ ಅತ್ಯಾತುರದಿಂದ ಓಡುತ್ತಾ ಇರುತ್ತಾರೆ. ಈ ಕಾಲದ ಕತ್ತಲೆಯಿಂದೊಡಗೂಡಿದ ಅಂತರಿಕ್ಷಾವರಣದ ಮಂದ ಮಾರುತದ ಆಧಿಕ್ಯದಿಂದ ಶ್ರಮೆಯು ಎಂದೆಂದಿಗೂ ಉಂಟಾಗುವದಿಲ್ಲವಾದ್ದರಿಂದ-ನಟರೂ, ಗಾಯಕರೂ, ವಾದ್ಯಗಾರರೂ, ಕಸರತ್ತು ಮಾಡತಕ್ಕ ವ್ಯಾಯಾಮನಿಪುಣರೂ, ಯೋಗಾಭ್ಯಾಸ ಮಾಡತಕ್ಕ ಯೋಗಿಗಳೂ, ವಿದ್ಯಾಭ್ಯಾಸಮಾಡತಕ್ಕ ವಿದ್ಯಾರ್ಥಿಗಳೂ ತಮ್ಮತಮ್ಮ ಅಭ್ಯಾಸಗಳಲ್ಲಿ ರತರಾಗಿರುತ್ತಾರೆ. ಇವರಲ್ಲದೆ ಚೋರರು ಕತ್ತಲೆಯಲ್ಲಿ ಜನರೆಲ್ಲ ನಿದ್ರಾಲೋಲರಾಗಿರುವಾಗಲೇ ತಮ್ಮ ಚೌರ್ಯವೃತ್ತಿಯನ್ನು ನಡಿಸಿ ಏನಾದರೂ ಸಂಪಾದಿಸಬೇಕೆಂದು ಎಷ್ಟೋ ಮನೆಗಳಿಗೆ ಕನ್ನಾಹಾಕುವದರಲ್ಲಿ ರಾತ್ರಿಯ ಸುಖವನ್ನನುಭವಿಸುತ್ತಿದ್ದಾರೆ. ಇಂತಹ ಜಗತ್ತಿಗೇ ಪರಮಾಹ್ಲಾದಕರವಾದ ರಾತ್ರಿಯಲ್ಲಿ ವಿರಹಾತುರಳಾಗಿರುವ ರಮಣಿಯು ಪರಸ್ಥಳಕ್ಕೆ ಹೋಗಿರುವ ತನ್ನ ಮನೋವಲ್ಲಭನು ಇನ್ನೂ ಬರಲಿಲ್ಲ ಎಂದು ಚಿಂತಿಸುತ್ತಾ ಪ್ರತಿಕ್ಷಣವನ್ನೂ ಯುಗಗಳಂತೆ ಕಳೆಯುತ್ತಿರುವ ಕಾಮವ್ಯಾಕುಲ ವೃತ್ತಿಯು ಅಸಾಧ್ಯವಾದದ್ದೂ, ಅವರ್ಣನೀಯವಾದದ್ದೂ ಆಗಿದೆ.

ಇಂತು ರಾತ್ರಿಚರ್ಯಾ ನಿರೂಪಣವೆಂಬ ಷಷ್ಠಾಶಯವು.

## ಸಪ್ತಮಾಶಯವು.

### ಋತುಚರ್ಯಾ.

"ಉತ್ತರಾಯಣಮಾದ್ಯೈಸ್ತ್ರೈಃಪರೈಃ ಸ್ಯಾದಕ್ಷಿಣಾಯನಮ್ ||
ಆದ್ಯಮುಷ್ಣಂ ಬಲಹರಂ, ತತೋಽನ್ಯದ್ಬಲದಂ ಹಿಮಮ್ ||"

"ಮೊದಲಿನ ೩ ಋತುಗಳಿಂದ ಉತ್ತರಾಯಣ (ಮಕರಾದಿ ೬ ಮಾಸಗಳು) ವು, ಹಿಂದಿನ ೩ ಋತುಗಳೆಂದರೆ (ಕರ್ಕಾದಿ ೬ ಮಾಸಗಳು) ದಕ್ಷಿಣಾಯನವು; ಉತ್ತರಾಯಣವು ಉಷ್ಣವೂ, ಬಲನಾಶಕವೂ ಆಗಿರುತ್ತದೆ; ದಕ್ಷಿಣಾಯನವು ಬಲಪ್ರದವೂ, ಶೀತಲವೂ ಆಗಿದೆ."

" ಹೇಮಂತಃ ಶೀತಲಃ ಸ್ನಿಗ್ಧಃ, ಸ್ವಾದುರ್ಜಠರ ವಹ್ನಿವರ್ಧ॥ "

" ಹೇಮಂತ ಋತುವು—ಶೀತಲವೂ, ಸ್ನಿಗ್ಧಕಾರಿ, ಸ್ವಾದು ವಸ್ತುಗಳನ್ನು ಉತ್ಪನ್ನ ಮಾಡತಕ್ಕದ್ದು; ಜಠರಾಗ್ನಿಯನ್ನು ಸಂದೀಪನಪಡಿಸತಕ್ಕದ್ದು. "

" ಹೇಮಂತೇ ದಧಿ ದುಗ್ಧ ಸರ್ಪಿ ರಶನಾ ಮಾಂಜಿಷ್ಟವಾಸೋ ಭೃತಃ।
ಕಾಶ್ಮೀರ ದ್ರವ ಸಾಂದ್ರ ದಿಗ್ಧ ವಪುಷಶ್ಛಿನ್ನಾ ವಿಚಿತ್ರೈ ರತೈಃ ॥
ವೃತ್ತೋರು ಸ್ತನ ಕಾಮಿನೀ ಜನ ಕೃತಾಶ್ಲೇಷಾ ಗೃಹಾಭ್ಯಂತರೇ।
ತಾಂಬೂಲೀದಳ ಪೂಗ ಪೂರಿತ ಮುಖಾ ಧನ್ಯಾಸ್ಸುಖಂ ಶೇರತೇ ॥

" ಈ ಹೇಮಂತ ಋತುವಿನಲ್ಲಿ—ದಧಿ, ದುಗ್ಧ, ಘೃತಗಳನ್ನು ಪುಷ್ಕಳವಾಗಿ ಭೋಜನ ಮಾಡುತ್ತಾ, ಮಂಜಿಷ್ಟಿಯ ಕಾಷಾಯ ವರ್ಣದಿಂದ ರಂಜಕ ವಸ್ತ್ರಧಾರಿಗಳಾಗಿ, ಕುಂಕುಮಕೇಸರಿಯ ಗಂಧದಿಂದ ಲೇಪಿಸಲ್ಪಟ್ಟ ಶರೀರವನ್ನುಳ್ಳವರಾಗಿಯೂ, ವಿಚಿತ್ರವಾದ ಬಾಹ್ಯಾಭ್ಯಂತರ ರತಿವಿಶೇಷಗಳಿಂದ ಬಳಲಿದವರಾಗಿಯೂ, ವರ್ತುಲ ಮತ್ತು ದಪ್ಪನಾದ ಸ್ತನಮಂಡಲವುಳ್ಳ ಕಾಮಿನೀ ಜನರಿಂದಾಲಿಂಗಿಸಲ್ಪಟ್ಟವರಾಗಿಯೂ, ತಾಂಬೂಲ ಚರ್ವಣದಿಂದ ಅರುಣಮಯ ಮುಖರಾಗಿಯೂ ಇರುವ ಧನ್ಯರಾದ ಪುರುಷಶ್ರೇಷ್ಠರು ಚಂದ್ರಶಾಲೆಗಳಲ್ಲಿರುವ ಹಂಸತೂಲಿಕಾತಲ್ಪಗಳಲ್ಲಿ ಶಯನಿಸುತ್ತಾ ಇರುವರು. "

" ಶಿಶಿರಃ ಶೀತಲೋಽತೀವ ರೂಕ್ಷೋ ವಾತಾಗ್ನಿವರ್ಧನಃ ॥ "

" ಶಿಶಿರ ಋತುವು—ಶೀತಲವಾದದ್ದು, ಅತ್ಯಂತ ರೂಕ್ಷವಾದದ್ದು; ವಾಯು ತಥಾ ಅಗ್ನಿಯನ್ನು ವೃದ್ಧಿಪಡಿಸತಕ್ಕದ್ದೂ ಆಗಿದೆ. "

" ಚುಂಬಂತೋ ಗಂಡಭಿತ್ತೀರಲಕವತಿ ಮುಖೇ ಸೀತ್ಕೃತಾನ್ಯಾದಧಾನಾ।
ವಕ್ಷಸ್ಸೂತ್ಕಂಚುಕೇಷು ಸ್ತನಭರ ಪುಲಕೋದ್ಭೇದಮಾಪಾದಯಂತಃ ॥
ಊರೂನಾಂ ಕಂಪಯಂತಃ ಪೃಥು ಜಘನ ತಟಾತ್ಸ್ರಂಸಯಂತೋಽಂಶುಕಾನಿ।
ವ್ಯಕ್ತಂ ಕಾಂತಾಜನಾನಾಂ ವಿಟ ಚರಿತ ಭೃತಶ್ಶೈಶಿರಾ ವಾಂತಿ ವಾತಾಃ॥ "

" ಕಾಂತಾಜನರ ಕಪೋಲಸ್ಥಲಗಳನ್ನು ಚುಂಬಿಸುತ್ತಾ, ಚೂರ್ಣಕುಂತಲಾಲಂಕೃತ ಮುಖದಲ್ಲಿ ಸೀತ್ಕಾರವನ್ನು ಮಾಡುತ್ತಾ, ವಕ್ಷಸ್ಥಾನ (ಎದೆಯ)ದ ಪಾರೆಮಾಡಲ್ಪಟ್ಟ ಕಂಚುಕಗಳ ಸ್ತನಮಂಡಲ ಭರದಿಂದಾದ ರೋಮಾಂಚವನ್ನು ಕಲ್ಪಿಸುತ್ತಾ, ವೇಷ್ಟಿತವಾದ ತೊಡೆಗಳನ್ನು ಪ್ರಚಾಲನ ಮಾಡುತ್ತಾ, ವಿಶಾಲವಾದ ಜಘನಸ್ಥಲದ ಪೀತಾಂಬರಗಳ ಗಂಟನ್ನು ಬಿಚ್ಚುತ್ತಾ ಇರುವ ಕಾಮೋದ್ದೀಪಿತರಾದ ವಿಟಪುರುಷರ ಚರ್ಯೆಯಂತೆ ಶಿಶಿರರ್ತುವಾಯುವು ಸಂಚರಿಸುತ್ತಾ ಇದೆ. "

" ವಸಂತೋ ಮಧುರಃ ಸ್ನಿಗ್ಧಃ ಶ್ಲೇಷ್ಮವೃದ್ಧಿಕರಶ್ಚ ಸಃ ॥ "

" ವಸಂತರ್ತುವು—ಪ್ರಾಯಶಃ ಸಂಪೂರ್ಣ ವಸ್ತುಗಳಲ್ಲಿಯೂ ಮಧುರತ್ವವನ್ನುಂಟು ಮಾಡತಕ್ಕದ್ದು, ಸ್ನಿಗ್ಧವೂ, ಕಫವರ್ಧಕವೂ ಆಗಿದೆ. "

" ಪರಿಮಳ ಭೃತೋ ವಾತಾಃ ಶಾಖಾ ನವಾಂಕುರ ಕೋಟಯೋ ।
ಮಧುರ ವಿಧುರೋತ್ಕಂಠಾ ಭಾಜಃ ಪ್ರಿಯಾಃ ಪಿಕಪಕ್ಷಿಣಾಮ್ ॥
ವಿರಳ ವಿರಳ ಸ್ವೇದೋದ್ಗಾರಾ ವಧೂವದನೇಂದವಃ ।
ಪ್ರಸರತಿ ಮಧೌ ಧಾತ್ರ್ಯಾಂ ಜಾತೋ ನ ಕಸ್ಯ ಗುಣೋದಯಃ ॥ "

" ಈ ವಸಂತಸಮಯದಲ್ಲಿ ಉಪವನ ಮಂದಮಾರುತವು ವಿವಿಧ ಕುಸುಮ ಸಮ್ಮರ್ದನ ಜನಿತ ಗಂಧವಿಶೇಷಗಳಿಂದ ಬಂಧುರಗಳಾಗಿಯೂ, ಎಲ್ಲಾ ಮರಗಳ ಕೊಂಬೆಗಳೂ ತುದಿಗಳಲ್ಲಿ ಚಿಗರುಗಳುಳ್ಳವುಗಳಾಗಿಯೂ, ಹೆಣ್ಣು ಕೋಗಿಲೆಗಳು ರಸಾಲ ರಸಾಸ್ವಾದನೆಯಿಂದ ಮಧುರ ಧ್ವನಿಗಳುಳ್ಳವುಗಳಾಗಿಯೂ, ಸ್ತ್ರೀಯರ ಚಂದ್ರಮಂಡಲ ಸದೃಶ ಮುಖಗಳು ಶ್ರಮಜಲ ನಿಷ್ಯಂದಗಳುಳ್ಳವುಗಳಾಗಿಯೂ ಇರುತ್ತಿರಲು ಇಂತಹ ಸೊಬಗಿನಿಂದ ಭೂಲೋಕಕ್ಕೆ ಮಧುಮಾಸವು ಪ್ರಸರವಾಗುತ್ತಿರುವಾಗ ಯಾರಲ್ಲಿತಾನೆ ಗುಣೋತ್ಕರ್ಷವಾಗಲಾರದು ?"

" ಗ್ರೀಷ್ಮೋ ರೂಕ್ಷೋಽತಿ ಕಟುಕಃ ಪಿತ್ತಕೃತ್ಕಫನಾಶನಃ ॥ "

" ಗ್ರೀಷ್ಮಋತುವು—ರೂಕ್ಷವಾಗಿಯೂ, ಪ್ರಾಯಃ ಸರ್ವವಸ್ತುಗಳಲ್ಲಿಯೂ ಕಟುತ್ವವನ್ನುಂಟು ಮಾಡುತ್ತದೆ, ಹಾಗೆಯೇ ಪಿತ್ತವರ್ಧಕವೂ, ಕಫನಾಶಕವೂ ಆದದ್ದು. "

" ಅಚ್ಛಾಚ್ಛ ಚಂದನ ರಸಾರ್ದ್ರ ತರಾ ಮೃಗಾಕ್ಷ್ಯಃ ।
ಧಾರಾಗೃಹಾಣಿ ಕುಸುಮಾನಿ ಚ ಕೌಮುದೀ ಚ ॥
ಮಂದೋ ಮರುತ್ಸು ಮನಸಶ್ಶುಚಿ ಹರ್ಮ್ಯ ಪೃಷ್ಠಮ್ ।
ಗ್ರೀಷ್ಮೇ ಮದಂ ಚ ಮದನಂ ಚ ವಿವರ್ಧಯಂತಿ ॥ "

" ಗ್ರೀಷ್ಮ ಸಮಯದಲ್ಲಿ—ಸ್ವಚ್ಛವಾದ ಚಂದನಾನುಲಿಪ್ತತೆಯಿಂದ ಆರ್ದ್ರ ತನುಲತೆಯುಳ್ಳ ಕಾಮಿನಿಯರೂ, ಜಲಯಂತ್ರಗಳುಳ್ಳ ಸ್ನಾನಗೃಹಗಳೂ, ಪರಿಮಳಯುಕ್ತ ಪುಷ್ಪಗಳೂ, ಚಂದ್ರಕಿರಣವೂ, ಮಂದಮಾರುತವೂ, ಮನೋಹರವಾದ ಹರ್ಮ್ಯಪೃಷ್ಠಸ್ಥಳಗಳೂ ಜನಗಳಿಗೆ ಮದವನ್ನೂ, ಮದನವಿಕಾರವನ್ನೂ ಹುಟ್ಟಿಸುತ್ತಾ ಇವೆ. "

" ಸ್ರಜೋ ಹೃದ್ಯಾ ಮೋದಾ ವ್ಯಜನ ಪವನಶ್ಚಂದ್ರಕಿರಣಃ ।
ಪರಾಗಃ ಕಾಸಾರೋ ಮಲಯಜ ರಜಶ್ಶೀಧು ವಿಶದಮ್ ॥

**ಶುಚಿ ಸ್ಸ್ರಾಧೋತ್ಸಂಗಃ ಪ್ರತನು ವಸನಂ ಪಂಕಜದೃಶೋ ।**
**ನಿದಾಘಾರ್ತಾವೇತದ್ವಿಲಸತಿ ಲಭಂತೇ ಸುಕೃತಿನಃ ॥ "**

" ಮನೋಹರ ಗಂಧಗಳುಳ್ಳ ಪುಷ್ಪಮಾಲಿಕೆಗಳೂ, ಬೀಸಣಿಗೆಯಿಂದ ಹುಟ್ಟುವ ಶೀತಲವಾಯುವೂ, ಚಂದ್ರನ ತಾಪಧ್ವಂಸಕರ ಕಿರಣವೂ, ಪುಷ್ಪಪರಾಗದಿಂದ ಘುಮುಘುಮುಸುತ್ತಿರುವ ಪುಷ್ಕರಣಿಗಳೆಂಬ ಜಲಕ್ರೀಡಾಸ್ಥಾನಗಳೂ, ಗಂಧಾನುಲೇಪನವೂ, ನಿರ್ಮಲವಾದ ಶೀಧುವೆಂಬ ಮದ್ಯಪಾನವೂ, ಶುಚಿಯಾದ ಉಪ್ಪರಿಗೆಯಲ್ಲಿ ನಿರಾತಂಕವಾಗಿ ಮಂದಮಾರುತ ಬೀಸುತ್ತಿರುವ ಆವಾಸಸ್ಥಾನವೂ, ಬಹು ನಯವಾದ ಸೂಕ್ಷ್ಮಾಂಬರ ಧಾರಣೆಯೂ, ಪದ್ಮಾಕ್ಷಿಯರಾದ ಕಾಮಿನಿಯರೂ ಈ ಗ್ರೀಷ್ಮಕಾಲದಲ್ಲಿ ಸುಕೃತಶಾಲಿಗಳಿಗೇ ಲಭಿಸತಕ್ಕವುಗಳು ! "

**" ವರ್ಷಾ ಶೀತಾ ವಿದಾಹಿನ್ಯೋ ವಹ್ನಿಮಾಂದ್ಯಾನಿಲಪ್ರದಾಃ ॥ "**

" ವರ್ಷಋತುವು—ಶೀತಲವಾದದ್ದು, ವಿದಾಹಿ (ಅನ್ನವು ಸರಿಯಾಗಿ ಪಾಕವಾಗದಿರುವಿಕೆ) ಯೂ, ಮಂದಾಗ್ನಿಕಾರಕವೂ ಆಗಿದೆ. "

**" ಆಸಾರೇಣ ನ ಹರ್ಮ್ಯತಃ ಪ್ರಿಯತಮೈರ್ಯಾತುಂ ಬಹಿಶ್ಶಕ್ಯತೇ ।**
**ಶೀತೋತ್ಕಂಪ ನಿಮಿತ್ತಮಾಯತ ದೃಶಾಂ ಗಾಢಂ ಸಮಾಲಿಂಗ್ಯತೇ ॥**
**ಜಾತಾ ಶ್ಶೀಕರಶೀತಲಾಶ್ಚ ಮರುತೋ ರತ್ಯಂತ ಖೇದಚ್ಛಿದೋ ।**
**ಧನ್ಯಾನಾಂ ಬತ ದುರ್ದಿನಂ ಸುದಿನತಾಂ ಯಾತಿ ಪ್ರಿಯಾ ಸಂಗಮೇ ॥ "**

" ಜಡಿಮಳೆಯ ದೆಸೆಯಿಂದ ಪ್ರಿಯತಮರು ಉಪ್ಪರಿಗೆಯಿಂದ ಹೊರಕ್ಕೆ ಹೋಗುವಹಾಗಿಲ್ಲ; ಶೀತದಿಂದ ಗಡಗಡ ನಡುಗುತ್ತಾ ಆಯತಾಕ್ಷಿಯರನ್ನು ಅತಿದೃಢವಾಗಿ ಆಲಿಂಗಿಸುತ್ತಿದ್ದಾರೆ. ಇಂತವರು ಆ ಕಾಮಿನಿಯರಲ್ಲಿ ರಮಿಸಿದನಂತರ ಉಂಟಾಗುವ ಶ್ರಮವನ್ನು ಮಹಾ ಶೀತಲವಾದ ಮಳೆಯ ಹನಿಯ ತುಂತುರುಗಳು, ಅದನ್ನೆರಚುತ್ತಿರುವ ಮಂದಮಾರುತವೂ ನಿವಾರಣೆ ಮಾಡುತ್ತಿರುವವು. ಈ ಕಾರಣದಿಂದ ಪ್ರಿಯತಮೆಯರಾದ ಮುಗ್ಧೆಯರ ಸಂಗಮಸುಖದಲ್ಲಿರುವ ಧನ್ಯರಾದ ಈ ಪುರುಷರಿಗೆ ದುರ್ದಿನವೂ ಸಹ ಸುದಿನವಾಗಿ ಪರಿಣಮಿಸುತ್ತಾ ಇವೆಯಲ್ಲಾ ! ಆಶ್ಚರ್ಯವು. "

**" ಶರದುಷ್ಣಾ ಪಿತ್ತಕರ್ತ್ರೀ, ನೃಣಾಂ ಮಧ್ಯಬಲಾವಹಾ ॥ "**

" ಶರದೃತುವು—ಉಷ್ಣವೂ, ಪಿತ್ತವರ್ಧಕವೂ, ಬಲದಾಯಕವೂ ಆಗಿದೆ. "

**" ಅರ್ಧಂ ಸುಪ್ತ್ವಾ ನಿಶಾಯಾಸ್ಸರಭಸ ಸುರತಾಯಾಸ ಸನ್ನಶ್ಲಥಾಂಗಃ ।**
**ಪ್ರೋದ್ಭೂತಾಸಹ್ಯ ತೃಷ್ಣೋ ಮಧುಮದ ನಿರತೋ ಹರ್ಮ್ಯಪೃಷ್ಠೇ ವಿವಿಕ್ತೇ ॥**

ಸಂಭೋಗಕ್ಲಾಂತ ಕಾಂತಾ ಶಿಥಿಲ ಭುಜಲತಾ ವರ್ಜಿತಂ ಕರ್ಕರೀತಃ ।
ಜ್ಯೋತ್ಸ್ನಾ ಭಿನ್ನಾಚ್ಛಧಾರಂ ನ ಪಿಬತಿ ಸಲಿಲಂ ಶಾರದಂ ಮಂದ
ಪುಣ್ಯಃ ॥ ”

“ ರಾತ್ರಿಯ ಅರ್ಧಭಾಗ (ನಡುರಾತ್ರಿ) ಯವರಿಗೆ ನಾಯಕಿಯಲ್ಲಿ ಸುರತ ಸುಖವನ್ನನುಭವಿಸುತ್ತಾ ಇದ್ದು, ಅನಂತರ ಸರಭಸವಾಗಿ ಆ ಸುರತಾಯಾಸ ದಿಂದ ಶಿಥಿಲಾಂಗನಾಗಿ, ತಡಿಯಲಶಕ್ಯವಾದ ಬಾಯಾರಿಕೆಯಿಂದಲೂ, ರತಿಗೆ ಮೊದಲೇ ಕುಡಿದಿದ್ದ ಮದಿರದಿಂದ ಪರವಶನಾಗಿದ್ದದ್ದರಿಂದಲೂ, ಇತರರ್ಯಾರೂ ಇಲ್ಲದ ಆ ಚಂದ್ರಶಾಲೆಯ ಕ್ರೀಡಾಭವನದಲ್ಲಿ ನೀರನ್ನು ಹುಡುಕುತ್ತಾ ಸಛಿದ್ರವುಳ್ಳ ಪಾತ್ರೆಯಲ್ಲಿದ್ದ ಶರತ್ಕಾಲಸಂಬಂಧಿಯಾದ ಹಂಸೋದಕವನ್ನು ರತಿ ಶ್ರಮಾತುರಳಾಗಿದ್ದ ತನ್ನ ಪ್ರಿಯತಮೆಯು ತನ್ನ ಭುಜಲತೆಯಿಂದ ಧಾರಾಕಾರದಿಂದ ಕುಡಿಸಲು ಈ ಭಾಗ್ಯವು ಮಂದಪುಣ್ಯನಿಗೆ ದೊರಕೀತೆ ? ”

ಇಂತಹ ಹಂಸೋದಕದ ವಿಷಯದಲ್ಲಿ “ ಕರ್ಪೂರಾಗರುಜಂ ಸಿತಾದ್ಯಭಿರಸ್ಯೈರ್ಹಂಸೋದಕಂ ವಾಸಿತಂ, ಸೌಧಂ ಚಾತಿ ಮನೋಹರಂ ಶಿಶಿರತೋಮುಗ್ಧಾಂಗನಾಲಿಂಗನಮ್” ಅಂದರೆ ಪಚ್ಚಕರ್ಪೂರ, ಅಗರು, ಸಕ್ಕರೆಗಳಿಂದ ಸುವಾಸನಾಯುಕ್ತವಾದ ಮನೋಹರ ಸೌಧಾಗ್ರದಲ್ಲಿ ಬೆಳದಿಂಗಳಲ್ಲಿ ಚಂದ್ರಕಿರಣಸಂಪರ್ಕವೂ ಅದಕ್ಕೆ ದೊರಿಯುವಂತೆ ಇಟ್ಟದ್ದ ಮನೋಹರವಾದ ಹಂಸೋದಕವನ್ನು ಕುಡಿದು ಮುಗ್ಧಾಂಗನಾಲಿಂಗನದಿಂದಿರುವಿಕೆಯು ಸಾಮಾನ್ಯಪುರುಷನಿಗೆ ಅಶಕ್ಯವೆಂದು ಭಾವವು.

“ ಚಯಪ್ರಕೋಪೋಪಶಮಾ ವಾಯೋರ್ಗ್ರೀಷ್ಮಾದಿಷು ತ್ರಿಷು ॥ ವರ್ಷಾದಿಷು ಚ ಪಿತ್ತಸ್ಯ ಶ್ಲೇಷ್ಮಣಶ್ಶಿಶಿರಾದಿಷು ॥ ಚೀಯತೇ ಲಘು ರೂಕ್ಷಾಭಿರೋಷಧೀಭಿಃ ಸಮೀರಣಃ ॥ ತದ್ವಿಧಸ್ತದ್ವಿಧೇ ದೇಹೇ ಕಾಲಸ್ಯೋಷ್ಣಾನ್ನ ಕುಪ್ಯತಿ ॥ ಅದ್ಭಿರಮ್ಲವಿಪಾಕಾಭಿರೋಷಧೀಭಿಶ್ಚ ತಾದೃಶಮ್ ॥ ಪಿತ್ತಂ ಯಾತಿ ಚಯಂ ಕೋಪಂ ನ ತು ಕಾಲಸ್ಯ ಶೈತ್ಯತಃ ॥ ಚೀಯತೇ ಸ್ನಿಗ್ಧ ಶೀತಾಭಿರುದಕಾಷಧಿಭಿಃ ಕಫಃ ॥ ತುಲ್ಯೇ ಚ ಕಾಲೇ ದೇಹೇ ಚ ಸ್ಕನ್ನತ್ವಾನ್ನಪ್ರಕುಪ್ಯತಿ ॥ ಹಿಮೇ ಯಾತಿ ಶಮಂ ಪಿತ್ತಂ ವಾಯುಃ ಶ್ಲೇಷ್ಮಾ ವಚೀಯತೇ ॥ ಸವಾಯುಃ ಶಿಶಿರೇ ಕೋಪಂ ಯಾತ್ಯೇವೋಪಹತಃ ಕಫಃ ॥ ಹೇಮಂತೇ ಸಂಚಿತಃ ಶ್ಲೇಷ್ಮಾ ಶಿಶಿರೇತ್ವತಿಚೀಯತೇ ॥ ಶೀತ ಸ್ನಿಗ್ಧ ಗುರು ದ್ರವ್ಯೈಃ ಶೈತ್ಯಸ್ಕನ್ನೋಪಕುಪ್ಯತಿ ॥ ಇತಿ ಕಾಲಸ್ಯ ಭಾಗೋಽಯಮಾಹಾರಾದಿ ವಶಾತ್ಪುನಃ ॥ ಚಯಾದೀನ್ ಯಾಂತಿ ಸದ್ಯೋಽಪಿ ದೋಷಾಃ ಕಾಲೇ ವಿಶೇಷತಃ ॥ ”

"ಗ್ರೀಷ್ಮಾದಿ ೩ ಋತುಗಳಲ್ಲಿ ವಾಯುವಿನ—ಸಂಚಯ, ಕೋಪ ಮತ್ತು ಶಾಂತಿ ಕ್ರಮವಾಗಿ ಆಗುವದು ಅಂದರೆ ಗ್ರೀಷ್ಮದಲ್ಲಿ ವಾಯುವಿನ ಸಂಚಯವೂ, ವರ್ಷರ್ತುವಿನಲ್ಲಿ ಪ್ರಕೋಪವೂ, ಶರದೃತುವಿನಲ್ಲಿ ಶಾಂತಿಯೂ ಆಗುವದು. ಹಾಗೆಯೇ ವರ್ಷಾದಿ ೩ ಋತುಗಳಲ್ಲಿ ಪಿತ್ತಕ್ಕೆ-ಸಂಚಯ, ಪ್ರಕೋಪ ಮತ್ತು ಶಾಂತಿ ಇವು ಕ್ರಮವಾಗಿ ಉಂಟಾಗುವವು. ಹಾಗೆಯೇ ಶಿಶಿರಾದಿ ೩ ಋತುಗಳಲ್ಲಿ ಕಫದ ಸಂಚಯ ಪ್ರಕೋಪ ಶಾಂತಿಗಳುಂಟಾಗುವವು. ಲಘು ಮತ್ತು ರೂಕ್ಷ ಔಷಧಿಗಳ ಸೇವನೆಯಿಂದ ವಾಯುವಿನ ಸಂಚಯ ವುಂಟಾಗುತ್ತದೆ. ಲಘು ಮತ್ತು ರೂಕ್ಷ ಗುಣಯುಕ್ತವಾಯುವು ಲಘು ಮತ್ತು ರೂಕ್ಷ ಶರೀರದಲ್ಲಿ ಕಾಲದ ಉಷ್ಣತೆಯಿಂದ ಪ್ರಕೋಪವನ್ನು ಪಡಿಯುವದಿಲ್ಲ; ಹುಳಿಪಾಕವುಳ್ಳ ಜಲ ಮತ್ತು ಔಷಧಿಗಳಿಂದ ಆಮ್ಲಪಾಕವುಳ್ಳ ಪಿತ್ತವು ಸಂಚಯವಾಗುತ್ತದೆ. ಸಮಯದ ಶೀತಲತಾದಿಂದ ಕೋಪಕ್ಕೆ ಪ್ರಾಪ್ತವಾಗುವದಿಲ್ಲ. ಸ್ನಿಗ್ಧ ಮತ್ತು ಶೀತಲಜಲ ಮತ್ತು ಔಷಧಿಗಳಿಂದ ಕಫದ ಸಂಚಯವಾಗುತ್ತದೆ. ಆ ಕಫವು ಸ್ನಿಗ್ಧ ಮತ್ತು ಶೀತಲಸಮಯ ತಥಾ ಶರೀರದಲ್ಲಿ ಶುಷ್ಕವಾಗುವದರಿಂದ ಪ್ರಕೋಪವನ್ನು ಪಡಿಯುವದಿಲ್ಲ. ಹೇಮಂತ ಋತುವಿನಲ್ಲಿ ಪಿತ್ತದ ಶಾಂತಿಯೂ, ವಾಯು ತಥಾ ಶ್ಲೇಷ್ಮದ ಸಂಚಯವಾಗುತ್ತದೆ. ಶಿಶಿರ ಋತುವಿನಲ್ಲಿ ಆ ವಾಯುವು ಪ್ರಕೋಪವನ್ನು ಪಡಿಯುತ್ತದೆ. ಆಗ ಕಫವು ಸಂಚಿತವಾಗಿರುವದು. ಹೇಮಂತ ಋತುವಿನಲ್ಲಿ ಸಂಚಯಕ್ಕೆ ಪ್ರಾಪ್ತವಾದ ಶ್ಲೇಷ್ಮವು—ಶೀತಲ, ಸ್ನಿಗ್ಧ ತಥಾ ಭಾರೀದ್ರವ್ಯಗಳ ಸೇವನೆಯಿಂದ ಶೀತಲತೆಯ ಕಾರಣದಿಂದ ಶಿಶಿರಋತುವಿನಲ್ಲಿ ಅತ್ಯಂತ ಸಂಚಿತವಾದದ್ದಾಗಿ ಒಣಗಿ ಹೋಗುವದರಿಂದ ಅತ್ಯಂತ ಪ್ರಕೋಪವನ್ನು ಪಡಿಯುವದಿಲ್ಲ; ಇದು ಸಮಯದ ಸ್ವಭಾವವಾಗಿದೆ. ಮತ್ತೆ ಆಹಾರಾದಿಗಳ ಕಾರಣದಿಂದ ವಾತಾದಿಕ ದೋಷ ತತ್ಕಾಲದಲ್ಲಿಯೇ ಸಂಚಯಾದಿ ಗುಣಗಳನ್ನು ಪಡಿಯುತ್ತವೆ. ಪರಂತು ತಮ್ಮ ತಮ್ಮ ಸಮಯಗಳಲ್ಲಿ ವಿಶೇಷತಯಾ ಸಂಚಯಾದಿಗಳನ್ನು ಪಡಿಯುತ್ತವೆ."

**"ಚಯ ಕೋಪ ಶಮಾಃ ಪೂರ್ವಾಹ್ಣೇ ವಸಂತಸ್ಯ ಲಿಂಗವತ್, ಮಧ್ಯಾಹ್ನೇ ಗ್ರೀಷ್ಮಸ್ಯ, ಅಪರಾಹ್ಣೇ ಪ್ರಾವೃಷಃ ಪ್ರದೋಷೇ ವಾರ್ಷಿಕಮ್॥ ಶರದಮರ್ಧರಾತ್ರೇ ಪ್ರತ್ಯುಷಸಿ ಹೇಮಂತಮು ಪಲಕ್ಷಯೇತ್। ಏವಮಹೋರಾತ್ರಮಪಿ ವರ್ಷಾಮಿವ ಶೀತೋಷ್ಣ ವರ್ಷಾದೋಷೋಪಚಯ ಪ್ರಕೋಪೋಪಶಮಾಃ ಜಾನೀಯಾದಿತಿ ಸುಶ್ರುತಃ॥**

ಚಯ ಕೋಪ ಶಮಾ ದೋಷಾ ವಿಹಾರಾಹಾರ ಸೇವನೈಃ || ಸಮಾನ್ಯೈರ್ಯಾನ್ತ್ಯಕಾಲೇऽಪಿ, ವಿಪರೀತೈರ್ವಿಪರ್ಯ್ಯಯಮ್ || (ಸಮಾನ್ಯೈಸ್ತುಲ್ಯೈ ಕ್ಷಯಾದಯೋಗ್ಯೈರಿತಿ ಯಾವತ್ | ವಿಪರ್ಯ್ಯಯಂ ಕಾಲೇऽಪಿ ವೈಪರೀತಂ ಭೋಧ್ಯಮ್ || ”

“ ಸುಶ್ರುತದಲ್ಲಿ:—ದಿನರಾತ್ರಿಯಲ್ಲಿಯೂ ಸಂವತ್ಸರದ ಸಮಾನ ವಸಂತಾದಿ ಋತುಗಳ ಲಕ್ಷಣವು ಪ್ರಕಟವಾಗುತ್ತದೆ. ಈ ದೋಷಗಳ ಸಂಚಯ, ಕೋಪ, ಶಾಂತಿಗಳಿಂದ ತಿಳಿಯಲ್ಪಡುತ್ತವೆ. ಅಂದರೆ—ಪ್ರಾತಃಕಾಲವು ವಸಂತದ ಲಕ್ಷಣವು, ಮಧ್ಯಾಹ್ನದಲ್ಲಿ ಗ್ರೀಷ್ಮದ, ೩ನೇ ಪ್ರಹರವು ಪ್ರಾವೃಟ್‌ಕಾಲದ, ಸಾಯಿಂಕಾಲವು ವರ್ಷಋತುವಿನ, ಅರ್ಧರಾತ್ರಿಯಲ್ಲಿ ಶರದೃತುವಿನ, ಹಿಂದಿನ ರಾತ್ರಿಯಲ್ಲಿ ಹೇಮಂತದ ಲಕ್ಷಣವನ್ನು ತಿಳಿಯಬೇಕು. ಸಂಚಯ, ಕೋಪ ಶಮನಗಳನ್ನು ಮಾಡತಕ್ಕ ಆಹಾರವಿಹಾರಗಳ ಸೇವನೆಯಿಂದ ಸಮಯವಿಲ್ಲದಿದ್ದರೂ ವಾತಾದಿ ದೋಷಗಳು—ಸಂಚಯ, ಕೋಪ, ಸಮತಾಗಳನ್ನು ಹೊಂದುವವು. ಪರಂತು ವಿಪರೀತ ಆಹಾರವಿಹಾರಗಳಿಂದ ಸಮಯವೇ ಆದರೂ ವಿಪರೀತ ಫಲವಾಗುವದು. ”

ಇಂತು ಋತುಚರ್ಯೆಯೆಂಬ ಸಪ್ತಮಾಶಯವು.



## ಅಷ್ಟಮಾಶಯವು.

### ಬ್ರಹ್ಮಚರ್ಯವಿಧಿ.

ಈಶ್ವರಸೃಷ್ಟಿಯಲ್ಲಿ ಮುಖ್ಯವಾದದ್ದು ವೀರ್ಯವು. ಇದನ್ನು ಜಗತ್ತಿನ ಚೈತನ್ಯಕ್ಕೆ ಮುಖ್ಯಾಧಾರ ಬೀಜವಾಗಿ ನಿರ್ಮಿಸಿ, ಪಿಂಡಾಂಡದಲ್ಲಿ ಇದಕ್ಕಾಗಿಯೇ ಬಂದು ಕೋಶವನ್ನೇರ್ಪಡಿಸಿ, ಅಲ್ಲಿ ಅದು ನಮ್ಮ ದಿನಂಪ್ರತಿಯ ಆಹಾರದಿಂದ ದಿನೇದಿನೇ ವೃದ್ಧಿಯಾಗುತ್ತಾ ಬಂದು, ಜಗತ್ತಿನ ಪ್ರಜಾವೃದ್ಧಿ ಕಾರ್ಯಕ್ಕೆ ಆದಿಕಾರಣವಾಗಿರುವಂತೆ ನಿಯಮಿಸಿದ್ದಾನೆ. ಇಂತಹ ಪರಮೋತ್ತಮ ವಸ್ತುವು ಬೇರೇಕಡೆಯಿಂದ ತಂದು ವ್ಯವಹರಿಸತಕ್ಕ ವಸ್ತುವಲ್ಲ !! ಜೀವನ ಜೀವಶಕ್ತಿಗೂ, ಪೌರುಷಾದಿ ಗುಣಗಳಿಗೂ, ಚೈತನ್ಯಕ್ಕೂ ಮೂಲ ಹೇತುವಾಗಿರುವದರಿಂದ ಇದು ತನ್ನ ಕೋಶದಲ್ಲಿ ಪರಿಪಕ್ವಸ್ಥಿತಿಗೆ ಬಂದಮೇಲೆಯೇ ಯಥಾವಿಹಿತವಾಗಿ ವ್ಯವಹರಿಸತಕ್ಕದ್ದಾಗಿದೆ. ಇಂತಹ ಪರಮ ಚೈತನ್ಯ ಬೀಜವಾಗಿರುವ ವೀರ್ಯದ ಉತ್ಪತ್ತಿ, ರಕ್ಷಣೆ, ವಿನಿಯೋಗಾದಿಗಳನ್ನು ತಿಳಿಸತಕ್ಕ ಶಾಸ್ತ್ರವನ್ನು ಪ್ರತಿಯೊಬ್ಬನೂ ತಿಳಿದೇ ಇರಬೇಕಾಗುತ್ತದೆ. ನಾವು ಸಾಮಾನ್ಯವಾಗಿ ಹಳ್ಳಿಗಾಡಿನವರೆಂದೂ, ಮೂಢರೆಂದೂ ತಿಳಿದಿರತಕ್ಕ

ರೈತರಲ್ಲಿ ಪ್ರತಿಯೊಬ್ಬನೂ-ತಾನು ಭೂಮಿಯಲ್ಲಿ ಬಿತ್ತುವ ಬೀಜದಿಂದ ಯುಕ್ತವಾದ ಬೆಳೆಯನ್ನು ಪಡಿಯಲು ತಕ್ಕ ಜ್ಞಾನವನ್ನು ಸ್ವಭಾವವಾಗಿ ಅನುಭವದಿಂದ ಹೊಂದಿಯೇ ಇರುತ್ತಾನೆ. ಈ ವಿಷಯವಾಗಿ ಅವನು ತನಗೆ ಅಭಿಮತವಾದ ಪೈರು ಚೆನ್ನಾಗಿ ಬೆಳದು, ವೃದ್ಧಿಯಾಗಿ ರೋಗವಿಲ್ಲದೆ, ಹುಲಸಾಗಿ ಸಂಪೂರ್ಣ ಫಲವನ್ನು ಕೊಡಬೇಕಾದರೆ ಅದಕ್ಕೆ ಕಾಲಾನುಸಾರವಾಗಿ ಏನೇನು ಸಾಧನೆಗಳು ಬೇಕೆಂಬುದನ್ನು ತಿಳಿದಿರುತ್ತಾನಲ್ಲದೆ, ಅವುಗಳನ್ನು ಸಾಧ್ಯವಾದಷ್ಟು ಯತ್ನದಿಂದ ಒದಗಿಸಿಕೊಂಡು ಬಂದು, ತನಗೆ ಬೇಕಾದ ಪೈರು ಅಪರಿಮಿತವಾಗಿ ಬೆಳೆಯುವಂತೆ ಯತ್ನಿಸಿ, ಅದರಿಂದ ವಿಶೇಷಾನಂದವನ್ನು ಪಡಿಯುತ್ತಾನೆ. ಹೀಗೆ ಬೆಳೆಯುವ ಅವನ ಪ್ರಯತ್ನಕ್ಕೆ-ಭೂಮಿ, ಉತ್ತಮವಾದ ಬೀಜ, ಸಮಯ, ಜಲಾದಿ ಸಾಧನೆಗಳ ವಿಚಾರ, ಹಾಕಿದ ಬೀಜಕ್ಕೆ ಕಾಲಾನುಸಾರ ಮಾಡಬೇಕಾದ ಉಪಚಾರಗಳು, ಇವುಗಳ ವೈಷಮ್ಯದಿಂದುಂಟಾಗಬಹುದಾದ ಹಾನಿ ಇಷ್ಟನ್ನೂ ಆ ಹಳ್ಳಿಗಾಡಿನವನು ಚೆನ್ನಾಗಿ ತಿಳಿದಿರುತ್ತಾನೆ. ಈ ರೈತನ ಕರ್ತವ್ಯಕ್ಕಿಂತಲೂ—ವೀರ್ಯ, ಅದರ ರಕ್ಷಣೆ, ಅದರ ವಿನಿಯೋಗಕ್ರಮ ಮುಂತಾದ್ದನ್ನು ಪ್ರತಿಯೊಬ್ಬನೂ ಎಷ್ಟೋ ವಿಶೇಷವಾಗಿ ತಿಳಿಯಬೇಕಾದದ್ದು ಅಗತ್ಯವಲ್ಲವೆ? ರೈತನ ಬೀಜವು ದುಡ್ಡಿಗೆ ೪ ಶೇರಿನಂತೆ ಬೇಕಾದಕಡೆಯಲ್ಲಿ ಕ್ರಯಕ್ಕೆ ದೊರಿಯತಕ್ಕದ್ದಾಗಿದೆ. ಈ ಜೀವ ಬೀಜವೆಂಬ ವೀರ್ಯವು ಪ್ರಜಾವೃದ್ಧ್ಯರ್ಥವಾಗಿ ಪರಮೇಶ್ವರನಿಂದ ಪರಿಮಿತವಾಗಿ ಪ್ರಸಾದಿಸಲ್ಪಟ್ಟದೆಯಲ್ಲದೆ, ಹೇರಳವಾಗಿ ಮತ್ತೆಲ್ಲಿಯಾದರೂ ದೊರಿಯತಕ್ಕ ವಸ್ತುವಲ್ಲ! ಬೀಜವನ್ನು ಬಿತ್ತುವವನಿಗೆ-ಭೂಮಿ, ಬೀಜ, ಸಮಯ, ಕಾಲಾನುಸಾರವಾಗಿ ಮಾಡಬೇಕಾದ ಉಪಚಾರ ಮುಂತಾದ ವಿಶೇಷ ವಿಚಾರವಿರುವದಕ್ಕಿಂತಲೂ ಎಷ್ಟೋಪಾಲು ಜಾಸ್ತಿಯಾಗಿ-ವೀರ್ಯ, ವೀರ್ಯರಕ್ಷಣೆ, ವೀರ್ಯವೃದ್ಧಿ ವಿಷಯಗಳು, ವೀರ್ಯಸೇಚನಾವಿಧ ಮುಂತಾದ ಮಹೋತ್ತಮ ವಿಷಯಗಳನ್ನು ಅರಿಯುವದು ಎಲ್ಲರಿಗೂ ಶ್ರೇಯಸ್ಸಾಧಕವಾದದ್ದು. ಇಂತಹ ಅಪರೂಪ ವಿಷಯಗಳು—ಕಾಮಶಾಸ್ತ್ರ, ಕಳಾಶಾಸ್ತ್ರ, ಕೊಕ್ಕೋಕಶಾಸ್ತ್ರ ಮುಂತಾದ ಗ್ರಂಥಗಳಿಂದ ತಿಳಿಯಲಾರವು. ಜಗತ್ತಿನಲ್ಲಿರುವ ಮಾನವರ ಪರಮಸುಖಕ್ಕೆ ಸಾಧಕಗಳಾದ ಈ ಮಹೋತ್ತಮ ವಿಷಯಗಳನ್ನು ಲೀಲಾಮಾತ್ರದಲ್ಲಿ ಉಪದೇಶಿಸಿರುವ ನಮ್ಮ ಆದ್ಯಮಹರ್ಷಿಗಳು—ಚರಕ, ಸುಶ್ರುತ, ವಾಗ್ಭಟ ಮುಂತಾದ ಸಂಹಿತೆಗಳಲ್ಲಿ ಅಲ್ಲಲ್ಲಿ ಪ್ರಕಟಿಸಿರುತ್ತಾರೆ.

ನಮ್ಮ ದೇಶದ ಪ್ರಕೃತಸ್ಥಿತಿಯು ಮಹತ್ತರವಾದ ದುಃಖಾಕಲಿತವಾಗಿದೆ.

"ಅಟ್ಟಶೂಲಾ ಜನಪದಾಃ ಶಿವಶೂಲಾಸ್ತ್ವಥೈವಚ ॥
ಪ್ರಮದಾಃ ಕೇಶಶೂಲಿನ್ಯಃ ಭವೇಷ್ಯಂತಿ ಕಲೌ ಯುಗೇ ॥"

“ ಅಟ್ಟಂ-ಅನ್ನಂ, ಶೂಲಾಃ-ವಿಕ್ರೇತಾರಃ ” ಅಟ್ಟ (ಅನ್ನ) ವನ್ನು ಹೋಟಲ್, ಕಾಪೀಕ್ಲಬ್ ಮುಂತಾದ ಹೆಸರುಳ್ಳ ಸ್ಥಳಗಳಲ್ಲಿ ವಿಕ್ರಯಿಸತಕ್ಕವರೂ, ಶಿವಶೂಲಾಃ - ವೇದ ವಿಕ್ರಯ ಮಾಡತಕ್ಕವರೂ ಇರುವರಲ್ಲದೆ, ಪ್ರಮದಾಃ-ಸ್ತ್ರೀಯರು, ಕೇಶಶೂಲಿನ್ಯಃ-ಸರ್ವರ ಸಮಕ್ಷಮದಲ್ಲಿಯೇ, ನಿರ್ಲಜ್ಜಾಯುತರಾಗಿ ಭ್ರಷ್ಟಾಚಾರಮಾಡತಕ್ಕವರೂ; ಸಹ ಈ ಕಲಿಯುಗದಲ್ಲಿ ಆಗುವರು. ”

ಎಲ್ಲಿ ನೋಡಿದರೂ ಅಸದ್ವ್ಯವಹಾರಗಳೂ, ಅನುಚಿತ ಕರ್ಮಗಳೂ, ಅಪವಿತ್ರ ಶಯನಗಳೂ ದಿನೇದಿನೇ ಧೈರ್ಯಗೊಳ್ಳುತ್ತಾ ಮಾನವಕೋಟಿಯನ್ನೇ ಆವರಿಸುತ್ತಲಿವೆ. ಇದರಿಂದ ಬಾಲವಿತಂತುಗಳೂ, ಕೇಶಶೂಲಿನಿಯರೂ ತಮ್ಮ ಆಧಿಕ್ಯದಿಂದ ದೇಶವನ್ನೇ ದೌರ್ಭಾಗ್ಯಲಕ್ಷ್ಮೀ ವಾಸಸ್ಥಾನವನ್ನಾಗಿ ಮಾಡುತ್ತಿದ್ದಾರೆ. ಇಂತವರ ಮಧ್ಯೆ ಪತಿಪರಾಯಣೆಯರಾದ ಪರಮ ಸಾಧ್ವೀಮಣಿಗಳು ತಮ್ಮ ಸದ್ಧರ್ಮಾನುವರ್ತನೆಯನ್ನು ಮಾಡುವದೇ ಕಷ್ಟವಾಗಿದೆ. ಜಗದ್ರಚನಾಧುರೀಣನೂ, ಕಲ್ಯಾಣಮಯನೂ, ಕರುಣಾಕರನೂ ಆದ ಪರಮೇಶ್ವರನು ಈ ಜಗದ್ವ್ಯವಹಾರಕ್ಕೆ ಅತಿಮುಖ್ಯ ವಸ್ತುವೆಂದರಿತು ಯಾವ ಜೀವರತ್ನವೆಂಬ ಬೀಜವನ್ನೂ, ಅದರ ಸ್ಥಾನವಾಗಿ ಕೋಶವೊಂದನ್ನೂ ಏರ್ಪಡಿಸಿರುವನೋ ? ಯಾವದರ ಸಂವರ್ಧನೆಗಾಗಿ ಸಕಲ ಧಾನ್ಯ ಫಲ ಮೂಲ ಶಾಕ ವರ್ಗಾದ್ಯನ್ನವನ್ನೂ, ದಧಿ ಕ್ಷೀರ ಘೃತ, ನವನೀತ, ಮಧು (ಜೇನುತುಪ್ಪ) ಶರ್ಕರಾದ್ಯಮಿತ ಪುಷ್ಟಿಕಾರಕ ವಸ್ತುಗಳನ್ನೂ, ಜೀವನೀಯಾದಿ ಪೌಷ್ಟಿಕ ವನೌಷಧಿಗಳನ್ನೂ ರಚಿಸಿ, ಇವೆಲ್ಲವನ್ನೂ ಯಥಾವಿಹಿತವಾಗಿ ಭುಜಿಸುತ್ತಾ ಆ ಜೀವರತ್ನ (ವೀರ್ಯ) ವನ್ನು ಪ್ರವೃದ್ಧಿಪಡಿಸಿಕೊಳ್ಳುತ್ತಾ ಬರುವಂತೆ ಕಟ್ಟುಮಾಡಿರುವನೋ ! ಯಾವದರ ರಕ್ಷಣೆಗಾಗಿಯೂ, ಯಥಾ ವಿಹಿತೋಪಯೋಗಕ್ಕಾಗಿಯೂ, ಬ್ರಹ್ಮಚರ್ಯ, ಗಾರ್ಹಸ್ಪತ್ಯ ಮುಂತಾದ್ಯಾಶ್ರಮ ಚತುಷ್ಟಯಗಳನ್ನೂ, ಅವುಗಳ ಆಧಾರಾರ್ಥವಾಗಿ ಸತ್ಯಾಸ್ತೇಯ ಅಹಿಂಸಾದಿ ಧರ್ಮಗಳನ್ನೂ ನಿಯಮಿಸಿರುವನೋ ಆ ವೀರ್ಯದ ಮಹತ್ವವು ಸಾಮಾನ್ಯವಾದದ್ದಲ್ಲ ! ಈ ಪರಮೇಶ್ವರೀಯ ವಸ್ತುವಾದ ವೀರ್ಯಕ್ಕಾಗಿಯೇ ಅಭೇದ್ಯ ಕೋಶವೊಂದನ್ನು ತ್ವಙ್ಮಾಂಸ ಮಜ್ಜಾಸ್ಥಿ ಪುಂಜವಾಗಿಯೂ, ನರಗಳಿಂದಲೂ, ಸ್ನಾಯು ವಿಶೇಷಗಳಿಂದಲೂ ವೇಷ್ಟಿತವನ್ನಾಗಿಮಾಡಿ, ಸಪ್ತಪ್ರಾಕಾರಾವರಣದ ಮಹದ್ಭಿದ್ರ ಸ್ಥಲದಲ್ಲಿಟ್ಟಿರುವನಾದ್ದರಿಂದ ಇದು ಅತ್ಯಂತ ದುರ್ಲಭವಾದ ಈಶ್ವರೀಯ ವಸ್ತುವೆಂದು ಸಾಮಾನ್ಯವಾಗಿ ತಿಳಿಯಬೇಕು. ಯಾಕೆಂದರೆ ಈ ಸಕಲ ಜಗದ್ವ್ಯವಹಾರೈಕ ಹೇತುವಾದ ಈಶ್ವರೀಯ ಬೀಜ ಕೋಶವನ್ನು ಬುದ್ಧಿ ಎಂಬ ಸೈನ್ಯಾಧಿಪತಿಯು, ತನ್ನ ಧೀನವಾದ ಮನಸ್ಸೆಂಬ

ಜನರಲ್, ಚಿತ್ತವೆಂಬ ಕರ್ನಲ್, ಅಹಂಕಾರವೆಂಬ ಮೇಜರ್‌ಗಳಾಗಿ ರಕ್ಷಿಸುತ್ತಿರಲು ಕಟ್ಟುಮಾಡಿರುವನು. ಹಾಗೆಯೇ ಇವರೆಲ್ಲರನ್ನೂ ತನ್ನ ಆಜ್ಞಾಧೀನರನ್ನಾಗಿ ನಡಿಸುತ್ತಾ ಬರುವಂತೆ ಮಿದಳು (ಬ್ರೈನ್) ಎಂಬ ರಾಜನಿಗೆ ಈ ದೇಹವೆಂಬ ರಾಜ್ಯವನ್ನಾಳುವಂತೆ ಪಟ್ಟಾಭಿಷೇಕ ಮಾಡಿರುವನು. ಈ ರಾಜನು ತನ್ನ ಸಲತರ್ಗಳಾದ ಬಾಹ್ಯೇಂದ್ರಿಯಗಳೆಂಬ ಬಾರ್‌ಶಿಪಾಯಿಗಳಿಂದಲೂ, ಅಂತರಿಂದ್ರಿಯಗಳೆಂಬ ಸವಾರ್ ಪಟಾಲಂಗಳಿಂದಲೂ, ಈ ಜೀವರತ್ನ ಕೋಶವನ್ನು ಕಾಪಾಡುತ್ತಾ ತನ್ನ ಧೀನರಾದ ದೇಹಸ್ಥ ಸಕಲ ನಾಡೀಮಂಡಲವೆಂಬ ನೌಕರವರ್ಗದವರ ಆಡಳಿತದಲ್ಲಿ ದೇಹದ ಸಕಲ ಕಾರ್ಯಗಳನ್ನೂ ನಡಿಸುವಂತೆ ಏರ್ಪಡಿಸಿ, ತಾನು ಸರ್ವಸಾಕ್ಷಿಯಾಗಿ ತನ್ನ ದವಲತ್ತನ್ನು ಮಾಡುತ್ತಾ ಇದ್ದಾನೆ.

ಇಂತಹ ಜಗಜ್ಜೀವರತ್ನ (ವೀರ್ಯ) ವೆಂಬ ಪರಮೇಶ್ವರನ ಖಜಾನೆಯನ್ನೂ, ಅದರ ಉತ್ತಮೋತ್ತಮ ಗುಣಗಳಾದ ಜಗತ್ಸೃಷ್ಟಿ ಸ್ಥಿತಿ ಪ್ರಲಯಾದಿ ಭಗವಚ್ಛಕ್ತಿಗಳನ್ನೂ ಅರಿಯದೆ, ಮೂಢರಾದವರು, ಅನುಚಿತ ವ್ಯಾಪಾರಗಳಿಂದ ಕ್ರಮತಪ್ಪಿ ಈ ವೀರ್ಯವನ್ನು ಉಪಯೋಗಿಸುತ್ತಾ ಬರುವದರಿಂದ ಪರಮೇಶ್ವರನಿಗೆ ಪ್ರತಿನಿಧಿ (ವೈಸರಾಯಿ) ಯಂತೆ ನಮ್ಮ ದೇಹವೆಂಬ ರಾಜ್ಯದ ಆಡಳಿತವನ್ನು ನೋಡಿಕೊಳ್ಳುತ್ತಿರುವ ಮಿದಳಿನ (ಬ್ರೈನ್) ತಿಳುವಳಿಕೆಗೆ ಬಾರದೆ:—

" ತೇನವಿನಾಪ್ಯಲ್ಪಾದಲ್ಪ ವ್ಯವಹಾರಸ್ತು ನ ಭವೇತ್ ॥ "

" ಆ ಬ್ರೈನ್‌ಗೆ ತಿಳಿಯದಂತೆ ಕೇವಲಾಲ್ಪ ವ್ಯವಹಾರವಾದರೂ ನಮ್ಮ ಶರೀರ ರಾಜ್ಯದಲ್ಲಿ ಖಂಡಿತವಾಗಿಯೂ ನಡಿಯಲಾರದು. " ಎಂಬ ಸೂಕ್ತಿಯಂತೆ ಈ ವೀರ್ಯಕೋಶ (ಖಜಾನೆ) ಯ ರಕ್ಷಕನೂ, ದೇಹದ ರಾಜನೂ, ಪರಮೇಶ್ವರನಕಡೆ ಪ್ರತಿನಿಧಿ (ವೈಸರಾಯಿ) ಯೂ ಆದ ಬ್ರೈನ್‌ಗೆ ತಿಳಿಯದಂತೆ ನಮ್ಮ ದೇಹದಲ್ಲಿ ನಡಿಯುವದಿಲ್ಲವೆಂತಲೇ ಶಾಸ್ತ್ರೀಯವಾದ ತಾತ್ಪರ್ಯದಿಂದ ತಿಳಿಯತಕ್ಕದ್ದು. ಯಾಕೆಂದರೆ ಆತನಕಡೆ ಗೂಢಚಾರರೆಂಬ ಅಧಿಕಾರಿಗಳು ಶರೀರದ ಅಂತರ್ಭಾಗದಲ್ಲಿಯೂ, ಅಧಿಕಾರಿವರ್ಗವೆಂಬ ನೌಕರರು ಶರೀರದ ಬಾಹ್ಯಭಾಗದಲ್ಲಿಯೂ ನಮ್ಮ ದೇಹಕ್ಕೆ ಹಗ್ಗಗಳಂತೆ ನಾಡೀ (ನರ) ಮಂಡಲರೂಪದಿಂದ ಸಕಲ ವ್ಯವಹಾರಕ್ಕೂ ಸಾಕ್ಷಾದ್ದ್ರಷ್ಟಗಳಾಗಿ ಲಕ್ಷಾಂತರ ಮಂದಿ ನಮ್ಮ ಜಾಗ್ರತ್ಸ್ವಪ್ನ ಸುಷುಪ್ತಿಗಳಲ್ಲಿಯೂ ತಾವೇನೋ ಸದಾ ಜಾಗರೂಕರಾಗಿ ನೋಡಿಕೊಳ್ಳುತ್ತಾ ಇದ್ದೇ ಇರುವರು ಎಂಬದನ್ನು ಪ್ರತಿ ಮಾನವನೂ ತಿಳಿಯಲೇ ಬೇಕಾಗಿದೆ.

ಗರ್ಭಾಶಯವೆಂಬ ಮಾನವಜಾತಿಯ ಆದ್ಯವಾಸಸ್ಥಾನದಿಂದ ಹೊರಕ್ಕೆ ಬಂದ ಶಿಶುವಿಗೂ ವೀರ್ಯಕೋಶವು ಸಂಕೇತಮಾತ್ರವಿರುತ್ತದೆ. ಮುಂದೆ

ಭುಜಿಸತಕ್ಕ ಆಹಾರಾದಿಗಳಿಂದಲೂ, ಬ್ರಹ್ಮಚರ್ಯೆಯಿಂದಲೂ ಇದು ತನ್ನ ಪರಿಮಿತಸ್ಥಿತಿಗೆ ಬರುವವರಿಗೂ ನಿರಾತಂಕವಾಗಿ ರಕ್ಷಿಸಲ್ಪಡುತ್ತಾ ಬರತಕ್ಕದ್ದು. ಸಂಪೂರ್ಣ ಬ್ರಹ್ಮಚರ್ಯವ್ರತದನಂತರವೇ ಅದು ತನ್ನ ಪ್ರಯೋಜನವನ್ನು ಮಾನವಕೋಟಿಗೆ ಉಂಟುಮಾಡತಕ್ಕ ನಿಯಮವನ್ನು ಪರಮೇಶ್ವರನೇ ಏರ್ಪಡಿಸಿದ್ದಾನೆ. ಬ್ರಹ್ಮಚರ್ಯವೆಂದರೆ—ಬ್ರಹ್ಮವೆಂಬ ಹೆಸರುಳ್ಳ ವೇದಾದಿಗಳನ್ನು ಅಧ್ಯಯನ ಮಾಡತಕ್ಕ ಕಾಲ (ಬಾಲ್ಯ) ದಲ್ಲಿ ಆಚರಿಸಬೇಕಾದ ಜಿತೇಂದ್ರಿಯತ್ವಾದಿ ಸದ್ವ್ರತಗಳೆಂದು ತಿಳಿಯಬೇಕು.

**"ಪೂರ್ಣತಮಾಯುಃ ಪ್ರಕರ್ಷಕರಂ ಜರಾ ವ್ಯಾಧಿ ಪ್ರಶಮನಂ, ಊರ್ಜಸ್ಕರಮಮೃತಂ ಶಿವಂ ಶರಣ್ಯ ಮುದಾತ್ತಂ ಮತ್ತಃ ಶ್ರೋತುಮರ್ಹಥೋಪಧಾರಯಿತುಂ ಪ್ರಕಾಶಯಿತುಂ ಚ ಪ್ರಜಾನುಗ್ರಹಾರ್ಥಮಾರ್ಷಂ ಬ್ರಹ್ಮಚರ್ಯಮ್ ॥"** (ಚರಕ)

"ಭೃಗು, ಅಂಗಿರಾ, ಅತ್ರಿ, ವಸಿಷ್ಠ, ಕಶ್ಯಪ, ಪುಲಸ್ತ್ಯ, ವಾಮದೇವ, ಅಸಿತ, ಗೌತಮಾದಿ ಮಹರ್ಷಿಗಳಿಗೆ ಇಂದ್ರನು ಹೇಳಿದ್ದೇನೆಂದರೆ:— "ಎಲೈ ಋಷಿಗಳಿರಾ! ಎಲ್ಲಾ ಮನುಷ್ಯರಿಗೂ ಪುಣ್ಯತಮವಾದದ್ದು ಬ್ರಹ್ಮಚರ್ಯವು! ಇದು ಪೂರ್ಣಾಯುವನ್ನು ಕೊಡತಕ್ಕದ್ದೂ, ವೃದ್ಧಾಪ್ಯದಜರಾವಲೀಪಲಿತ ಕಾಯುವನ್ನು ತಡಿಯತಕ್ಕದ್ದೂ, ರೋಗನಾಶಕವೂ, ತೇಜಸ್ಸನ್ನು ವೃದ್ಧಿಪಡಿಸತಕ್ಕದ್ದೂ, ಮೃತ್ಯುವನ್ನು ತಪ್ಪಿಸತಕ್ಕದ್ದೂ, ಕಲ್ಯಾಣಕಾರಿಯೂ, ಶರೀರಾದಿಗಳನ್ನು ರಕ್ಷಿಸುವದೂ, ಮನಸ್ಸನ್ನೂ ಸರ್ವೇಂದ್ರಿಯಗಳನ್ನೂ ಸದಾ ಆನಂದವಾಗಿಡತಕ್ಕದ್ದೂ ಆಗಿದೆ; ಇದನ್ನು ನೀವೂ ಸ್ವೀಕರಿಸಿರಿ, ಧಾರಣೆಮಾಡಿರಿ; ಜಗದ್ರಕ್ಷಾರ್ಥವಾಗಿ ಪ್ರಕಾಶಪಡಿಸಿರಿ."

ಇದೇ ವಿಷಯವಾಗಿ ಸುಶ್ರುತದಲ್ಲಿ "ಆಷೋಡಶಾದ್ವೃದ್ಧಿಃ, ಆಪಂಚವಿಂಶೇರ್ಯೌವನಮ್" "೧೬ನೇ ಪ್ರಾಯದವರಿಗೂ ಸಕಲಾವಯವಗಳೂ ವೃದ್ಧಿಯಾಗುತ್ತವೆ. ಆ ಮುಂದೆ ೨೫ನೇ ವಯಸ್ಸಿನವರಿಗೆ ಬಲಿಷ್ಠಗಳಾಗಿರಲು ನಿಯತವ್ರತದಿಂದಿರಬೇಕು. ಒಂದು ಬೀಜವನ್ನು ಬಿತ್ತಿರುವ ಕಡೆಯಲ್ಲಿ ನಿರಾತಂಕವಾಗಿ ಬಿಟ್ಟು ಪೋಷಿಸುತ್ತಿದ್ದರೆ ಅದು ಅಲ್ಲಿ ಸುತ್ತುಮುತ್ತಲಿನ ಸಾರವನ್ನು ಹೊಂದಿ ಮೊಳಿಯುವಿಕೆ, ಬೇರು ಬಿಟ್ಟು ಪ್ರವೃದ್ಧಿಗೆ ಬರುವಿಕೆ ಮುಂತಾದ ಸಕಲ ವ್ಯಾಪಾರದಲ್ಲಿಯೂ ದೃಢವಾಗುತ್ತಾ ಬರುತ್ತದಲ್ಲದೆ, ಮಧ್ಯೆ ಮಧ್ಯೆ ಅದನ್ನು ಕಿತ್ತು ಕಿತ್ತು ನೋಡುತ್ತಾ, ಅದರ ಪ್ರವೃದ್ಧಿಗೆ ಕುಂದಕವನ್ನುಂಟು ಮಾಡುವದಾದರೆ ಹೇಗೆ ದಿನೇದಿನೇ ಕ್ಷೀಣಿಸುತ್ತಾ ಬರುತ್ತದೆಯೋ ಹಾಗೆಯೇ ನಮ್ಮ ಇಂದ್ರಿಯಗಳೂ ಬ್ರಹ್ಮಚರ್ಯ ಕಾಲದಲ್ಲಿ ತಮ್ಮ ತಮ್ಮ ವ್ಯಾಪಾರಗಳನ್ನೂ, ಮುಖ್ಯವಾಗಿ ಮುಖ್ಯೇಂದ್ರಿಯವೆಂಬ ವೀ

ರ್ಯಸ್ಥಾನದ ರಕ್ಷಣೆ ಮುಂತಾದವುಗಳನ್ನೂ ಹೊಂದುತ್ತಾ ಬರುವವಲ್ಲದೆ, ಪ್ರವೃದ್ಧಿಗೆ ಬಂದನಂತರ ಸಾಂಸಾರಿಕ ವ್ಯವಹಾರಗಳಿಗೆ ಅನುಕೂಲವಾಗುವವು. ಇದಕ್ಕಾಗಿ ವೀರ್ಯಕೋಶವನ್ನೂ, ಇತರೇಂದ್ರಿಯುಗಳನ್ನೂ ಬ್ರಹ್ಮಚರ್ಯದ ಸುನಿಯಮದ ಶ್ರೇಷ್ಠವಾದ ಸಮಯದಲ್ಲಿ ವಶವರ್ತಿಗಳನ್ನಾಗಿಟ್ಟುಕೊಳ್ಳುವದು ಶ್ರೇಯಸ್ಕರವಾದದ್ದು. ಇದಕ್ಕಾಗಿ ಬ್ರಹ್ಮಚರ್ಯ ಕಾಲದಲ್ಲಿ ದೇಹದಲ್ಲಿರುವ ಸಕಲಾವಯವಗಳೂ ನಿರಾತಂಕಗಳಾಗಿ ಪ್ರವೃದ್ಧಿಗೆ ಬರುವಂತೆ ಇಂದ್ರಿಯು ಸಮುದಾಯಗಳನ್ನು ಸಂಯಮನ ಮಾಡಿಕೊಂಡು ಇರಲೇಬೇಕೆಂಬದೇ ಸಕಲ ಶಾಸ್ತ್ರಜ್ಞರ ತಾತ್ಪರ್ಯವು.

**" ಆಯುಸ್ತೇಜೋ ಬಲಂ ವೀರ್ಯಂ ಪ್ರಜ್ಞಾ ಶ್ರೀಶ್ಚ ಮಹಾಯುಶಃ ॥ ಪುಣ್ಯಂ ಚ ಮತ್ಪ್ರಿಯತ್ವಂ ಚ ಹನ್ಯತೇಽಬ್ರಹ್ಮಚರ್ಯಯಾ ॥ " (ಗೌತಮ ಸ್ಮೃತಿ)**

" ಆಯು, ತೇಜಸ್ಸು, ಬಲ, ವೀರ್ಯ, ಬುದ್ಧಿ, ಶೋಭಾ, ಸೌಂದರ್ಯ, ಧನ, ಮಹಾಯಶಸ್ಸು, ಪುಣ್ಯ, ಪ್ರೀತಿ ಇವೆಲ್ಲವುಗಳನ್ನೂ ಅಬ್ರಹ್ಮಚರ್ಯ (ವೆಂದರೆ ಬ್ರಹ್ಮಚರ್ಯ ವ್ರತದಿಂದಿಲ್ಲದಿರುವಿಕೆಯು) ನಾಶಮಾಡುತ್ತದೆ. "

**" ಬ್ರಹ್ಮಚರ್ಯಮಾಯುಷ್ಯ ಕರಾಣಾಮ್ ॥ " (ಚರಕ)**

" ಆಯುರ್ವೃದ್ಧಿಕಾರಕ ಪದಾರ್ಥಗಳಲ್ಲಿ ಸರ್ವೋತ್ತಮವಾದದ್ದು ಬ್ರಹ್ಮಚರ್ಯ ವ್ರತವು ! "

**"ಬ್ರಹ್ಮಚರ್ಯ ಪ್ರತಿಷ್ಠಾಯಾಂ ವೀರ್ಯಲಾಭಃ " (ಯೋಗಶಾಸ್ತ್ರ)**

" ಬ್ರಹ್ಮಚರ್ಯವನ್ನು ಕ್ರಮವಾಗಿ ಧಾರಣೆ ಮಾಡುವದರಿಂದಲೇ ವೀರ್ಯ ಲಾಭವಾಗುವದು. "

**" ಪೃಥಕ್ಸರ್ವೇ ಪ್ರಾಜಾಪತ್ಯಾಃ ಪ್ರಾಣಾನಾತ್ಮಸು ಬಿಭ್ರತಿ ॥
ತಾನ್ತ್ಸರ್ವಾನ್ ಬ್ರಹ್ಮ ರಕ್ಷತಿ ಬ್ರಹ್ಮಚಾರಿಣ್ಯಾ ಭೃತಮ್ ॥ "
(ಅಥರ್ವವೇದ)**

" ಜಗತ್ಪಿತನಾದ ಪರಮೇಶ್ವರನ ಪ್ರಜೆಗಳಾದ ಮನುಷ್ಯಾದಿ ಎಲ್ಲಾ ಜೀವಗಳೂ ತಮ್ಮತಮ್ಮ ಆತ್ಮಗಳಲ್ಲಿ ಪ್ರಾಣದ ಧಾರಣೆ ಮತ್ತು ಪೋಷಣೆಯನ್ನು ಮಾಡುತ್ತವೆ. ಈ ಎಲ್ಲಾ ಜೀವಗಳ ಪ್ರಾಣರಕ್ಷಣೆಯೂ ಬ್ರಹ್ಮಚರ್ಯ ವ್ರತದಿಂದಲೇ ನಡಿಯುತ್ತದೆ. ಅಂದರೆ ಎಲ್ಲಾ ಜೀವಗಳ ಪ್ರಾಣರಕ್ಷಣೆಯನ್ನು ಮಾಡುವದೂ ಮುಖ್ಯವಾಗಿ ಬ್ರಹ್ಮಚರ್ಯದ—ಇಂದ್ರಿಯಗಳ ಸಂಯಮನ, ಸತ್ಯ, ಶೌಚಾಚಾರಾದಿಗಳೇ ಎಂಬದಾಗಿ ತಿಳಿಯಬೇಕು. "

ಬ್ರಹ್ಮಚರ್ಯಾನುಷ್ಠಾನಕ್ಕೆ ದೃಷ್ಟಾಂತ— ಮನುಷ್ಯೇತರ ಪ್ರಾಣಿಗಳಾದ **ಗೋಬಿಡಾಲ ಶುನಮೂಷಿಕಾದಿಗಳೂ** ಫಲಪಾಕಾಂತಗಳಾದ ಓಷಧಿ

(ಅರ್ಬ್ಸ್) ವರ್ಗಗಳೂ, ವನಸ್ಪತಿಗಳೆಂಬ ವೃಕ್ಷಾದಿಗಳೂ ಮುಂತಾದವುಗಳಲ್ಲಿ ವಿಚಾರಮಾಡಿ ನೋಡಿದರೆ ಬ್ರಹ್ಮಚರ್ಯವ್ರತದ ಮಹತ್ವವು ಬಹು ಬೇಗ ಮನಸ್ಸಿಗೆ ಹತ್ತುವದು; ಓಷಧಿ ವನಸ್ಪತಿಗಳಲ್ಲಿ ಅವು ತಮ್ಮ ತಮ್ಮ ಫಲವನ್ನು ಹಿಡಿಯುವದಕ್ಕೆ ಉಪಕ್ರಮಿಸುವ ಕಾಲದವರಿಗೂ ಬ್ರಹ್ಮಚರ್ಯನಿಯಮವೆಂದರಿಯಬೇಕು. ಗೋಬಿಡಾಲಾದಿಗಳಲ್ಲಿ ಅವುಗಳ ಸಂತಾನೋತ್ಪಾದಕ ಶಕ್ತಿಸ್ಫುರಣೆಗೆ ಬರುವ, ಅಂದರೆ ತಮ್ಮ ಸ್ವಕೀಯ ಜಾತೀಯಗಳಲ್ಲಿ ಕ್ರೀಡಿಸುವ ಕಾಲದವರಿಗೆ ಬ್ರಹ್ಮಚರ್ಯವೇ ಆಗಿದೆ. ಈಗ ವಿಚಾರಮಾಡಿರಿ:—ಪರಮೇಶ್ವರನು ಜೀವರಾಶಿಗಳಲ್ಲಿ ನಿಯಮಿಸಿರುವ ಪದ್ಧತಿಯೊಂದು ಪ್ರತ್ಯಕ್ಷವಾಗಿದೆ. ಯಾವ ಯಾವ ಜಾತಿಯ ಜಂತುಗಳು ತಮಗೆ ದತ್ತವಾಗಿರುವ ಅವಯವ ಸೌಷ್ಟವಾದಿಗಳಮೇಲೆ ಎಷ್ಟು ಕಾಲ ಬದುಕಬಹುದಾಗಿದೆಯೋ ಅವುಗಳ ಬ್ರಹ್ಮಚರ್ಯವ್ರತವೂ ಅವುಗಳ ಆಯುಃಪರಿಮಿತಿಯ ಅನುಪಾತದಿಂದ ವ್ಯಕ್ತವಾಗತಕ್ಕದ್ದಾಗಿ ಕಂಡುಬರುವದು; ಹೇಗೆಂದರೆ ದೃಷ್ಟಾಂತಕ್ಕಾಗಿ—೬ ತಿಂಗಳುಮಾತ್ರ ಬದುಕತಕ್ಕ ಒಂದು ಓಷಧಿಯು ೨-೨॥ ತಿಂಗಳುಗಳವರಿಗೆ ಬ್ರಹ್ಮಚರ್ಯದಲ್ಲಿದ್ದು, ಅನಂತರವೇ ಹುವ್ವು ಹೀಚು ಕಾಯಿಗಳನ್ನು ಫಲಿಸತೊಡಗಿ, ೬ನೇ ತಿಂಗಳಲ್ಲಿ ಹಣ್ಣಾಗಿ ಒಣಗಿಬಿಡುತ್ತದೆ. ಹಾಗೆಯೇ ೧೦೦-೧೨೦ ವರ್ಷ ಕಾಲ ಬದುಕತಕ್ಕ ತೆಂಗಿನಮರವು ೮-೧೦ ವರ್ಷಗಳವರಿಗೆ ಏನೊಂದು ಫಲವನ್ನೂ ಹಿಡಿಯದೆ ಬ್ರಹ್ಮಚರ್ಯದಲ್ಲಿದ್ದು, ಅನಂತರ ತನ್ನ ಫಲಕಾಲದಲ್ಲಿ ಚೆನ್ನಾಗಿ ಫಲಿಸುತ್ತಾ ನೂರಾರು ವರ್ಷ ಬದುಕುತ್ತದೆ. ಗೋಜಾತಿಯು ೪ನೇ ವರ್ಷದಮೇಲೆ ಗರ್ಭಾಧಾನವನ್ನು ಹೊಂದಿ, ಹತ್ತಿಪ್ಪತ್ತು ವರ್ಷ ಬದುಕುವದನ್ನೂ, ಅಂತಹ ಮೂರು ವರುಷದೊಳಗಾಗಿ ೪೦ ಸಲ ಮರೀ ಹಾಕುವ ಕೀಟವು ಅಲ್ಪವಯಸ್ಸಿನಲ್ಲಿಯೇ ಸಾಯುವದನ್ನೂ ಎಲ್ಲರೂ ನೋಡುತ್ತಲಿದ್ದೇವೆ. ಇದರಿಂದ ಸಿದ್ಧವಾದದ್ದೇನಂದರೆ:— ಬ್ರಹ್ಮಚರ್ಯವು ಆಯಾಯ ದೇಹದ ಫಲೋದಯ ಕಾಲದಲ್ಲಿ ದೃಢವಾಗಿರಲು ಅನುಕೂಲಿಸುವಂತೆ ಅದರ ಪೂರ್ವಭಾವಿಯಾಗಿಯೇ ಯಾವದೊಂದಾತಂಕವಿಲ್ಲದೆ ಇದ್ದು, ಸಾರಭಾಗಗಳಾದ ಪ್ರಜೋತ್ಪಾದಕೇಂದ್ರಿಯಗಳನ್ನು ವರ್ಧಿಷ್ಣುಗಳನ್ನಾಗಿಡಲು ಸಾಧಕವಾದದ್ದೆಂತಲೇ ನಿರ್ಧರವಾಯಿತು. ಇದರಿಂದ ಮನುಷ್ಯರಾದ ನಮಗೆ ಬಾಲ್ಯ, ಯೌವನ, ವಾರ್ಧಿಕಗಳೆಂಬ ಅವಸ್ಥಾತ್ರಯಗಳು ಕ್ರಮವಾಗಿ ತತ್ತದವಸ್ಥಾ ಧರ್ಮಗಳನ್ನು ಆಚರಿಸುತ್ತಾ ಇರುವವರಿಗೆ ಒಂದರಹಿಂದೆ ಒಂದು ಕಾಲಾನುಗುಣವಾಗಿ ಬರುತ್ತಾ ಇರುವವು. ಹಾಗೆ ಕ್ರಮವರಿತು ತತ್ತದವಸ್ಥಾ ಧರ್ಮಗಳನ್ನಾಚರಿಸದೆ ಇರತಕ್ಕ ವಿಷಮಾಚಾರವುಳ್ಳವರು ಬಾಲ್ಯದಲ್ಲಿಯೇ ಯೌವನಭಾವವನ್ನಾಶ್ರೈಸಿ, ವೀರ್ಯಪಾಟವವಿಲ್ಲದಿದ್ದರೂ ಅತ್ಯಂತಾಲ್ಪ ವಯಸ್ಸಿನಲ್ಲಿಯೇ ರತಿಕ್ರೀಡೆಗೆ ಯತ್ನಿಸುತ್ತಾ ತಮ್ಮ ಕಾಮೇಂದ್ರಿಯ

ವನ್ನು ನಿರರ್ಥಕಪಡಿಸಿಕೊಳ್ಳುವವರಿಗೆ ಯೌವನದಲ್ಲಿಯೇ ವಾರ್ಧಿಕಭಾವವು ಕರಿಯದಿದ್ದರೂ ಬಂದೇಬರತ್ತದೆಂಬದು ಸಿದ್ಧವಾದದ್ದು !!

" ಏಕಃ ಶಯೀತ ಸರ್ವತ್ರ ನ ರೇತಃ ಸ್ಕಂದಯೇತ್ಕಚಿತ್|| ಕಾಮಾ
ದ್ಧಿ ಸ್ಕಂಧಯರ್ಗ ರೇತೋ ಹಿನಸ್ತಿ ವ್ರತಮಾತ್ಮನಃ || "

(ಮನುಸ್ಮೃತಿ)

" ಬ್ರಹ್ಮಚಾರಿಯು ಶುದ್ಧಾಂತಃಕರಣದಿಂದ ಒಬ್ಬಂಟಿಗನಾಗಿಯೇ ಮಲಗುತ್ತಾ ಇರಬೇಕು. ಯಾವಾಗ್ಯೂ, ಯಾವ ಕಾರಣದಿಂದಲೂ ವೀರ್ಯಪಾತವಾಗುವಂತೆ ಸ್ತ್ರೀಚಿಂತೆ, ಕುತ್ಸಿತ ವ್ಯಾಪಾರ ಮುಂತಾದವುಗಳನ್ನು ಮಾಡಬಾರದು. ಅಕಸ್ಮಾತ್ ಏನಾದರೊಂದು ಕಾರಣದಿಂದ ವೀರ್ಯಪಾತವಾದದ್ದಾದರೆ ಆ ಬ್ರಹ್ಮಚಾರಿಯ ಬ್ರಹ್ಮಚರ್ಯವ್ರತವು ಖಂಡಿತವಾಗಿಯೂ ನಾಶವಾಯಿತೆಂದೇ ತಿಳಿಯಬೇಕು. "

" ಅಂಗ ಸಂಯೋಗ ಹೀನಂ ಯಚ್ಛಬ್ದ ಸ್ಪರ್ಶ ವಿವರ್ಜಿತಮ್ ||
ಶ್ರೋತ್ರೇಣಶ್ರವಣಂ ಚೈವ ಚಕ್ಷುಷಾಂ ಚೈವ ದರ್ಶನಮ್ ||
ವಾಕ್ಯಂ ಭಾಷಾಪ್ರವೃತ್ತಂ ಯತ್ತನ್ಮನಃ ಪರಿವರ್ಜಿತಮ್ ||
ಬುಧ್ಯಾಚಾಧ್ಯವಸೀಯೀತ ಬ್ರಹ್ಮಚರ್ಯಮಕಲ್ಮಷಮ್ || "

(ಮಹಾಭಾರತ)

" ಇಂದ್ರಿಯವನ್ನು ಅನ್ಯರ ಇಂದ್ರಿಯಗಳೊಂದಿಗೆ ಸ್ಪರ್ಶಮಾಡುವದು ಹಾಗಿರಲಿ; ವಿನಾನಿಮಿತ್ತ ಸ್ವಹಸ್ತಾದಿಗಳಿಂದಲೂ ಖಂಡಿತವಾಗಿ ಸ್ಪರ್ಶಮಾಡಬಾರದು. ವಿಷಯಸಂಬಂಧಿಯಾದ ಕೆಟ್ಟವಾಕ್ಯಗಳನ್ನು ಕಿವಿಯಿಂದ ಶ್ರವಣ ಮಾಡಬಾರದು. ಬ್ರಹ್ಮಚರ್ಯವ್ರತಘಾತಿನಿಯರಾದ ಸ್ತ್ರೀಯರುಗಳ ಅಂಗಾಂಗಗಳನ್ನು ವೀಕ್ಷಿಸಬಾರದು; ತನ್ನ ಬಾಯಿಯಿಂದ ವಿಷಯಸಂಬಂಧ ವಾಕ್ಕುಗಳನ್ನೂ, ಅನೃತವನ್ನೂ, ನಿರರ್ಥಕ ವಾಕ್ಯಗಳನ್ನೂ ಉಚ್ಚರಿಸಬಾರದು; ಮನಸ್ಸಿನಿಂದ ದುರ್ವಿಷಯಗಳ ಚಿಂತೆಯನ್ನೂ, ಹಿಂಸಾಕರ್ಮ, ಪರರ ರತಿಕ್ರೀಡೆಯ ಸಂಗತಿ ಮುಂತಾದವನ್ನು ಯೋಚಿಸಬಾರದು. ತನ್ನ ಬುದ್ಧಿಯಿಂದ ವಿಚಾರ ಮಾಡಿ ನಿಶ್ಚೈಸಿದ ಕಾರ್ಯಗಳನ್ನೇ ಮಾಡುವಿಕೆ ಇವೇ ಮೊದಲಾದ ಸದ್ವ್ರತೆವನ್ನಾಚರಿಸಬೇಕು. "

"ಇಂದ್ರಿಯಾಣಾಂ ಪ್ರಸಂಗೇನ ದೋಷಮೃಚ್ಛತ್ಯಸಂಶಯಮ್||
ಸನ್ನಿಯಮ್ಯ ತು ತಾನ್ಯೇವ ತತಃ ಸಿದ್ಧಿಂ ನಿಯಚ್ಛತಿ || " (ಮನು)

" ಇಂದ್ರಿಯಗಳನ್ನು ಅವುಗಳ ವಿಷಯಗಳೆಂದರೆ ಅವು ಸುಖಿಸುವ ಕೃತ್ಯಗಳಲ್ಲಿ ತಗಲಿಸುವದರಿಂದ ನಿಸ್ಸಂಶಯವಾಗಿ ದೋಷವುಂಟಾಗುವದು. ಹಾಗೆ ಮಾಡದೆ ದೃಢಬುದ್ಧಿಯಿಂದ ಆ ವಿಷಯಗಳ ವಾಸನೆಗಳಕಡೆಗೆ ಇಂದ್ರಿ

ಯುಗಳನ್ನು ಬಿಡದೆ ತಡಿಯುತ್ತಾ ಬರುವದರಿಂದ ಸಿದ್ಧಿಯೂ, ಮೋಕ್ಷಾದಿ ಪುರುಷಾರ್ಥಗಳೂ ಲಭಿಸುವವು. ಎಲ್ಲಾ ಇಂದ್ರಿಯುಗಳಲ್ಲಿಯೂ ಮನಸ್ಸೇ ಮುಖ್ಯವಾದ್ದರಿಂದ ಅದನ್ನು ತಡಿಯುವದರಿಂದಲೇ ಸಕಲೇಂದ್ರಿಯುಗಳೂ ಸ್ವಾಧೀನಕ್ಕೆ ಬರುವವು. ''

" ಏಕಾದಶಂ ಮನೋ ಜ್ಞೇಯಂ ಸ್ವಗುಣೇನೋ ಭಯಾತ್ಮಕ
ಮ್ ‖ ಯಸ್ಮಿನ್ ಜಿತೇ ಜಿತಾವೇತೌ ಭವತಃ ಪಂಚಕೌಗುಣೌ ‖ "

(ಮನು)

" ೫ ಬುದ್ಧೀಂದ್ರಿಯುಗಳು, ೫ ಕರ್ಮೇಂದ್ರಿಯುಗಳು, ಇವುಗಳಗಿಂತ ಅತಿರಿಕ್ತವಾದದ್ದು ೧೧ನೇ ಮನಸ್ಸು; ಇದು ಅಂತರಿಂದ್ರಿಯವಾಗಿರುವದರಿಂದ ಸಂಕಲ್ಪರೂಪಿನಿಂದ ಆ ಬುದ್ಧೀಂದ್ರಿಯ ಕರ್ಮೇಂದ್ರಿಯುಗಳನ್ನೂ ಪ್ರವರ್ತಿಸಿ ಪ್ರೇರಿಸುತ್ತಾ ಇರುವದು. ಇದಕ್ಕಾಗಿ ಅಭ್ಯಾಸಬಲದಿಂದ ಈ ಮನಸ್ಸನ್ನು ನಿಗ್ರಹಿಸುತ್ತಾ ಬರುವದರಿಂದ (ಇದನ್ನು ಜಯಿಸುವದರಿಂದ) ಎಲ್ಲಾ ಇಂದ್ರಿಯುಗಳನ್ನೂ ಜಯಿಸದಂತಾಗುತ್ತದೆ. ''

ಈ ಮೇಲೆ ಹೇಳಿದ ಬ್ರಹ್ಮಚರ್ಯವ್ರತವು ಪುರುಷರಿಗೆ ಮಾತ್ರವೇ ಅಲ್ಲ; ಸ್ತ್ರೀಯರಿಗೂ ಅವರ ಇಂದ್ರಿಯುಗಳು ದೃಢವಾಗಲು ಅನುಷ್ಠೇಯುಗಳೇ ಆಗಿವೆ.

" ಬ್ರಹ್ಮಚರ್ಯೇಣ ಕನ್ಯಾ ಯುವಾನಂ ವಿಂದತೇ ಪತಿಮ್ ‖ "

(ಅಥರ್ವವೇದ)

" ಬ್ರಹ್ಮಚರ್ಯವ್ರತದ ಸುನಿಯಮದಲ್ಲಿದ್ದು ಇಂದ್ರಿಯಪಾಟವವನ್ನು ಪಡದನಂತರವೇ ಕನ್ಯೆಯು ಯೋಗ್ಯನಾದ ಪತಿಯನ್ನು ಪಡಿಯತಕ್ಕದ್ದು. ''

" ಸಮಾನಂ ಬ್ರಹ್ಮಚರ್ಯಮ್ ‖ " (ಆಶ್ವ। ಶ್ರೌತಸೂತ್ರ)

" ಸ್ತ್ರೀಪುರುಷರಿಬ್ಬರಿಗೂ ಬ್ರಹ್ಮಚರ್ಯವ್ರತದ ಧರ್ಮಾಚರಣೆಯು ಸಮಾನವಾದದ್ದು. ''

**ಬ್ರಹ್ಮಚರ್ಯವು ಆರ್ಯರಿಗೆ ಮುಖ್ಯವು:—** ಬ್ರಹ್ಮಚರ್ಯವ್ರತವು ಇಂದ್ರಿಯ ದೃಢೀಕರಣಕ್ಕೂ, ಆಯುರ್ವೃದ್ಧಿಗೂ ಸಾಧಕವಾದದ್ದು. ಇದರಿಂದಲೇ ಮೇಲೆ ಹೇಳಿದ ಆಯುಸ್ತೇಜೋಬಲ ವೀರ್ಯ ಸೌಂದರ್ಯಾದಿಗಳು ಲಭಿಸುವವೆಂಬದನ್ನು ಚೆನ್ನಾಗಿ ತಿಳದಿದ್ದ ನಮ್ಮ ಆದಿಕಾಲದ ಪೂರ್ವಜರಾದ ಮಹರ್ಷಿಗಳೂ, ರಾಜಾಧಿರಾಜರೂ ಈ ಸದ್ವ್ರತವನ್ನು ಕ್ರಮವಾಗಿ ಆಚರಿಸಿ, ಸಕಲ ದಿಗ್ದೇಶಗಳಲ್ಲಿಯೂ ತಮ್ಮ ಅತುಲಿತ ಪರಾಕ್ರಮವೂ, ಕೀರ್ತಿಯೂ ವ್ಯಾಪಿಸುವಂತೆ ಮಾಡಿದ್ದರಿಂದಲೇ ಅನೇಕ ದೇಶಾಂತರಗಳ ಭೂಪಾಲರೆಲ್ಲರೂ

ಆರ್ಯಾವರ್ತದ ಭೂಪಾಲಲಲಾಮರ ಪಾದಾಕ್ರಾಂತರಾಗುವಂತೆ ಮಾಡಿದ್ದರೆಂಬದು ಈ ಬ್ರಹ್ಮಚರ್ಯವ್ರತದ ಮಹಿಮೆಯಾಗಿತ್ತು.

"ಬ್ರಹ್ಮಚರ್ಯಂ ಪರೋ ಧರ್ಮಃ ಸ ಚಾಪಿ ನಿಯತಸ್ತ್ವಯಿ ॥ ಯಸ್ಮಾತ್ತಸ್ಮಾದಹಂ ಪಾರ್ಥ ರಣೇಽಸ್ಮಿನ್ ವಿಜಿತಸ್ತ್ವಯಾ ॥"

(ಮಹಾಭಾರತ, ಆದಿಪರ್ವ)

ಅರ್ಜುನನೊಂದಿಗೆ ಯುದ್ಧಮಾಡಿ ಸೋತ ಗಂಧರ್ವನು ಅರ್ಜುನನನ್ನು ಕುರಿತು:—"ಎಲೈ ಪಾರ್ಥನೇ! ಬ್ರಹ್ಮಚರ್ಯವು ಪರಮಧರ್ಮವಾಗಿದೆ; ಈ ವ್ರತದ ಪ್ರಭಾವದಿಂದಲೇ ನೀನು ನನ್ನನ್ನು ಜೈಸಿದ್ದೀಯೆ" ಎಂದು ಹೇಳಿದ್ದಾನೆ.

ಪ್ರಕೃತಕ್ಕೆ ನಮ್ಮ ದೇಶವನ್ನು ಬಿಟ್ಟು ಇತರ ದೇಶೀಯರನ್ನು ವಿಚಾರಪೂರ್ವಕವಾಗಿ ಅವಲೋಕಿಸಿದರೆ—ಯುರೋಪಿಯನರು, ಅಮೇರಿಕನರು ಮುಂತಾದ ಪಾಶ್ಚಾತ್ಯರು ಬ್ರಹ್ಮಚರ್ಯ ನಿಷೇವಣೆಯಿಂದ ದಿವ್ಯವಾದ ಪ್ರಜ್ಞಾಬಲಗಳನ್ನು ಪಡೆದಿರುತ್ತಾರೆಂಬದಕ್ಕೆ ಎಷ್ಟೋ ನಿದರ್ಶನಗಳಿವೆ. ಈಗ ನಡೆದ ಜರ್ಮನ್ ಮಹಾಯುದ್ಧದಲ್ಲಿ ರಣರಂಗವನ್ನಲಂಕರಿಸುತ್ತಿದ್ದ ಯೋಧರಲ್ಲಿ ಎಷ್ಟೋ ಜನರೂ, ನಮ್ಮ ದೇಶದ ಗೌರ್ನರುಗಳಾಗಿಯೂ, ವೈಸ್ರಾಯಿಗಳಾಗಿಯೂ ಬರುತ್ತಿರುವವರಲ್ಲಿ ಅನೇಕರೂ ೬೦ ವರ್ಷ ಪ್ರಾಯ ಮೀರಿದವರೇ ಇರುತ್ತಾರೆ. ಷಷ್ಠ್ಯಬ್ದ ಪೂರ್ತಿಯಾಗುವದಕ್ಕೆ ಎಷ್ಟೋ ಮುಂಚೆಯೇ ನಮ್ಮ ದೇಶೀಯರಾದ ದೊಡ್ಡ ನೌಕರರುಗಳನ್ನು ಉದ್ಯೋಗದಿಂದ ನಿವೃತ್ತಿಪಡಿಸುತ್ತಿರುವದೂ, ಅಂತಹ ಷಷ್ಠ್ಯಬ್ದ ಪೂರ್ತಿಯಾದನಂತರ ಅವರಿಗೆ ಇನ್ನೂ ದೊಡ್ಡ ದೊಡ್ಡ ಅಧಿಕಾರದಲ್ಲಿ ನಿಯಮಿಸುವದೂ ಈ ಮೇಲಿನ ಹೇಳಿಕೆಯನ್ನು ವ್ಯಕ್ತಪಡಿಸುತ್ತಿದೆ. ಷಷ್ಠ್ಯಬ್ದ ಪೂರ್ತಿಯಾದ ನಮ್ಮ ದೇಶೀಯರ ಧೈರ್ಯ ಸ್ಥೈರ್ಯ ಪ್ರತಾಪಗಳಿಗೂ, ಈ ವಯಸ್ಸು ಕಳೆದ ಪಾಶ್ಚಾತ್ಯರ ಸ್ಥಿತಿಗೂ ಹೋಲಿಸಿ ನೋಡಿದರೆ—ವಲೀಪಲಿತಕಾಯರಾಗಿ ಉಟ್ಟ ಬಟ್ಟೆಯಮೇಲೆ ಜ್ಞಾನವಿಲ್ಲದೆ, ಪರರು ಕೈಹಿಡಕೊಂಡು ನಡಯಿಸಬೇಕಾಗಿರುವ ಇವರೆಲ್ಲಿ? ಪರಾಕ್ರಮದಿಂದ ದೇಶದೇಶಾಂತರದ ವೀರಭಟರುಗಳನ್ನು ತಮ್ಮಾಜ್ಞಾಬಲದಿಂದ ನಡಿಸುತ್ತಾ, ಗಿರಿದುರ್ಗಗಳನ್ನು ಉಲ್ಲಂಘಿಸುತ್ತಾ, ಫಿರಂಗೀ ಏಟುಗಳಿಗೂ ಹಿಮ್ಮೆಟ್ಟದೆ, ರಣಭಯಂಕರರಾಗಿ ಶತ್ರು ಮಧ್ಯದಲ್ಲಿ ವಿಜೃಂಭಿಸುತ್ತಿರುವ ಅವರೆಲ್ಲಿ? ಬಹುಕಾಲದಿಂದಲೂ ಬ್ರಹ್ಮಚರ್ಯವ್ರತವನ್ನನುಷ್ಠಿಸದೆ-ಸ್ತ್ರೀಯರೂ, ಪುರುಷರೂ ನಿಃಸತ್ವರಾಗುತ್ತಾ ಬಂದು, ಅಂತವರ ಪೀಳಿಗೆಯು ಬರಬರ ದುರ್ಬಲರಾಗುತ್ತಾ ಇರುವದರಿಂದ—ನಮ್ಮ ಬುದ್ಧಿ, ಬಲ, ಪೌರುಷ, ಪ್ರಜ್ಞಾವೈಭವ ಮುಂತಾದವೆಲ್ಲವೂ ಪುಸ್ತಕಸ್ಥರಾದ ಭೀಮ ಭೀಷ್ಮ, ಆಂಜನೇಯ ಮುಂತಾದವರಲ್ಲಿಯೇ ನಿಂತುಬಿಟ್ಟತು.

☞ ಈ ಕಾಲದಲ್ಲಿ ಪ್ರಾಯಿಕವಾಗಿ ಎಲ್ಲರೂ ನಶ್ವರವಾದ ಸುಖವೆಂಬ ಸಂಪತ್ತನ್ನು ಸಂಪಾದಿಸುವದರಲ್ಲಿ ತಮ್ಮ ಸರ್ವಶಕ್ತಿಯನ್ನೂ ವಿನಿಯೋಗಿಸುತ್ತಿದ್ದಾರೆ. ಇದರಿಂದ ಪಾರತ್ರಿಕ ಮೋಕ್ಷಸಿದ್ಧಿಯುಂಟಾಗಲಾರದು; ಇಹ ಲೋಕದಲ್ಲಿ ಸುಖದಿಂದ ಕಾಪಾಡುತ್ತಾ, ಕಡೆಗೆ ಬ್ರಹ್ಮಪ್ರಾಪ್ತಿಯನ್ನೂ ದಯಪಾಲಿಸುವಂತಹ ಶಕ್ತಿಯು ವಿದ್ಯೆಯಲ್ಲಿದೆ; ಓದುಬರಹ ಬಂದಮಾತ್ರಕ್ಕೇ ವಿದ್ಯೆಯುಂದೆನ್ನಿಸಿಕೊಳ್ಳಲಾರದು. ಅಂತಹ ಅಪಾರಶಕ್ತಿಯುಳ್ಳ ಯಾವ ವಿದ್ಯೆಯನ್ನು ನಮ್ಮ ಆದಿಕಾಲದ ಮಹರ್ಷಿಗಳು ಸಂಪಾದಿಸಿಕೊಂಡು ಅವಿತಾನಂದಭಾಗಿಗಳಾಗುತ್ತಿದ್ದರೋ ಅಂತಹ ವಿದ್ಯಾಲಾಭವನ್ನು ಸಂಪಾದಿಸುವದೇ ಶಾಸ್ತ್ರಜ್ಞರ ಮತವಾಗಿದೆ. ಅದನ್ನು ಈ ಕೆಳಗೆ ವಿವರಿಸುವೆವು.

**ವಿದ್ಯೆಯ ಪ್ರಭಾವ:—**

**" ಮಾತೇವ ರಕ್ಷತಿ ಪಿತೇವ ಹಿತೇ ನಿಯುಙ್ಕ್ತೇ ।**
**ಕಾಂತೇವ ಚಾಭಿರಮಯತ್ಯಪನೀಯ ಖೇದಮ್ ॥**
**ಕೀರ್ತಿಂ ಚ ದಿಕ್ಷು ವಿಮಲಾಂ ವಿತನೋತಿ ಲಕ್ಷ್ಮೀಂ ।**
**ಕಿಂ ಕಿಂ ನ ಸಾಧಯತಿ ಕಲ್ಪಲತೇವ ವಿದ್ಯಾ ॥ "**

" ವಿದ್ಯೆಯು ಸರ್ವದಾ ತಾಯಿಯಂತೆ ರಕ್ಷಿಸುತ್ತದೆ, ತಂದೆಯಂತೆ ಹಿತಕರ ಕಾರ್ಯಗಳಲ್ಲಿ ನಿಯೋಜಿಸುತ್ತದೆ, ಪತಿವ್ರತೆಯಾದ ಪತ್ನಿಯಂತೆ ಸರ್ವಪ್ರಕಾರದಿಂದಲೂ ಆನಂದವನ್ನಿತ್ತು ದುಃಖಗಳಿಂದ ಕಾಪಾಡುವದು, ಜಗತ್ತಿನಲ್ಲಿ ಕೀರ್ತಿಯನ್ನು ಹಬ್ಬಿಸುವದು, ಯಥೇಷ್ಟ ಧನವನ್ನು ಕೊಡುವದು, ಹೀಗೆ ವಿದ್ಯೆಯು ಕಲ್ಪಲತೆಯಂತೆ ಸಕಲೇಷ್ಟಸಾಧಕವಾದ್ದರಿಂದ ಅದರಿಂದ ಏನುತಾನೆ ದೊರಿಯಲಾರದು ? ಹೀಗೆ ಸಾಂಸಾರಿಕ ಸರ್ವಭೋಗಗಳೂ ವಿದ್ಯೆಯಿಂದ ಲಭಿಸುತ್ತವೆಂಬದು ಸಕಲರಿಗೂ ಗೊತ್ತೇ ಇದೆ. ಕೇನೋಪನಿಷತ್ತಿನಲ್ಲಿ:—

**" ವಿದ್ಯಯಾಽಮೃತಮಶ್ನುತೇ ॥ "**

" ವಿದ್ಯೆಯಿಂದಲೇ ಮೋಕ್ಷ ಪ್ರಾಪ್ತಿಯಾಗುವದು " ಎಂದಿದೆ.

ಇದೇ ವಿಷಯವನ್ನು ಮನುಸ್ಮೃತಿಯಲ್ಲಿಯೂ:—

**" ತಪೋ ವಿದ್ಯಾ ಚ ವಿಪ್ರಸ್ಯ ನಿಃಶ್ರೇಯಸಕರಂ ಪರಮ್ ॥ ತಪಸಾ ಕಿಲ್ಬಿಷಂ ಹನ್ತಿ, ವಿದ್ಯಯಾಽಮೃತಮಶ್ನುತೇ ॥ "**

" ತಪಸ್ಸು ಮತ್ತು ವಿದ್ಯಾ ಇವೆರಡೇ ಮನುಷ್ಯರಿಗೆ ಮೋಕ್ಷಕ್ಕೆ ದಾರಿಗಳು; ತಪಸ್ಸಿನಿಂದ ಸರ್ವಪಾಪ ನಿವೃತ್ತಿಯಾಗುವದು; ವಿದ್ಯೆಯಿಂದ ಪರಮಪದ ಪ್ರಾಪ್ತಿಯಾಗುವದು. "

**" ವಿದ್ಯಯಾ ತದಾರೋಹನ್ತಿ ಯತ್ರ ಕಾಮಾಃ ಪರಾಗತಾಃ ||
ನ ತತ್ರ ದಕ್ಷಿಣಾಯಾನ್ತಿ ನಾಽವಿದ್ವಾಗ್ಂಸಸ್ತಪಸ್ವಿನಃ || "**

**(ಶತಪಥಬ್ರಾಹ್ಮಣ)**

" ವಿದ್ಯೆಯ ಪ್ರಭಾವದಿಂದ ಮನುಷ್ಯನು (ಸರ್ವಸುಖಗಳೂ ಅನಂತವಾಗಿರುವ) ಬ್ರಹ್ಮಸ್ಥಾನವನ್ನು ಪಡೆಯುತ್ತಾನೆ. ವಿದ್ಯಾಹೀನರು ತಪಸ್ಸು ಮಾಡಿ ಯಾವ ಪದವನ್ನು ಹೊಂದಲಾರರೋ ಅದೂ ಸಹ ವಿದ್ಯೆಯ ಪ್ರಭಾವದಿಂದ ದೊರೆಯುವದು. "

**" ಋಷಿಭಿರ್ಬ್ರಾಹ್ಮಣೈಶ್ಚೈವಗೃಹಸ್ಥೈರೇವ ಸೇವಿತಾ || ವಿದ್ಯಾ
ತಪೋವಿವೃದ್ಧ್ಯರ್ಥಂ ಶರೀರಸ್ಯ ಚ ಶುದ್ಧಯೇ || "**

" ತಪಸ್ಸಿನ ವೃದ್ಧಿ ಮತ್ತು ಶರೀರದ ಶುದ್ಧಿಗಾಗಿಯೇ ಪೂರ್ವಕಾಲದಲ್ಲಿ ಋಷಿಗಳೂ, ಬ್ರಾಹ್ಮಣರೂ, ಅನ್ಯರೂ ಸಹ ವಿದ್ಯೆಯನ್ನಭ್ಯಸಿಸಿದರು. "

**" ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಭವತಿ ಪಂಚಮೀ || ಏ
ತಾನಿ ಮಾನ್ಯಸ್ಥಾನಾನಿ ಗರೀಯೋ ಯದ್ಯದುತ್ತರಮ್|| "** **(ಮನು)**

" ಮನುಷ್ಯರಲ್ಲಿ:—ಧನ, ಬಂಧುವರ್ಗಸಂಪತ್ತು, ವಯೋಧಿಕತಾ, ಕರ್ಮ ಮತ್ತು ವಿದ್ಯಾ ಇವು ಐದೂ ಮಾನ್ಯತೆಗೆ ಕಾರಣಗಳಾಗಿರುವವು. ಇವುಗಳಲ್ಲಿ ಮೊದಲಿನಿಂದ ಒಂದೊಂದು ಗುಣಾಧಿಕ್ಯವನ್ನು ಪಡದಿರುವದು. "

ಆದ್ದರಿಂದ ವಿದ್ಯೆಯೇ ಸರ್ವೋತ್ತಮವಾದದೆಂದು ತಿಳಿಯಬೇಕು.

**" ಉತ್ತಮಂ ಹಿ ಧನಂ ವಿದ್ಯಾ ದೀಯಮಾನಂ ನ ಹೀಯತೇ ||
ರಾಜದಾಯಾದ ಚೌರಾದ್ಯೈಃ ಗೃಹೀತುಂ ನಾಽಪಿ ಶಕ್ಯತೇ || "**

" ವಿದ್ಯೆಯು ಎಂತಹ ಉತ್ತಮ ಧನವೆಂದರೆ—ಇದನ್ನು ಎಷ್ಟು ವೆಚ್ಚ ಮಾಡಿದರೂ ಸವಿಯುವದೇ ಇಲ್ಲ. (ಮತ್ತೂಮತ್ತೂ ವೃದ್ಧಿಯಾಗುತ್ತಾ ಬರುವದು.) ಈ ಉತ್ತಮ ಧನವನ್ನು ರಾಜ, ದಾಯಾದ, ಚೋರರ್ಯಾರೂ ಅಪಹರಿಸಲಾರರು. "

**" ಪುರುಷಂ ಸಾಹಸಕ್ಲೇಶಾದ್ಯಾರ್ಜನಾಯಾಸಕಾರಿಣಮ್ || ಲ
ಕ್ಷ್ಮೀರ್ವಿಮುಂಚತಿ ಕ್ವಾಪಿ ವಿದ್ಯಾಭ್ಯಸ್ತಾ ನ ಮುಂಚತಿ || "**

" ಬಹು ದುಃಖದಿಂದ ಉತ್ಪನ್ನ ಮಾಡಿಕ್ಕೊಂಡಿರುವ ಸಂಪತ್ತು ಹೇಗಾದರೂ ನಾಶವಾಗುವ ಸಂಭವವಿದೆ; ತಥಾಪಿ ಒಳ್ಳೇ ಪ್ರಯತ್ನದಿಂದ ಅಭ್ಯಾಸಮಾಡಿ ಕಲಿತಿರುವ ವಿದ್ಯೆಯು ಎಂದೆಂದಿಗೂ ನಾಶವಾಗಲರಿಯದು. "

**" ಸರ್ವದ್ರವ್ಯೇಷು ವಿದ್ಯೈವ ದ್ರವ್ಯಮಾಹುರನುತ್ತಮಮ್ || ಅ
ಹಾರ್ಯತ್ವಾದನರ್ಘತ್ವಾ ದಕ್ಷಯತ್ವಾಚ್ಚ ಸರ್ವದಾ || "**

"ಎಲ್ಲಾ ಸಂಪತ್ತಿನಲ್ಲಿಯೂ ವಿದ್ಯಾಸಂಪತ್ತೇ ಉತ್ತಮವಾದದ್ದು; ಯಾಕೆಂದರೆ—ಇದನ್ನು ಚೋರನು ಕದಿಯಲಾರನು, ಇದಕ್ಕೆ ಬೆಲೆಯೇ ಇಲ್ಲ; ಮತ್ತು ಇದು ಎಂದೆಂದಿಗೂ ನಾಶವಾಗಲಾರದು."

**"ಅಪೂರ್ವ ಶಬ್ದಕೋಶೋऽಯಂ ವಿದ್ಯತೇ ತವ ಭಾರತಿ॥ ವ್ಯ
ಯತೋ ವೃದ್ಧಿಮಾಪ್ನೋತಿ ಕ್ಷಯಮಾಪ್ನೋತಿ ಸಂವೃತಃ ॥"**

"ಹೇ ವಾಗ್ದೇವಿಯೆ? ಈ ನಿನ್ನ ಶಬ್ದ (ವಿದ್ಯಾ) ಕೋಶ (ಖಜಾನೆ) ಯು ಅಪೂರ್ವವಾದದ್ದು! ಇದು ವೆಚ್ಚವಾದಷ್ಟು ವೃದ್ಧಿಯಾಗುತ್ತಿರುವದು; ಕೂಡಿಸಿಟ್ಟಷ್ಟು (ಅಂದರೆ ಪರರಿಗೆ ಪ್ರವಚನವೆಂಬ ಉಪದೇಶವಾಡದೆ ಇದ್ದರೆ) ನಾಶವಾಗುವದು."

**ಈ ಕಾಲದ ವಿದ್ಯಾಕ್ಷೋಭ:—** ಯಾವ ಪೂರ್ವಸಮಯದಲ್ಲಿ ನಮ್ಮ ಆರ್ಯ ಕ್ಷತ್ರಿಯಾಧಿಷ್ಠಿತವಾಗಿದ್ದ ಕಾಲದಲ್ಲಿ ನಮ್ಮ ಹಿರಿಯರು ವಿದ್ಯಾಪಾಂಡಿತ್ಯವನ್ನು ಸಂಪಾದಿಸಿಕೊಂಡು ಕಾವ್ಯ, ಶಾಸ್ತ್ರ, ದರ್ಶನಾದಿ ಗ್ರಂಥಗಳನ್ನೂ ಲೋಕೋಪಕಾರಾರ್ಥವಾಗಿ ರಚಿಸಿದರು. ಆಗ ಈ ದೇಶದಲ್ಲಿ ಬಲ, ಬುದ್ಧಿ, ವೀರ್ಯ, ವೈಭವಗಳು ತುಂಬಿ ತುಳುಕುತ್ತಾ ಇದ್ದವು. ಮಹಾಭಾರತ ಯುದ್ಧವಾಗಲು ೫೬ ದೇಶಗಳ ರಾಜರೂ ಅದರಲ್ಲಿ ಹತರಾಗಲು, ದೇಶಗಳಲ್ಲಿ ಪ್ರಭುತ್ವಶಕ್ತಿಯು ಮಣ್ಣುಪಾಲಾಯಿತು. ಅನೂಚಾನವಾದ ವಿದ್ಯೆಯು ಪಠನ ಪಾಠನ ಪ್ರಣಾಳಿಯು ರಾಜಾಶ್ರಯವಿಲ್ಲದೆ ಹಾಳಾಗುತ್ತಾ ಬಂತು. ಈ ದುಃಸ್ಥಿತಿಯು ಇನ್ನೂ ತೊಲಗದೆ-ಬರಬರ ಜನರು ಇನ್ನೂ ಮೂಢರಾಗುತ್ತಾ ಬರುತ್ತಿದ್ದಾರೆ. **"ಯಾವ ಯಾವ ದೇಶದಲ್ಲಿ ಯಾವ ಯಾವ ಸಮಯದಲ್ಲಿ ವಿದ್ಯಾವೃದ್ಧಿಯಾಗುತ್ತಾ ಬರುವದೋ ಆಗಲೇ ಆ ದೇಶದಲ್ಲಿ ಸರ್ವಸೌಖ್ಯವೂ ಉಂಟಾಗುವದು; ವಿದ್ಯಾರಾಹಿತ್ಯ ಉಂಟಾದಕಡೆ ದೇಶವೇ ಅವನತಿಯನ್ನು ಪಡಿಯುವದು."** ಎಂಬದೇ ವಿದ್ವಾಂಸರ ಸಿದ್ಧಾಂತವು. ಇದನ್ನನುಸರಿಸಿಯೇ ಈ ಕಾಲದಲ್ಲಿ ಅಮೇರಿಕಾ, ಯೂರೋಪ್, ಜರ್ಪಾನ್ ಮುಂತಾದ ರಾಜ್ಯಗಳು ತಲೆಯತ್ತಿರುವವು. ಇದಕ್ಕೆ ಅಲ್ಲಿನ ಯಥಾರ್ಥವಾದ ವಿದ್ವಾಂಸರುಗಳ ಸಮ್ಮಾನವೂ, ವಿದ್ಯಾಪ್ರಚಾರವೂ ಕಾರಣವಾಗಿದೆ. ಪೂರ್ವಕಾಲದಲ್ಲಿ ಭರತಖಂಡವೂ, ಗ್ರೀಕ್ ಮುಂತಾದ ರಾಜ್ಯಗಳೂ ವಿದ್ಯಾಪ್ರಾಚುರ್ಯದಿಂದ ತಲೆಯತ್ತಿದ್ದವು; ಈಗಲೂ ನಾವು ನಮ್ಮ ಹಿರಿಯರಂತೆ ವಿದ್ಯಾಸಂಪತ್ತಿನಲ್ಲಿ ನಿಪುಣರಾದಹೊರ್ತು ನಮ್ಮ ದೇಶವು ಇನ್ನೂ ಅವನತಿಯ ದಾರಿಯಿಂದ ಮೇಲಕ್ಕೇಳಲಾರದು.

**"ಧರ್ಮಾಧರ್ಮೌ ನ ಜಾನಾತಿ ಲೋಕೋऽಯಂ ವಿದ್ಯಯಾ ವಿನಾ॥
ತಸ್ಮಾತ್ಸದೈವ ಧರ್ಮಾತ್ಮಾ ವಿದ್ಯಾದಾನ ರತೋ ಭವೇತ್ ॥"**

"ವಿದ್ಯೆಯುವಿನಾ ಮನುಷ್ಯರಿಗೆ ಧರ್ಮಾಧರ್ಮಗಳ ಯಥಾರ್ಥ ಜ್ಞಾನವೇ ಆಗುವದಿಲ್ಲ. ಅದಕ್ಕಾಗಿ ಲೋಕದಲ್ಲಿ ಧರ್ಮಾತ್ಮರಾದವರು ವಿದ್ಯಾಭ್ಯಾಸವನ್ನು ಮಾಡಿಸುವದಕ್ಕಾಗಿ ಯತ್ನಿಸುತ್ತಾ, ತದ್ವಾರಾ ವಿದ್ಯೆಯು ಉನ್ನತಿಯನ್ನುಂಟು ಮಾಡಬೇಕು."

**"ವಿದ್ಯಾಧನಂ ಶ್ರೇಷ್ಠತರಂ ತನ್ಮೂಲಮಿತರದ್ಧನಮ್ ॥ ದಾನೇ ನ ವರ್ಧತೇ ನಿತ್ಯಂ ನ ಭಾರಾಯ ನ ನೀಯತೇ ॥"**

"ವಿದ್ಯಾರೂಪ ಧನವೇ ಎಲ್ಲಾ ಧನದಲ್ಲಿ ಶ್ರೇಷ್ಠವಾದದ್ದು, ಇದರ ಮೂಲಕವಾಗಿಯೇ ಬೇರೇ ಧನವು ದೊರಿಯುವದು. ಇದು ದಾನಮಾಡಿದಷ್ಟೂ ವೃದ್ಧಿಯಾಗುತ್ತದೆ. ಮತ್ತು ಈ ವಿದ್ಯೆಯು ಮನುಷ್ಯನಿಗೆ ಭಾರರೂಪವಾಗಿಯೂ ಇರುವದಿಲ್ಲ; ಮತ್ತು ಅದನ್ನು ಹೋದಲ್ಲಿಗೆ ಹೊರತಕ್ಕ ಅವಶ್ಯವೂ ಇಲ್ಲ !!"

**"ಕಾಮಧೇನು ಗುಣಾ ವಿದ್ಯಾ, ಹ್ಯಕಾಲೇ ಫಲದಾಯಿನೀ ॥ ಪ್ರವಾಸೇ ಮಾತೃ ಸದೃಶೀ ವಿದ್ಯಾ ಗುಪ್ತಂ ಧನಮ್ ಸ್ಮೃತಮ್॥"**

"ವಿದ್ಯೆಯು ಕಾಮಧೇನುವಿನಂತೆ ಸರ್ವದಾ ಅಭೀಷ್ಟವನ್ನು ಕೊಡುವದು. ವಿದೇಶದಲ್ಲಿ ತಾಯಿಯಂತೆ ಕಾಪಾಡುವದು; ಇದೇ ಗುಪ್ತವಾದ ಐಶ್ವರ್ಯವು !!!"

**"ಶುನಃಪುಚ್ಛಮಿವ ವ್ಯರ್ಥಂ ಜೀವಿತಂ ವಿದ್ಯಯಾ ವಿನಾ ॥"**

"ವಿದ್ಯೆಯನ್ನು ಓದದ ಮೂಢನ ಜೀವನವು ನಾಯಿಯ ಬಾಲದಂತೆ ವ್ಯರ್ಥವಾದದ್ದು !"

"ವಿದ್ಯಾ ವಿಹೀನಃ ಪಶುಃ ॥"

"ವಿದ್ಯೆಯಿಲ್ಲದ ಪಾಮರನು ಪಶುಸಮಾನನು."

**"ಕಿಂ ತಸ್ಯ ಮಾನುಷತ್ವೇನ ಬುದ್ಧಿರ್ಯಸ್ಯ ನ ನಿರ್ಮಲಾ ॥ ಬುದ್ಧ್ಯಾಪಿ ಕಿಂ ಫಲಂ ತಸ್ಯ ಯೇನ ವಿದ್ಯಾ ನ ಸಂಚಿತಾ ? ॥**

"ಯಾವಾತನಲ್ಲಿ ಬುದ್ಧಿಯೇ ಇಲ್ಲವೋ ಅಂತವನ ಮನುಷ್ಯತ್ವದಿಂದೇನು ಫಲ ? ಅಂದರೆ ಅವನು ಮನುಷ್ಯನೆಂದು ಗಣಿಸುವದರಿಂದೇನು ಲಾಭವಾದೀತು ? ಮನುಷ್ಯನಲ್ಲಿ ಬುದ್ಧಿತಾನೆ ಇದ್ದರೂ ಅವನು ವಿದ್ಯೆಯನ್ನು ಕಲಿಯದಿದ್ದರೆ ಆ ವಿದ್ಯಾಹೀನಬುದ್ಧಿಯು ತಲೆಯೆತ್ತಲಾದೀತೆ ?"

**"ಯಥಾ ಕಾಷ್ಠಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ॥ ಯಶ್ಚ ವಿಪ್ರೋಽನಧೀಯಾನಃ ತ್ರಯಸ್ತೇ ನಾಮ ಬಿಭ್ರತಿ॥"**

(ಮನು)

" ಕಟ್ಟಿಗೆಯಲ್ಲಿ ಮಾಡಿರುವ ಆನೆ, ಚರ್ಮದಿಂದ ಕಲ್ಪಿಸಿರುವ ಮೃಗ ಇವುಗಳಲ್ಲಿ ಆಕಾರಪೂರ್ಣಗಳಾಗಿದ್ದಾಗ್ಯೂ ಆ ಶರೀರದಿಂದ ಪಡಿಯಬಹುದಾದ ಮಹತ್ಪ್ರಯೋಜನದಿಂದ ಹೇಗೆ ವಂಚಿತಗಳಾಗಿರುವವೋ ಹಾಗೆಯೇ ವಿದ್ಯಾಭ್ಯಾಸ ಮಾಡದಿರುವ ಪಾಮರನು ತನಗೆ ಈಶ್ವರದತ್ತವಾಗಿರುವ ಆ ವಿದ್ಯಾಭ್ಯಾಸಮಾಡಸಮರ್ಥವಾದ ಇಂದ್ರಿಯವನ್ನು ಹೊಂದಿದ್ದರೂ ಅದರ ಸದುಪಯೋಗವಿಲ್ಲದ್ದರಿಂದ ಮಾನವಶರೀರ ಸಾಧ್ಯಗಳಾದ ಧರ್ಮಾದಿ ಪುರುಷಾರ್ಥಗಳನ್ನು ಸಂಪಾದಿಸಲಾರನು. ಇವನ ಜೀವನವೂ ನಿರರ್ಥಕವು !! "

" ರೂಪಯೌವನಸಂಪನ್ನಾಃ ವಿಶಾಲ ಕುಲ ಸಂಭವಾಃ || ವಿದ್ಯಾಹೀನಾ ನ ಶೋಭಂತೇ ನಿರ್ಗಂಧಾ ಇವ ಕಿಂಶುಕಾಃ || "

" ಪುರುಷನು ಎಂತಹ ರೂಪು ಯೌವನ ಸಂಪತ್ತನ್ನು ಪಡೆದೇ ಇರಲಿ; ವಿಶಾಲವಾದ ಗೌರವಕುಲದಲ್ಲಿಯೇ ಜನಿಸಿರಲಿ; ವಿದ್ಯಾರಹಿತನಾಗಿದ್ದರೆ ಅವನು ಸುಗಂಧವರ್ಜಿತವಾದ ಮುತ್ತುಗದ ಹೂವಿನಂತೆ ಬಾಹ್ಯಾಡಂಬರಕ್ಕೆ ಮನುಷ್ಯನೆಂದೆನ್ನಿಸಿಕೊಳ್ಳುವನು. "

" ಕಿಂ ಕುಲೇನ ವಿಶಾಲೇನ, ವಿದ್ಯಾಹೀನೇನ ದೇಹಿನಾಮ್ || ವಿದ್ಯಾವಾನ್ ಪೂಜ್ಯತೇ ಲೋಕೇ, ನಾऽವಿದ್ಯಃ ಪರಿಪೂಜ್ಯತೇ || "

" ದೊಡ್ಡ ವಂಶದಲ್ಲಿ ಹುಟ್ಟಿದಮಾತ್ರದಿಂದಲೇ ವಿದ್ಯಾರಹಿತನಾದ ಪಾಮರನು ಜಗತ್ತಿನಲ್ಲಿ ಪ್ರಶಸ್ತನಾಗಲಾರನು. ಯಾಕೆಂದರೆ ವಿದ್ವಾಂಸನಿಗೆ ಮಾತ್ರವೇ ಸರ್ವತ್ರ ಪ್ರತಿಷ್ಠೆಯೂ ಮರ್ಯಾದೆಯೂ ದೊರಿಯುವದಲ್ಲದೆ, ವಿದ್ಯಾರಹಿತನಾದ ಮೂಢನಿಗೆ ಇಹಲೋಕದಲ್ಲಿ ಸುಖವಾಗಲೀ, ಪಾರತ್ರಿಕ ಗತಿಯಾಗಲೀ ಎಲ್ಲಿ ದೊರಕೀತು ? "

" ಅದುಷ್ಟಂ ವಿದ್ಯಾ " (ವೈಶೇಷಿಕ ದರ್ಶನ)

" ಯಥಾರ್ಥ ಪ್ರಮಾರೂಪ ಜ್ಞಾನವೇ ವಿದ್ಯೆಯು. "

" ವಿದ್ಯಾತಃ ಪುರುಷವಿಶೇಷೋಭವತಿ || " (ನಿರುಕ್ತ)

"ವಿದ್ಯೆಯಿಂದಲೇ ನರನು ಸರ್ವರಲ್ಲಿಯೂ ಶ್ರೇಷ್ಠತಮನಾಗುತ್ತಾನೆ."

" ವಿದ್ಯಾ ಶಂಸಾ " (ಪೂರ್ವಮೀಮಾಂಸ)

" ವಿದ್ಯೆಯಿಂದಲೇ ಪ್ರಶಂಸಾಸ್ಪದನಾಗುತ್ತಾನೆ. "

" ವಿದ್ಯೈವ ತು ನಿರ್ಧಾರಣಾತ್ || " (ವೇದಾಂತದರ್ಶನ)

" ಮುಕ್ತಿಯ ಸಾಧನೆಯು ಕೇವಲ ವಿದ್ಯೆಯೇ ! ಇದರವಿನಾ ಬೇರೆ ಸಾಧನೆಯು ಇಲ್ಲವೇ ಇಲ್ಲ !! "

ಆಚಾರ್ಯಸಮಾಗಮ:—“ ಉಪನೀಯ ತು ಯಃ ಶಿಷ್ಯಂ ವೇದಮಧ್ಯಾಪಯೇದ್ದ್ವಿಜಃ॥ ಸಕಲ್ಪಂ ಸರಹಸ್ಯಂ ಚ ತಮಾಚಾರ್ಯಂ ಪ್ರಚಕ್ಷತೇ ॥ ” (ಮನು)

“ ಯಾವ ಬ್ರಾಹ್ಮಣನು ಶಿಷ್ಯನ ಉಪನಯನ ಕರ್ಮವನ್ನು ಮಾಡಿಸಿ ಕಲ್ಪಸೂತ್ರಗಳು, ಉಪನಿಷತ್ತುಗಳು ಮುಂತಾದ ವಿಶೇಷ ಪ್ರಕರಣಗಳೊಡನೆ ವೇದಗಳೆಲ್ಲವನ್ನೂ ಅರ್ಥಸಮೇತ ಬೋಧಿಸುವನೋ ಆತನೇ ಆಚಾರ್ಯನು ! ”

ಈ ವಿಷಯದಲ್ಲಿ ಛಾಂದೋಗ್ಯೋಪನಿಷತ್ತಿನಲ್ಲಿ:—

“ ಶ್ರುತಗ್ಂ ಹ್ಯೇವಮೇವ ಭಗವದ್ದೃಶೇಭ್ಯಃ ಆಚಾರಾದ್ಧ್ಯೇವ ವಿದ್ಯಾವಿದಿತಾ ಸಾಧಿಷ್ಠಂ ಪ್ರಾಪಯತೀತಿ ॥ ”

ಜಾಬಾಲಿ ಋಷಿಯು ಗೌತಮರೊಡನೆ ಹೇಳಿದ್ದೇನೆಂದರೆ:—“ ಹೇ ಭಗವನ್ ! ಆಚಾರ್ಯನಿಂದ ಅಭ್ಯಸಿಸಲ್ಪಟ್ಟ ವಿದ್ಯೆಯು ಅತ್ಯಂತ ಶೋಭೆಯನ್ನೂ, ದೃಢತ್ವವನ್ನೂ, ಸಾಧುತ್ವವನ್ನೂ ಉಂಟುಮಾಡತಕ್ಕದ್ದೆಂದು ತಮ್ಮಂತಹ ಮಹಾತ್ಮರು ಅಪ್ಪಣೆ ಕೊಡಿಸಿದ ಮಾತನ್ನು ನಾನು ಕೇಳಿದ್ದೇನೆ. ” ಎಂಬದೆ !

“ ಯಥಾ ಖನನ್ ಖನಿತ್ರೇಣ ನರೋ ವಾರ್ಯಧಿಗಚ್ಛತಿ॥ ತಥಾ ಗುರುಗತಾಂ ವಿದ್ಯಾಂ ಶುಶ್ರೂಷುರಧಿಗಚ್ಛತಿ ॥ ” (ಮನು)

“ ಭೂಮಿಯನ್ನು ಗುದ್ದಲಿಯಿಂದ ಅಗೆಯುತ್ತಾ ಅಗೆಯುತ್ತಾ ಮನುಷ್ಯನು ಜಲವನ್ನು ಪಡಿಯುವಂತೆ ಪೂರ್ಣ ಪರಿಶ್ರಮದಿಂದ ವಿದ್ಯಾಧ್ಯಯನ ಮಾಡುವವನು ಗುರುಮುಖದಿಂದ ಸಮಗ್ರವಿದ್ಯೆಯನ್ನೂ ಪಡಿಯುವನು. ”

“ ಕಸ್ಮಾದಾಚಾರ್ಯಃ ಆಚಾರಂ ಗ್ರಾಹಯತ್ಯಾಚಿನೋತ್ಯರ್ಥಾನ್ ಆಚಿನೋತಿ ಬುದ್ಧಿಮಿತಿ ವಾ ॥ ” (ನಿರುಕ್ತ)

“ ಆಚಾರ್ಯನೆಂದರೆ ತಾನು ಸರ್ವ ವಿದ್ಯಾಸಂಪನ್ನನಾಗಿದ್ದುಕೊಂಡು ವಿದ್ಯಾರ್ಥಿಗಳಿಗೆ ಅತ್ಯುತ್ತಮಾಚಾರಗಳನ್ನು ಕಲಿಸುತ್ತಾ, ಸರ್ವಾರ್ಥಸಂಪನ್ನರನ್ನಾಗಿ ಮಾಡುವವನೂ, ಎಲ್ಲಾ ವೇದಾದಿಶಾಸ್ತ್ರಗಳನ್ನು ಅರ್ಥಸಮೇತ ಬೋಧಿಸಿ ಬುದ್ಧಿಯನ್ನು ವೃದ್ಧಿಪಡಿಸುವವನೂ ಆಗಿದ್ದಾನೆ. ”

“ ಪಿತಾಹ್ಯೇನಂ ಜನಯತಿ ಪುರುಷಂ ಪುರುಷರ್ಷಭ॥ ಪ್ರಜ್ಞಾಂ ದದಾತಿ ಚಾಚಾರ್ಯ ಸ್ತಸ್ಮಾತ್ಸ ಗುರುರುಚ್ಯತೇ ॥ ”

“ ತಂದೆಯು ಪುತ್ರನನ್ನು ಉತ್ಪತ್ತಿ ಮಾಡಬಲ್ಲನು; ಆಚಾರ್ಯನಾದರೋ ಈತನಿಗೆ ಸತ್ಯಾಸತ್ಯ ಪದಾರ್ಥಗಳ ಜ್ಞಾನವನ್ನುಂಟುಮಾಡಿ ಬುದ್ಧಿಯನ್ನು

ಉತ್ತಮವಾಗುವಂತೆ ಅನುಗ್ರಹಿಸುವನು. ಇದಕ್ಕಾಗಿ ಆಚಾರ್ಯನನ್ನೇ ಗುರುವೆಂದು ತಿಳಿಯಬೇಕು. ''

**"ತ್ರಯಃ ಪುರುಷಸ್ಯಾತಿಗುರುವೋ ಭವಂತಿ ಮಾತಾ, ಪಿತಾ, ಆಚಾರ್ಯಶ್ಚ ॥" (ವಿಷ್ಣುಸ್ಮೃತಿ)**

"ಮನುಷ್ಯನಿಗೆ ಮಾತಾ, ಪಿತಾ ಆಚಾರ್ಯರೆಂಬ ಮೂವರು ಮುಖ್ಯ ಗುರುಗಳಿರುತ್ತಾರೆ. ''

**"ನಾಸ್ತಿ ವೇದಾತ್ಪರಂ ಶಾಸ್ತ್ರಂ, ನಾಸ್ತಿ ಮಾತೃಸಮೋಗುರುಃ॥"**

**(ಮಹಾಭಾರತ)**

"ವೇದಕ್ಕಿಂತಲೂ ಹೆಚ್ಚಾದ ಶಾಸ್ತ್ರವಿಲ್ಲ; ಮಾತೆಗಿಂತಲೂ ಹೆಚ್ಚಾದ ಗುರುವಿಲ್ಲ! ಇದರಿಂದಲೇ ಬಾಲಕನ ಪ್ರಥಮ ಶಿಕ್ಷೆಯು ತಾಯಿಯಿಂದಲೇ ದೊರಿಯುತ್ತದೆ. ''

**"ಬ್ರಹ್ಮಚಾರಿಣಂ ಪರಿದದಾಮಿ, ದೀರ್ಘಾಯುಷ್ಟ್ವಾಯ, ಸುಪ್ರಜಾತ್ವಾಯ, ಸುವೀರ್ಯಾಯ, ರಾಯಸ್ಪೋಷಾಯ, ಸರ್ವೇಷಾಂ ವೇದಾನಾಮಧಿಪತ್ಯಾಯ, ಸುಶ್ಲೋಕ್ಯಾಯ, ಸ್ವಸ್ತಯೇ ॥"**

**(ಸಾಂಖ್ಯಾಯನ ಗೃಹ್ಯಸೂತ್ರ)**

"ಈ ಬ್ರಹ್ಮಚಾರಿಯನ್ನು ಗುರುಕುಲವಾಸಾರ್ಥವಾಗಿ ಆಚಾರ್ಯರವರ ಸನ್ನಿಧಿಯಲ್ಲಿ ಅರ್ಪಿಸುತ್ತೇನೆ. ಇಲ್ಲಿ ವೇದಾಧ್ಯಯನ ಮಾಡುವದರಿಂದ ಇವನಿಗೆ ದೀರ್ಘಾಯು, ಸುಸಂತಾನ, ಸುಜನತಾ, ವೀರ್ಯವೃದ್ಧಿ, ಸರ್ವಪ್ರಕಾರದ ಧನವೈಭವಾದಿಗಳಪ್ರಾಪ್ತಿ ಇವೆಲ್ಲವೂ ಸಿದ್ಧಿಸುವವು. ''

**"ತಪೋ ವಿಶೇಷೈಃ ವಿವಿಧೈಃ ವ್ರತೈಶ್ಚ ವಿಧಿಚೋದಿತೈಃ ॥ ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ ॥" (ಮನು)**

"ಬ್ರಾಹ್ಮಣರು ಗುರುಕುಲವಾಸ ಮಾಡುತ್ತಾ—ತಪಸ್ಸಿನಿಂದಲೂ, ಗುರುಶುಶ್ರೂಷಾ ಮುಂತಾದ ವ್ರತಗಳಿಂದಲೂ ಕೂಡಿದವರಾಗಿ, ಉಪನಿಷತ್ತುಗಳೊಡನೆ ಮಂತ್ರ ಬ್ರಾಹ್ಮಣರೂಪ ಎಲ್ಲಾ ವೇದಗಳನ್ನೂ ಅಭ್ಯಸಿಸತಕ್ಕದ್ದು. ''

**"ಧರ್ಮಶ್ಚ ಸತ್ಯಂ ಚ ತಪೋ ದಮಶ್ಚ ।**
**ಅಮಾತ್ಸರ್ಯಂ ಹ್ರೀ ಸ್ತಿತಿಕ್ಷಾಽನಸೂಯಾ ॥**
**ದಾನಂ ಶ್ರುತಂ ಚೈವ ಧೃತಿಃ ಕ್ಷಮಾ ಚ ।**
**ಮಹಾವ್ರತಾ ದ್ವಾದಶ ಬ್ರಾಹ್ಮಣಸ್ಯ ॥"**

"ಧರ್ಮ, ಸತ್ಯ, ತಪಸ್ಸು, ಜಿತೇಂದ್ರಿಯತ್ವ, ಪರರ ಏಳಿಗೆಯನ್ನು ನೋಡಿ ಈರ್ಷ್ಯೆ ಮಾಡದಿರುವಿಕೆ, ಲಜ್ಜಾ, ಸಹನ, ಅಸೂಯಾರಾಹಿತ್ಯತೆ,

ದಾನ, ವೈದಿಕಸಿದ್ಧಾಂತಜ್ಞಾನ, ಧಾರಣಾಶಕ್ತಿ, ಕ್ಷಮಾ ಈ ೧೨ ಮಹಾವ್ರತಗಳೆಂದೆನ್ನಲ್ಪಡುವವು."

"ಧರ್ಮಾದಯೋ ದ್ವಾದಶ ಯಸ್ಯರೂಪ ।
ಮನ್ಯಾನಿ ಚಾಂಗಾನಿ ಯಥಾಬಲಂ ಚ ॥
ಆಚಾರ್ಯಯೋಗೇ ಫಲತೀತಿಚಾಹುಃ ।
ಬ್ರಹ್ಮಾರ್ಥಯೋಗೇನ ಚ ಬ್ರಹ್ಮಚರ್ಯಮ್ ॥"

"ಮೇಲೆ ಹೇಳಿದ ೧೨ ಮಹಾವ್ರತಗಳೂ, ಯಮನಿಯಮಾದಿಗಳೂ, ಶಾರೀರಕ ಮತ್ತು ಮಾನಸಿಕಬಲಾದಿಗಳೂ, ಬ್ರಹ್ಮಚರ್ಯದ ರೂಪಗಳಾಗಿರುವವು. ಈ ಬ್ರಹ್ಮಚರ್ಯದ ಸಿದ್ಧಿಯು ಮುಖ್ಯವಾಗಿ ಆಚಾರ್ಯಸೇವೆಯಲ್ಲಿದ್ದುಕೊಂಡು, ಅವರಿಂದ ಅರ್ಥಸಹಿತವಾಗಿ ಸದ್ವಿದ್ಯೆಗಳನ್ನು ಅಧ್ಯಯನ ಮಾಡುವದೇ ಆಗಿದೆ."

"ಯಃ ಸ್ವಾಧ್ಯಾಯಮಧೀತೇಽಬ್ದಂ, ವಿಧಿನಾ ನಿಯತಶ್ಶುಚಿಃ ॥
ತಸ್ಯ ನಿತ್ಯಂ ಕ್ಷರತ್ಯೇಷ ಪಯೋ ಧಧಿ ಘೃತಂ ಮಧು ॥"

"ಯಾವ ಬ್ರಹ್ಮಚಾರಿಯು ನಿಯತವಾಗಿ ಒಂದು ವರ್ಷಕಾಲ ವೇದಾಧ್ಯಯನ ಮಾಡಿದರೆ ಆ ವಿದ್ಯೆಯು ಅವನಿಗೆ-ಹಾಲು, ತುಪ್ಪ, ದಧಿ, ಜೇನುತುಪ್ಪಗಳನ್ನಿತ್ತು ರಕ್ಷಿಸುವದು."

"ಸ್ವಾಧ್ಯಾಯ ಧರ್ಮೇಣ ತಪಸ್ವೀ ಪುಣ್ಯೋ ಭವತಿ, ತಪಸ್ವೀ ಪುಣ್ಯೋ ಭವತಿ ॥" (ತೈತ್ತಿರೀಯೋಪನಿಷತ್)

"ಹೀಗೆಯೇ ಸ್ವಾಧ್ಯಾಯರೂಪ ವೇದಾಧ್ಯಯನದಿಂದ ತಪಸ್ವಿಯೂ, ಪುಣ್ಯಾತ್ಮನೂ ಆಗುತ್ತಾನೆ."

"ನಿತ್ಯಂ ಸ್ವಾಧ್ಯಾಯಶೀಲಾಶ್ಚ ದುರ್ಗಾಣ್ಯತಿ ತರಂತಿ ಯೇ॥"

"ನಿತ್ಯವೂ ವೇದಾಧ್ಯಯನ ಮಾಡುವವನು ಮಹಾದುಃಖದಿಂದ ಪಾರಾಗುವನು."

"ಯಥಾ ಯಥಾ ಹಿ ಪುರುಷಃ ಶಾಸ್ತ್ರಂ ಸಮಾಧಿಗಚ್ಛತಿ ॥ ತಥಾ ತಥಾ ವಿಜಾನಾತಿ ವಿಜ್ಞಾನಂ ಚಾಸ್ಯ ರೋಚತೇ ॥" (ಮನು)

"ಹೇಗೆ ಹೇಗೆ ಮನುಷ್ಯನು ವಿದ್ಯೆಯನ್ನು ಓದುತ್ತಾನೋ ಹಾಗೆ ಹಾಗೆಯೇ ಜ್ಞಾನವೂ ವರ್ಧಿಸುತ್ತಾ ಅವನು ಮಹಾ ವಿದ್ವಾಂಸನಾಗುವನು."

"ಭದ್ರಮಿಚ್ಛಂತ ಋಷಯಃ ಸ್ವರ್ವಿದಸ್ತಪೋ ದೀಕ್ಷಾ ಮುಪನಿಷೇದುರಗ್ರೇ ॥ ತತೋ ರಾಷ್ಟ್ರಂ ಬಲಮೋಜಶ್ಚ ಜಾತಂ, ತಸ್ಮೈ ದೇವಾಯ ಉಪಸನ್ನಮನ್ತು ॥" (ಅಥರ್ವಣವೇದ)

“ಸುಖ ಮತ್ತು ಕಲ್ಯಾಣಗಳನ್ನಾಶಿಸುವ ಸೂಕ್ಷ್ಮದರ್ಶೀ ಜನರು ಪ್ರಥಮ ವಯಸ್ಸಿನಲ್ಲಿ ಸತ್ಯಭಾಷಣೆ, ಜಿತೇಂದ್ರಿಯತಾದಿ ತಪಸ್ಸು, ಹಾಗೆಯೇ ವಿದ್ಯಾಪ್ರಾಪ್ತ್ಯರ್ಥ ದೀಕ್ಷೆಯನ್ನು ಸೇವಿಸುವರು. ಇವರುಗಳಿಂದ ರಾಜ್ಯ, ಬಲ, ತೇಜಸ್ಸು ಇವುಗಳ ಪ್ರಾಪ್ತಿಯಾಗುವದು. ಹೀಗೆ ಯೋಗ್ಯವಾದರೀತಿಯಿಂದ ವೇದಾಧ್ಯಯನಮಾಡಿ ವಿದ್ವಾಂಸರಾದವರನ್ನು ಸತ್ಕರಿಸುವದು ಸರ್ವರ ಕೆಲಸವಾಗಿದೆ.”

“ಅನೇನ ಕ್ರಮಯೋಗೇನ ಸಂಸ್ಕೃತಾತ್ಮಾ ದ್ವಿಜಃ ಶನೈಃ ॥ ಗು
ರೌ ವರ್ಸ ಸಂಚಿನುಯಾದ್ಬ್ರಹ್ಮಾಧಿಗಮಿಕಂ ತಪಃ ॥ (ಮನು)

“ವೇದಾದಿ ಶಾಸ್ತ್ರಗಳಲ್ಲಿ ಹೇಳಿರುವಂತೆ ಬ್ರಹ್ಮಚರ್ಯಸೇವನಾ ವಿಧಿಯನ್ನು ಅನುಷ್ಠಿಸುತ್ತಾ ಗುರುಕುಲವಾಸದಲ್ಲಿದ್ದುಕೊಂಡು, ಜಿತೇಂದ್ರಿಯತಾಪೂರ್ವಕ ವೇದಾದಿ ವಿದ್ಯೆಗಳನ್ನು ಅಧ್ಯಯನ ಮಾಡತಕ್ಕದ್ದು.”

ಆಚಾರ್ಯವಿಷಯ:—“ತ್ಯಜೇದ್ಧರ್ಮಂ ದಯಾಹೀನಂ ವಿದ್ಯಾ
ಹೀನಂ ಗುರುಂ ತ್ಯಜೇತ್ ॥” (ಚಾಣಕ್ಯ)

“ಯಾವ ಧರ್ಮದಲ್ಲಿ ದಯೆಯೇ ಇಲ್ಲವೋ ಆ ಮತವನ್ನು ತ್ಯಜಿಸತಕ್ಕದ್ದು; ಹಾಗೆಯೇ ಯಾವ ಆಚಾರ್ಯನಲ್ಲಿ ವಿದ್ಯೆಯೇ ಇಲ್ಲವೋ ಅಂತವನನ್ನೂ ತ್ಯಜಿಸಬೇಕು.”

ಯಾಕೆಂದರೆ:—ಶಾಸ್ತ್ರಾಯ ಗುರು ಸಂಯೋಗಃ ॥” (ಶುಕ್ರನೀತಿ)

“ಶಾಸ್ತ್ರಾಧ್ಯಯನಾರ್ಥವಾಗಿಯೇ ಗುರುಕುಲವಾಸ ಮಾಡಬೇಕು.”

“ಹಿತೋಪದೇಷ್ಟಾ ಶಿಷ್ಯಸ್ಯ ಸುವಿದ್ಯಾಧ್ಯಾಪಕೋ ಗುರುಃ ॥”

“ವಿದ್ಯಾಭ್ಯಾಸಾದಿ ಸದುಪದೇಶದಿಂದ ಶಿಷ್ಯನಿಗೆ ಸದ್ಗತಿಯಾಗುವಂತೆ ಮಾಡ ಸಾಮರ್ಥ್ಯವುಳ್ಳವನೇ ಆಚಾರ್ಯನು.”

“ಆಚಾರ್ಯಂಪರೀಕ್ಷೇತ, ತದ್ಯಥಾ, ಪರ್ಯವದಾತಶ್ರುತಂ, ಪರಿದೃ
ಷ್ಟ ಕರ್ಮಾಣಂ, ದಕ್ಷಂ, ದಕ್ಷಿಣಂ, ಶುಚಿಂ ಸರ್ವೇಂದ್ರಿಯೋಪಪ
ನ್ನಂ, ಪ್ರಕೃತಿಜ್ಞಂ, ಪ್ರತಿಪತ್ತಿಜ್ಞಮನುಪಸ್ಕೃತವಿದ್ಯಮನ
ಸೂಯಕಮಕೋಪನಂ, ಕ್ಲೇಶಕ್ಷಮಂ, ಶಿಷ್ಯವತ್ಸಲಮಧ್ಯಾ
ಪಕಂ, ಜ್ಞಾಪನಾಸಮರ್ಥಮಿತ್ಯೇವಂ ಗುಣೋಹ್ಯಾಚಾರ್ಯಃ॥”
(ಚರಕ-ವಿಮಾನಸ್ಥಾನ)

“ಆಚಾರ್ಯನು ಎಂತವನಾಗಿರಬೇಕೆಂದರೆ:—ಶುದ್ಧತಾ ಪೂರ್ವಕವಿದ್ಯಾಭ್ಯಾಸ ಮಾಡಿರುವವನೂ, ಶಿಲ್ಪಾದಿ ಹಸ್ತಕ್ರಿಯಾಕುಶಲನೂ, ಒಳ್ಳೇ ಮತ್ತು ಕೆಟ್ಟ ಕರ್ಮಗಳನ್ನು ಅರಿಯತಕ್ಕವನೂ, ಚತುರನೂ, ಶುಚಿವ್ರತನೂ, ವಿದ್ಯಾರ್ಥಿಗಳನ್ನು ಶಿಕ್ಷಿಸದೇ ಇರುವವನೂ, ಪುಸ್ತಕ ಯಂತ್ರಾದಿ ಸಾಧನಾಸಹ

ತನೂ, ಇಂದ್ರಿಯ ವ್ಯಾಪಾರಕುಶಲನೂ, ಶಿಷ್ಯನ ದೇಹಪ್ರಕೃತಿ ಬಲ ವಿದ್ಯಾರುಚಿ ಮುಂತಾದ್ದನ್ನರಿಯುವವನೂ, ಕರ್ತವ್ಯತಾಭಿಜ್ಞನೂ, ಅಸೂಯಾರಹಿತನೂ, ಕ್ರೋಧರಹಿತನೂ, ಸಹಿಷ್ಣುವೂ, ಶಿಷ್ಯರಲ್ಲಿ ವಾತ್ಸಲ್ಯವುಳ್ಳವನೂ, ಓದಿಸುವದರಲ್ಲಿ ಕುಶಲನೂ ಆಗಿರಬೇಕು."

"ಆಚಾರ್ಯೋ ಬ್ರಹ್ಮಣೋ ಮೂರ್ತಿಃ ಪಿತಾಮೂರ್ತಿಃ ಪ್ರಜಾಪತೇಃ ॥ ಮಾತಾ ಪೃಥಿವ್ಯಾ ಮೂರ್ತಿಸ್ತು ಭ್ರಾತಾ ಸ್ವೋಮೂರ್ತಿರಾತ್ಮನಃ ॥" (ಮನು)

"ಆಚಾರ್ಯನು ಪರಮಾತ್ಮನ ಶರೀರವೆಂತಲೂ, ತಂದೆಯು ಹಿರಣ್ಯಗರ್ಭನ ಮೂರ್ತಿಯಂತಲೂ, ತಾಯಿಯು ಪೃಥ್ವಿಯ ಶರೀರವೆಂತಲೂ ತಿಳಿದು, ಈ ದೇವತಾರೂಪರಾದ ಇವರನ್ನು ಎಂದೆಂದಿಗೂ ಅಪಮಾನಪಡಿಸಬಾರದು."

"ಯಂ ಮಾತಾಪಿತರೌ ಕ್ಲೇಶಂ ಸಹೇತೇ ಸಂಭವೇ ನೃಣಾಮ್॥
ನ ತಸ್ಯನಿಷ್ಕೃತಿಶ್ಶಕ್ಯಾ ಕರ್ತುಂ ವರ್ಷಶತೈರಪಿ ॥"

"ಗರ್ಭಾಧಾನ ಕಾಲದಿಂದ ಶಿಶುಜನನ ಕಾಲದ ಮತ್ತು ಇತ್ತಲಾಗಿನ ಪರಿಪೋಷಣಾದಿಗಳಲ್ಲಿ ತಂದೆತಾಯಿಗಳು ಎಷ್ಟು ಕ್ಲೇಶವನ್ನು ಸಹಿಸಿರುತ್ತಾರೋ ಇದರ ಋಣವನ್ನು ತೀರಿಸುವದಕ್ಕಾಗಿ ನೂರು ವರ್ಷಕಾಲ ಅವರನ್ನು ಸೇವಿಸಿದರೂ ತೀರತಕ್ಕದ್ದಲ್ಲವಾದ್ದರಿಂದ ದೇವತಾರೂಪರಾದ ತಂದೆತಾಯಿಗಳನ್ನು ಎಂದೆಂದಿಗೂ ನೋಯಿಸಬಾರದು."

"ತಯೋರ್ನಿತ್ಯಂ ಪ್ರಿಯಂ ಕುರ್ಯಾದಾಚಾರ್ಯಸ್ಯ ಚ ಸರ್ವದಾ ॥
ತೇಷ್ವೇವ ತ್ರಿಷು ತುಷ್ಟೇಷು ತಪಸ್ಸರ್ವಂ ಸಮಾಪ್ಯತೇ ॥"

"ಮಾತಾಪಿತೃಗಳಿಗೂ, ಆಚಾರ್ಯರಿಗೂ ಪ್ರಿಯವಾದ ಕಾರ್ಯಗಳನ್ನು ಸದಾ ಆಚರಿಸುತ್ತಿರಬೇಕು. ಈ ಮೂವರೂ ಪ್ರಸನ್ನರಾಗಿರುವಂತೆ ತೃಪ್ತಿಪಡಿಸುವದರಿಂದಲೇ ಸಮಸ್ತ ತಪಸ್ಸೂ ಆಚರಿಸಿದಂತಾಗುವದು."

"ತೇಷಾಂ ತ್ರಯಾಣಾಂ ಶುಶ್ರೂಷಾ ಪರಮಂ ತಪ ಉಚ್ಯತೇ ॥
ನ ತೈರಭ್ಯನನುಜ್ಞಾತೋ ಧರ್ಮಮನ್ಯಂ ಸಮಾಚರೇತ್ ॥"

"ಈ ಮೂವರ ಸೇವೆಯೇ ಪರಮ ತಪಸ್ಸಾಗಿರುವದು. ಇವರುಗಳ ಆಜ್ಞೆಯಿಲ್ಲದೆ ಬೇರೆ ಯಾವ ಧರ್ಮಕಾರ್ಯವನ್ನೂ ಮಾಡಬಾರದು."

"ತ ಏವ ಹಿ ತ್ರಯೋ ಲೋಕಾಃ ತ ಏವ ತ್ರಯ ಆಶ್ರಮಾಃ ॥
ತ ಏವ ಹಿ ತ್ರಯೋ ವೇದಾಃ, ತ ಏವೋಕ್ತಾ ತ್ರಯೋಗ್ನಯಃ॥"

"ಈ ಮೂವರೇ ಲೋಕಾಂತರಪ್ರಾಪ್ತಿ ಸಾಧಕರಾಗಿರುವದರಿಂದ ಮೂರು ಲೋಕಗಳಾಗಿರುವರು. ಅವರು ಮೂವರೇ ಗೃಹಸ್ಥಾದಿ ಆಶ್ರಮ

ತ್ರಯಗಳು, ಇವರೇ ವೇದತ್ರಯಗಳು, ಇವರೇ ಯಜ್ಞಫಲಪ್ರದಗಳಾದ ಅಗ್ನಿತ್ರಯಗಳು. ''

" ಸರ್ವೇ ತಸ್ಯಾದೃತಾ ಧರ್ಮಾಃ ಯಸ್ಯೈತೇ ತ್ರಯಆದೃತಾಃ ||
ಅನಾದೃತಾಸ್ತು ಯಸ್ಯೈತೇ ಸರ್ವಾ ಸ್ತಸ್ಯಾ ಫಲಾಃ ಕ್ರಿಯಾಃ|| "

" ಯಾವನು ಮಾತಾಪಿತಾಚಾರ್ಯರುಗಳನ್ನು ಆದರಿಸುವನೋ ಅವನಿಗೆ ಸರ್ವ ಧರ್ಮಫಲವೂ ದೊರಿಯುವದು. ಇವರುಗಳನ್ನು ಅನಾದರಣೆ ಮಾಡು ವವನು ಮಾಡುವ ಸಕಲ ಕರ್ಮಗಳೂ ನಿಷ್ಫಲಗಳಾಗಿರುವವು. ''

" ಯಾವತ್ತ್ರಯಸ್ತೇ ಜೀವೇಯುಃ ತಾವನ್ನಾನ್ಯಂ ಸಮಾಚರೇ
ತ್|| ತೇಷ್ವೇವ ನಿತ್ಯಂ ಶುಶ್ರೂಷಾಂ ಕುರ್ಯಾತ್ಪ್ರಿಯಹಿತೇ ರತಃ||"

" ಯಾವವರಿಗೆ ಈ ಮೂವರೂ ಜೀವಿಸುತ್ತಿರುವರೋ ಅದುವರಿಗೆ ಅವರನ್ನು ಸೇವಿಸುವದೇಹೊರ್ತು ಸ್ವತಂತ್ರವಾಗಿ ಬೇರೇ ಧರ್ಮಕಾರ್ಯಗಳನ್ನು ಮಾಡಬಾರದು. ನಿತ್ಯದಲ್ಲಿಯೂ ಅವರ ಶುಶ್ರೂಷೆಯನ್ನೂ ಪ್ರಿಯಹಿತ ಕಾ ರ್ಯಗಳನ್ನೂ ಮನಸ್ಸಿಟ್ಟು ಮಾಡುತ್ತಾ ಇರಬೇಕು. ''

" ಯೋ ವೈ ಬ್ರಾಹ್ಮಣಾನಾಮನೂಚಾನತಮಃ ಸ ವಿಷಾಂ ವೀ
ರ್ಯವತ್ತಮಃ||" (ಶತಪಥಬ್ರಾಹ್ಮಣ)

" ಬ್ರಾಹ್ಮಣರ ಮಧ್ಯದಲ್ಲಿ ವಿದ್ವಾಂಸನೇ ಶ್ರೇಷ್ಠನು. ''

" ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸಹ ||
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ || "
(ಕಠೋಪನಿಷತ್)

" ವಿದ್ಯಾವಂತನಾಗಿ ಯುಕ್ತವಾದ ಮನೋವೃತ್ತಿಯುಳ್ಳ ಪುರುಷನ ಇಂದ್ರಿಯಗಳು ಸಾರಥಿಯ ಹತೋಟಿಯಲ್ಲಿರುವ ತಿದ್ದಿದ ಕುದುರೆಗಳಂತೆ ವಶೀ ಭೂತಗಳಾಗಿರುವವು. ''

" ನ ಹಾಯನೈಃ ನ ಪಲಿತೈಃ ನ ವಿತ್ತೈರ್ನ ಚ ಬಂಧುಭಿಃ || ಋ
ಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ || "
(ಮನುಸ್ಮೃತಿ)

" ವಯಸ್ಸಾದ್ದರಿಂದಲೂ, ಕೂದಲು ನರೆತದ್ದರಿಂದಲೂ, ಧನದಿಂದಲೂ, ಬಂಧುಸಂಪತ್ತಿನಿಂದಲೂ ಮನುಷ್ಯನು ಶ್ರೇಷ್ಠನಾಗಲಾರನು. ಕಿಂತು ಋ ಷಿಗಳ ಸಿದ್ಧಾಂತದಂತೆ ಯಾವನು ವಿದ್ಯಾವಂತನೋ ಅವನೇ ಶ್ರೇಷ್ಠನೆಂಬದು ಯುಕ್ತವು. ''

ಗುರುಕುಲವಾಸದ ದೃಷ್ಟಾಂತ:—" ವಿವಿಕ್ತೇ ಪರ್ವತತಟೇ ಪಾ
ರಾಶರ್ಯೋ ಮಹಾತಪಾಃ || ವೇದಾನಧ್ಯಾಪಯಾಮಾಸ ವ್ಯಾಸ

**ಶ್ಯಿಷ್ಯಾನ್ಮಹಾತಪಾಃ || ಸುಮಂತಂ ಚ ಮಹಾಭಾಗಂ, ವೈಶಂಪಾಯನಮೇವ ಚ || ಜೈಮಿನಿಂ ಚ ಮಹಾಪ್ರಾಜ್ಞಂ ಪೈಲಂ ಚಾಪಿ ತಪಸ್ವಿನಮ್ || "**

"ಏಕಾಂತಸ್ಥಾನವಾದ ಪರ್ವತತಟದಲ್ಲಿ ಮಹಾತಪೋಧನರಾದ ವೇದವ್ಯಾಸರವರು—ಸುಮಂತ, ವೈಶಂಪಾಯನ, ಜೈಮಿನಿ, ಪೈಲರೆಂಬ ಮಹಾಪ್ರಾಜ್ಞರಾದ ಶಿಷ್ಯೋತ್ತಮರಿಗೆ ವೇದಗಳನ್ನು ಅರ್ಥಸಮೇತವಾಗಿ ಉಪದೇಶಮಾಡುತ್ತಾ ಇದ್ದರು."

**" ಭೃಗುರ್ವೈ ವಾರುಣಿಃ ವರುಣಂ ಪಿತರಮುಪಸಸಾರ, ಅಧೀಹಿ ಭಗವನ್ ಬ್ರಹ್ಮೇತಿ || " (ತೈತ್ತಿರೀಯೋಪನಿಷತ್)**

"ಭೃಗುಋಷಿಯು ಅವನ ತಂದೆಯಾದ ವರುಣನಿಂದ ಬ್ರಹ್ಮವಿದ್ಯಾಭ್ಯಾಸ ಮಾಡಿದನು."

**" ಪಿಪ್ಪಲಾದೋಽಂಗಿರಾಃ ಸನತ್ಕುಮಾರಶ್ಚಾಥರ್ವಣಂ ಭಗವಂತಂ ಪಪ್ರಚ್ಛ|| " (ಅಥರ್ವಶೀರ್ಷೋಪನಿಷತ್)**

"ಪಿಪ್ಪಲಾದ ಋಷಿಪುತ್ರನಾದ ಅಂಗಿರಾ ಮತ್ತು ಸನತ್ಕುಮಾರ ಇವರಿಬ್ಬರೂ ಅಥರ್ವಋಷಿಯಿಂದ ವಿದ್ಯಾಭ್ಯಾಸ ಮಾಡಿದರು."

**"ಅಧೀಹಿ ಭಗವ ಇತಿ ಹೋಪಸಸಾದ ಸನತ್ಕುಮಾರಂ ನಾರದಃ||"**

**(ಛಾಂದೋಗ್ಯೋಪನಿಷತ್)**

"ಸನತ್ಕುಮಾರ ಋಷಿಯಬಳಿ ಗುರುಕುಲವಾಸದಿಂದಿದ್ದುಕೊಂಡು ನಾರದಋಷಿಯು ವಿದ್ಯಾಧ್ಯಯನವನ್ನು ಮಾಡಿದನು."

**" ತಸ್ಮೈ ಹೈ ತದುದ್ದಾಲಕ ಆರುಣಿರ್ವಾಜಸನೇಯಾಯ ಯಾಜ್ಞವಲ್ಕ್ಯಾಯ ಅಂತೇವಾಸಿನೇ ಉಕ್ತ್ವೋವಾಚ || "**

**(ಬೃಹದಾರಣ್ಯೋಪನಿಷತ್)**

"ಆರುಣಿ ಪುತ್ರನಾದ ಉದ್ದಾಲಕಋಷಿಯ ಸಮೀಪ ಗುರುಕುಲವಾಸ ಮಾಡಿ ವಾಜಸನೇಯನಾದ ಯಾಜ್ಞ್ಯವಲ್ಕ್ಯ ಋಷಿಯು ವೇದಾಧ್ಯಯನ ಮಾಡಿದನು."

ಈ ಸ್ಥಳದಲ್ಲಿ ಯಾಜ್ಞವಲ್ಕ್ಯನಿಂದ ಮಧುಕನೂ, ಮಧುಕನಿಂದ ಚೂಲನೂ, ಇವನಿಂದ ಭಾಗವಿತ್ತಿಯೂ, ಅವರಿಂದ ಜಾಬಾಲನೂ ಇವರಿಂದ ಇತರೇ ಮಹರ್ಷಿಗಳೂ ಗುರುಕುಲವಾಸಕ್ರಮದಿಂದ ವೇದಾಧ್ಯಯನ ಮಾಡಿದಂತೆ ಇದೇ ಬೃಹದಾರಣ್ಯೋಪನಿಷತ್ ತಿಳಿಸುತ್ತಾ ಇದೆ. ಅದರಂತೆಯೇ ಪ್ರಶ್ನೋಪನಿಷತ್‌ನಲ್ಲಿ—ಭಾರದ್ವಾಜಗೋತ್ರದವನಾದ ಸುಕೇಶನೂ, ಶೈಬ್ಯನಾದ ಸತ್ಯಕಾಮನೂ, ಗಾರ್ಗ್ಯಗೋತ್ರದವನಾದ ಸೌರ್ಯಾಯಣಿಯೂ, ಆಶ್ವ

ಲಾಯನ ಗೋತ್ರದವನಾದ ಕೌಶಲ್ಯನೂ, ಭಾರ್ಗವನಾದ ವೈದರ್ಭಿಯೂ, ಕಾತ್ಯಾಯನಗೋತ್ರದವನಾದ ಕಬಂಧಿಯೂ ಈ ೬ ಜನ ಮಹರ್ಷಿಗಳೂ ಪಿಪ್ಪಲಾದ ಮಹರ್ಷಿಗಳಲ್ಲಿ ಗುರುಕುಲವಾಸಕ್ರಮದಿಂದ ವೇದಾದಿಶಾಸ್ತ್ರಗಳನ್ನು ಅಧ್ಯಯನ ಮಾಡಿದ ವಿಷಯವು ವಿವರವಾಗಿದೆ. ಹಾಗೆಯೇ—

**"ಉಪಕೌಶಲೋ ಹ ವೈ ಕಾಮಲಾಯನಃ ಸತ್ಯಕಾಮೇ ಜಾಬಾಲೇ ಬ್ರಹ್ಮಚರ್ಯಮುವಾಸ||" (ಛಾಂದೋಗ್ಯೋಪನಿಷತ್)**

"ಕಾಮಲಾಯನ ಪುತ್ರನಾದ ಉಪಕೌಶಲನು ಜಾಬಾಲ ಪುತ್ರನಾದ ಸತ್ಯಕಾಮ ಋಷಿಯಲ್ಲಿ ಬ್ರಹ್ಮಚರ್ಯದ ನಿಯಮದಿಂದ ಗುರುಕುಲವಾಸದಲ್ಲಿದ್ದುಕೊಂಡು ವೇದಾಧ್ಯಯನ ಮಾಡಿದನು."

**"ಸ್ನೋऽಹಂ ಗುರುವಚಃ ಕುರ್ವನ್||" (ಶ್ರೀಮದ್ರಾಮಾಯಣ)**

"ಜಗದ್ವಿಖ್ಯಾತನಾದ ಪರಶುರಾಮನು ಕಶ್ಯಪ ಮಹರ್ಷಿಗಳಲ್ಲಿ ಗುರುಕುಲವಾಸಕ್ರಮದಿಂದ ವೇದಾಧ್ಯಯನ ಮಾಡಿದನು."

**"ಮಹರ್ಷೇರಗ್ನಿವೇಶಸ್ಯ ಸಕಾಶಮಹಮಚ್ಯುತ || ಅಸ್ತ್ರಾಸ್ತ್ರಮಗಮಂ ಪೂರ್ವಂ ಯಜುರ್ವೇದ ಚಿಕೀರ್ಷಯಾ || ಬ್ರಹ್ಮಚಾರೀ ವಿನೀತಾತ್ಮಾ ಜಟಿಲೋ ಬಹುಲಾ ಸಮಾಃ || ಅವಸಂ ಸುಚಿರಂ ತತ್ರ ಗುರುಶುಶ್ರೂಷಣೇ ರತಃ ||" (ಮಹಾಭಾರತ)**

"ದ್ರೋಣಾಚಾರ್ಯನು ಭೀಷ್ಮರಲ್ಲಿ ಹೇಳಿದ್ದೇನೆಂದರೆ:—ಅಸ್ತ್ರಾದಿವಿದ್ಯೆಯ ಪ್ರಾಪ್ತಿಗಾಗಿ ನಾನು ಅಗ್ನಿವೇಶ ಮಹರ್ಷಿಗಳಲ್ಲಿ ಗುರುಕುಲವಾಸಕ್ರಮದಿಂದ ಯಜುರ್ವೇದಾದಿ ಸಕಲ ವೇದಶಾಸ್ತ್ರಗಳನ್ನೂ ಅಧ್ಯಯನಮಾಡಿದೆನು. ಆಗ ಬ್ರಹ್ಮಚರ್ಯವ್ರತದಿಂದ, ವಿನೀತೇಂದ್ರಿಯವುಳ್ಳವನಾಗಿದ್ದುಕೊಂಡು, ಜಡೆಯನ್ನು ಬಿಟ್ಟುಕೊಂಡು ಎಷ್ಟೋ ವರ್ಷಗಳವರಿಗೆ ಗುರುಸೇವಾತತ್ಪರನಾಗಿದ್ದುಕೊಂಡು ನಿಯತ ಬ್ರಹ್ಮಚರ್ಯವ್ರತದಿಂದ ಸಾಂಗವೇದಗಳನ್ನಧ್ಯಯನ ಮಾಡಿದೆನು" ಎಂದು ಹೇಳಿದ್ದಾರೆ.

**"ಜನಕೋ ಹ ವೈದೇಹಃ ಕೂರ್ಚಾದುಪಾವಸರ್ಪನ್ನುವಾಚ ನಮಸ್ತೇ ಯಾಜ್ಞವಲ್ಕ್ಯಾನುಮಾಶಾಧೀತಿ ||"**

**(ಬೃಹದಾರಣ್ಯೋಪನಿಷತ್)**

"ವೈದೇಹನಾದ ರಾಜಾ ಜನಕನು ಆಸನದಿಂದೆದ್ದವನಾಗಿ ಯಾಜ್ಞವಲ್ಕ್ಯ ಋಷಿಗೆ ಪ್ರಣಾಮಮಾಡಿ—"ಭಗವನ್! ನನಗೆ ವಿದ್ಯೆಯನ್ನು ಕಲಿಸಿರಿ" ಎಂದು ಬೇಡಿಕೊಂಡನು."

**"ಸತೇऽಹಂ ಪಿತುರಾಚಾರ್ಯಃ ತವಚೈವ ಪರಂತಪ ||"**

**(ಶ್ರೀಮದ್ರಾಮಾಯಣ)**

"ವಸಿಷ್ಠ ಋಷಿಯು ರಾಮನಿಗೆ—ನಾನು ನಿನ್ನ ತಂದೆಯಾದ ದಶರಥ ನಿಗೂ, ಹಾಗೆಯೇ ನಿನಗೂ ವೇದವನ್ನು ಉಪದೇಶಮಾಡಿದ ಆಚಾರ್ಯನಾಗಿದ್ದೇನೆ ಎಂದು ಹೇಳಿದ್ದಾನೆ."

**"ಪ್ರತಿಜಗ್ರಾಹ ತೇ ವಿದ್ಯೇ ಮಹರ್ಷೇ ರ್ಭಾವಿತಾತ್ಮನಃ ||**
**ವಿದ್ಯಾಸು ಮುದಿತೋ ರಾಮಃ ಶುಶುಭೇ ಭೀಮವಿಕ್ರಮಃ ||**

**(ರಾಮಾಯಣ)**

"ಬಲಾ, ಅತಿಬಲಾ ಎಂಬೆರಡು ವಿದ್ಯೆಗಳನ್ನು ಗುರುಕುಲವಾಸದಿಂದಿದ್ದು ವಿಶ್ವಾಮಿತ್ರರಲ್ಲಿ ರಾಮನು ಅಧ್ಯಯನ ಮಾಡಿದನು."

**"ಬೃಹಸ್ಪತಿ ಪುರೋಗಾಂಸ್ತು ದೇವರ್ಷೀನಸಕೃತ್ಪ್ರಭುಃ || ತೋಷಯಿತ್ವೋಪಚಾರೇಣ ರಾಜನೀತಿಮಧೀತವಾನ್ || ಉಶನಾ ವೇದ ಯಂಚ್ಛಾಸ್ತ್ರಂ ಯಚ್ಚ ವೇದಗುರುರ್ದ್ವಿಜಃ || ಯಚ್ಚ ಧರ್ಮಂ ಚ ವೈಯಾಖ್ಯಂ ಪ್ರಾಪ್ತವಾನ್ ಕುರುಸತ್ತಮಃ || ಭಾರ್ಗವಾಚ್ಚ್ಯವನಾಚ್ಚಾಪಿ ವೇದಾನಂಗೋಪಬೃಂಹಿತಾನ್ || ಪ್ರತಿಪೇದೇ ಮಹಾಬಾಹು ರ್ವಸಿಷ್ಠಾಚ್ಚರಿತವ್ರತಃ || ಮಾರ್ಕಾಂಡೇಯ ಮುಖಾತ್ ಕೃತ್ಸ್ನಂ ಯತಿಧರ್ಮ ಮವಾಪ್ತವಾನ್ || ರಾಮಾದಸ್ತ್ರಾಣಿ ಶಕ್ರಾಚ್ಚ ಪ್ರಾಪ್ತವಾನ್ ಪುರುಷರ್ಷಭ ||"**

**(ಮಹಾಭಾರತ ಶಾಂತಿಪರ್ವ)**

"ವ್ಯಾಸರು ಯುಧಿಷ್ಠಿರನಿಗೆ ಹೇಳಿದ್ದು—ಭೀಷ್ಮನು ಬೃಹಸ್ಪತ್ಯಾದಿ ಮಹರ್ಷಿಗಳನ್ನು ಪ್ರಸನ್ನರನ್ನಾಗಿ ಮಾಡಿ ಅವರೊಂದಿಗೆ ರಾಜನೀತಿಗಳನ್ನು ಓದಿದ್ದನು. ಎಷ್ಟು ವಿದ್ಯೆಗಳನ್ನು ಬೃಹಸ್ಪತಿ ಮತ್ತು ಶುಕ್ರಾಚಾರ್ಯರು ತಿಳಿದಿದ್ದರೋ ಅವರಿಂದ ಅವೆಲ್ಲವನ್ನೂ ಅರ್ಥಸಮೇತವಾಗಿ ಭೀಷ್ಮನು ಅಧ್ಯಯನ ಮಾಡಿದ್ದನು. ಭಾರ್ಗವ, ಚ್ಯವನ, ವಸಿಷ್ಠ ಇವರುಗಳಿಂದ ಸಾಂಗವಾಗಿ ವೇದಗಳನ್ನೂ ಅರ್ಥಸಮೇತವಾಗಿ ಗುರುಕುಲವಾಸಕ್ರಮದಿಂದ ಅಧ್ಯಯನ ಮಾಡಿದ್ದನು. ಹೀಗೆಯೇ ಮಾರ್ಕಾಂಡೇಯ ಋಷಿಯಿಂದ ವೇದಾಂತ ವಿದ್ಯೆಯನ್ನೂ, ಪರಶುರಾಮನಿಂದಲೂ ಇಂದ್ರನಿಂದಲೂ ಯುದ್ಧ ವಿದ್ಯೆಯನ್ನೂ ಅಭ್ಯಸಿಸಿದನು."

**"ಪಾಂಚಾಲ್ಯೋ ರಾಜಪುತ್ರಶ್ಚ ಯಜ್ಞಸೇನೋ ಮಹಾಬಲಃ ||**
**ಇಷ್ವಸ್ತ್ರಹೇತೋ ರ್ನ್ಯವಸತ್ತಸ್ಮಿನ್ನೇವ ಗುರೌ ಪ್ರಭುಃ ||"**

"ಪಾಂಚಾಲ ದೇಶದ ರಾಜಪುತ್ರನಾದ ದ್ರುಪದನು ಅಗ್ನಿವೇಶಋಷಿಯಿಂದ ಶಸ್ತ್ರಾಸ್ತ್ರ ವಿದ್ಯೆಗಳನ್ನು ಅಧ್ಯಯನ ಮಾಡುವದಕ್ಕಾಗಿ ಗುರುಕುಲ ವಾಸ ಮಾಡಿದನು."

☞ ಹೀಗೆ ನಮ್ಮ ಆರ್ಷಗ್ರಂಥಗಳಾದ—ಬ್ರಾಹ್ಮಣಾರಣ್ಯಕ ಉಪನಿಷತ್ತುಗಳನ್ನು ಕ್ರಮವಾಗಿ ವಿಚಾರಮಾಡುತ್ತಾ ಹೋದರೆ ಆದಿಕಾಲದಲ್ಲಿ ನಮ್ಮ ಖಂಡವು ಯಾವರೀತಿ ಸದ್ಧರ್ಮಾನುಷ್ಠಾನದ ತೌರುಮನೆಯಾಗಿತ್ತೆಂಬದು ಹೊರಪಡದೆ ಇರಲಾರದು. ಇದನ್ನು ಬಲಪಡಿಸಲು ಮನುಸ್ಮೃತಿಯಲ್ಲಿ:—

" ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನಃ ‖ ಸ್ವಂ ಸ್ವಂ ಚರಿತ್ರಂ ಶಿಕ್ಷೇರ್ರ ಪೃಥಿವ್ಯಾಂ ಸರ್ವಮಾನವಾಃ ‖ "

" ಈ ಭರತಖಂಡದ ಅಗ್ರಜನ್ಮ (ಬ್ರಾಹ್ಮಣ) ನ ಬಳಿಯಲ್ಲಿಯೇ ಪೃಥ್ವಿಯ ಎಲ್ಲರೂ—ಸ್ವಂ ಸ್ವಂ ಚರಿತ್ರಂ—ತಮ್ಮ ತಮ್ಮ ಮನುಷ್ಯತ್ವಕ್ಕೆ ಸಾರ್ಥಕವಾದ ಸಮಸ್ತ ವಿಷಯಗಳನ್ನೂ ಅಭ್ಯಸಿಸಿದರು " ಎಂದಿದೆ. ಹೀಗೆ ನಮ್ಮ ಭರತಖಂಡವೇ ಸಕಲ ವೇದಶಾಸ್ತ್ರ ದರ್ಶನ ಗ್ರಂಥಗಳ ಖನಿಯಾಗಿದೆ. ಅದನ್ನು ಯಥಾವತ್ ಉಪಯೋಗಿಸತಕ್ಕ ಸಾಮರ್ಥ್ಯವು ಕ್ಷೀಣಿಸಿದೆ. ಶಾಸ್ತ್ರೀಯವಾದ ಬ್ರಹ್ಮಚರ್ಯಾಶ್ರಮದ ಸುನಿಯಮಗಳೂ, ಗುರುಕುಲವಾಸ ಕ್ರಮವೂ ನಷ್ಟವಾಗಿರುವ ಈ ಕಾಲದಲ್ಲಿ ನಮ್ಮ ಭವಿಷ್ಯತ್ಪ್ರಜೆಯಾದರೂ ಅನಾದಿಕಾಲದ ನಾಗರಿಕತೆಯನ್ನು ಆಪಾತತಃ ತಿಳಿದು, ಅದರಂತೆ ತಾವೂ ಅನುಷ್ಠಿಸಬೇಕೆಂಬುದೇ ನಮ್ಮ ದೇಶೀಯರ ಉದ್ಧಾರಕ್ಕೆ ಮೂಲಮಂತ್ರವೆಂದರಿತು ಸರ್ವರಿಗೂ ತಿಳಿಸುವೆವು.

ಇಂತು ಬ್ರಹ್ಮಚರ್ಯವಿಧಿ ಎಂಬ ಅಷ್ಟಮಾಶಯವು.

## ನವಮಾಶಯವು.

### ಸದಾಚಾರ.

ಜಗತ್ತಿನ ಸುಖವು ನಮಗೆ ನ್ಯಾಯವಾಗಿ ದೊರಿಯಬೇಕಾದರೆ " ಶರೀರಮಾದ್ಯಂ ಖಲುಧರ್ಮಸಾಧನಮ್ " ಎಂಬ ಉಕ್ತಿಯಂತೆ ನಮ್ಮ ಶರೀರವು ನೀರೋಗದೃಢವಾಗಿರಬೇಕಾದದ್ದು ಮೊದಲನೇ ವಿಷಯವಾಗಿದೆ. ಅದಕ್ಕಾಗಿ ಬ್ರಹ್ಮಚರ್ಯಾನುಷ್ಠಾನ ಕ್ರಮವನ್ನು ಸ್ವಲ್ಪಮಟ್ಟಿಗೆ ವಿವರಿಸಿದೆವು.

ಪರಮೇಶ್ವರನ ವಿಚಿತ್ರ ವ್ಯಾಪಾರವಾದ ಈ ಪ್ರಪಂಚರಚನೆಯಲ್ಲಿ ಪ್ರಜಾಸೃಷ್ಟಿಗೆ ಮುಖ್ಯ ಕಾರಣವಾದ ಕಾಮೇಚ್ಛೆಯನ್ನು ಸ್ತ್ರೀಯರಿಗೂ, ಪುರುಷರಿಗೂ ಏರ್ಪಡಿಸಿ, ಅದು ಪ್ರವೃದ್ಧಿಯಾಗಲು ಸಕಲ ಧಾನ್ಯ ಫಲ ಮೂಲ ಶಾಕಾದ್ಯನ್ನವರ್ಗವನ್ನೂ ದಧಿ ಘೃತ ಕ್ಷೀರ ಜೇನುತುಪ್ಪ ಶರ್ಕರಾದಿಗಳನ್ನೂ ಹೇರಳವಾಗಿ ಸೃಷ್ಟಿಸಿರುತ್ತಾನೆ.

" ತಾಂಬೂಲಂ ಮಧು ಕುಸುಮಸ್ರಜೋ ವಿಚಿತ್ರಾಃ |
ಕಾಂತಾರಂ ಸುತರುವನಂ ವಿಲಾಸವತ್ಯಃ ||
ಗೀತಾನಿ ಶ್ರವಣಹರಾಣಿ ಮೃಷ್ಟಮನ್ನಮ್ |
ಕ್ಲೀಬಾನಾಮಪಿ ಜನಯಂತಿ ಪಂಚಬಾಣಮ್ || "

" ಸಕಲ ಪರಿಕರ ಸಂಪನ್ನವಾದ ತಾಂಬೂಲಸೇವನೆ, ಸೀಧು ಮುಂತಾದ ಮದ್ಯಪಾನ, ವಿಚಿತ್ರವಾದ ಪುಷ್ಪಸ್ರಜಗಳ ಧಾರಣೆ, ಸುಂದರತರ ಶೀತಲ ಚ್ಛಾಯೆಯುಳ್ಳ ವೃಕ್ಷಗಳ ಉದ್ಯಾನ ವನವಿಹಾರ, ವಿಲಾಸಾತಿಶಯದಿಂದ ಮರುಳುಗೊಳಿಸುವ ಕಾಮಿನಿಯರು, ವೀಣಾ, ಪಿಟೀಲು, ಹಾರ್ಮೋನಿಯಂ, ತಬಲಾ ಮುಂತಾದ ವಾದ್ಯಗಳ ಮಂಜುಲ ನಾದದೊಡನೆ ಲಯಕ್ಕೆ ಸರಿಯಾಗಿ ಹಾಡತಕ್ಕ, ಶ್ರವಣಸುಖಕರವಾದ ಸಂಗೀತದ ಶ್ರವಣ, ಋಣ ರೋಗಾದಿಗಳಿಲ್ಲದೆ ಆನಂದದಿಂದ ಭುಜಿಸತಕ್ಕ ದಿವ್ಯಾನ್ನವರ್ಗ ಇವುಗಳನ್ನು ಸೇವಿಸುವದರಿಂದ ನಪುಂಸಕನಿಗೂ ಮನ್ಮಥಕಳೆಯುಂಟಾಗುವದು '' ಎಂದಿದೆ.

" ದೃಷ್ಟಿಸುಖಾ ಸಕಲಾ ತರುಜಾತಿಃ |
ಶ್ರೋತ್ರಸುಖಃ ಕಿಲ ಕೋಕಿಲನಾದಃ ||
ಅಂಗಸುಖರ್ತುನಶೇನ ವಿಭೂಷಾ |
ಚಿತ್ತಸುಖಃ ಸಕಲಃ ಪರಿವಾರಃ || "

ಅಂದರೆ " ವಿಧವಿಧ ಆನಂದೋತ್ಪಾದಕಗಳಾದ ವೃಕ್ಷವಿಶೇಷಗಳು ದೃಕ್ಪಥಕ್ಕೆ ಸುಖವನ್ನುಂಟು ಮಾಡುವವು; ಅಲ್ಲಲ್ಲಿ ಪರಮ ಮನೋಹರ ಗೀತಗಳಂತೆ ತಮ್ಮ ಕಲಕಲಧ್ವನಿಯಿಂದ ಆನಂದವನ್ನುಂಟು ಮಾಡುತ್ತಿರುವ ಕೋಕಿಲಾದಿ ಪಕ್ಷಿಗಳ ರವವು ಶ್ರೋತ್ರೇಂದ್ರಿಯಕ್ಕೆ ಅಪರಿಮಿತಾನಂದಪ್ರದವು; ವಸಂತಾದಿ ಋತುಧರ್ಮಗಳನ್ನನುಸರಿಸಿ ವಿಭೂಷಣಾದಿಗಳು ಅಂಗ (ದೇಹ) ಕ್ಕೆ ಸುಖಾಸ್ಪದಗಳು; ಇದಲ್ಲದೆ ತನ್ನ ಸಕಲ—ಮಾತಾ, ಪಿತಾ, ಪತ್ನೀ, ಪುತ್ರ, ಭ್ರಾತಾ, ಪಿತೃವ್ಯ ಮುಂತಾದ ಪರಿವಾರವು ತನ್ನ ಸಂತೋಷದೊಂದಿಗೆ ಮಿಳಿತರಾಗಿರಲು ಮನಸ್ಸಿಗುಂಟಾಗುವ ಆನಂದವು ಅವರ್ಣನೀಯವಾದದ್ದು ! ! ''

" ತಾಂಬೂಲ ಮಚ್ಛಮದಿರಾ |
ಕಾಂತಾ ಕಾಂತಾ ನಿಶಾ ಶಶಾಂಕಾಂಕಾ ||
ಯದ್ಯಚ್ಚ ಕಿಂಚಿದಿಷ್ಟಮ್ |
ಮನಸೋ ವಾಜೀಕರಂ ತತ್ತತ್ || "

" ತಾಂಬೂಲವೂ, ನಿರ್ಮಲವಾದ ಮದಿರಾ (ಮದ್ಯ) ಪಾನವೂ, ವಿಲಾಸಾಸ್ಪದರಾದ ಕಾಮಿನಿಯರು, ಪೂರ್ಣ ಚಂದ್ರನಿಂದ ಕೂಡಿರುವ ಬೆಳದಿಂಗಳಲ್ಲಿ ರಮಣಮಾಡುವಿಕೆಯೂ, ಇನ್ನೂ ಮುಂತಾದ ಮನಸ್ಸಿಗೆ ಹರ್ಷವನ್ನುಂ

ಟುಮಾಡುವ ಕಾಮೋತ್ತೇಜಕ ಪರಿಕರಗಳು ಮನುಷ್ಯನಿಗೆ ಉಂಟಾಗುವ ಗೃಹಕೃತ್ಯದ ದುಃಖಾನುಭವವನ್ನು ತಪ್ಪಿಸಿ ಪರಮಹರ್ಷಪ್ರದಗಳಾಗುವವು. ”

ಹೀಗೆ ನಾವು ಭುಜಿಸುವ, ಅನುಭವಿಸುವ, ಸಹವಾಸದಿಂದಿರುವ ಸಕಲವೂ ನಮ್ಮ ಕ್ಷೇಮಾರ್ಥವಾಗಿಯೇ ನಿರ್ಮಿಸಲ್ಪಟ್ಟಿರುವವು. ಪರಂತು ನಾವು ಪ್ರತ್ಯಹವೂ ಆಚರಿಸತಕ್ಕ ವ್ಯವಹಾರಗಳನ್ನು ಶಾಸ್ತ್ರತಃ ಚೆನ್ನಾಗಿ ತಿಳಿಯದೆ, ವಿಷಮವಾಗಿ ಅನುಷ್ಠಿಸುವದರಿಂದ ವಿಧವಿಧ ದೋಷಗಳಿಗೆ ಒಳಗಾಗುತ್ತೇವೆ. ಮುಖ್ಯವಾಗಿ:—

**“ ನ ವೇಗಾನ್ ಧಾರಯೇದ್ಧೀಮಾನ್ ಜಾತಾನ್ ಮೂತ್ರಪುರೀಷಯೋಃ ॥ ನ ರೇತಸೋ ನ ವಾತಸ್ಯ ನ ವಮ್ಯಾಃ ಕ್ಷವಥೋರ್ನ ಚ ॥ ನೋದ್ಗಾರಸ್ಯ ನ ಜೃಂಭಾಯಾ ನ ವೇಗಾನ್ ಕ್ಷುತ್ಪಿಪಾಸಯೋಃ॥ ನ ಬಾಷ್ಪಸ್ಯ ನ ನಿದ್ರಾಯಾಃ ನ ಶ್ವಾಸಸ್ಯ ಶ್ರಮೇಣ ಚ॥”**

“ ಬುದ್ಧಿವಾನ್ ಪುರುಷನು—ಮೂತ್ರ, ಮಲ, ವೀರ್ಯ, ವಾಯು, ಛರ್ದಿ, ಶೀನು, ಆಕಳಿಕೆ, ಬಿಕ್ಕಳಿಕೆ, ಹಸಿವು, ಬಾಯಾರಿಕೆ, ಬಾಷ್ಪ, ನಿದ್ರಾ, ಶ್ರಮದಿಂದುಂಟಾದ ಶ್ವಾಸ ಇವುಗಳ ವೇಗವನ್ನು ತಡಿಯಬಾರದು. ”

**“ ವಸ್ತಿಮೇಹನಯೋಃ ಶೂಲಂ ಮೂತ್ರಕೃಚ್ಛ್ರಂ ಶಿರೋರುಜಾ॥ ವಿನಾಮೋ ವಂಕ್ಷಣಾನಾಹಃ ಸ್ಯಾಲ್ಲಿಂಗೇ ಮೂತ್ರನಿಗ್ರಹೇ ॥ ”**

“ ಮೂತ್ರದ ವೇಗವನ್ನು ತಡಿಯುವದರಿಂದ—ವಸ್ತಿ ತಥಾ ಲಿಂಗದಲ್ಲಿ ಪೀಡಾ, ಮೂತ್ರಕೃಚ್ಛ್ರ, ಶಿರಸ್ಸಿನಲ್ಲಿ ಬಾಧೆ, ವಿನಾಮ ಮತ್ತು ವಂಕ್ಷಣಸ್ಥಾನಗಳಲ್ಲಿ ಆನಾಹವೆಂಬ ವಾತರೋಗ ಇವು ಉಂಟಾಗುತ್ತವೆ. ”

**“ ಸ್ವೇದಾವಗಾಹನಾಭ್ಯಂಗಾನ್ ಸರ್ಪಿಷಶ್ಚಾವಪೀಡಕಮ್ ॥ ಮೂತ್ರೇ ಪ್ರತಿಹತೇ ಕುರ್ಯಾತ್ ತ್ರಿವಿಧಂ ವಸ್ತಿಕರ್ಮ ಚ ॥ ”**

“ ಮೂತ್ರ ನಿರೋಧದಿಂದುಂಟಾದ ರೋಗಗಳ ಪ್ರತೀಕಾರಕ್ಕಾಗಿ—ಸ್ವೇದ, ಅವಗಾಹನ, ಅಭ್ಯಂಗಗಳನ್ನು ಮಾಡಿಸುವದಲ್ಲದೆ, ವಾಯುವನ್ನು ಅನುಲೋಮಪಡಿಸುವದಕ್ಕಾಗಿ ಘೃತಮರ್ದನವೂ, ಮೂರು ವಿಧವಾದ ವಸ್ತಿಕರ್ಮವೂ ಅನುಷ್ಠೇಯವಾದವುಗಳು. ”

**“ ಪಕ್ವಾಶಯಶಿರಶ್ಶೂಲಂ ವಾತವರ್ಚೋನಿರೋಧನಮ್ ॥ ಪಿಂಡಕೋದ್ವೇಷ್ಟನಾಧ್ಮಾನಂ ಪುರೀಷೇ ಸಾಧ್ವಿಧಾರಿತೇ ॥ ”**

“ ಮಲವನ್ನು ತಡಿಯುವದರಿಂದ—ಪಕ್ವಾಶಯದಲ್ಲಿಯೂ, ಶಿರಸ್ಸಿನಲ್ಲಿಯೂ ಪೀಡಾ, ವಾಯು ತಥಾ ಮಲಗಳ ನಿರೋಧ, ಕರಳುಗಳಲ್ಲಿ ಸುತ್ತಿದಂತಾಗುವಿಕೆ, ಆಧ್ಮಾನ ವಾಯುಪ್ರಕೋಪ ಇವು ಉಂಟಾಗುವವು. ”

"ಸ್ವೇದಾಭ್ಯಂಗಾವಗಾಹಾಶ್ಚ ವರ್ತಯೋ ವಸ್ತಿಕರ್ಮ ಚ ||
ಹಿತಂ ಪ್ರತಿಹತೇ ವರ್ಚಸ್ಯನ್ನಪಾನಂ ಪ್ರಮಾಥಿಚ ||"

"ಮಲರೋಧನದಿಂದುಂಟಾದ ರೋಗನಿವೃತ್ತಿಗಾಗಿ—ಸ್ವೇದ, ಅಭ್ಯಂಗ, ವರ್ತಿ, ವಸ್ತಿಕರ್ಮ ಹಾಗೆಯೇ ವಾಯುವನ್ನು ಸರಿಪಡಿಸತಕ್ಕ ಅನ್ನಪಾನಾದಿಗಳೂ ಹಿತಕರಗಳು."

"ಮೇಢ್ರವೃಷಣಯೋಃ ಶೂಲಂ ಅಂಗಮರ್ದೋ ಹೃದಿ ವ್ಯಥಾ || ಭವೇತ್ಪ್ರತಿಹತೇ ಶುಕ್ರೇ ವಿಬದ್ಧಂ ಮೂತ್ರಮೇವ ಚ||"

"ವೀರ್ಯದ ವೇಗವನ್ನು ತಡಿಯುವದರಿಂದ—ಲಿಂಗ, ಅಂಡಕೋಶ, ಹೃದಯ ಇವುಗಳಲ್ಲಿ ಶೂಲೆಯುಂಟಾಗುವಿಕೆ, ಮೂತ್ರಕಟ್ಟುವಿಕೆ ಈ ರೋಗಗಳುಂಟಾಗುವವು."

"ತತ್ರಾಭ್ಯಂಗಾವಗಾಹಾಶ್ಚ, ಮದಿರಾ ಚರಣಾಯುಧಾಃ || ಶಾಲಿಃ ಪಯೋ ನಿರೂಹಾಶ್ಚ ಶಸ್ತಂ ಮೈಥುನಮೇವ ಚ ||"

"ವೀರ್ಯವನ್ನು ತಡಿಯುವದರಿಂದುಂಟಾದ ರೋಗನಿವೃತ್ತಿಗಾಗಿ—ಅಭ್ಯಂಗ, ಅವಗಾಹನ, ಮದ್ಯಪಾನ, ಕೋಳಿಯ ಮಾಂಸಾಹಾರ ಹಾಗೆಯೇ ಶಾಲಿಧಾನ್ಯದ ಭೋಜನ, ಹಾಲಿನ ನಿರೂಹ ವಸ್ತಿಕರ್ಮ ಮತ್ತು ಮೈಥುನ ಮಾಡುವಿಕೆ ಇವೇ ಹಿತಕರಗಳು."

"ವಾತ ಮೂತ್ರ ಪುರೀಷಾಣಾಂ, ಸಂಗೋಧ್ಮಾನಂ ಕ್ಲಮೋ ರುಜಾ|| ಜಠರೇ ವಾತಜಾಶ್ಚಾನ್ಯೇ ರೋಗಾ ಸ್ಯುರ್ವಾತ ನಿಗ್ರಹಾತ್||"

"ವಾಯು (ಅಧೋವಾಯು) ವೇಗವನ್ನು ತಡಿಯುವದರಿಂದ-ವಾಯು ಮೂತ್ರ ಮಲಗಳು ತಡಿಯಲ್ಪಡುವವು. ಗ್ಲಾನಿ, ಉದರದಲ್ಲಿ ಪೀಡಾ, ಇನ್ನೂ ಅನೇಕ ವಾತವ್ಯಾಧಿಗಳುಂಟಾಗುವವು."

"ಸ್ನೇಹ ಸ್ವೇದ ವಿಧಿಸ್ತತ್ರ ವರ್ತಯೋ ಭೋಜನಾನಿ ಚ ||
ಪಾನಾನಿ ವಸ್ತಯಶ್ಚೈವ ಶಸ್ತಂ ವಾತಾನುಲೋಮನಾವ್ ||"

"ವಾಯುವನ್ನು ತಡಿಯುವದರಿಂದುಂಟಾಗುವ ರೋಗಗಳ ನಿವೃತ್ತಿಗಾಗಿ—ಸ್ನೇಹನ, ಸ್ವೇದಕರ್ಮ, ವರ್ತಿ, ವಾಯುವನ್ನು ಅದರ ಮಾರ್ಗಕ್ಕನುಸಾರವಾಗಿರುವಂತೆ ಮಾಡತಕ್ಕ ಆಹಾರ ಮತ್ತು ಪಾನಗಳು, ವಸ್ತಿಕರ್ಮ ಇವು ಹಿತವಾದವುಗಳು."

"ಕಂಡೂ ಕೋಠಾಽರುಚಿ ವ್ಯಂಗ ಶೋಥ ಪಾಂಡ್ವಾಮಯ ಜ್ವರಾಃ || ಕುಷ್ಟ ಹುಲ್ಲಾಸ ವೀಸರ್ಪ ಶ್ಛರ್ದಿ ನಿಗ್ರಹಜಾ ಗದಾಃ||"

"ಛರ್ದಿ (ವಾಂತಿ) ಯನ್ನು ತಡಿಯುವದರಿಂದ ಮೈನವೆ, ಚರ್ಮವ್ಯಾಧಿ, ಅರುಚಿ, ವ್ಯಂಗವ್ಯಾಧಿ, ಶೋಫೆ, ಪಾಂಡು, ಜ್ವರ, ಕುಷ್ಟ, ವಿಸರ್ಪಜಾಡ್ಯ ಮುಂತಾದ ವ್ಯಾಧಿಗಳುಂಟಾಗುವವು."

"ಭುಕ್ತ್ವಾ ಪ್ರಚ್ಛರ್ದನಂ ಧೂಮೋಲ್ಲಂಘನಂ ರಕ್ತಮೋಕ್ಷಣಮ್||
ರೂಕ್ಷಾನ್ನಪಾನಂ ವ್ಯಾಯಾಮೋ ವಿರೇಕಶ್ಚಾತ್ರ ಶಸ್ಯತೇ ||"

"ಛರ್ದಿಯನ್ನು ತಡಿಯುವದರಿಂದುಂಟಾದ ವ್ಯಾಧಿನಿವಾರಣೆಗಾಗಿ— ಭೋಜನಮಾಡಿ ವಮನ ಮಾಡುವಿಕೆ, ಧೂಮ್ರಪಾನ, ಲಂಘನ, ರಕ್ತಮೋಕ್ಷಣೆ, ಒಣ ಅನ್ನಪ್ರಾಶನ, ವ್ಯಾಯಾಮ ಸೇವನೆ, ಭೇದಿಗೆ ಔಷಧ ಕೊಡುವಿಕೆ ಇವು ಹಿತಗಳು."

"ಮನ್ಯಾಸ್ತಂಭಃ ಶಿರಶ್ಶೂಲಮರ್ದಿತಾವರ್ಧಭೇದಕೌ || ಇಂದ್ರಿ
ಯಾಣಾಂ ಚ ದೌರ್ಬಲ್ಯಂ ಕ್ಷವಥೋಃ ಸ್ಯಾದ್ವಿಧಾರಣಾತ್ ||"

"ಕ್ಷವಥುವನ್ನು ತಡಿಯುವದರಿಂದ—ಕುತ್ತಿಗೆಯ ಹಿಂದಿನ "ಮನ್ಯಾ" ಎಂಬ ನಾಡಿಯಲ್ಲಿ ನೋವುಂಟಾಗುವಿಕೆ, ತಲೆಶೂಲೆ, ಅರ್ದಿತವಾತ, ಅರೆತಲೆನೋತ, ಇಂದ್ರಿಯಗಳಲ್ಲಿ ದುರ್ಬಲ ಇವು ಉಂಟಾಗುವವು."

"ತತ್ರೋರ್ಧ್ವಜತ್ರು ಕೋಭ್ಯಂಗಃ ಸ್ವೇದೋ ಧೂಮಃ ಸನಾ
ವನಃ|| ಹಿತಂ ವಾತಘ್ನಮಾದ್ಯಂ ಚ, ಘೃತಂ ಚೋತ್ತರ ಭಕ್ತಿಕಮ್||"

"ಶೀನನ್ನು ತಡಿಯುವದರಿಂದುಂಟಾಗುವ ರೋಗನಿವಾರಣೆಗಾಗಿ— ತೈಲಮರ್ದನ, ಸ್ವೇದನ, ಧೂಮ್ರಪಾನ, ನಸ್ಯ ಮತ್ತು ವಾತಘ್ನ ಘೃತಯುಕ್ತ ಭೋಜನ ಇವು ಪ್ರಶಸ್ತವಾದವುಗಳು."

"ಹಿಕ್ಕಾ ಕಾಸೋಽರುಚಿಃ ಕಂಪೋ ವಿಬಂಧೋ ಹೃದಯೋ ರಸಃ||
ಉದ್ಗಾರ ನಿಗ್ರಹಾತ್ತತ್ರ ಹಿಕ್ಕಾಯಾಸ್ತುಲ್ಯಮೌಷಧಮ್ ||"

"ಉದ್ಗಾರನಿಗ್ರಹದಿಂದ—ಬಿಕ್ಕಳಿಕೆ, ಕೆಮ್ಮು, ಅರುಚಿ, ಕಂಪ, ಹೃದಯ ಮತ್ತು ಎದೆಯಲ್ಲಿ ಹಿಡಿದಂತಾಗುವಿಕೆ ಈ ರೋಗಗಳು ಹುಟ್ಟುವವು."

☞ ಬಿಕ್ಕಳಿಕೆಯ ನಿಗ್ರಹದಿಂದುಂಟಾಗುವ ಉಪಚಾರಗಳೇ ಇದಕ್ಕೂ ಬರುತ್ತವೆ."

"ವಿನಾಮಾಕ್ಷೇಪ ಸಂಕೋಚಾಃಸುಪ್ತಿಃ ಕಂಪಃ ಪ್ರವೇದನಮ್||
ಜೃಂಭಾಯಾನಿಗ್ರಹಾತ್ತತ್ರ ಸರ್ವ ವಾತಘ್ನಮೌಷಧಮ್ ||"

"ಆಕಳಿಕೆಯನ್ನು ತಡಿಯುವದರಿಂದ ವಿನಾಮಾದಿ ವಾಯುರೋಗಗಳೂ, ಸ್ಪರ್ಶಜ್ಞಾನವಿಲ್ಲದಿರುವಿಕೆ, ಕಂಪನ ಮುಂತಾದವು ಉಂಟಾಗುವವು."

☞ ಇದಕ್ಕೆ ವಾತನಿಗ್ರಹಕ್ಕೆ ಹೇಳಿದ ಔಷಧಗಳೇ ಹಿತಕರವಾದವುಗಳು.

"ಕಾರ್ಶ್ಯ ದೌರ್ಬಲ್ಯ ವೈವರ್ಣ್ಯ ಮಂಗಮರ್ದೋಽರುಚಿರ್ಭ್ರ
ಮಃ|| ಕ್ಷುದ್ವೇಗ ನಿಗ್ರಹಾತ್ತತ್ರ ಸ್ನಿಗ್ಧೋಷ್ಣಂ ಲಘು ಭೋಜನಮ್||"

"ಹಸಿವನ್ನು ತಡಿಯುವದರಿಂದ—ಕೃಶತಾ, ದುರ್ಬಲತ್ವ, ವಿವರ್ಣತಾ, ಅಂಗಗಳಲ್ಲಿ ಪೀಡಾ, ಅರುಚಿ, ಭ್ರಮೆ- ಇವು ಉಂಟಾಗುವವು.

☞ ಇವುಗಳ ನಿವೃತ್ತಿಗಾಗಿ ಸ್ನಿಗ್ಧ—(ತುಪ್ಪ ಹಾಲು ಮೊಸರು ಮಿಶ್ರ) ವಾದ, ಬಿಶಿಯಾದ, ಲಘು ಭೋಜನವನ್ನು ಮಾಡತಕ್ಕದ್ದು."

**"ಕಂಠಾಸ್ಯಶೋಷೋ ಬಾಧಿರ್ಯಂ, ಶ್ರಮಃ ಶ್ವಾಸೋ ಹೃದಿ ವ್ಯ**
**ಥಾ ॥ ಪಿಪಾಸಾ ನಿಗ್ರಹಾತ್ತತ್ರ ಶೀತಂ ತರ್ಪಣಮಿಷ್ಯತೇ ॥"**

"ಬಾಯಾರಿಕೆಯನ್ನು ತಡಿಯುವದರಿಂದ—ಕಂಠ ಮತ್ತು ಬಾಯಿ ಒಣಗುವಿಕೆ, ಕಿವಿಡಾಗುವಿಕೆ, ಶ್ರಮ, ಶ್ವಾಸ, ಹೃದಯದಲ್ಲಿ ಪೀಡಾ ಇವು ಉಂಟಾಗುವವು.

☞ ಈ ರೋಗಗಳ ನಿವೃತ್ತಿಗಾಗಿ—ಶೀತಲೋಪಚಾರವನ್ನು ಮಾಡತಕ್ಕದ್ದು."

**"ಪ್ರತಿಶ್ಯಾಯೋಽಕ್ಷಿರೋಗಶ್ಚ ಹೃದ್ರೋಗಶ್ಚಾಽರುಚಿರ್ಭ್ರಮಃ॥**
**ಬಾಷ್ಪ ನಿಗ್ರಹಣಾತ್ತತ್ರ ಸ್ವಪ್ನೋ ಮದ್ಯಂ ಪ್ರಿಯಾಃ ಕಥಾಃ ॥"**

"ಬಾಷ್ಪನಿಗ್ರಹದಿಂದ—ಪ್ರತಿಶ್ಯಾಯವೆಂಬ ವ್ಯಾಧಿ, ನೇತ್ರರೋಗ, ಹೃದಯರೋಗ, ಅರುಚಿ, ಭ್ರಮೆ ಇವು ಉಂಟಾಗುವವು.

☞ ಈ ರೋಗನಿವೃತ್ತಿಗಾಗಿ—ನಿದ್ರೆಯೂ, ಮದ್ಯಪಾನವೂ, ಪ್ರಿಯವಾದ ಕಥಾಶ್ರವಣವೂ ಹಿತಕರಗಳು."

**"ಜೃಂಭಾಂಗಮರ್ದಸ್ತಂದ್ರಾ ಚ ಶಿರೋರೋಗಾಕ್ಷಿ ಗೌರವ**
**ಮ್ ॥ ನಿದ್ರಾವಿಧಾರಣಾತ್ತತ್ರ ಸ್ವಪ್ನಸ್ಸಂವಾಹನಾನಿ ಚ ॥"**

"ನಿದ್ರೆಯನ್ನು ತಡಿಯುವದರಿಂದ—ಆಕಳಿಕೆ, ಶರೀರದಲ್ಲಿ ಪೀಡಾ, ತಂದ್ರಾ, ಕಣ್ಣುಗಳು ಭಾರವಾಗಿರುವಿಕೆ, ಶಿರೋರೋಗ ಇವು ಉಂಟಾಗುವವು.

☞ ಈ ರೋಗನಿವೃತ್ತಿಗಾಗಿ—ನಿಶ್ಚಿಂತೆಯಿಂದ ನಿದ್ರಿಸುವಿಕೆ, ಕಾಲುಗಳನ್ನು (ಪ್ರಿಯವುಳ್ಳ ಕಾಮಿನಿಯು) ಒತ್ತುವಿಕೆ ಇವು ಹಿತಕರಗಳು."

**"ಗುಲ್ಮ ಹೃದ್ರೋಗ ಸಮ್ಮೋಹಾಃ ಶ್ರಮ ನಿಶ್ವಾಸ ಧಾರಣಾತ್॥**
**ಜಾಯಂತೇ ತತ್ರ ವಿಶ್ರಾಮೋ ವಾತಘ್ನಾಶ್ಚ ಕ್ರಿಯಾಹಿತಾಃ॥"**

"ಶ್ರಮದಿಂದುಂಟಾದ ಶ್ವಾಸವನ್ನು ತಡಿಯುವದರಿಂದ—ಗುಲ್ಮರೋಗ, ಹೃದ್ರೋಗ, ಮೋಹ ಇವು ಸಂಭವಿಸುವವು.

☞ ಇವುಗಳ ನಿವೃತ್ತಿಗಾಗಿ—ವಿಶ್ರಾಮವೂ, ವಾತಹರ ಉಪಚಾರಗಳೂ ಹಿತಕರಗಳು."

" ಇಮಾಂಸ್ತು ಧಾರಯೇದ್ವೇಗಾನ್ ಹಿತೈಷೀ ಪ್ರೇತ್ಯ ಚೇಹ ಚ॥ ಸಾಹಸಾನಾಮಶಕ್ತಾನಾಂ ಮನೋ ವಾಕ್ಕಾಯ ಕರ್ಮಣಾಮ್ ॥ ಲೋಭ ಶೋಕ ಭಯ ಕ್ರೋಧ ಮಾನ ವೇಗಾನಿ ಧಾರಯೇತ್॥ ನೈರ್ಲಜ್ಜ್ಯೇ ರ್ಷ್ಯಾತಿರಾಗಾಣಾಮಭಿಧ್ಯಾಯಾಶ್ಚ ಬುದ್ಧಿಮಾನ್ ॥ ಪರುಷಸ್ಯಾತಿಮಾತ್ರಸ್ಯ ಸೂಚಕಸ್ಯಾನೃತಸ್ಯ ಚ ॥ ವಾಕ್ಯಸ್ಯಾ ಕಾಲ ಯುಕ್ತಸ್ಯ ಧಾರಯೇದ್ವೇಗಮುತ್ಥಿತಮ್ ॥ ದೇಹಪ್ರವೃತ್ತಿರ್ಯಾ ಕಾಚಿತ್ ವರ್ತತೇ ಪರಪೀಡಯಾ ॥ ಸ್ತ್ರೀಭೋಗ ಸ್ತೇಯ ಹಿಂಸಾದ್ಯಾಸ್ತಸ್ಯಾ ವೇಗಾನ್ ವಿಧಾರಯೇತ್ ॥ "

"ಈ ಲೋಕ ಮತ್ತು ಪರಲೋಕಗಳೆರಡರಲ್ಲಿ ಸುಖವನ್ನಪೇಕ್ಷಿಸುವವನು—ಅನುಚಿತವಾದ ಸಾಹಸ, ಅನುಚಿತವಾದ ಮಾನಸಿಕ ವಾಚಿಕ ಕಾಯಿಕ ಕಾರ್ಯಗಳು, ಲೋಭ, ಮೋಹ, ಶೋಕ, ಭಯ, ಕ್ರೋಧ, ಅಭಿಮಾನ, ನಿರ್ಲಜ್ಜತ್ವ, ಈರ್ಷ್ಯೆ, ಅತ್ಯಪೇಕ್ಷೆಪಡುವಿಕೆ, ಕಠೋರವಾಕ್ಯನ್ನಾಡುವಿಕೆ, ಚಾಡಿ, ಅಸತ್ಯ, ಸಮಯಕ್ಕೆ ಅಯೋಗ್ಯವಾದ ಮಾತುಗಳನ್ನಾಡುವಿಕೆ, ಪರರಿಗೆ ಪೀಡಿಸುವ ಪ್ರವೃತ್ತಿ, ಮೈಥುನ, ಚೋರತ್ವ, ಹಿಂಸಾ ಮುಂತಾದ ಈ ದುಸ್ಸ್ವಭಾವಗಳನ್ನು ತಡಿಯುವದು ಪರಮೋತ್ತಮವು."

" ಉಚಿತಾದಹಿತಾದ್ಧೀಮಾನ್, ಕ್ರಮಶೋ ವಿರಮೇನ್ನರಃ ॥ ಹಿತಂ ಕ್ರಮೇಣ ಸೇವೇತ ಕ್ರಮಂ ಚಾತ್ರೋಪದಿಶ್ಯತೇ ॥ ಪ್ರಕ್ಷೇಪಾಪಚಯೇ ತಾಭ್ಯಾಂ ಕ್ರಮಃ ಪಾದಾಂಶಿಕೋ ಭವೇತ್ ॥ ಏಕಾಂತರಂ ತತಶ್ಚೋರ್ಧ್ವಂ ದ್ವ್ಯಂತರಂ ತ್ರ್ಯಂತರಂ ತಥಾ ॥ ಕ್ರಮೇಣಾಪಚಿತಾ ದೋಷಾಃ ಕ್ರಮೇಣೋಪಚಿತಾ ಗುಣಾಃ ॥ ಸನ್ತೋಯಾಂತ್ಯಪುನರ್ಭಾವಮಪ್ರಕಮ್ಪ್ಯಾ ಭವಂತಿ ಚ ॥ "

"ಬುದ್ಧಿವಾನ್ ಪುರುಷನು ಅಭ್ಯಾಸ ಮಾಡಲ್ಪಟ್ಟ ಅಹಿತಾಚಾರಗಳನ್ನು ಕ್ರಮಕ್ರಮವಾಗಿ ಬಿಡುತ್ತಾ, ಹಿತಾಚಾರಗಳನ್ನು ಕ್ರಮಕ್ರಮವಾಗಿ ಸೇವಿಸತಕ್ಕದ್ದು. ಇದರ ಕ್ರಮವು ಹೇಗೆಂದರೆ:—ಅಹಿತಾಚಾರಗಳು ಆಚರಣೆಯಲ್ಲಿರುವವುಗಳೆಲ್ಲವನ್ನೂ ಒಟ್ಟುಗೂಡಿಸಿ, ಅವುಗಳಲ್ಲಿ ನಾಲ್ಕರಲ್ಲಿ ಒಂದು ಭಾಗವನ್ನು ಮೊದಲು ಬಿಡುವದು. ಅದರ ಸ್ಥಾನಕ್ಕೆ ಹಿತಾಚಾರದ ಮೊತ್ತದಲ್ಲಿ ಒಂದು ಭಾಗವನ್ನು ಆಚರಣೆಯಲ್ಲಿಟ್ಟುಕೊಳ್ಳುವದು. ಹೀಗೆ ಅನುಭವಕ್ಕೆ ಬಂದ ಕೆಲವು ಕಾಲದನಂತರ—ಅಹಿತಾಚಾರದ ಇನ್ನೊಂದು ಕಾಲುಭಾಗವನ್ನು ಬಿಟ್ಟು, ಹಿತಾಚಾರದ ಕಾಲುಭಾಗವನ್ನು ಸೇವಿಸತೊಡಗುವದು. ಹೀಗೆ ಮೂರನೇ ಅಹಿತಾಚಾರದ ಭಾಗವನ್ನೂ ಬಿಟ್ಟು ಹಿತಾಚಾರದ ೧ ಭಾಗವನ್ನು ಅನುಷ್ಠಾನಕ್ಕೆ ತಂದುಕೊಳ್ಳುವದು; ಇದಾದನಂತರ ಉಳಿದ ನಾಲ್ಕನೇ ಭಾ

ಗದ ಅಹಿತಾಚಾರಕ್ಕೂ ವಿಸರ್ಜನೆಯನ್ನು ಮಾಡಿ, ಉಳಿದಿರುವ ಹಿತಾಚಾರದ ನಾಲ್ಕನೇ ಭಾಗವನ್ನು ಸೇವಿಸುವದು. ಈಪ್ರಕಾರ ಮಾಡುವದರಿಂದ ಕ್ರಮವಾಗಿ ತಪ್ಪಿಸಲ್ಪಟ್ಟ ದೋಷಾಚರಣೆಯು ತಲೆಯೆತ್ತಲಾರದು. ಹೀಗೆಯೇ ಕ್ರಮಾಕ್ರಮವಾಗಿ ವೃದ್ಧಿಮಾಡಲ್ಪಟ್ಟ ಹಿತಾಚಾರವೂ ಸ್ಥಿರವಾಗುವದು. ''

ಈ ಜಗತ್ತಿನಲ್ಲಿ—ನೋಡುವಿಕೆ, ಕೇಳುವಿಕೆ, ಮೂಸಿನೋಡುವಿಕೆ, ಸ್ವಾದಪರಿಗ್ರಹಿಸುವಿಕೆ, ಸ್ಪರ್ಶಮಾಡುವಿಕೆಗಳೆಂಬ ೫ ಇಂದ್ರಿಯಗಳೂ, ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿಗಳೆಂಬ ಪಂಚೇಂದ್ರಿಯ ದ್ರವ್ಯಗಳೂ, ನೇತ್ರ, ಕಿವಿ, ನಾಸಿಕಾ, ಜಿಹ್ವಾ, ತ್ವಕ್‌ಗಳೆಂಬ ಪಂಚೇಂದ್ರಿಯ ಸ್ಥಾನಗಳೂ, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚೇಂದ್ರಿಯ ವಿಷಯಗಳೂ, ದರ್ಶನಬುದ್ಧಿ, ಶ್ರವಣಬುದ್ಧಿ, ಘ್ರಾಣಬುದ್ಧಿ, ರಸಾಸ್ವಾದನಬುದ್ಧಿ ಸ್ಪರ್ಶಬುದ್ಧಿಗಳೆಂಬ ೫ ಇಂದ್ರಿಯ ಬುದ್ಧಿಗಳೂ ಇವೆ. ಈ ಬುದ್ಧಿಯು—, ಇಂದ್ರಿಯಗಳು, ಅವುಗಳ ವಿಷಯಗಳು, ಮನಸ್ಸು ಮತ್ತು ಆತ್ಮಾ ಇವುಗಳ ಸಂಬಂಧದಿಂದುಂಟಾಗುತ್ತದೆ. ಪಂಚಮಹಾಭೂತ ಸಂಬಂಧೀ ವಿಕಾರಗಳ ಸಮುದಾಯ ರೂಪವೂ ಇಂದ್ರಿಯಗಳಿಂದಾಗುವದರಿಂದ—ಚಕ್ಷುರಿಂದ್ರಿಯದಿಂದ ತೇಜಸ್ಸು, ಶ್ರೋತ್ರೇಂದ್ರಿಯದಿಂದ ಆಕಾಶ, ಘ್ರಾಣೇಂದ್ರಿಯದಿಂದ ಪೃಥ್ವೀ, ರಸನೇಂದ್ರಿಯದಿಂದ ಜಲ, ಸ್ಪರ್ಶನೇಂದ್ರಿಯದಿಂದ ವಾಯು ಹೀಗೆ ತಿಳಿಯುತ್ತದೆ. ಮನಸ್ಸಿನ ವಿಷಯವು "ಮನಸಸ್ತು ಚಿಂತ್ಯರ್ಥಃ" ಎಂಬಂತೆ "ಚಿಂತಿಸುವಿಕೆ" ಯು; ಮನಸ್ಸು ಮತ್ತು ಬುದ್ಧಿಯ ವಿಷಯಗಳೊಡನೆ ಸಮಯೋಗ, ಅಧಿಕಯೋಗ, ಹೀನಯೋಗ, ಅನುಚಿತಯೋಗವೇ ಪ್ರಕೃತಿ, ವಿಕೃತಿಗಳಲ್ಲಿ ಕಾರಣವಾಗಿದೆ. ಇಲ್ಲಿ ಮನಸ್ಸು ಇಂದ್ರಿಯಗಳ ವ್ಯಾಪಾರಕ್ಕೆ ಕಾರಣವಾದದ್ದು; ಸ್ವಾರ್ಥ, ಇಂದ್ರಿಯಾರ್ಥ ಸಂಕಲ್ಪಗಳ ವ್ಯಭಿಚಾರ (ಕ್ರಮವಿಲ್ಲದಿರುವಿಕೆ) ಯಿಂದ, ಸತ್ವರಜಸ್ತಮೋ ಗುಣಗಳ ಯೋಗದಿಂದ ಒಬ್ಬನೇ ಪುರುಷ (ವ್ಯಕ್ತಿ) ನಲ್ಲಿ ಅನೇಕವಾಗಿ ತೋರುತ್ತದೆ. ಅಂದರೆ ಮನುಷ್ಯನು (ಯಾವಾಗಲಾದರೂ) ಸುಖೀ, ದುಃಖಿಯಾಗಿರುತ್ತಾನೆ. ನೋಡುತ್ತಾನೆ, ಕೇಳುತ್ತಾನೆ; (ಯಾವಾಗಲೋ) ಶ್ವೇತವರ್ಣದಲ್ಲಿ, ಮತ್ತೊಂದುಸಲ ಪೀತವರ್ಣದಲ್ಲಿ ಇಷ್ಟವಿರುತ್ತದೆ. ಯಾವಾಗಲೋ ಸತ್ವಗುಣದಿಂದಿರುತ್ತಾನೆ, ಮತ್ತೊಂದುಸಲಕ್ಕೆ ರಜೋಗುಣದ ಅವಲಂಬನ ಮಾಡುತ್ತಾನೆ; ಆ ಮುಂದೆ ತಮೋಗುಣಕ್ಕೆ ಓಡುತ್ತಾನೆ; ಇದರಿಂದ ಅನುಮಾನ ಮಾಡಿದರೆ—"**ಒಬ್ಬ ಪುರುಷನಲ್ಲಿ ಅನೇಕ ಮನಸ್ಸುಗಳಿವೆ**" ಎಂದು ತಿಳಿಯುತ್ತದಷ್ಟೆ ? ಆದರೆ ಅದು ಸತ್ಯವಾದದ್ದಲ್ಲ ; ಯಾಕೆಂದರೆ ಮನುಷ್ಯನಲ್ಲಿ ಅನೇಕ ಮನಸ್ಸುಗಳಿರುವದಾದರೆ ಒಂದೇ ಸಮಯದಲ್ಲಿ ಅನೇಕ ಕಾರ್ಯಗಳಲ್ಲಿ ಬೇರೆ

ಬೇರೆ (ಪುರುಷನ) ಪ್ರವೃತ್ತಿಯಾಗಬೇಕಾಗಿತ್ತು; ಹೀಗೆ ಎಲ್ಲಿಯೂ ಕಾಣುವದಿಲ್ಲವಾದ್ದರಿಂದ ಮನಸ್ಸಿನ ಏಕತ್ವವೇ (ಒಂದೇ ಮನಸ್ಸು ಇರುವಿಕೆಯೇ) ನ್ಯಾಯವಾದದ್ದೆಂದು ತಿಳಿಯಬರುತ್ತದೆ.

**" ತತ್ರೇಂದ್ರಿಯಾಣಾಂ ಸಮನಸ್ಕಾನಾಂ ಅನುಪತಪ್ತಾನಾಂ ಅನುಪತಾಪಾಯ ಪ್ರಕೃತಿಭಾವೇ ಪ್ರಯತಿತವ್ಯಮೇಭಿರ್ಹೇತುಭಿಃ॥"**

" ಈ ಕಾರಣದಿಂದ ತಾಪರಹಿತ ಇಂದ್ರಿಯಗಳು ಮತ್ತು ಮನಸ್ಸು ಇವುಗಳಲ್ಲಿ ತಾಪ ಉಂಟಾಗದಿರುವದಕ್ಕಾಗಿ ಈ ಮುಂದೆ ಹೇಳುವ ಹೇತುಗಳಿಂದ ಅವುಗಳಿಗೆ ಸ್ವಭಾವದಲ್ಲಿ ಸ್ಥಿತವಾಗಿರಲು ಯತ್ನಮಾಡತಕ್ಕದ್ದು."

**" ತದ್ಯಥಾ—ಸಾತ್ಮ್ಯೇಂದ್ರಿಯಾರ್ಥ ಸಂಯೋಗೇನ ಬುದ್ಧ್ಯಾಸಮ್ಯಗವೇಕ್ಷ್ಯಾವೇಕ್ಷ್ಯ ಕರ್ಮಾಣಾಂ ಸಮ್ಯಕ್ಪ್ರತಿಪಾದನೇನ ದೇಶಕಾಲಾತ್ಮಗುಣ ವಿಪರೀತೋಪಸೇವನೇನ ಚೇತಿ ॥ ತಸ್ಮಾದಾತ್ಮಹಿತಂ ಚಿಕೀರ್ಷತಾ ಸರ್ವೇಣ ಸರ್ವಂ ಸರ್ವದಾ ಸ್ಮೃತಿಮಾಸ್ಥಾಯ ಸದ್ವೃತ್ತಮನುಷ್ಠೇಯಮ್ ॥ ತದ್ಧ್ಯನುಷ್ಠಾನಂ, ಯುಗಪತ್ ಸಂಪಾದಯತ್ಯರ್ಥದ್ವಯಂ ಆರೋಗ್ಯಮಿಂದ್ರಿಯ ವಿಜಯಂ ಚೇತಿ ॥ (ಚರಕಸೂತ್ರಸ್ಥಾನ)**

" ಈ ಕಾರಣವೇನೆಂದರೆ:—ಇಂದ್ರಿಯ ಮತ್ತು ವಿಷಯಗಳ ಸಾತ್ಮ್ಯ (ತನಗೆ ಅನುಕೂಲವಾದ) ಸಂಯೋಗ ಬುದ್ಧಿಯಿಂದ ಒಳ್ಳೇ ಪ್ರಕಾರವಾಗಿ ವಿಚಾರಮಾಡಿನೋಡಿಯೇ, ಕಾರ್ಯಗಳನ್ನು ಒಳ್ಳೇರೀತಿಯಿಂದ ಮಾಡತಕ್ಕದ್ದು, ಹಾಗೆಯೇ ದೇಶ ಕಾಲ ಮತ್ತು ಆತ್ಮಾ ಇವುಗಳಿಗೆ ವಿಪರೀತವಾದ ಆಚರಣೆಯನ್ನು ಮಾಡದಿರುವದು ಒಳ್ಳೇದು. ಇದರಿಂದ ಆತ್ಮಹಿತ ಕಾಮನಾ ಮಾಡತಕ್ಕ ಎಲ್ಲಾ ಮನುಷ್ಯರಿಗೂ ಸದಾ ಧ್ಯಾನಪೂರ್ವಕವಾಗಿ ವಿಚಾರ ಮಾಡಿ, ಸಂಪೂರ್ಣವಾದ " ಸದಾಚಾರ " ಗಳನ್ನಾಚರಿಸುವದರಿಂದ—(ಈ ಒಂದೇ ಕೃತ್ಯದಿಂದಲೇ) ಘನವಾದ ಆರೋಗ್ಯ ಪ್ರಾಪ್ತಿಯಾಗುವದಲ್ಲದೆ, ನಿರಾತಂಕವಾಗಿ ಇಂದ್ರಿಯಗಳ ವಶೀಕರಣವೆಂದರೆ ಸಂಯಮನವೂ ಸಿದ್ಧಿಯಾಗುವದು.

**" ತತ್ ಸದ್ವೃತ್ತಮಖಿಲೇನೋಪದೇಕ್ಷ್ಯಾಮಃ । ತದ್ಯಥಾ । ದೇವ ಗೋ ಬ್ರಾಹ್ಮಣಗುರು ವೃದ್ಧ ಸಿದ್ಧಾಚಾರ್ಯಾನರ್ಚಯೇತ್॥ ಅಗ್ನಿಮನುಚರೇತ್ । ಓಷಧೀಃ ಪ್ರಶಸ್ತಾ ಧಾರಯೇತ್ । ದ್ವೌ ಕಾಲಾವುಪಸ್ಪೃಶೇತ್। ಮಲಾಯತನೇಷ್ವಭೀಕ್ಷ್ಣಂ ಪಾದಯೋಶ್ಚ ವೈಮಲ್ಯಮಾದಧ್ಯಾತ್ । ತ್ರಿಃ ಪಕ್ಷಸ್ಯ ಕೇಶ ಶ್ಮಶ್ರು ಲೋ**

ಮನಶ್ಚಾ ಸಂಹಾರಯೇತ್ । ನಿತ್ಯಮನುಪಹತವಾಸಾಃ ಸುಮನಃ ಸುಗಂಧಿಃ ಸ್ಯಾತ್ ॥ ”

“ ಆ ಸಂಪೂರ್ಣ ಸದಾಚಾರಗಳನ್ನು ಉಪದೇಶಿಸುವೆವು:—ದೇವತಾ ಗುರು, ಗೋ, ಬ್ರಾಹ್ಮಣ, ವೃದ್ಧ, ಸಿದ್ಧ ಮತ್ತು ಆಚಾರ್ಯರುಗಳನ್ನು ಪೂಜಿಸುತ್ತಿರಬೇಕು, ಅಗ್ನಿಹೋತ್ರಾದಿ ವೇದೋಕ್ತ ಪಂಚಮಹಾ ಯಜ್ಞಗಳನ್ನಾಚರಿಸಬೇಕು, ಶ್ರೇಷ್ಠವಾದ ಓಷಧಿಯನ್ನು ಕ್ರಮವಾಗಿ ಧರಿಸಬೇಕು. ಉಭಯ ಸಂಧ್ಯಾಸಮಯದಲ್ಲಿ ಸಂಧ್ಯಾದ್ಯುಪಾಸನೆಗಳ ಮಾಡಬೇಕು. ದೇಹಗಳಲ್ಲಿ ಮಲಗಳು ಬರತಕ್ಕ ಸ್ಥಾನವನ್ನೂ, ಮುಖ್ಯವಾಗಿ ಪಾದಗಳನ್ನೂ ನಿರಂತರವೂ ನಿರ್ಮಲವಾಗಿಟ್ಟಿರಬೇಕು. ಏಕಪಕ್ಷ (೧೫ ದಿನಕ್ಕೆ) ದಲ್ಲಿ ಮೂರುಸಲ ಕ್ಷೌರಮಾಡಿಸತಕ್ಕದ್ದು. ಸದೈವ ನಿರ್ಮಲವಸ್ತ್ರವನ್ನು ಧರಿಸುತ್ತಿರಬೇಕು. ಮನಸ್ಸನ್ನು ಪ್ರಸನ್ನವಾಗಿಟ್ಟುಕೊಂಡಿರಬೇಕು. ಸುಗಂಧಿತ ವಸ್ತುಗಳನ್ನು ಉಪಯೋಗಿಸುತ್ತಿರಬೇಕು. ”

“ ಸಾಧುವೇಷಃ, ಪ್ರಸಾಧಿತ ಕೇಶೋಮೂರ್ಧ್ನ ಶ್ರೋತ್ರ ಪಾದ ತೈಲನಿತ್ಯಃ, ಪೂರ್ವಾಭಿಭಾಷೀ, ಸುಮುಖಃ । ದುರ್ಗೇಷ್ವಭ್ಯುಪಪತ್ತಾ, ಹೋತಾ, ಯಷ್ಟಾ, ದಾತಾ, ಚತುಷ್ಪಥಾನಾಂ ನಮಸ್ಕರ್ತಾ, ಅತಿಥೀನಾಂ ಪೂಜಕಃ, ಕಾಲೇ ಹಿತಮಿತ ಮಧುರಾರ್ಥವಾದೀ । ವಶ್ಯಾತ್ಮಾ, ಧರ್ಮಾತ್ಮಾ, ನಿಶ್ಚಿಂತೋ, ನಿರ್ಭೀಕೋ ಧೀಮಾನ್ ಹ್ರೀಮಾನ್, ಮಹೋತ್ಸಾಹಃ, ದಕ್ಷಃ, ಕ್ಷಮಾವಾನ್ ಧಾರ್ಮಿಕಃ, ಆಸ್ತಿಕಃ ವಿನಯಬುದ್ಧಿಃ । ಛತ್ರೀ, ದಂಡೀ, ಮೌನೀ, ಸೋಪಾನಸ್ಕೋ, ಯುಗಮಾತ್ರದೃಗ್ವಿಚರೇತ್ ॥ ”

“ ಸಾಧುವಸ್ತ್ರ (ಡ್ರೆಸ್) ದವನೂ, ತಲೆಕೂದಲನ್ನು ಬಾಚಿಕೊಂಡಿರುವವನೂ, ನಿತ್ಯದಲ್ಲಿಯೂ—ಶಿರಸ್ಸು ಕಿವಿ ಪಾದಗಳಿಗೆ ತೈಲ ಹಾಕಿಕೊಳ್ಳುವವನೂ, ಯಾರು ಬಂದರೂ ಮೊದಲೇ ಮಾತನಾಡಿಸುವವನೂ, ಕ್ರೋಧವರ್ಜಿತನೂ, ವಿಪತ್ತಿನಲ್ಲಿ (ಜನರಿಗೆ) ದಯೆಯನ್ನು ತೋರಿಸುವವನೂ, ಹವನಮಾಡುವವನೂ, ಯಜ್ಞ ಮಾಡುವವನೂ, ದಾನಶೂರನೂ, ನಾಲ್ಕು ರಸ್ತೆಯ ಬೀದಿಗಳಲ್ಲಿ ಶಿಕ್ಕುವ ಸ್ನೇಹಿತರಿಗೆ ನಮಸ್ಕಾರ ಮಾಡುವ ಶೀಲವುಳ್ಳವನೂ, ಅತಿಥಿಪೂಜಕನೂ, ಸಮಯದಲ್ಲಿ ಹಿತವಾದ ಮಿತವಾದ ಮಾತನ್ನಾಡುವವನೂ, ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿರುವವನೂ, ಸ್ವಧರ್ಮನಿಷ್ಠನೂ, ಚಿಂತಾರಹಿತನೂ, ನಿರ್ಭಯನೂ, ಲಜ್ಜಾಯುಕ್ತನೂ, ಬುದ್ಧಿಮಾನ್, ಭಾರೀ ಉತ್ಸಾಹವಂತನೂ, ಚತುರನೂ, ಕ್ಷಮಾಶೀಲನೂ, ಧರ್ಮಾತ್ಮನೂ, ಆಸ್ತಿಕನೂ, ವಿನಯ ಬುದ್ಧಿಯುಳ್ಳವನೂ, ಹೊರಗೆ ಹೋಗುವಾಗ-

ಛತ್ರೀಯುಕ್ತನಾಗಿ, ದಂಡಹಸ್ತನಾಗಿ, ಮೌನದಿಂದ, ಪಾದರಕ್ಷಾ ಧರಿಸಿದವನಾಗಿ, ನಾಲ್ಕು ಗಜ ದೂರದ ದಾರಿಯನ್ನು ನೋಡಿಕೊಳ್ಳುತ್ತಾ ನಡಿಯತಕ್ಕವನೂ ಆಗಿರಬೇಕು. ''

**" ಸರ್ವಪ್ರಾಣಿ ಬಂಧುಭೂತಃ ಸ್ಯಾತ್ । ಕ್ರುದ್ಧಾನಾಮನುನೇತಾ, ಭೀತಾನಾಮಾಶ್ವಾಸಯಿತಾ, ದೀನಾನಾಮಭ್ಯುಪಪತ್ತಾ, ಸತ್ಯಸಂಧಃ, ಸಾಮಪ್ರಧಾನಃ, ಪರಪರುಷ ವಚನ ಸಹಿಷ್ಣುಃ । ಅಮರ್ಷಘ್ನಃ । ಪ್ರಶಮಗುಣದರ್ಶೀ ॥ "**

" ಎಲ್ಲಾ ಜೀವಿಗಳೊಂದಿಗೂ ಅಣ್ಣತಮ್ಮಂದಿರಂತೆ ಆಚರಿಸುವವನೂ, ಕ್ರುದ್ಧರನ್ನು ಸಮಾಧಾನಪಡಿಸುವವನೂ, ಭೀತರಾಗಿರುವವರಿಗೆ ಧೈರ್ಯೋತ್ಸಾಹವನ್ನು ಕೊಡುವವನೂ, ದೀನರಮೇಲೆ ದಯಾಪೂರ್ಣನೂ, ಸತ್ಯವಾದ ಪ್ರತಿಜ್ಞಾಪರನೂ, ಶಾಂತಪ್ರಧಾನನೂ, ಇತರರು ಕಠೋರ ವಚನವನ್ನು ಹೇಳಿದರೂ ಸಹಿಸತಕ್ಕವನೂ, ಕ್ರೋಧವನ್ನು ತಡಿಯುವವನೂ, ಉತ್ತಮ ಗುಣಗಳನ್ನು ಇತರರಿಗೆ ಮೇಲ್ಪಂಕ್ತಿಯಂತೆ ತೋರಿಸುವವನೂ ಆಗಿರಬೇಕು. ''

**" ರಾಗ ದ್ವೇಷ ಹೇತೂನಾಂ ಹನ್ತಾ, ನಾನೃತಂಬ್ರೂಯಾತ್ । ನಾನ್ಯಸ್ವಮಾದದೀತ । ನಾನ್ಯಸ್ತ್ರಿಯಮಭಿಲಷೇತ್ । ನಾನ್ಯ ಶ್ರಿಯಮಪಿ । ನ ವೈರಂ ರೋಚಯೇತ್। ನ ಕುರ್ಯಾತ್ಪಾಪಂ, ನ ಪಾಪೇಽಪಿ ಪಾಪೀ ಸ್ಯಾತ್ । ನಾನ್ಯದೋಷಾನ್ ಬ್ರೂಯಾತ್ । ನಾನ್ಯ ರಹಸ್ಯ ಮವಗಮಯೇತ್ ॥ "**

" ರಾಗ ತಥಾ ದ್ವೇಷಗಳ ಕಾರಣಗಳನ್ನೇ ನಾಶಮಾಡಬೇಕು. ಸುಳ್ಳನ್ನು ಹೇಳಬಾರದು, ಇತರರ ಧನವನ್ನು ಅಪಹರಿಸಬಾರದು, ಅನ್ಯನ ಸ್ತ್ರೀಯನ್ನು ಇಚ್ಛಿಸಬಾರದು, ಇತರರ ಐಶ್ವರವನ್ನಪಹರಿಸುವ ಯೋಚನೆ ಮಾಡಬಾರದು, ಯಾರೊಂದಿಗೂ ವೈರಮಾಡಬಾರದು, ಪಾಪ ಮಾಡಬಾರದು, ಪಾಪಿಯು ಜತೇಲಿದ್ದೂ ಪಾಪವನ್ನಾಚರಿಸಬಾರದು, ಇತರರಲ್ಲಿರುವ ದೋಷಗಳನ್ನು ಎಂದಿಗೂ ಹೇಳಬಾರದು, ಯಾರ ಅಂತರಂಗವನ್ನೂ ಪ್ರಕಟಿಸಬಾರದು. ''

**"ನಾಧಾರ್ಮಿಕೈರ್ನ ನರೇಂದ್ರದ್ವಿಷ್ಟೈಃ ಸಹಾಸೀತ। ನೋನ್ಮತ್ತೈರ್ನಪತಿತೈಃ ನ ಭ್ರೂಣಹನ್ತೃಭಿಃ ನ ಕ್ಷುದ್ರೈಃ ನ ದುಷ್ಟೈಃ ॥ ನ ದುಷ್ಟಯಾನಾನ್ಯಾರೋಹೇತ । ನ ಜಾನುಸಮಂ ಕಠಿಣಮಾಸನ ಮಧ್ಯಾಸೀತ ॥**

" ಪಾಪಿಷ್ಠರು, ರಾಜನ ಶತ್ರುಗಳು, ಉನ್ಮತ್ತರು, ಪತಿತರು, ಭ್ರೂಣಹರಣ ಮಾಡುತ್ತಾ ಜೀವಿಸುವವರು, ಕ್ಷುದ್ರರು, ದುಷ್ಟರು ಇವರೊಡನೆ

ಕುಳಿತುಕೊಳ್ಳಬಾರದು. ಕೆಟ್ಟ ಯಾನವನ್ನು ಹತ್ತಬಾರದು. ಒಂಟಿಗಾಲ ಕಠಿಣಾಸನದಲ್ಲಿ ಕುಳ್ಳಿರಬಾರದು.''

" ನಾನಾಸ್ತೀರ್ಣಮನುಪಹಿತಮವಿಶಾಲಂ ಅಸಮಂ ವಾ ಶಯನಂ ಪ್ರಪದ್ಯೇತ । ನ ಗಿರಿವಿಷಮ ಮಸ್ತಕೇಷ್ವನುಚರೇತ್ । ನ ದ್ರುಮಮಾರೋಹೇತ್ । ನ ಜಲೋಗ್ರವೇಗಮವಗಾಹೇತ್ । ಕೂಲಚ್ಛಾಯಾಂ ನೋಪಾಸೀತ । ನಾಗ್ನ್ಯುತ್ಪಾತಮಭಿತಶ್ಚರೇತ್ । ನೋಚ್ಚೈರ್ಹಸೇತ್ । ನ ಶಬ್ದವನ್ತಂ ಮಾರುತಂ ಮುಂಚೇತ್। ನಾಸಂವೃತಮುಖೋ ಜೃಂಭಾಂ ಕ್ಷವಥುಂ ಹಾಸ್ಯಂ ವಾ ಪ್ರವರ್ತಯೇತ್ । ನ ನಾಸಿಕಾಂ ಕುಷ್ಣೀಯಾತ್। ನ ದಂತಾನ್ ವಿಘಟ್ಟಯೇತ್ । ನ ನಖಾನ್ ವಾದಯೇತ್ । ನಾಸ್ಥೀನ್ಯಭಿಹನ್ಯಾತ್ । ನ ಭೂಮಿಂ ವಿಲಿಖೇತ್ । ನ ಛಿಂದ್ಯಾತ್ತೃಣಮ್ । ನ ಲೋಷ್ಟಂ ಮೃದ್ನೀಯಾತ್ ॥"

"ಸುಪ್ಪತ್ತಿಗೆ ದಿಂಬುಗಳಿಲ್ಲದ ತಥಾ ತಿಟ್ಟುತಗ್ಗಾಗಿರುವ ಹಾಸಿಗೆಯಲ್ಲಿ ಮಲಗಬಾರದು, ಪರ್ವತಗಳ ವಿಷಮ ಶಿಖರಗಳಮೇಲೆ ಏರಬಾರದು, ಮರವನ್ನು ಹತ್ತಬಾರದು, ದೊಡ್ಡ ವೇಗವುಳ್ಳ ಪ್ರವಾಹಗಳಲ್ಲಿ ಇಳಿಯಬಾರದು, ನದೀ ದಡಗಳ ನೆರಳಿನಲ್ಲಿ ಕುಳಿತಿರಬಾರದು, ಬೆಂಕಿ ಹತ್ತಿರುವ ಸ್ಥಳಕ್ಕೆ ಆಸಪಾಸ್ ಹೋಗಬಾರದು, ಜೋರಿನಿಂದ ನಗಬಾರದು, ಶಬ್ದವಾನ್ ಅಧೋವಾಯುವನ್ನು ಬಿಡಬಾರದು, ಮುಖವನ್ನು ಮುಚ್ಚಿಕೊಳ್ಳದೆ (ಸಂವೃತಮುಖನಲ್ಲದೆ) ಶೀನು, ಆಕಳಿಕೆ ಮುಂತಾದವನ್ನೂ, ಹಾಸ್ಯವನ್ನೂ ಮಾಡಬಾರದು, ಮೂಗನ್ನು ತಿಕ್ಕಬಾರದು, ಹಲ್ಲುಗಳನ್ನು ಒಂದರಿಂದೊಂದನ್ನು ಉಜ್ಜಬಾರದು, ಉಗುರುಗಳನ್ನು ವಾದ್ಯದಂತೆ ಬಾರಿಸಬಾರದು, ಎಲುಬುಗಳನ್ನು ಒಂದಕ್ಕೊಂದು ಬಡಿದಾಡಿಸಬಾರದು, ಭೂಮಿಯಮೇಲೆ ಬರಿಯುತ್ತಿರಬಾರದು, ತೃಣವನ್ನು ಕತ್ತರಿಸುತ್ತಾ ಕುಳ್ಳಿರಬಾರದು, ಹಂಚಿನ ಮುರುಕುಗಳನ್ನು ಮುರಿಯುತ್ತಾ ಸೋಮಾರಿಯಾಗಿರಬಾರದು.''

" ನೋತ್ತಮೈರ್ವಿರುಧ್ಯೇತ । ನಾವರಾನುಪಾಸೀತ । ನ ಜಿಹ್ಮಂ ರೋಚಯೇತ್ । ನಾನಾರ್ಯಮಾಶ್ರಯೇತ್ । ನ ವ್ಯಾಲಾನುಪಸರ್ಪೇತ್, ನ ದಂಷ್ಟ್ರಿಣಃ, ನ ವಿಷಾಣಿನಃ, ಪುರೋವಾತಾತಪಾವಶ್ಯಾಯಾತಿ ಪ್ರವಾತಾನ್ ಜಹ್ಯಾತ್ । ಕಲಿಂ ನಾರಭೇತ್ । ನ ಸ್ನಾನಶಾಟ್ಯಾ ಸ್ಪೃಶೇದುತ್ತಮಾಂಗಮ್ ॥"

"ಸತ್ಪುರುಷರೊಂದಿಗೆ ವಿರೋಧ ಮಾಡಿಕೊಳ್ಳಬಾರದು, ನೀಚರ ಸಹವಾಸ ಮಾಡಬಾರದು, ಕಪಟವನ್ನು ಮಾಡಬಾರದು, ದುಷ್ಟರನ್ನು ಸೇವಿ

ಸಬಾರದು; ಸರ್ಪ, ದಂಷ್ಟ್ರವುಳ್ಳ ಜೀವಿಗಳು, ಕೊಂಬುಗಳುಳ್ಳ ಪ್ರಾಣಿಗಳು ಇವುಗಳ ಹತ್ತಿರಕ್ಕೆ ಹೋಗಬಾರದು, ಸಮ್ಮುಖದ ವಾಯು, ಧೂಮ, ಹಿಮ, ಬಿರುಗಾಳಿ ಇವುಗಳಲ್ಲಿ ಶಿಕ್ಕಬಾರದು, ಕಲಹ ಮಾಡಬಾರದು, ಯಾವ ವಸ್ತ್ರವನ್ನು ಧರಿಸುತ್ತಾ ಇದ್ದು ಸ್ನಾನಮಾಡುವನೋ ಅದರಿಂದ ಶಿರಸ್ಸನ್ನು ಒರಸಿಕ್ಕೊಳ್ಳಬಾರದು. ”

“ ನ ನಕ್ತಂ ನಾದೇಶೇ ಚರೇತ್ । ನ ಸಂಧ್ಯಾಸ್ವಭ್ಯವಹಾರಾಧ್ಯಯನ ಸ್ತ್ರೀ ಸ್ವಪ್ನ ಸೇವೀ ಸ್ಯಾತ್। ನ ಬಾಲ ವೃದ್ಧ ಲುಬ್ಧ ಮೂರ್ಖ ಕ್ಲಿಷ್ಟ ಕ್ಲೀಬೈಸ್ಸಹ ಸಖ್ಯಂ ಕುರ್ಯಾತ್ । ನ ಮದ್ಯ ದ್ಯೂತ ವೇಶ್ಯಾ ಪ್ರಸಂಗರುಚಿಃ ಸ್ಯಾತ್। ನ ಗುಹ್ಯಂ ವಿವೃಣುಯಾತ್। ನ ಕಶ್ಚಿದವಜಾನೀಯಾತ್ । ನಾಹಂ ಮಾನೀ ಸ್ಯಾತ್ । ನ ದಕ್ಷೋ, ನಾದಕ್ಷಿಣೋ, ನಾಸೂಯಕೋ, ನ ದಕ್ಷಿಣಾನ್ ಪರಿವದೇತ್ । ನ ಗಾಂ ದಂಡಮುದ್ಯಚ್ಛೇತ್। ನ ವೃದ್ಧಾನ್ ನ ಗುರೂನ್ ನ ಗಣಾನ್ ನ ನೃಪಾನ್ ವಾಧಿಕ್ಷಿಪೇತ್ । ನ ಚಾತಿಬ್ರೂಯಾತ್। ನ ಬಾಂಧವಾನುರಕ್ತ ಕೃಚ್ಛ್ರದ್ವಿತೀಯಗುಹ್ಯಜ್ಞಾನ್ ಬಹಿಃ ಕುರ್ಯಾತ್ ॥ ”

“ ರಾತ್ರಿಯಲ್ಲಿ ತಥಾ ಕುದೇಶದಲ್ಲಿ ಸಂಚರಿಸಬಾರದು, ಉಭಯ ಸಂಧ್ಯಾಸಮಯಗಳಲ್ಲಿ-ಭೋಜನ, ಪಠನ, ಸ್ತ್ರೀಸಂಗ ಮತ್ತು ನಿದ್ರೆ ಇವನ್ನು ಮಾಡಬಾರದು; ಬಾಲಕ, ವೃದ್ಧ, ಲೋಭಿ, ಮೂರ್ಖ, ದುಃಖೀ, ತಥಾ ನಪುಂಸಕರೊಡನೆ ಮಿತ್ರತ್ವವನ್ನು ಮಾಡಬಾರದು. ಮದ್ಯ, ದ್ಯೂತ, ವೇಶ್ಯಾ ಪ್ರಸಂಗಗಳಲ್ಲಿ ರುಚಿಯನ್ನಿಡಬಾರದು, ಗುಪ್ತವಾದ ಮಾತನ್ನಾಡಬಾರದು, ಯಾರ ತಿರಸ್ಕಾರವನ್ನೂ ಮಾಡಬಾರದು; ಅಹಂಕಾರ ಪಡಬಾರದು, ಚತುರತಾರಹಿತವಾದ ಪ್ರತಿಕೂಲ ತಥಾ ನಿಂದಕನಾಗಬಾರದು, ಚತುರರೊಂದಿಗೆ ವಿವಾದವನ್ನು ಮಾಡಬಾರದು, ಹಸುಗಳನ್ನು ದಂಡದಿಂದ ಹೊಡಿಯಬಾರದು; ವೃದ್ಧ, ಗುರು, ಜ್ಯೋತಿಷೀ, ತಥಾ ರಾಜಾ ಇವರಮೇಲೆ ಆಕ್ಷೇಪವನ್ನು ಮಾಡಬಾರದು, ಬಹಳ ಮಾತನ್ನಾಡಬಾರದು; ಬಂಧುವರ್ಗಗಳು, ಸ್ನೇಹಿತರು, ವಿಪತ್ತಿನಲ್ಲಿ ಸಹಾಯ ಮಾಡಿರುವವರು, ಹಾಗೆಯೇ ಗುಟ್ಟನ್ನು ಬಲ್ಲವರು ಇಂತವರನ್ನು ಮನೆಯಿಂದ ಹೊರಗೆ ಹಾಕಬಾರದು. ”

“ ನ ಚಂಚಲಂ ಮನೋ ಭ್ರಾಮಯೇತ್ । ನ ಬುದ್ಧೀಂದ್ರಿಯಾಣಾಮತಿಭಾರಮಾದಧ್ಯಾತ್ । ನಚಾತಿದೀರ್ಘಸೂತ್ರೀ ಸ್ಯಾತ್, ನ ಕ್ರೋಧ ಹರ್ಷಾವನು ವಿದಧ್ಯಾತ್॥ ನ ಶೋಕ ಮನುವಿಶೇತ್। ನ ಸಿದ್ಧಾವುತ್ಸೇಕ್ಯಂ ಗಚ್ಛೇನ್ನಾಸಿದ್ಧೌ ದೈನ್ಯಮ್ । ಪ್ರಕೃತಿಮ

ಭೀಕ್ಷ್ಣಂ ಸ್ಮರೇತ್ । ಹೇತು ಪ್ರಭಾವನಿಶ್ಚಿತಃ ಸ್ಯಾತ್ । ಹೇತ್ವಾರಂಭ ನಿತ್ಯಶ್ಚ । ನ ಕೃತಮಿತ್ಯಾಶ್ವಸೇತ್ । ನ ವೀರ್ಯಂ ಜಹ್ಯಾತ್। ನಾಪವಾದಮನು ಸ್ಮರೇತ್ ॥ "

"ಚಂಚಲ ಮನಸ್ಸಿನ ಚಂಚಲತ್ವಕ್ಕೆ ಮನಸ್ಸನ್ನು ಭ್ರಮಿಸಲಾಗದು, ಜ್ಞಾನೇಂದ್ರಿಯಗಳಿಗೆ ಬಹು ಕ್ಲೇಶವನ್ನು ಕೊಡಬಾರದು, ಒಂದು ಕಾರ್ಯಕ್ಕಾಗಿ ಬಹುಕಾಲವನ್ನು ಕಳೆಯಬಾರದು; ಕ್ರೋಧ, ಹರ್ಷ ತಥಾ ಶೋಕಕ್ಕೆ ವಶೀಭೂತನಾಗಬಾರದು, ಕಾರ್ಯಸಿದ್ಧಿಯಲ್ಲಿ ಉತ್ಸುಕತೆಯನ್ನು ಮಾಡಬಾರದು, ಕಾರ್ಯಸಿದ್ಧಿಯಾಗದಿದ್ದರೆ ದೀನನಾಗಬಾರದು, ಪ್ರಕೃತಿಯನ್ನು ಸದಾ ಧ್ಯಾನದಲ್ಲಿಡಬೇಕು. ಹೇತುವಿನ ಪ್ರಭಾವದಲ್ಲಿ ನಿಶ್ಚಯವನ್ನಿಡಬೇಕು. ಹೇತು ಮತ್ತು ಆರಂಭದಲ್ಲಿ ನಿತ್ಯವೂ ಯತ್ನಮಾಡಬೇಕು. ಕಾರ್ಯವಾಯಿತೆಂದು ಸಾವಧಾನನಾಗಿರಬಾರದು. ಸ್ವಂತ ಪರಾಕ್ರಮವನ್ನು ಎಂದೆಂದಿಗೂ ಬಿಡಬಾರದು. ಅಪವಾದದನಂತರ ಸ್ಮರಣೆ ಮಾಡಬಾರದು."

"ಅವೃತ್ತಿ ವ್ಯಾಧಿ ಶೋಕಾರ್ತಾನನುವರ್ತೇತ ಶಕ್ತಿತಃ ॥ ಆತ್ಮವತ್ಸತತಂ ಪಶ್ಯೇದಪಿಕೀಟ ಪಿಪೀಲಿಕಮ್ ॥ "

"ಯಾವ ಕೆಲಸವೂ ಶಿಕ್ಕದೆ ಹೊಟ್ಟೆಗಿಲ್ಲದ ದರಿದ್ರರು, ವ್ಯಾಧಿಗ್ರಸ್ತರಾದ ಮನುಷ್ಯರು, ಶೋಕಾರ್ತರು ಇವರುಗಳಿಗೆ ತನ್ನ ಶಕ್ತ್ಯಾನುಸಾರ ಸಹಾಯಮಾಡಬೇಕು. ಕೀಟ ಪಿಪೀಲಿಕಾದಿಗಳನ್ನಾದರೂ ತನ್ನಂತೆಯೇ ಸುಖದುಃಖಭಾಗಿಯೆಂದು ತಿಳಿದು ಎಲ್ಲಕ್ಕೂ ಬಂಧುಭೂತನಾಗಿರಬೇಕು."

"ವಿಮುಖಾನ್ನಾರ್ಥಿನಃ ಕುರ್ಯಾನ್ನಾವಮನ್ಯೇತ ಕರ್ಹಿಚಿತ್ ॥ ಉಪಕಾರಪ್ರಧಾನಃ ಸ್ಯಾದಪಕಾರ ಪರೇಪ್ಯರೌ॥ "

"ದರಿದ್ರರಾದ ಯಾಚಕರನ್ನು ಯಾವಾಗಲೂ ಅವಮಾನ ಮಾಡದೆ (ಅಪಕಾರಪ್ರಧಾನನಾದ ಶತ್ರುವಿಗಾದರೂ) ಉಪಕಾರಪರನಾಗಿಯೇ ಇರಬೇಕು."

"ಜನಸ್ಯಾಶಯಮಾಲಕ್ಷ್ಯ ಯೋ ಯಥಾ ಪರಿತುಷ್ಯತಿ ॥ ತಂತಥೈವಾನುವರ್ತೇತ ಪರಾರಾಧನಪಂಡಿತಃ ॥ "

"ಜನಗಳ ತಾತ್ಪರ್ಯವನ್ನೂಹಿಸಿ ತಿಳಿದುಕೊಂಡು—ಯಾರು ಯಾವ ವಿಧದಿಂದ ಸಂತುಷ್ಟರಾಗುವರೋ, ಅವರನ್ನು ಹಾಗೆಯೇ ಸಂತುಷ್ಟಿಪಡಿಸುತ್ತಾ ಪರಾರಾಧನ ಪಂಡಿತನಾಗಿರತಕ್ಕದ್ದು."

"ನಪೀಡಯೇದಿಂದ್ರಿಯಾಣಿ ನ ಚೈತಾನ್ಯತಿಲಾಲಯೇತ್ ॥"

"ಇಂದ್ರಿಯಗಳನ್ನು ಯಾವಾಗಲೂ ಪೀಡಿಸಬಾರದು; ಹಾಗೆಯೇ ಅವುಗಳನ್ನು ಅತಿಶಯವಾಗಿ ಲಾಲಿಸಿ ಇಷ್ಟೇಂದ್ರಿಯರ ಕಾರ್ಯಗಳಲ್ಲಿ ಮಗ್ನನಾಗಿರಬಾರದು."

" ಮದ್ಯ ವಿಕ್ರಯ ಸಂಧಾನ ದಾನಾಽದಾನಾನಿ ನಾಚರೇತ್ ॥ "

" ಮದ್ಯವನ್ನು ಮಾರುವಿಕೆ, ಮಾಡುವಿಕೆ, ಕೊಡುವಿಕೆ ತೆಕ್ಕೊಳ್ಳುವಿಕೆ ಇವನ್ನು ತ್ಯಜಿಸಬೇಕು. "

" ಶತ್ರು ಸತ್ರ ಗಣಾಕೀರ್ಣ ಗಣಿಕಾ ಪಣಿಕಾಶನವತ್ ॥ "

" ಶತ್ರುವಿನ, ಸತ್ರದ, ಗಣ (ಒಬ್ಬನು ಯಜಮಾನನಿಲ್ಲ) ದ, ಆಕೀರ್ಣವಾದ, ವೇಶ್ಯೆಯ, ವ್ಯಾಪಾರಿಯ—ಅನ್ನವನ್ನು ಸೇವಿಸಬಾರದು. "

" ಮದ್ಯಾತಿಸಕ್ತಂ ವಿಸ್ರಂಭ ಸ್ವಾತಂತ್ರ್ಯ ಸ್ತ್ರೀಷು ಚ ತ್ಯಜೇತ್ ॥ "

" ಸ್ತ್ರೀಯರಿಗೆ ಮದ್ಯವೀಯುವದು, ಅತಿಸಕ್ತನಾಗಿರುವಿಕೆ, ಅವರಲ್ಲಿ ವಿಸ್ರಂಭವುಳ್ಳವನಾಗಿರುವಿಕೆ, ಅವರಿಗೆ ಸ್ವಾತಂತ್ರ್ಯವನ್ನೀಯುವಿಕೆ ಇವನ್ನು ತ್ಯಜಿಸತಕ್ಕದ್ದು. "

" ಅವಶ್ಯಂ ಯಾತಾರಶ್ಚಿರತರ ಮುಷಿತ್ವಾಽಪಿ ವಿಷಯಾಃ ।
ವಿಯೋಗೇ ಕೋ ಭೇದಃ ತ್ಯಜತಿ ನ ಜನೊ ಯತ್ಸ್ವಯಮಮೂನ್ ॥
ವ್ರಜಂತಃ ಸ್ವಾತಂತ್ರ್ಯಾದತುಲ ಪರಿತಾಪಾಯ ಮನಸಃ ।
ಸ್ವಯಂ ತ್ಯಕ್ತ್ವಾ ಹ್ಯೇತೇ ಶಮಸುಖಮನಂತಂ ವಿದಧತಿ ॥ "

" ವಿಷಯಗಳೆಂಬ ಭೋಗಗಳು ನಮ್ಮಲ್ಲಿ ಬಹುಕಾಲ ಇದ್ದಾಗ್ಯೂ ಅವಶ್ಯವಾಗಿ ಅವು ನಮ್ಮನ್ನು ಬಿಟ್ಟು ಹೋಗತಕ್ಕವೇ ಆಗಿವೆ. ಆದರೆ ವಿಷಯಾಭಿಲಾಷಿಯಾದ ಪುರುಷನು ಈ ವಿಷಯಗಳನ್ನು ತಾನಾಗಿಯೇ ಬೇಡವೆಂದು ಬಿಡುವಹಾಗಿಲ್ಲ ! ಅವುಗಳಲ್ಲಿ ಅತ್ಯಾದರದಿಂದ, " ಅವು ಶಾಶ್ವತಗಳೇ " ಎಂದು ಭ್ರಮಿಸುತ್ತಾ ಇರುತ್ತಾನೆ. ಯಾವ ಕಾಲದಲ್ಲಿ ಈ ಭೋಗವಿಲಾಸ ವಿಷಯಗಳು ಮಾಯವಾಗುವವೋ ಅಂತಹ ವಿಷಯಾಂಧನಿಗೆ ಅವು ಹೊರಟು ಹೋದದ್ದು ಮಹಾ ಪರಿತಾಪಕ್ಕೆ ಕಾರಣವಾಗುವದು. ಹಾಗಿಲ್ಲದೆ ನಾವೇ ಅಂತಹ ಅಸ್ಥಿರವಾದ ಭೋಗಗಳನ್ನು ವಿವೇಕದಿಂದ ' **ನಮಗೆ ಇವು ಸರ್ವಥಾ ಬೇಡ** ' ವೆಂದು ತ್ಯಜಿಸಿಬಿಟ್ಟರೆ, ಅವು ನಮ್ಮನ್ನು ಬಿಟ್ಟುಹೋದರೂ ಅದೂ ಪರಮಾನಂದವನ್ನುಂಟು ಮಾಡುವವಷ್ಟೆ ? "

ಇದುವರಿಗೆ " ಸದಾಚಾರಕಥನ " ವೆಂಬ ಈ ಆಶಯದಲ್ಲಿ ಹೇಳಿರುವ ಉಪದೇಶವು ಪುರಾಣಿಕ (Mythological Advice) ಉಪದೇಶಗಳೆಂದು ತಿಳಿಯಬಾರದು !! ನಮ್ಮ ಆದ್ಯ ಜನಾಂಗವು ಇಂತಹ ಅದ್ಭುತ ಗುಣಗಳನ್ನು ತಾವೂ ಹೊಂದಿದ್ದು, ನಮಗೂ ಉಪದೇಶ ಮಾಡುವದನ್ನು ಇಲ್ಲಿ ಸ್ವಲ್ಪಮಟ್ಟಿಗೆ ವಿವರಿಸಿದ್ದಾಯಿತು. ಇಂತಹ ಸದ್ಗುಣಗಳನ್ನೇ ನಾವು ತಿರಸ್ಕರಿಸಿ, ತದ್ವ್ಯತಿರಿಕ್ತವಾದ ದುರ್ಗುಣಗಳನ್ನೇ ಪ್ರೀತಿಸಿ, ಆಚರಿಸತೊಡಗಿದರೂ ಅದರಿಂದ ಯಾರಿಗೇನೂ ಹಾನಿಯಾಗಲಾರದು. ವೈದ್ಯಶಾಸ್ತ್ರವೆಂದರೆ ಪಾಶ್ಚಾತ್ಯ

ವೈದ್ಯವಾಗಲೀ, ಆಯುರ್ವೇದವಾಗಲೀ ಹೇಳುವ ಉಪದೇಶದಂತೆ--ನಮ್ಮಲ್ಲಿ ಉಂಟಾಗುವ ಬೀಜಾಣುಗಳಲ್ಲಿ ನಮ್ಮ ಗುಣಗಳೇ ಸಂಕ್ರಮಣವಾಗಿ ಬಿಡುವವಾದ್ದರಿಂದ, ಈ ನಮ್ಮ ವೀರ್ಯಾಣುಗಳಿಂದ ಹುಟ್ಟುವ ಸಂತತಿಯಲ್ಲಿ ನಮ್ಮಲ್ಲಿರುವ ಗುಣಗಳೇ ಮೂರ್ತೀಭವಿಸಿ ಬರುವವು. ಈಗ ನೀವೇ ಹೇಳಿರಿ:-- "ನಿಮಗೆ ಒಳ್ಳೇ ಗುಣವಂತನಾದ ಪುತ್ರನು ಬೇಕೋ, ಹಾಗಲ್ಲದೆ, ಶುದ್ಧ ದ್ರೋಹಿಯೂ, ಪರರಿಗೆ ಹಿಂಸೆಯನ್ನೀಯುವ ಹಿಂಸಕನೂ, ನೂರಾರು ಮನೆಗಳನ್ನು ಮುರಿಯುವವನೂ, ಚೋರನೂ, ಸದಾ ದುರ್ವ್ಯಸನಾತುರನೂ, ಸರ್ವರಲ್ಲಿಯೂ ಅವಮಾನವನ್ನು ಪಡೆಯುತ್ತಿರುವವನೂ ಆದ ಷೋದಾ, ಲುಚ್ಚ, ದುರಾಚಾರಿಯಾದ ಪುತ್ರನು ಬೇಕೋ ?" ಇದಕ್ಕಾಗಿ ಈ ಮಹದ್ವಿಷಯದ ಸಂಗತಿ ನಮ್ಮ ದೇಶೀಯರಿಗೆ ಮನನವಾಗಿ—ಶಾಂತನೂ, ಕರುಣಾಕರನೂ, ಗಾಂಭೀರ್ಯಾಲಂಕಾರನೂ, ಪರೋಪಕಾರಿಯೂ, ಸಜ್ಜನ ವಿಧೇಯತೆಯುಳ್ಳವನೂ, ಉಪಕಾರಿಯೂ, ದೇಶವತ್ಸಲನೂ, ಸದ್ಗುಣಾಕರನೂ ಆದ ಸಂತತಿಯು ಹುಟ್ಟಬೇಕಾದರೆ ನಾವು ಮೇಲೆ ಉದಹರಿಸಿರುವ ಸದಾಚಾರಗಳನ್ನು ಶ್ರದ್ಧೆಯಿಂದ ಆಚರಿಸುತ್ತಾ, ಶುಚಿವ್ರತನಾಗಿರುವದು ತಂದೆಗೂ, ತಾಯಿಗೂ ಅತ್ಯಗತ್ಯ ವಿಷಯವಾಗಿದೆ. ಅದಕ್ಕಾಗಿ ಈ ಸದಾಚಾರವೆಂಬ ಆಶಯವನ್ನು ಇಲ್ಲಿ ಸೇರಿಸಿರುವೆವು. ಇದರಲ್ಲಿ ಉಕ್ತವಾಗಿರುವ ಸದಾಚಾರ ಸೂತ್ರಗಳನ್ನು ನಾವು ಕಲ್ಪಿಸಿಲ್ಲ; ಕಲ್ಪಿಸಲೂ ಸಾಧ್ಯವಿಲ್ಲ. ಸಕಲ ಜಗನ್ನಿಯಾತನಾದ ಪರಮೇಶ್ವರನ ಅಪರಾವತಾರರಾಗಿ ಭೂಲೋಕವನ್ನು ಪಾವನಗೊಳಿಸಲು ಅವತರಿಸಿದ್ದ ಮಹನೀಯರಾದ ಮಹರ್ಷಿಗಳ ಉಪದೇಶ ವಾಕ್ಯಗಳನ್ನು ಈ ಆಶಯದಲ್ಲಿ ಸಮಾವೇಶಗೊಳಿಸಿದ್ದೇವೆ. ನಮ್ಮ ಸಂತತಿಯು ಕಲ್ಯಾಣಭಾಗಿಯಾಗಲೆಂದು ಅಪೇಕ್ಷಿಸುವ ಪ್ರತಿಮಾನವನೂ ಈ ಮಹಾಮಹಿಮರಾದ ಆದ್ಯಮಹರ್ಷಿಗಳ ಬೋಧೆಯಂತೆ ಅನುಷ್ಠಿಸಿ, ತನ್ನ ಸಂತತಿಯು ಭೂಲೋಕದಲ್ಲಿ ಗೌರವಸ್ಥಾನವನ್ನು ಪಡೆಯುವಂತೆ ಯತ್ನಿಸುವರೆಂದು ಮತ್ತೂ ಮತ್ತೂ ಕಡ್ಡಾಯಮಾಡಿ ತಿಳಿಸುತ್ತಾ ಇದ್ದೇವೆ.

ಇಂತು ಸದಾಚಾರವೆಂಬ ನವಮಾಶಯವು.

ಇಲ್ಲಿಗೆ ಶಿಶುವೈದ್ಯಸಂಜೀವನಿಯಲ್ಲಿ ಪ್ರಥಮ ಭಾಗವು ಮುಗಿಯಿತು.

ಇತಿ ಪ್ರಥಮಭಾಗಃ ಸಮಾಪ್ತಃ.



# ಅಥ ದ್ವಿತೀಯಭಾಗ ಪ್ರಾರಂಭಃ.

## ದ ಶ ಮಾ ಶ ಯ ವು .

### ಪುಂಜನೋತ್ಕರ್ಷತೆ.

ಜಗತ್ತಿನಲ್ಲಿರುವ ಸಮಸ್ತ ಪ್ರಾಣಿಗಳಲ್ಲಿಯೂ ಅನನ್ಯವಾದ ಸಾಹಸ, ಅತುಲಿತವಾದ ಪೌರುಷ, ಅತಿವಿಚಿತ್ರವಾದ ವ್ಯಾಪಾರ, ಮತ್ಯಾವದರಲ್ಲಿಯೂ ಇಲ್ಲದಿರುವ ಧೈರ್ಯ, ಶೌರ್ಯ ಮುಂತಾದ ಗುಣಗಳಿಂದಲೂ, ಅತಿರಮಣೀಯ ವಾದ ತನುಭಾವದಿಂದಲೂ, ಅತೀವ್ರೋಚ್ಚವಾದ ಪ್ರಕೃತಿಸ್ವಭಾವದಿಂದಲೂ, ಅತಿನಿಶಿತವಾದ ಬುದ್ಧಿವೈಭವದಿಂದಲೂ ಮೆರೆಯುತ್ತಿರುವ ಮಾನವಜಾತಿಯು ಕಲ್ಯಾಣಕಾರಕಗಳಾದ ಗುಣಗಳು ಜಗತ್ಸೃಷ್ಟಿಕರ್ತನ ಅಚಿಂತಾದ್ಭುತಶ ಕ್ತಿಯ ಪ್ರದರ್ಶನೆಯನ್ನು ವ್ಯಕ್ತಪಡಿಸುತ್ತಾ ಇವೆ. ಈಶ್ವರನು ಈ ಮಾನ ವನಿಗಿಂತಲೂ ಶರೀರದ ಆಕೃತಿಯಲ್ಲಿಯೂ, ಪೌರುಷಾದಿ ಗುಣಗಳಲ್ಲಿಯೂ ಹಿರಿದಾದ—ಸಿಂಹ, ವ್ಯಾಘ್ರ, ಗಜಾಶ್ವಾದಿ ಮಾನುಷೇತರ ಪ್ರಾಣಿಗಳನ್ನು ವಿಧ ವಿಧವಾಗಿ ಸೃಷ್ಟಿಸಿದ್ದಾನೆ. ಪ್ರತಿಯೊಂದು ಪ್ರಾಣಿಗೂ ದತ್ತವಾಗಿರುವ ಮಹಾನ್ ಗುಣಗಳು ಯಾವದೋ ಒಂದೊಂದೇ ಭಾಗದಲ್ಲಿ ವಿಶೇಷಗಳಾ ಗಿಯೂ, ಆ ಉಚ್ಚಗುಣವನ್ನು ಪ್ರಕಾಶಪಡಿಸದಂತೆ ತಡಿಯುವಂತಹ ಇತರೇ ಗುಣಗಳೂ ಇರುವಂತೆಯೂ ಸೃಷ್ಟಿಸಿರುತ್ತಾನಲ್ಲದೆ, ಯಾವ ಜಂತುವನ್ನೂ ಅಖಂಡಸರ್ವೋತ್ತಮ ಗುಣಗಳಿಂದೊಪ್ಪುವಂತೆ ಸೃಷ್ಟಿಸಿಲ್ಲ ! ಮನುಷ್ಯನ ಸೃಷ್ಟಿ ಅಂತಾದ್ದಲ್ಲ; ಸಮಸ್ತ ಮೃಗ ಪಶು ಪಕ್ಷಿ ಮುಂತಾದವುಗಳೆಲ್ಲರಲ್ಲಿ ಯೂ ಇರುವ ಸಾರವತ್ತಾದ ಗುಣಗಳೆಲ್ಲವನ್ನೂ ಒಂದೇಕಡೆ ಸಮ್ಮೇಲನ ಮಾಡಿ ನೋಡಿ ಸಂತೋಷಿಸಬೇಕೆಂಬ ಇಚ್ಛೆಯಿಂದಲೇ ಈ ಮಾನವನನ್ನು ಸೃಷ್ಟಿಸಿರುವನೆಂದರಿಯಬೇಕು. ಇದನ್ನು ಅನುಮೋದಿಸಿಯೇ:—

"ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ, ಪ್ರಾಣಿನಾಂ ಬುದ್ಧಿಜೀವಿ
ನಃ॥ ಬುದ್ಧಿಮತ್ಸು ನರಾಃ ಶ್ರೇಷ್ಠಾಃ ನರೇಷ್ವಪಿ ದ್ವಿಜಾತಯಃ॥"

"ಪಾರ್ಥಿವ ಭೂತೋತ್ಪನ್ನ ವಸ್ತುಗಳಿಗಿಂತಲೂ, ಪ್ರಾಣಧಾರಿಗಳಾದ ಕೀಟಾದಿಗಳೂ, ಅವಕ್ಕಿಂತಲೂ ಬುದ್ಧಿಜೀವಿಗಳಾದ ಹಸ್ತ್ಯಶ್ವಾದಿಗಳೂ ಶ್ರೇ ಷ್ಠಗಳು ! ಅವಕ್ಕಿಂತಲೂ ಮನುಷ್ಯರು ಶ್ರೇಷ್ಠರು; ಈ ಮನುಷ್ಯರ ಲ್ಲಿಯೂ ವಿದ್ಯಾದಿಗುಣಯುಕ್ತರಾಗಿ ಜ್ಞಾನನಿಧಿಗಳಾದ ವಿದ್ವಾಂಸರು ಶ್ರೇಷ್ಠ ರು" ಎಂದಿದೆ.

ಮನುಷ್ಯರಾದರೂ ತಮಗಿಂತಲೂ ಎಷ್ಟೋಪಾಲು ಮಹೋನ್ನತ ಶರೀರಿಗಳೂ, ಶೌರ್ಯ ಸಾಹಸ ಧೈರ್ಯವುಳ್ಳವೂ ಆದ ಸಿಂಹ ವ್ಯಾಘ್ರ ಗಜ ವ್ಯಾಳ ಮುಂತಾದ ದುಷ್ಟಜಂತುಗಳನ್ನೂ ತಮ್ಮ ಮಹಚ್ಛಕ್ತಿಯಿಂದ ದಮನಮಾಡಿ, ವಶಮಾಡಿಕೊಂಡು, ಪರಮೇಶ್ವರ ಸೃಷ್ಟಿಯ ಸಕಲ ವಸ್ತುಗಳನ್ನೂ ಅವವುಗಳ ಯಥಾವಿಹಿತೋಪಯೋಗಗಳನ್ನರಿತು ನಿರಾತಂಕವಾಗಿ ಉಪಯೋಗಿಸಿಕೊಳ್ಳುತ್ತಾ ಈ ಜಗತ್ತಿಗೇ ಒಡೆಯರಾಗಿ ಭೋಗಿಸುತ್ತಾ ಇದ್ದಾರಲ್ಲದೆ, ಈಶ್ವರಸೃಷ್ಟಿಗೆ ಪ್ರತಿಯಾಗಿ ಪ್ರತಿಸೃಷ್ಟಿಯನ್ನೂ ಕಲ್ಪಿಸುತ್ತಿದ್ದಾರೆ. ಈಶ್ವರನು ಕೇವಲ ಭೂಮಿಯನ್ನೂ, ಜಲವನ್ನೂ ನಿರ್ಮಿಸಿದ್ದನು; ಇವರು ಅವುಗಳಲ್ಲಿ ಅಡಕವಾಗಿದ್ದ ತೈಜಸ (ಅಗ್ನಿವಸ್ತು) ವನ್ನೂ ಕಂಡುಹಿಡಿದು, ಈ ಭೂತಪಂಚಕಗಳಿಂದ ದಿವ್ಯದಿವ್ಯವಾದ ಮನೆಗಳನ್ನೂ, ಮಹಡಿಗಳನ್ನೂ, ಅರಮನೆಗಳನ್ನೂ ನಿರ್ಮಿಸತೊಡಗಿದರು. ಎಲ್ಲೆಲ್ಲಿಯೋ ಒಂದೊಂದು ಕಡೆಯಲ್ಲಿದ್ದ ಧಾನ್ಯಗಳ ಉಪಯೋಗವನ್ನು ಕಂಡುಹಿಡಿದು ಈ ವಿಧವಾದ ಒಂದೇ ಜಾತಿಯ ಧಾನ್ಯದ ಬೀಜಗಳಿಂದ ಅನಂತಾನಂತ ರಾಶಿರಾಶಿಯಾಗಿ ಸಾವೆ, ನವಣೆ, ಹಾರಕ, ಸಜ್ಜೆ, ಬರಗು ಮುಂತಾದ ತೃಣಧಾನ್ಯಗಳನ್ನೂ; ನೆಲ್ಲು, ರಾಗಿ, ತೊಗರಿ, ಅವರೆ, ಕಡ್ಲೆ, ಹುರಳಿ, ಹೆಸರು, ಉದ್ದು, ತಡಗಣಿ, ಚನ್ನಂಗಿ, ಗೋಧಿ, ಯಳ್ಳು, ಹುಚ್ಚೆಳ್ಳು ಮುಂತಾದ ಆಹಾರೋಪಯೋಗಿ ಧಾನ್ಯಗಳನ್ನೂ ಬೆಳಯಿಸಲಾರಂಭಿಸಿದರು. ಇವುಗಳಲ್ಲಿ ಭತ್ತ ಕುಟ್ಟಿ ಅಕ್ಕಿಮಾಡುವಿಕೆ, ಬೇರೆಬೇರೆ ಧಾನ್ಯಗಳನ್ನು ಬೀಸಿ ಹಿಟ್ಟುಮಾಡುವಿಕೆ, ದ್ವಿದಳ ಧಾನ್ಯಗಳನ್ನು ಒಡದು ಬೇಳೆ ಮಾಡುವಿಕೆ, ಮುಂತಾದ ಪಾಕ ನಿಷ್ಪತ್ತಿಗೆ ಅನುಕೂಲಿಸುವಂತೆ ಏರ್ಪಡಿಸಿದ ಇವರ ಕೌಶಲ್ಯವು ಅಗಾಧವಾದದ್ದು. ಇಷ್ಟಕ್ಕೇ ನಿಲ್ಲದೆ ಸಕಲವಿಧ ಫಲವರ್ಗಗಳನ್ನೂ, ಮೆಣಸಿನಕಾಯಿ, ಹುಣಸೆಹಣ್ಣು, ಕೊತ್ತುಂಬರಿ, ಸಾಸವೆ, ಮೆಂತೆಯ, ಜೀರಿಗೆ, ಮೆಣಸು, ಯಾಲಕ್ಕಿ, ದಾಲಚಿನ್ನಿ, ಲವಂಗ ಮುಂತಾದ ಸಂಬಾರ ಸಾಮಗ್ರಿಗಳನ್ನೂ, ಸುಗಂಧವಸ್ತುಜಾಲಗಳನ್ನೂ ಕಂಡುಹಿಡಿದು ಅಭಿವೃದ್ಧಿಪಡಿಸಿಕೊಳ್ಳುತ್ತಾ ಬಂದರು. ಈಗ ನಾವು ಬರಿಯುತ್ತಿರುವ ಕಾಗದವು ಈಶ್ವರಸೃಷ್ಟಿಯಲ್ಲ ! ಜೀವನ ಬುದ್ಧಿಯಿಂದಾದ ಸೃಷ್ಟಿಯ ಪದಾರ್ಥಗಳಲ್ಲಿ ಇದು ಒಂದಾಗಿದೆ. ಇದರಂತೆಯೇ ಗಾಜು, ಮೇಣದಬತ್ತಿ, ಸೀಮೆಯಯಣ್ಣೆ, ರಬ್ಬರ್ ಮುಂತಾದ ಎಷ್ಟೋ ಸಾವಿರಾರು ಪದಾರ್ಥಗಳು ಜೀವನಿಂದ ಸೃಷ್ಟವಾದ ವಸ್ತುಗಳು ?

ಹೀಗೆ ಮಾನವನು ತನ್ನ ಬುದ್ಧಿಶಕ್ತಿಯಿಂದ ಭೂಮಿಯಮೇಲೆಯೂ, ನೀರಿನ ಒಳಗೂ, ಆಕಾಶದಲ್ಲಿರುವ ಪಕ್ಷಿಗಳು ಮುಂತಾದವುಗಳ ಮೇಲೆಯೂ ತನ್ನ ಅಧಿಕಾರವನ್ನು ನಿಜವಾಗಿಯೂ ನಡಿಸುತ್ತಾ ಬರುತ್ತಿದ್ದವನು, ಈಗ--

ಟೆಲಿಗ್ರಾಫ್, ಗ್ರಾಮೋಫೋನ್, ಬೈಯ್ಯಸ್ಕೊಪ್, ಫೋಟೋಗ್ರಾಫ್ ಮುಂತಾದ ಅಲೌಕಿಕ ವಿದ್ಯೆಗಳನ್ನೂ ಬಿಡದೆ ಸಾಧಿಸುತ್ತಾ ಏರೋಪ್ಲೇನ್ ಮುಂತಾದ ಆಕಾಶಗಮನ ವಿದ್ಯೆಯನ್ನೂ, ತಂತಿ ಇಲ್ಲದೆ ದೇಶದೇಶಾಂತರದಿಂದ ವರ್ತಮಾನ ತರಿಸುವ ವೈರ್‌ಲೆಸ್ ಟೆಲಿಗ್ರಾಂಗಳನ್ನೂ ಮಾಡಿಕೊಂಡಾನಂದಿಸುತ್ತಿದ್ದಾನೆ.

ಭೂಮಿಯು ಸೃಷ್ಟಿಸಲ್ಪಟ್ಟು ಮಾನವನಿಗೆ ಛಾರ್ಜ್ ವಹಿಸಿಕೊಟ್ಟ ಕಾಲದಲ್ಲಿ ಬರೀ ಹಾಳು ನೆಲವೂ, ಅಲ್ಲಲ್ಲಿ ದೂರದೂರಕ್ಕೆ ಹರಿಯತಕ್ಕ ನಿರಂಕುಶವಾದ ನದಿಗಳೂ, ಮಳೆಗಾಲದಲ್ಲಿ ಭೋರ್ಗರೆಯುತ್ತಾ ಹರಿಯುತ್ತಿದ್ದು ಬೇಸಿಗೆ ಬಂದರೆ ಪಕ್ಷಿಗಳಿಗೂ ಕುಡಿಯಲು ನೀರು ಇಲ್ಲದಂತಹ ಹಳ್ಳಗಳೂ, ಎಲ್ಲಿನೋಡಿದರೂ ಹಾಳುಹಾಳು ಸುರಿಯತಕ್ಕ ಮತ್ತು ಹುಟ್ಟಿದ ಸ್ಥಿತಿಯಿಂದಲೇ ತಿಟ್ಟು ತಗ್ಗು, ಹಳ್ಳದಿನ್ನೆಗಳಿಂದ ಕೂಡಿದ ಕಾಡಿನಿಂದಾವರಿಸಲ್ಪಟ್ಟ ಭೂಪ್ರದೇಶವು ಮಾತ್ರವೇ ಇತ್ತು.

ಈಗ ಮನುಷ್ಯನ ಛಾರ್ಜಿಗೆ ಬಂದನಂತರ:—

**"ಸರ್ವತಃ ಪರ್ವತಾರಾಮ ಗ್ರಾಮ ಚೈತ್ಯಚಯೈ ಶ್ಚಿತಃ || ಕದಂಬಕುಸುಮಗ್ರಂಥೇಃ ಕೇಸರಪ್ರಕರೈರಿವ ||"**

"ಈಗ ಎಲ್ಲಿ ನೋಡಿದರೂ ಭೂಮಿಯಲ್ಲಿ ಪರ್ವತ—ವೆಂದರೆ ಮಧ್ಯೆ ಮಧ್ಯೆ ಮನುಷ್ಯ ಸಂಚಾರಕ್ಕನುಕೂಲಿಸುವಂತೆ ರಸ್ತೆಗಳು ಸೇತುವೆಗಳು ಮುಂತಾದವುಗಳಿಂದ ಕಂಗೊಳಿಸುತ್ತಿರುವ ತಿದ್ದಿದ ಪರ್ವತಗಳೂ, ಆರಾಮ-- ಹಾಕಿ ಬೆಳಸಿರುವ ದಿವ್ಯ ವೃಕ್ಷತತಿಗಳುಳ್ಳ ಉದ್ಯಾನವನಗಳು, ಗ್ರಾಮ-ಹಳ್ಳಿ, ಕಸಬೆ, ಊರು, ಪಟ್ಟಣ, ರಾಜಧಾನಿ, ದೊಡ್ಡ ಷಹರುಗಳೆಂಬ ಭೇದಭೇದವಾಗಿ ಕಟ್ಟಿಕೊಂಡು ರಮಣೀಯವಾದ ಬೀದಿಗಳ ಸಾಲುಗಳಿಂದಲೂ, ಜನರಿಗೆ ಎಲ್ಲಿಬೇಕಾದರೆ ಅಲ್ಲಿ ನೀರು ದೊರಿಯಲನುಕೂಲಿಸುವಂತೆ ಕಲ್ಪಿಸಿರುವ ವಾಪೀಕೂಪ ತಟಾಕಾದಿಗಳೂ ಕೂಡಿರುವ ಗ್ರಾಮಸಮುದಾಯವೂ, ಚೈತ್ಯ-ದಿವ್ಯದಿವ್ಯ ಶಿಲ್ಪಶಾಸ್ತ್ರ ರಚನೆಗೆ ತಕ್ಕಂತೆ ಕಟ್ಟಿರತಕ್ಕ ದೇವಾಲಯಗಳೂ, ಚೈತ್ಯಗಳೂ, ಇತರ ಮತಸ್ಥರ ಮಸೀತಿಗಳೂ, ಚರ್ಚ್‌ಗಳೂ ಮುಂತಾದವೂ, ಕದಂಬಕುಸುಮಗ್ರಂಥೇಃ ಕೇಸರಪ್ರಕರೈರಿವ—ಈಚಲುವೃಕ್ಷದ ಹೂವಿನ ಗೊಂಚಲಿನಲ್ಲಿ ಎಡೆಯಿಲ್ಲದಂತೆ ಕೇಸರ ಪ್ರಕರಗಳು ಹೇಗಿರುವವೋ ಹಾಗೆ ದಟ್ಟವಾಗಿ ಭೂಮಿಯ ಯಾವಕಡೆಯನ್ನು ನೋಡಿದರೂ ಹಾಗೆಯೇ ಇರುತ್ತದೆ" ಎಂದು ವರ್ಣಿಸಲ್ಪಟ್ಟಿದೆ.

ಇಷ್ಟು ಅತಿರಮಣೀಯತೆಯಿಂದೊಪ್ಪುವಂತೆ ಈ ಭೂಮಿಯನ್ನು ಮನುಷ್ಯರು ಸುಖಾವಹವಾಗುವಂತೆ ಮಾಡಿದರಲ್ಲದೆ, ಭೂಮಿಯ ಅಂತರ್ಹ್ವಾದ

ಯದಲ್ಲಿ ಅಡಕವಾಗಿದ್ದ—ಬಂಗಾರ, ಬೆಳ್ಳಿ, ವಜ್ರ, ರತ್ನಗಳು ಇನ್ನೂ ವಿಧವಿಧ ವಸ್ತುಗಳನ್ನೂ ಈ ಮಾನವರು ಸೂರೆಗೊಂಡಿದ್ದಾರೆ. ಮತ್ತು ಇನ್ನೂ ಈ ಭೂಮಾತೆಯಲ್ಲಿ ಏನೇನಿರುವದೆಂದು ಪ್ರತಿಕ್ಷಣವೂ ಹುಡುಕುತ್ತಾ ಇದ್ದಾರೆ.

ಹೀಗೆ ಮಾನವರಿಗೆ ಪರಮೇಶ್ವರನು ಪ್ರಸಾದಿಸಿರುವ ಅತ್ಯದ್ಭುತ ಮಹ ಚ್ಛಕ್ತಿಗಳಿಂದ ದೈವಿಕಭಾವವನ್ನಾಶ್ರೈಸಿ, ಕ್ಷಣಮಾತ್ರದಲ್ಲಿ ಜಗತ್ತನ್ನೇ ವಿಲ ಯಗೊಳಿಸತಕ್ಕ ಶಕ್ತಿಯುಳ್ಳ ಅಗ್ನಿ, ವಿದ್ಯುತ್ (ಎಲೆಕ್ಟ್ರಿಸಿಟಿ) ವಾಯು, ಧೂಮ, ಭಾಷ್ಪ, ಜಲ ಮುಂತಾದವುಗಳನ್ನೂ ತಮ್ಮ ಭೃತ್ಯರನ್ನಾಗಿ ಏರ್ಪ ಡಿಸಿಕೊಂಡು—ಅಗ್ನಿಯಿಂದ ಪಾಕನಿಷ್ಪತ್ತಿಯನ್ನೂ, ಹಾಗೆಯೇ ಇವರು ಕ್ಲುಪ್ತವಾಗಿ ಉರಿಯುವಂತೆ ನಿಯತಮಾಡಿದ್ದಕ್ಕಿಂತ ಅತಿಯಾಗಿ ಮೀರದಂತೆ ಉರಿಯುವಿಕೆಯನ್ನೂ, ಹಾಗೆಯೇ ಎಲಕ್ಟ್ರಿಸಿಟಿ, ಬಾಷ್ಪ, ಜಲ ಮುಂತಾದ ವುಗಳಿಂದಲೂ ವಿಧವಿಧ ಕೆಲಸಗಳನ್ನು ಮಾಡಿಸಲಾರಂಭಿಸಿದ್ದಾರೆ. ಇಷ್ಟೇ ಅಲ್ಲದೆ ಇವರು ಅವ್ಯಕ್ತವಾದ ಶಬ್ದವನ್ನು ಸಹಾ ಭಾಗಭಾಗಗಳನ್ನಾಗಿ ಮಾಡಿ, ಆ ಪ್ರತಿಯೊಂದು ಅಲ್ಪಪ್ರಾಣದ ಶಬ್ದದ ತುಂಡಿಗೂ ಒಂದೊಂದು ಅಕ್ಷರ ವೆಂಬ ಸಂಕೇತಮಾಡಿ—ಭಾಷಾ ಪಾಂಡಿತ್ಯವನ್ನೂ, ಸಂಗೀತಾದಿ ಶಾಸ್ತ್ರಗಳ ನ್ನೂ ನಿರ್ಮಿಸಿರುವವರಾದ್ದರಿಂದ ಇವರ ಬುದ್ಧಿಶಕ್ತಿಯು ಅಗಾಧವಾದದ್ದು !

ಹೀಗೆ ಮಾನವರು ಈಶ್ವರಸೃಷ್ಟಿಯ ಘನಕಾಂತಾರಾದಿ ಅತಿದುರ್ಗಮ ಭೂತಲವನ್ನೆಲ್ಲಾ ಪಟ್ಟಣ ಗ್ರಾಮ ಕ್ಷೇತ್ರಾರಾಮಾದಿಗಳಾಗಿ ಅಭಿರಂಜಿಸು ವಂತೆ ಮಾಡಿ, ಭೂಮುಖ, ಜಲಮುಖ, ಭೂಗರ್ಭ, ಅಂತರಿಕ್ಷ ಮುಂತಾದ್ದ ರಲ್ಲಿ ಅಪ್ರತಿಹತವಾದ ಸ್ವಾತಂತ್ರ್ಯವನ್ನು ಪಡದಿರುತ್ತಾರೆ. ಇದೆಲ್ಲಾ ಪರ ಮೇಶ್ವರನಿಂದ ಪ್ರಸಾದಿಸಲ್ಪಟ್ಟಿರುವ ಪ್ರಜ್ಞಾಬಲದಿಂದಲ್ಲವೆ ?

"ವಿದ್ಯಾ ವಿತರ್ಕೋ ವಿಜ್ಞಾನಂ ಸ್ಮೃತಿ ಸ್ತತ್ಪರತಾಕ್ರಿಯಾ ||
ಯಸ್ಯೈತೇ ಷಡ್ಗುಣಾ ಸ್ತಸ್ಯ ನ ಸಾಧ್ಯಮತಿವರ್ತತೇ ||" (ಚರಕ)

"ವಿದ್ಯೆ, ವಿತರ್ಕದಿಂದ ಸತ್ಯಜ್ಞಾನ, ವಿಜ್ಞಾನ, ಸ್ಮೃತಿ, ತತ್ಪರತಾ, ಅವಿ ಚ್ಛಿನ್ನವಾದ ಕೃಷಿ ಈ ೬ ಗುಣಗಳೂ ಇರುವವನಿಗೆ ಈ ಲೋಕದಲ್ಲಿ ಯಾ ವದೂ ಅಸಾಧ್ಯವಾಗಲಾರದು."

ಇಂತು ಪುಂಜನೋತ್ಕರ್ಷತೆ ಎಂಬ ದಶಮಾಶಯವು.

# ಏಕಾದಶಾಶಯವು.

## ಸ್ತ್ರೀಜನಪ್ರಶಸ್ತಿ.

ಪರಮೇಶ್ವರನಿಂದ ಮಾನವಜಾತಿಯಲ್ಲಿ ಪ್ರಜೋತ್ಪಾದನೆಗಾಗಿ ನಿರ್ಮಿಸಲ್ಪಟ್ಟಿರುವ ಸ್ತ್ರೀಯರು ತನ್ನ ರಮಣೀಯತೆಯಿಂದಲೂ, ಅನನ್ಯ ಸಾಧಾರಣ ಮಹಿಮಾತಿಶಯದಿಂದಲೂ ತಮ್ಮಲ್ಲಿರುವ—ಈಶ್ವರಭಕ್ತಿ, ಜ್ಞಾನ, ಬುದ್ಧಿವೈಭವ, ಗಾಂಭೀರ್ಯ, ಧೃತಿ, ಸ್ಥೈರ್ಯ, ಧೈರ್ಯ, ಸಾಹಸ, ಕರುಣಾಮಯತ್ವ, ಪರೋಪಕಾರತನ ಮುಂತಾದ ಮಹದ್ಗುಣಾಲಂಕೃತರಾಗಿ ಈ ಜಗತ್ತನ್ನೇ ಬೆಳಗುತ್ತಿದ್ದಾರೆ. "ನಿಜವಾಗಿಯೂ ಈ ಗುಣಗಳು ಸ್ತ್ರೀಯರಲ್ಲಿವೆಯೆ? ಸ್ತ್ರೀಯರು ಸ್ವಭಾವವಾಗಿ ಚಪಲೆಯರು, ದುಷ್ಟವೃತ್ತಿಗಳೆಲ್ಲವೂ ಅವರಲ್ಲಿ ಮೂರ್ತೀಭವಿಸಿರುತ್ತಾ ಅಂತವರನ್ನು ಈರೀತಿ ಹೊಗಳುವದು ಯಾವ ನ್ಯಾಯ?'' ವೆಂದು ಯಾರಾದರೂ ನಮ್ಮ ಹೇಳಿಕೆಯನ್ನು ಆಕ್ಷೇಪಿಸಬಹುದು.

ವೈದ್ಯಶಾಸ್ತ್ರದಲ್ಲಿ ಇದೇ ವಿಷಯವನ್ನು ಕುರಿತು:—

"ಆಹಾರಾಚಾರ ಚೇಷ್ಟಾಭಿಃ ಯಾದೃಶೀಭಿಃ ಸಮನ್ವಿತೌ ॥
ಸ್ತ್ರೀಪುಂಸೌ ಸಮುಪೇಯಾತಾಂ, ತಯೋಃ ಪುತ್ರೋಽಪಿ ತಾದೃಶಃ॥"

"ಸ್ತ್ರೀಯೂ, ಪುರುಷನೂ ಅಂದರೆ, ಸ್ತ್ರೀಯು ಗರ್ಭಧಾರಣೆ ಮಾಡಿ ಪ್ರಸವವಾಗುವವರಿಗಿನ ಕಾಲದಲ್ಲಿಯೂ, ಪುರುಷನು ಈ ಪುತ್ರನ ಜನನಕ್ಕಾಗಿ ತಾನು ಕೊಡುವ ವೀರ್ಯವು ಅವನ ಶರೀರದಲ್ಲಿ ಹುಟ್ಟಿದ ಕಾಲದಿಂದಲೂ, ಯಾವವಿಧವಾದ ಆಹಾರ, ಆಚಾರ-ಅಂದರೆ ನಡೆನುಡಿ, ವ್ಯವಹಾರ, ಪಾಪಪುಣ್ಯವಿವೇಚನೆ, ಗುರುಭಕ್ತಿ, ದೈವಭಕ್ತಿ, ಪರೋಪಕಾರ, ಧರ್ಮಬುದ್ಧಿ ಮುಂತಾದವುಗಳಲ್ಲಿಯೂ, ಚೇಷ್ಟಾ-ಅದನ್ನನುಸರಿಸಿದ ನಡತೆಯಿಂದಲೂ ಕೂಡಿರುವರೋ ಅವರ ಸಂತಾನವಾದ ಪುತ್ರನಲ್ಲಿಯೂ ಅವೇ ಒಳ್ಳೇ ಅಥವಾ ಕೆಟ್ಟ ನಡತೆಗಳೇ ಆಮರಣಾಂತವಾಗಿಯೂ ಬಂದೇಬಿಡುವವು'' ಎಂದು ಶಾಸನ ಮಾಡಿದ್ದಾರೆ.

ಇದುವರಿಗೆ ಈ ಭೂಮಿಯಲ್ಲಿ ಯಾವ ಯಾವ—ನ್ಯಾಯೀ, ದೈವಭಕ್ತ, ಪರೋಪಕಾರೀ, ದೇಶೋಪಕಾರೀ, ಸಾಧುಶಾಂತನೂ, ಇಂದ್ರಿಯ ಸಂಯಮನ ಮಾಡಿದವನೂ, ಸಾಹಸಗಾರನೂ, ಸುಂದರನೂ, ಮಿತಭಾಷಿಯೂ, ಪರೇಂಗಿತಜ್ಞನೂ, ದೇವಬ್ರಾಹ್ಮಣ ಪೂಜಾನಿರತನೂ, ವಿವೇಕಿಯೂ, ಭಕ್ತವತ್ಸಲನೂ, ಆಶ್ರಿತಪೋಷಕನೂ, ನಿಷ್ಕಪಟಿಯೂ ಇವೇ ಮುಂತಾದ ಸಕಲವಿಧ ಸದ್ಗುಣಗಳಿಂದ ಅಲಂಕೃತನಾದ—ಸಾಧು, ಸಂತ, ರಾಜಾ, ಮಹಾರಾಜ, ವಿದ್ವಾನ್, ಶ್ರೀಮಂತ, ದರಿದ್ರ ಮುಂತಾದ ಪುರುಷರ ಜನ್ಮವಾಗಿದೆಯೋ ಅವ

ರೆಲ್ಲರಲ್ಲಿಯೂ ಆ ಕಲ್ಯಾಣಗುಣಗಳು ಬಂದು ನೆಲಸಬೇಕಾದರೆ ಅಂತಹ ಮಹಾ ಪುರುಷನನ್ನು ಗರ್ಭದಲ್ಲಿ ಹೊತ್ತಿದ್ದ ಮಹಾತ್ಮಳಾದ ಆತನ ತಾಯಿಯೇ ಈ ಎಲ್ಲಾ ಗುಣಗಳಿಗೂ ಕಾರಣಕರ್ತಳೆಂದೇ ಹೇಳಬೇಕಾಗಿದೆ. ಹಾಗೆ ಅವರಲ್ಲಿ ಸದ್ಗುಣಗಳು ಇಲ್ಲದಿದ್ದರೆ ಅಂತವರ ಗರ್ಭದಲ್ಲಿ ಸದ್ಗುಣಾಲಂಕಾರ ಮೂರ್ತಿಯು ಜನ್ಮವು ಎಂದೆಂದಿಗೂ ಸಾಧ್ಯವಾಗುವದೇ ಇಲ್ಲ! ಹಾಗೆ ಅದೂ ಸಾಧ್ಯವಾಗುವದಾದರೆ ಮುಳ್ಳುತುರಚಿಯ ಗಿಡದಲ್ಲಿ ದ್ರಾಕ್ಷೀಹಣ್ಣನ್ನು ಕೊಯ್ಯುವದಕ್ಕೆಳಸಿದಂತಾಗುತ್ತದೆ. ಇದು—ಶಾಸ್ತ್ರ, ನ್ಯಾಯ, ಲೋಕಾನುಭವ ಮುಂತಾದ್ದಕ್ಕೆ ಸರಿಬೀಳುವದಿಲ್ಲವಾದ್ದರಿಂದ ಸ್ತ್ರೀಜನರಲ್ಲಿ ನಾವು ಮೇಲೆ ಹೇಳಿದ ಗುಣಗಳು ಕೆಲವರಲ್ಲಿಯಾದರೂ ಇದ್ದೇ ಇರುತ್ತವೆ. ಎಲ್ಲರೂ ಗುಣವತಿಯರಾಗಿಯೇ ಇರಬೇಕೆನ್ನುವದಾದರೆ, ಪುರುಷರಲ್ಲಿಯೂ ಎಲ್ಲರೂ ಸದ್ಗುಣಿಗಳೂ, ಧರ್ಮವತ್ಸಲರೂ, ಶಾಸ್ತ್ರಿಗಳೂ, ಸಚಿವರೂ, ಜ್ಞಾನಿಗಳೂ ಆಗಬೇಕಾದೀತು? ಐದು ಬೆಟ್ಟುಗಳೂ ಒಂದೇಸಮನಾಗಿಲ್ಲ! ಸ್ತ್ರೀಯರಲ್ಲಿ ಅನೇಕರನ್ನು ಪುರುಷರಾದ ನಾವೇ ಹಾಳುಮಾಡಿದ್ದೇವೆ. ಇದೇ ವಿಷಯವನ್ನು ವಿವೇಚನೆಮಾಡಿದ ಒಬ್ಬ ಮಹಾ ಕವಿಯು:—

"ಪುರುಷಶ್ಚಟುಲಾನಿ ಕಾಮಿನೀನಾಮ್ ।
ಕುರುತೇ ಯಾನಿ ರಹೋ ನ ತಾನಿ ಪಶ್ಚಾತ್ ॥
ಸುಕೃತಜ್ಞತಯಾಂಗನಾ ಗತಾಸೂನ್ ।
ಅವಗೂಹ್ಯ ಪ್ರವಿಶಂತಿ ಸಪ್ತಜಿಹ್ವಮ್ ॥"

"ಮೊದಲು ಏನೊಂದು ಲೋಕವ್ಯವಹಾರವೂ ತಿಳಿಯದಿರುವ, ನಿರಪರಾಧಿಯಾದ ಕಾಮಿನಿಯನ್ನು ಪುರುಷನು ಮೋಹಿಸಿ ತನ್ನ ಚಟುಲ ವಾಕ್ಯಗಳೆಂಬ ಚಮತ್ಕಾರವಾದ ಕಾಮೋತ್ತೇಜಕೋಪನ್ಯಾಸಗಳಿಂದ ಅವಳನ್ನು ವಶೀಕರಣ ಮಾಡಿಕೊಂಡು, ಅವಳ ಅಂಗಸಂಗ ಸುಖಕ್ರೀಡೆಯಿಂದ ತೃಪ್ತನಾದ ಸ್ವಲ್ಪ ದಿನಕ್ಕೇನೆ ಅವಳನ್ನು ಉದಾಶೀನ ಮಾಡಿಬಿಟ್ಟು—ಆ ಬಲೆಯನ್ನು ಮತ್ತಾವಳೋ ಹೊಸಬಳಾದ ಮುಗ್ಧೆಯಕಡೆಗೆ ಬೀಸಲು ಒಯ್ಯುತ್ತಾನೆ. ಆ ಮೇಲೆ ಈ ಪೂರ್ವಪರಿಚಿತಳನ್ನು ಮರತೇಬಿಡುತ್ತಾನೆ. (ಇದೇ ಪುರುಷರಲ್ಲಿರುವ ಕಲ್ಯಾಣ ಗುಣವು!) ಸ್ತ್ರೀಯಾದರೋ ಈತನ ಕಾಮುಕಲಾಕರ್ಮಗಳಿಗಾಗಿ ಮೋಹಿಸಿದ ಗುಣವನ್ನು ಬದಲಾಯಿಸದೆ ಇವನಲ್ಲಿಯೇ ದತ್ತಚಿತ್ತಳಾಗಿದ್ದುಕೊಂಡು ಈ ವಿಧವಾದ ಸುಕೃತಜ್ಞತೆಯಿಂದ ಅಂಗನೆಯರು ಮರಣಪಟ್ಟ ತಮ್ಮ ಇನಯನನ್ನು (ಅವಗೂಹ್ಯ) ಆಲಿಂಗನ ಮಾಡಿಕೊಂಡು (ಸಪ್ತಜಿಹ್ವಮ್) ಉರಿಯುತ್ತಿರುವ ಚಿತಿಯ ಯಜ್ಞೇಶ್ವರನಲ್ಲಿ (ಪ್ರವಿಶಂತಿ) ಪ್ರವೇಶ ಮಾಡುವರು. ಅಂದರೆ ಕೃತಘ್ನತೆಯು ಪುರುಷರಲ್ಲಿಯೂ, ಕೃತಜ್ಞತೆಯು ಸ್ತ್ರೀಯರಲ್ಲಿಯೂ ಇರುವದೆಂದು ಆ ಮಹಾಕವಿಯು ಬೋಧಿಸಿದ್ದಾನೆ."

" ಪ್ರಜನಾರ್ಥಾ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ॥
ಸ್ತ್ರಿಯಃ ಶ್ರಿಯಶ್ಚ ಗೇಹೇಷು ನ ವಿಶೇಷೋಽಸ್ತಿ ಕಶ್ಚನ ॥ "
(ಮನುಸ್ಮೃತಿ)

" ಸಂತಾನೋತ್ಪತ್ತಿಯು ಸ್ತ್ರೀಯರಿಂದಲೇ ಆಗತಕ್ಕದ್ದು, ಇದರಿಂದ ಸ್ತ್ರೀಯು ಜಗತ್ತಿಗೆ ಮಹಾ ಉಪಕಾರ ಮಾಡುತ್ತಾಳೆ, ಆ ಕಾರಣದಿಂದ ಮಾಹಾತ್ಮ್ಯವನ್ನುಳ್ಳ ಈ ಸ್ತ್ರೀಜಾತಿಯು ಪೂಜೆಗೆ ಅರ್ಹವಾದದ್ದೂ, ಕುಲಕ್ಕೆ ಶೋಭಾದಾಯಕವಾದದ್ದೂ ಆಗಿದೆ. ಲಕ್ಷ್ಮಿ (ಧನಾಧ್ಯೈಶ್ವರ್ಯ) ಗೂ, ಕುಟುಂಬಿನಿಯಾದ ಸ್ತ್ರೀಗೂ ಸ್ವಲ್ಪವೂ ಭೇದವೇ ಇಲ್ಲ " ವೆಂದು ಮಹಾತ್ಮನಾದ ಮನುವು ಬೋಧಿಸುತ್ತಿದ್ದಾನೆ.

" ನ ಗೃಹಂ ಗೃಹಮಿತ್ಯಾಹುಃ ಗೃಹಿಣೀ ಗೃಹಮುಚ್ಯತೇ ॥ "

" ಗೃಹವೆಂದರೆ ಮನೆಯೋ ಅಲ್ಲ; ಗೃಹಸ್ವಾಮಿನಿಯಾದ ಗೃಹಿಣೀಸಹಿತವಾದದ್ದೇ ಮನೆಯು ! "

" ಅಪತ್ಯಂ ಧರ್ಮಕಾರ್ಯಾಣಿ ಶುಶ್ರೂಷಾ ರತಿರುತ್ತಮಾ ॥ ದಾರಾಧೀನಸ್ತಥಾ ಸ್ವರ್ಗಃ ದಾರಾ ಸ್ವರ್ಗಸ್ಯ ಕಾರಣಮ್ ॥ "

" ಪುತ್ರೋತ್ಪತ್ತಿ, ಧರ್ಮಕಾರ್ಯಗಳು, ಸೇವಾಶುಶ್ರೂಷಾ, ಸುಖ, ಪ್ರೀತಿಯುಕ್ತವಾದ ರತಿಪ್ರಾಪ್ತಿ, ಸ್ವರ್ಗಸಾಧನೆ ಇವೆಲ್ಲವೂ ಸ್ತ್ರೀಯರ ಅಧೀನದಲ್ಲಿವೆ. "

" ತಸ್ಮಾದೇತಾ ಸ್ಸದಾಪೂಜ್ಯಾಃ ಭೂಷಣಾಚ್ಛಾದನಾಶನೈಃ ॥
ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮಿಚ್ಛುಭಿಃ ॥ "
(ಮನುಸ್ಮೃತಿ)

" ಈ ಕಾರಣದಿಂದ ಸ್ತ್ರೀಯರು ಒಡವೆವಸ್ತುಗಳಿಂದಲೂ, ದಿವ್ಯವಾದ ಪಟ್ಟೆಪೀತಾಂಬರಗಳಿಂದಲೂ, ಷಡ್ರಸೋಪೇತಾನ್ನ ವಿಶೇಷಗಳಿಂದಲೂ ಪೂಜಿಸಲ್ಪಡತಕ್ಕವರೂ, ದಿವ್ಯಾಲಂಕಾರಗಳಿಂದಲಂಕರಿಸಲ್ಪಡತಕ್ಕವರೂ ಆಗಿದ್ದಾರೆ. "

ಹೀಗೆ ಪರಾಧೀನವೃತ್ತಿಯಿಂದ ಪೋಷಿಸಲ್ಪಡಬೇಕಾಗಿರುವದರಿಂದ ಸ್ತ್ರೀಜನವು—ತಮ್ಮ ಶರೀರಸೌಷ್ಠವ, ಮಾರ್ದವ, ಹಾವಭಾವವಿಲಾಸಾದಿಗಳ ವೈಖರಿ, ಅತಿಮನೋಹರವಾದ ಆಕೃತಿವಿಶೇಷ, ಎಂತಹ ಕಠಿಣ ಹೃದಯನನ್ನಾದರೂ ತಮ್ಮ ಮುಗ್ಧಾಪಾಂಗ ಪ್ರಸಾದ ಮಾತ್ರದಲ್ಲಿಯೇ ಕರಗಿಸಿಬಿಡತಕ್ಕ ಮನ್ಮಥಶಕ್ತಿ ವಿಶೇಷ, ತಮ್ಮ ಮಂದಸ್ಮಿತ ವದನಾರವಿಂದಗಳಿಂದ ಲಾವಣ್ಯ ತರಂಗಗಳನ್ನು ಬೀರಲುಪಕ್ರಮಿಸಿದರೆ ಎಂತಹ ಶುಷ್ಕಹೃದಯನೂ, ವಿವಶನಾಗಬಹುದಾದ ಮಾಯಾಶಕ್ತಿ ಮುಂತಾದ ಅಸಾಧಾರಣ ಸ್ಥಿತಿಯಿಂದಲೇ

ನಿರ್ಮಿಸಲ್ಪಟ್ಟಿರುವರು. ಇದರಿಂದ ಅವರು—ಪುರುಷನಿಗುಂಟಾಗುವ ಸಾಂಸಾರಿಕವಾದ, ದಾರಿದ್ರ್ಯದಿಂದುಂಟಾದ, ಧನೋಪಾರ್ಜನಾದಿಗಳಿಂದ ಸಂಭವಿಸುವ ಆಪತ್ತುಗಳು, ಕ್ಲೇಶ, ಕಂಗಾಲತನ ಮುಂತಾದ್ದರಿಂದ ಸಂಭವಿಸುವ ಮನೋಮಾಲಿನ್ಯ, ವ್ಯಥೆ, ದುಃಖಗಳನ್ನು—ತಮ್ಮ ಅಮೃತೋಪಮ ಸುಖಾಲಾಪಗಳಿಂದಲೂ, ತಮ್ಮ ಮುಗುಳ್ನಗೆಗೂಡಿದ, ಮನಃಪೂರ್ವಕವಾಗಿ ಆಚರಿಸತಕ್ಕ ಪ್ರೀತಿಯ ಸೊಬಗಿನಿಂದಲೂ, ವಿಲಾಸಾತಿಶಯದಿಂದಲೂ—ನಾಮಮಾತ್ರವಾದರೂ ನಿಲ್ಲದಂತೆ ಮಾಡುವರಾದ್ದರಿಂದ, ಈ ದುಃಖಾವಹವಾದ ಸಂಸಾರವನ್ನು ತಮ್ಮ ಪ್ರಭಾವದಿಂದ ಸಮ್ಯಕ್ಸಾರವುಳ್ಳದ್ದನ್ನಾಗಿ ಮಾಡುವ ಮಹಚ್ಛಕ್ತಿಯು ಇವರಲ್ಲಿಯೇ ಇರುವದೆಂದರಿಯಬೇಕು.

" ತಸ್ಯಾಃ ಸ್ತನೌ ಯದಿ ಘನೌ ಜಘನಂ ಚ ಹಾರಿ |
ವಕ್ತ್ರಂ ಚ ಚಾರು ತವ ಚಿತ್ತ ಕಿಮಾಕುಲತ್ವಮ್ ? ||
ಪುಣ್ಯಂ ಕುರುಷ್ವ ಯದಿ ತೇಷು ತವಾಸ್ತಿ ವಾಂಛಾ|
ಪುಣ್ಯೈರ್ವಿನಾ ನಹಿ ಭವಂತಿ ಸಮೀಹಿತಾರ್ಥಾಃ || "

" ಆ ಸ್ತ್ರೀಯ ಸ್ತನಗಳು ನಿಬಿಡಗಳೂ, ಕಠಿಣಗಳೂ, ಜಘನವೆಂಬ ಕಟಿಪುರೋಭಾಗವು ಮನೋಹರಾಕೃತಿಯುಳ್ಳದ್ದೂ ಆಗಿದೆ. ಮುಖಮಂಡಲವಂತೂ ಸುಂದರವಾಗಿದೆ. ಇಂತಾದ್ದರಲ್ಲಿ ಎಲೈ ಮನಸ್ಸೆ ! ಯಾತಕ್ಕಾಗಿ ಆ ಕುಲತ್ವವನ್ನು ಪಡಿಯುತ್ತಾ ವ್ಯಥೆಪಡುತ್ತಿದ್ದೀಯೆ ? ಈ ಸ್ತ್ರೀಯಲ್ಲಿರುವ ಸ್ತನಾದಿಗಳ ಪರಿರಂಭಣಾ ಜನಿತಾನಂದ ಸಾಗರದಲ್ಲಿ ಮುಳುಗ್ಯಾಡಲಪೇಕ್ಷಿಸುವೆಯಾದರೆ ಸತ್ಕರ್ಮಾನುಷ್ಠಾನವೆಂಬ-ಅನಾಥರಾದ, ದೀನರಾದ ಸ್ತ್ರೀಯರೂ, ಬಾಲರೂ, ವೃದ್ಧರೂ ಮುಂತಾದವರನ್ನು ಅನ್ನವಸ್ತ್ರ ಧನಾದಿಗಳಿಂದ ಸಂತೋಷಪಡಿಸುತ್ತಾ, ತನ್ಮೂಲಕ ಹೊಂದುವ ಪುಣ್ಯವನ್ನು ಸಂಪಾದಿಸು; ಯಾಕೆಂದರೆ ಪೂರ್ವಜನ್ಮದ ಪುಣ್ಯವಾಗಲೀ, ಈ ಜನ್ಮದ ಪುಣ್ಯವಾಗಲೀ ಇಲ್ಲದಿದ್ದರೆ ಇಂತಹ ಸೌಖ್ಯದಾಯಕರಾದ ಸ್ತ್ರೀಯರಲ್ಲಿ ಸುಖಿಸುವಂತಹ ಇಷ್ಟಾರ್ಥಸಿದ್ಧಿಯು ಎಂದೆಂದಿಗೂ ಆಗಲಾರದು. "

" ಸ್ಮಿತೇನ ಭಾವೇನ ಚ ಲಜ್ಜಯಾ ಭಿಯಾ |
ಪರಾಙ್ಮುಖೈರರ್ಧಕಟಾಕ್ಷ ವೀಕ್ಷಣೈಃ ||
ವಚೋಭಿ ರೀರ್ಷ್ಯಾ ಕಲಹೇನ ಲೀಲಯಾ |
ಸಮಸ್ತಭಾವೈಃ ಖಲು ಬಂಧನಂ ಸ್ತ್ರಿಯಃ || "

" ಸ್ಮಿತೇನ-ಯೌವನಾದಿ ಮದವಿಕಾರಜನಿತ ಮಂದಹಾಸದಿಂದಲೂ, ಭಾವೇನ-ಬಾಲ್ಯ ಯೌವನ ಸಂಧಿಕಾಲದಲ್ಲಿ ಉತ್ಪನ್ನವಾಗತಕ್ಕ ಶೃಂಗಾರವಿಷಯವೆಂಬ ಪ್ರಥಮಾಂತಃಕರಣ ವಿಕಾರದಿಂದಲೂ, ಲಜ್ಜಯಾ-ಕುಚ ಕುಂಭ

ತ್ತೋಳುಗಳ ಬುಡದಮೇಲಿರುವ ಶರಗನ್ನೂ ವದನವನ್ನೂ ತಗ್ಗಿಸುತ್ತಾ ಸ್ವಲ್ಪ ಮಟ್ಟಿಗೆ ಕಣ್ಣನ್ನು ಮುಚ್ಚುವದರಿಂದುಂಟಾಗುವ ಮನಸ್ಸಂಕೋಚನರೂಪವಾದ ವ್ರೀಡಾಭಾವದಿಂದಲೂ, ಭಿಯಾ-ಆಕಸ್ಮಿಕವಾಗಿ ಭಯಪಟ್ಟವಳಂತೆ ನಟಿಸುವದರಿಂದ ಜನಿತವಾದ ತ್ರಾಸದಿಂದಲೂ, ಪರಾಙ್ಮುಖೈಃ-ಲಜ್ಜೆಯನ್ನು ನಟಿಸುವದರಿಂದ ಸ್ಫುಟಪ್ರಸಾರಣವಿಲ್ಲದಂತೆ ಮಾಡುವ ವೈಖರಿಯಿಂದಲೂ, ಅರ್ಧಕಟಾಕ್ಷವೀಕ್ಷಣೈಃ - ಅಸಮಗ್ರಾಪಾಂಗದ ಅವಲೋಕನದಿಂದಲೂ, ವಚೋಭಿಃ-ಶುಕ ಕೋಕಿಲಾದಿಗಳಂತೆ ಮಧುರತರಾಲಾಪಗಳಿಂದಲೂ, ಈರ್ಷ್ಯಾ ಕಲಹೇನ - ಪರೋತ್ಕರ್ಷೆಯನ್ನು ಸಹನಮಾಡಲಾರದ ಅಸೂಯೆಯಿಂದ ಕಲ್ಪಿಸತಕ್ಕ ಕಲಹದಿಂದಲೂ, ಲೀಲಯಾ - ಮಾತಿನ ಚಮತ್ಕಾರದಿಂದ ಪ್ರಿಯನನ್ನು ಅನುಕರಣಮಾಡತಕ್ಕ ವಿಲಾಸಾತಿಶಯದಿಂದಲೂ, ಸಮಸ್ತಭಾವೈಃ - ಸ್ತಂಭ ರೋಮಾಂಚ ಸ್ವೇದಾದಿ ಸಾತ್ವಿಕಭಾವಗಳು, ಹರ್ಷೌತ್ಸುಕ್ಯಾವಹಿತ್ಥಾದಿ ಸಂಚಾರೀಭಾವಗಳು ಇವುಗಳೆಲ್ಲದರಿಂದಲೂ (ಜಗತ್ತಿನಲ್ಲಿ) ಸ್ತ್ರೀಯರು ಪುರುಷರಿಗೆ ತೊಡಿಸಿದ ಬಂಧನ (ಬೇಡಿ) ಗಳಾಗಿದ್ದಾರೆ.''

" ಭ್ರೂಚಾತುರ್ಯಾತ್ಕುಂಚಿತಾಕ್ಷಾಃ ಕಟಾಕ್ಷಾಃ ।
ಸ್ನಿಗ್ಧಾವಾಚೋ ಲಜ್ಜಿತಾಂತಾಶ್ಚ ಹಾಸಾಃ ॥
ಲೀಲಾ ಮಂದಂ ಪ್ರಸ್ಥಿತಂ ಚ ಸ್ಥಿತಂ ಚ ।
ಸ್ತ್ರೀಣಾಮೇತದ್ಭೂಷಣಂ ಚಾಯುಧಂ ಚ ॥ "

" ಹುಬ್ಬುಗಳ ಲಲಿತಾಕ್ಷೇಪ ವೈಚಿತ್ರ್ಯದಿಂದ ಮಿಣಕಿಸತಕ್ಕ ಅಪಾಂಗೇಕ್ಷಣಗಳೂ, ಸ್ನೇಹ ಅಂದರೆ ದರ್ಶನಾದಿಗಳಿಂದ ಉಂಟಾದ ಪರಾಕಾಷ್ಠವನ್ನು ಪಡದ ವಿಸ್ರಂಭ (ಇದರಿಂದ ಅಂತರಂಗವು ದ್ರವಿಸುತ್ತದೆ) ದಿಂದ ಪರಿಪ್ಲುತವಾದ ಕಾಮೋತ್ತೇಜಕ ವಾಕ್ಯಗಳೂ, ಲಜ್ಜಾಂತವಾದ ಹಾಸ್ಯಗಳೂ, ಲೀಲೆಯಿಂದ ಮಧುರವಾದ, ಮಂದವಾದ ಹೊರಡೋಣವೂ, ಹಾಗೆಯೇ ಹಿಂದಿರುಗಿ ಬರುವಿಕೆಯೂ ಇವೆಲ್ಲವೂ ಕಾಮಿನಿಯರಿಗೆ ಒಪ್ಪತಕ್ಕ ಭೂಷಣಗಳಾಗಿಯೂ, ಚಾತುರ್ಯಾತಿಶಯದ್ಯೋತಕಗಳಾದ ಆಯುಧಗಳಾಗಿಯೂ, ಇರುವವು.''

" ವ್ರಜತಿ ಮೃದು ಸಲೀಲಂ ರಾಜಹಂಸೀವ ತನ್ವೀ ।
ತ್ರಿವಳಿ ಲಲಿತ ಮಧ್ಯಾ ಹಂಸವಾಣೀ ಸುವೇಷಾ ॥
ಮೃದು ಶುಚಿ ಲಘು ಭುಙ್ಕ್ತೇ ಮಾನಿನೀ ಗಾಢಲಜ್ಜಾ ।
ಧವಳ ಕುಸುಮ ವಾಸೋ ವಲ್ಲಭಾ ಪದ್ಮಿನೀ ಸ್ಯಾತ್ ॥ "

" ಪದ್ಮಿನೀ ಸ್ತ್ರೀಯು ರಾಜಹಂಸದಂತೆ ಲೀಲಾಮಂದರಗಮನವುಳ್ಳವಳೂ, ತೆಳುವಾಗಿ ರೇಖಾತ್ರಯಯುಕ್ತ ಮಧ್ಯಭಾಗವುಳ್ಳವಳೂ, ಹಂಸ

ದಂತೆ ಮೃದುಮಧುರ ಸ್ವರವುಳ್ಳವಳೂ, ಸುಂದರವಾದ ವಸ್ತ್ರಧಾರಣೆ ಮಾಡು ವವಳೂ, ಮೃದುವಾದ ಶುಚಿಯಾದ ಅನ್ನವನ್ನು ಸ್ವಲ್ಪಮಾತ್ರ ಭುಜಿಸತಕ್ಕ ವಳೂ, ಗಾಢವಾದ ಲಜ್ಜಾಯುತಳೂ, ಬಿಳೀಪುಷ್ಪ ಮತ್ತು ವಸ್ತ್ರಪ್ರಿಯಳೂ ಆಗಿರುತ್ತಾಳೆ.''

**"ವಕ್ತ್ರಂ ಚಂದ್ರವಿಲಾಸಿ ಪಂಕಜಪರೀಹಾಸಕ್ಷಮೇ ಲೋಚನೇ।**
**ವರ್ಣಃ ಸ್ವರ್ಣಮಪಾಕರಿಷ್ಣು ರಲಿನೀ ಜಿಷ್ಣುಃ ಕಚಾನಾಂ ಚಯಃ॥**
**ವಕ್ಷೋಜಾವಿಭಕುಂಭ ವಿಭ್ರಮ ಹರೌ ಗುರ್ವೀ ನಿತಂಬ ಸ್ಥಲೀ।**
**ವಾಚಾಂ ಹಾರಿ ಚ ಮಾರ್ದವಂ ಯುವತಿಷು ಸ್ವಾಭಾವಿಕಂ ಮಂಡ ನಮ್॥"**

"ಸ್ತ್ರೀಯರಿಗೆ—ಚಂದ್ರನಂತೆ ವಿಕಸಿತವಾದ ಮುಖವೂ, ಕಮಲಗ ಳನ್ನು ತಿರಸ್ಕರಿಸತಕ್ಕ ಲೋಚನಗಳೂ, ಸ್ವರ್ಣಚ್ಛಾಯೆಯಾಂತಿರುವ ಶರೀರ ಕಾಂತಿಯೂ, ಭೃಂಗದಂತೆ ಕಪ್ಪಾಗಿರುವ ಕೇಶಪಾಶವೂ, ಆನೆಯ ಕುಂಭ ಸ್ಥಾನದಂತೆ ವರ್ತುಲಗಳಾಗಿಯೂ, ಘಟ್ಟಿಯಾಗಿಯೂ ಇರುವ ಸ್ತನಗಳು, ದುರ್ಭರವಾದ ಕಟಿಪಶ್ಚಾದ್ಭಾಗವೂ, ಮನೋಹರವಾದ, ಮಧುರವಾದ ಮಾತೂ ಇವೆಲ್ಲವೂ ಸ್ವಭಾವವಾದ ಅಲಂಕಾರಗಳೇ ಆಗಿವೆ.''

**"ಸ್ಮಿತಂ ಕಿಂಚಿನ್ಮುಗ್ಧಂ ಸರಳತರಳೋ ದೃಷ್ಟಿವಿಭವಃ।**
**ಪರಿಸ್ಪಂದೋ ವಾಚಾ ಮಭಿನವವಿಲಾಸೋಕ್ತಿ ಸರಸಃ॥**
**ಗತಾನಾಮಾರಂಭಃ ಕಿಸಲಯಿತ ಲೀಲಾ ಪರಿಕರಃ।**
**ಸ್ಪೃಶಂತ್ಯಾಸ್ತಾರುಣ್ಯಂ ಕಿಮಿವ ನಹಿ ರಮ್ಯಂ ಮೃಗದೃಶಃ॥"**

"ತರುಣಿಯ ಪ್ರಾಗಲ್ಭ್ಯಭಾವದಿಂದ ನಗೆಯು ಸ್ವಲ್ಪಮಾತ್ರ, ಮತ್ತು ಸುಂದರವಾಗಿದೆ; ವಿಲೋಕನ ಸಂಪತ್ತು ಅಕುಟಿಲವೂ, ಚಂಚಲವೂ ಆಗಿದೆ. ವಾಗ್ವ್ಯಾಪಾರವು ನೂತನವಿಲಾಸದಿಂದ ಕೂಡಿ, ರುಚಿರವಾಗಿದೆ. ಗತಿಯ ಉಪಕ್ರಮವು ವಿಲಾಸಸಂಬಂಧ ಬಂಧುರವಾಗಿದೆ. ಅದಕ್ಕಾಗಿ ತಾರುಣ್ಯಭಾ ವವನ್ನು ಸೇರತಕ್ಕ ಸ್ತ್ರೀಯ ಇವೆಲ್ಲವೂ ಎಂತಹ ರಮ್ಯವಾಗಿರಲಾರವು? ಎಲ್ಲವೂ ರಮ್ಯಗಳೇ ಆಗಿವೆ.''

"ಏತಾಶ್ಚಲದ್ವಲಯ ಸಂಹತಿ ಮೇಖಲೋದ್ಧ।
ಝಂಕಾರ ನೂಪುರ ಪರಾಜಿತ ರಾಜಹಂಸ್ಯಃ॥
ಕುರ್ವಂತಿ ಕಸ್ಯ ನ ಮನೋ ವಿವಶಂತರುಣ್ಯೋ।
ವಿತ್ರಸ್ತ ಮುಗ್ಧಹರಿಣೀ ಸದೃಶೈಃ ಕಟಾಕ್ಷೈಃ॥"

"ಈ ಚಲಿಸತಕ್ಕ ಕಂಕಣಗಳ ಶ್ರೇಣಿಯು ಮತ್ತು ಕಾಂಚೀಕಿಂಕಿಣಿ ಗಳಿಂದೇಳುವ ಹಾಗೂ, ನೂಪುರಗಳ ಝಂಕಾರರೂಪ ಮಂಜುಲನಾದದಿಂದ

ತಿರಸ್ಕರಿಸಲ್ಪಟ್ಟ ರಾಜಹಂಸಗಳುಳ್ಳ ಅಂದರೆ ಅವುಗಳಂತೆ ಮಂಜುಲಧ್ವನಿಯುಳ್ಳ ಕಾಮಿನಿಯರು ತಮ್ಮ (ಚಕಿತವಾದ ಹರಿಣಿಯ ನೇತ್ರಗಳಂತೆ) ವಿಶಾಲವಾದ ಕಣ್ಣುಗಳ ಅಪಾಂಗವೀಕ್ಷಣೆಯನ್ನು ಬೀರುವದಾದರೆ ಯಾರ ಮನಸ್ಸು ತಾನೇ ವಿವಶವಾಗುವದಿಲ್ಲ ? ಅಂದರೆ ಎಂತವರೂ ವಿವಶರಾಗಿಯೇ ಆಗುವರು.''

ವಸ್ತುತಃ ವಿಚಾರಮಾಡಿ ನೋಡಿದರೆ ಪುರುಷಜಾತಿಗಿಂತಲೂ ಸ್ತ್ರೀಜನದಲ್ಲಿ—ಅತುಲಿತವಾದ ಬೆಡಗೂ, ಅವಾಙ್ಮಾನಸಗೋಚರವಾದ ಲಾವಣ್ಯ, ಅತ್ಯದ್ಭುತವಾದ ಸೌಂದರ್ಯಾತಿರೇಕ, ಅಮಾನುಷವಾದ ಕಾರುಣ್ಯಾಮೃತಾರ್ದ್ರ ಹೃದಯ, ಅತ್ಯಾಹ್ಲಾದಕರವಾದ ದೇಹಚ್ಛವಿ, ಅಸಮಾನವಾದ ಶರೀರಸೌಷ್ಠವ, ಅಪ್ರತಿಪತ್ತಾದ ವೈಖರಿ, ತಮ್ಮ ದಿವ್ಯದರ್ಶನ ಮಾತ್ರದಿಂದಲೇ ಯಂಥಾಕ್ಲೇಶವನ್ನೂ ನಾಶಗೊಳಿಸತಕ್ಕ ವಿಕಸಿತ ಚಂದ್ರಮಂಡಲದಂತಹ ಮುಖಾರವಿಂದ ಮುಂತಾದ ಸೌಂದರ್ಯಭಾವವೇ ಅತಿಶಯವಾಗಿರುವದು. ಇದರಿಂದ ಇವರೇ ಈ ದುಃಖಮಯವಾದ ಸಂಸಾರವನ್ನು ಸಮ್ಯಕ್ಸಾರವುಳ್ಳದ್ದನ್ನಾಗಿ ಮಾಡುವರೆಂಬುದರಲ್ಲಿ ಸಂದೇಹವಿಲ್ಲ.

ಇಂತು ಸ್ತ್ರೀಜನಪ್ರಶಸ್ತಿ ಎಂಬ ಏಕಾದಶಾಶಯವು.



## ಹನ್ನೆರಡನೆಯ ಆಶಯವು.

### ವಿವಾಹ.

ಮನುಷ್ಯನಲ್ಲಿ—ಸತ್ಯ, ಧರ್ಮ, ಶೌಚ, ಆಚಾರಪರತ್ವ, ಪರೋಪಕಾರ, ದೈವಭಕ್ತಿ, ಇಂದ್ರಿಯನಿಗ್ರಹ, ಪಾಪಭೀರುತ್ವ, ಕರುಣಾಮಯತ್ವ ಮುಂತಾದ ಎಷ್ಟೇ ಸದ್ಗುಣಗಳು ಇದ್ದರೂ—ಸ್ವದೇಶಾಭಿಮಾನ, ಸ್ವಧರ್ಮಾಭಿಮಾನ, ಸ್ವಭಾಷಾಭಿಮಾನ, ಸ್ವಜನಾಭಿಮಾನಗಳೆಂಬವು ಮಾತ್ರ ಇಲ್ಲದಿದ್ದರೆ ಅವೆಲ್ಲವೂ ಮಂಗಲಸೂತ್ರವಿಲ್ಲದಿರುವ ಸುಮಂಗಲಿಯಂತೆ ಶೋಭಾಸ್ಪದಗಳಾಗಲಾರವು. ಇವುಗಳಲ್ಲಿ—ನಮ್ಮ ದೇಶ, ನಮ್ಮ ಧರ್ಮ, ನಮ್ಮ ಭಾಷಾ ಎಂಬವು ಸರ್ವಸಾಮಾನ್ಯವಾಗಿ ಎಲ್ಲರಿಗೂ ಸಂಬಂಧಪಟ್ಟ ವಿಷಯಗಳೇ ಆಗಿವೆ; ಇವುಗಳಲ್ಲಿ ಮುಖ್ಯವಾಗಿರತಕ್ಕ "ಸ್ವಜನಾಭಿಮಾನ" ವೆಂಬದು ಬಹು ದೊಡ್ಡ ಅರ್ಥವನ್ನು ತನ್ನಲ್ಲಿ ಅಡಗಿಸಿಕೊಂಡಿರುವದು. "ಸ್ವಜನವೆಂದರೆ ಯಾರು ?" ಎಂಬದೇ ಇಲ್ಲಿರುವ ವಿಮರ್ಶಾರ್ಹವಾದ ವಿಷಯವು. ಇದರ ಅರ್ಥವು, "ತನ್ನವರು, ನೆಂಟರು, ರಕ್ತಸಂಬಂಧಿಗಳು, ತನ್ನ ಮನೆಗೆ ಸಂಬಂಧಪಟ್ಟವರು" ಎಂದು ತಿಳಿಯುತ್ತದೆ. "ತಂದೆ, ತಾಯಿ, ಚಿಕ್ಕಪ್ಪ, ದೊ

ಡ್ಡಪ್ಪ, ಚಿಕ್ಕಮ್ಮ, ದೊಡ್ಡಮ್ಮ, ಅಣ್ಣ, ಅತ್ತಿಗೆ, ತಮ್ಮ, ನಾದಿನಿ, ಹೆಂಡತಿ,
ಮಾವ, ಅತ್ತೆ, ಭಾವಂದಿರು, ಮೈದುನರು " ಈ ಮುಂತಾದ ಅಷ್ಟೋತ್ತರ
ಶತನಾಮಾವಳಿಯು ಪ್ರಾರಂಭವಾಯಿತಷ್ಟೆ ? ಹಾಗೆ ಮದುವೆಯೆಂಬ ನಿರ್ಬಂ
ಧವೇ ಇಲ್ಲದೆ—" ಹೆಣ್ಣು ಒಂದು ಜಾತಿ, ಗಂಡು ಒಂದು ಜಾತಿ " ಎಂಬಂತೆ
ವ್ಯವಹರಿಸುತ್ತಾ—ಶಿಕ್ಕಿದವಳನ್ನು ಶಿಕ್ಕಿದವನು ಕ್ರೀಡಿಸಿ ಮಕ್ಕಳನ್ನು ಪಡೆ
ಯುತ್ತಾ ಬಂದಿದ್ದರೆ, ನಾವು ಮೇಲೆ ಹೇಳಿದ ಬಂಧುವರ್ಗ ಸಹಸ್ರನಾಮವೆಂ
ಬದು ತಲೆಯನ್ನೇ ಎತ್ತುತ್ತಿರಲಿಲ್ಲ !! ಮೃಗಗಳಂತೆ ಯಾರಿಗ್ಯಾರೂ ಸಂಬಂಧಿ
ಗಳೂ ಇರುತ್ತಿರಲಿಲ್ಲ, " ಅವನಿಗೆ ಇವನೇನಾಗಬೇಕು ? ಇವನಿಗೆ ಅವನೇ
ನಾಗಬೇಕು ? " ಎಂದು ಮುಂತಾದ ವ್ಯವಹಾರವೇ ಹುಟ್ಟದೆ ಅದೊಂದು
ವಿಲಕ್ಷಣ ವ್ಯವಹಾರವಾಗುತ್ತಿತ್ತಲ್ಲವೆ ? ಇಂತಹ ವಿಲಕ್ಷಣ ವ್ಯವಹಾರವನ್ನೇ
ಈಗಲೂ ಆಚರಣೆಯಲ್ಲಿ ತರಬೇಕೆಂದು ಎಷ್ಟೋ ಜನರ ತಾತ್ಪರ್ಯವೂ ಇರು
ವಂತೆ ತೋರುತ್ತದೆ. ಅದಕ್ಕಾಗಿ ಈ ವಿಷಯವಾಗಿ ಸ್ವಲ್ಪ ಬರೆಯಲೇಬೇ
ಕಾಗಿದೆ.

ಪಶುಗಳಲ್ಲಿ ಅಂದರೆ—ಅದಕ್ಕೆ ಗರ್ಭಧಾರಣೆ ಮಾಡುವಂತಹ ಯಾ
ವದೋ ಒಂದು ಸಮಯವು ದೈವೇಚ್ಛೆಯಿಂದ ನಿಯತವಾಗಿದೆ. ಅದು ತನಗೆ
ಈ ಕಾಮೇಚ್ಛೆಯುಂಟಾದಾಗ ದೊರೆತ ಯಾವದಾದರೊಂದು ಜೋಡಿಯ
ಗೂಳಿಯಿಂದ ಗರ್ಭಧಾರಣೆಗಾಗಿ ಒಂದೆರಡುವಾರ ಯತ್ನಿಸುತ್ತಿದ್ದು ಗರ್ಭ
ನಿಂತಿತೆಂದು ತಿಳಿದನಂತರ ಹತ್ತಿರಕ್ಕೆ ಮತ್ತ್ಯಾವ ಗೂಳಿಯನ್ನೂ ಸೇರಿಸದೆ ಶು
ಚಿಯಾದ ವ್ರತದಲ್ಲಿರುತ್ತದೆ. ಅಕಸ್ಮಾತ್ ಯಾವದಾದರೂ ಘಟಿಸಿದರೂ
ಅದಕ್ಕೆ ಆಶಾಭಂಗವನ್ನೇ ಮಾಡಿ, ಹಾದು, ಓಡುತ್ತದೆ. ಆ ಗೂಳಿಯಾದರೂ
ತನ್ನ ಜಾತಿಯ ಧರ್ಮದಂತೆ ಗರ್ಭನಿಂತಿರುವ ಪಶುವಿನೊಡನೆ ನೆರೆಯುವದಕ್ಕೆ
ಮನಸ್ಸನ್ನೇ ಮಾಡುವದಿಲ್ಲ; ಇಂತಹ ನಿಯಮಪಾಲನೆಯು ಇಲ್ಲದಿದ್ದರೆ ಪಶು
ಜಾತಿಯು ವಿಧವಿಧ ರೋಗಗಳನ್ನನುಭವಿಸುತ್ತಾ ಲಯವಾಗಬೇಕಾಗಿತ್ತು !
ಜಗನ್ನಿಯಾಮಕನ ನಿಯಮಕ್ಕೆ ಕಟ್ಟುಬಿದ್ದು ಈ ಪಶುಜಾತಿಯು ತನ್ನ ಈ
ವಿಧವಾದ ಕ್ರಿಮಿನಲ್ ಜಾಡ್ಯದ ಚಿಕಿತ್ಸೆಗಾಗಿ ಯಾವ ವೆಟರಿನೆರಿ ಆಸ್ಪತ್ರೆಗೂ
ಹೋಗಬೇಕಾಗಿಯೇ ಇಲ್ಲ ! ಇದು ಹಾಗಿರಲಿ; ಮನುಷ್ಯರಾದ ನಾವೂ ಈ
ಪಶುವೃತ್ತಿಯಿಂದ ಇರಬೇಕೆಂದರೆ ನಮ್ಮಲ್ಲಿ ಗರ್ಭಧಾರಣೆ ಮುಂತಾದ ಯಾವ
ನಿಯಮವೂ ಇಲ್ಲವೇ ಇಲ್ಲ !! ಕೆಲವರು ಗರ್ಭಿಣಿಯರೂ ಕಾಮವೃತ್ತಿಯಲ್ಲಿ
ರತರಾಗಿರುತ್ತಾರೆ. ಆಸನ್ನಪ್ರಸವರಾದವರನ್ನೂ ಬಿಡದಿರುವ ಮಹಾನುಭಾ
ವರು ಎಷ್ಟೋ ಮಂದಿ ಇದ್ದಾರೆ. ಇಂತಾದ್ದರಲ್ಲಿ ಶಿಕ್ಕಿದವರು ಶಿಕ್ಕಿದಂತೆ ವ್ಯವ
ಹರಿಸುತ್ತಾ ಬರುವಾಗ ಅವಳ ಅವಸ್ಥೆ ಏನಾಗಬೇಕು ? ವಿವಾಹ ನಿರ್ಬಂಧವಿ

ದ್ದರೂ ಈ ಕಾಲದಲ್ಲಿ ಮೋಹವ್ಯಾಧಿ ಪ್ರಕರಣದಲ್ಲಿ ಕ್ಷಯಾಂತಗಳಾದ ಸಾವಿರಾರು ಕ್ರಿಮಿನಲ್ ಚಾಡ್ಯಗಳು ಉಂಟಾಗುತ್ತಿರುವಲ್ಲಿ, ವಿವಾಹನಿರ್ಬಂಧವನ್ನೇ ತೊಡದುಹಾಕಿದಮೇಲೆ "ಹಿಡಿದವನಿಗೆಲ್ಲಾ ಹೆಂಡತಿಯಾಗಬೇಕು" ಎಂಬ ಶಾಸ್ತ್ರವು ಆಚರಣೆಗೆ ಬರಬೇಕಾಗುತ್ತಿತ್ತು.

ಇತ್ಯಾದಿ ಸಕಲ ಧರ್ಮಸೂಕ್ಷ್ಮಗಳನ್ನೂ ಆಲೋಚಿಸಿಯೇ ನಮ್ಮ ಹಿರಿಯರಾದ ಮಹರ್ಷಿಗಳು ವಿವಾಹವೆಂಬ ನಿರ್ಬಂಧವನ್ನು ಆಚರಣೆಯಲ್ಲಿ ತಂದಿದ್ದಾರೆ. ಒಂದು ತುಂಬಿದ ಕೆರೆಯಲ್ಲಿ ಒಗೆದ ಒಂದು ಕಲ್ಲಿನಿಂದ (ಸುಳಿಸುಳಿಯಾದ) ತರಂಗತರಂಗಗಳು ಮೊದಲು ಮೊದಲು ದೊಡ್ಡದೊಡ್ಡವಾಗಿ ಏಳಲು ಪಕ್ರಮಿಸಿ, ಬರಬರುತ್ತಾ ಸಣ್ಣವಾಗುತ್ತಾ, ಪುಟ್ಟವಾಗುತ್ತಾ, ಅತಿಕ್ಷುಲ್ಲಕವಾಗುತ್ತಾ ಬರುವದನ್ನು ನೀವೆಲ್ಲರೂ ನೋಡಿಯೇ ಇದ್ದೀರಷ್ಟೆ? ಅದರಂತೆ ಒಂದು ವಿವಾಹವೆಂಬ ಕೃತ್ಯಮಾತ್ರದಿಂದ-ತಂದೆ, ಅವನ ಅಣ್ಣತಮ್ಮಂದಿರು, ಅವರ ಹೆಂಡರು, ಅವರ ಮಕ್ಕಳುಗಳು, ತಂದೆಯ ಅಕ್ಕತಂಗಿಯರು ಅವರ ಗಂಡಂದಿರು, ಮಕ್ಕಳುಗಳು, ತಾಯಿ ಹಾಗೆಯೇ ತಾಯಿಯ ಗುಂಪು, ಹೆಂಡತಿ-ಅವಳ ತಂದೆ, ತಾಯಿ, ಅಣ್ಣತಮ್ಮಂದಿರು, ಅಕ್ಕತಂಗಿಯರು, ಅವರ ಪರಿವಾರ ಹೀಗೆ ಬರಬರುತ್ತಾ ದೊಡ್ಡ ದೊಡ್ಡ, ಸಣ್ಣ, ಪುಟ್ಟ ಬಂಧುವರ್ಗವೆಂಬದು ಕುತ್ತಿಗೆಗೆ ಕಟ್ಟಿದಂತಾಯಿತು.

ಹೀಗೆ ನಮ್ಮವರು, ನಮ್ಮ ನೆಂಟರು ಎಂಬ ವಿಷಯವು ಲೋಕವ್ಯವಹಾರಕ್ಕೆ ಅತ್ಯವಶ್ಯವೆಂದು ತಿಳಿದೇ ನಮ್ಮ ಹಿರಿಯರು ಈ ವಿವಾಹವೆಂಬದನ್ನು ನಿಯಮಿಸಿದ್ದಾರೆ. ನಮ್ಮ ಹತ್ತಿರದ ಬಂಧುವರ್ಗದಲ್ಲಿ ಯಾರಿಗಾದರೂ ಅತ್ಯಂತ ಪ್ರಯೋಜನವಾದ ಸುಖವೇ ಬರಲಿ, ಕಡೆಗೆ ದುಃಖವೇ ಬರಲಿ ಅದೂ ಸಹ ನಮಗೆ ಬಂದಂತೆ ಭಾಸವಾಗಲೇ ಬೇಕಾಗುತ್ತದೆ. ಹೇಗೆಂದರೆ ಹಿಂದೂಲಾ ಪ್ರಕಾರ ವಾರಸುದಾರರ ಗಣನೆಯಲ್ಲಿ ಹಕ್ಕುದಾರಿಯು ರಕ್ತಪ್ರಸರಣವನ್ನನುಸರಿಸಿಕೊಂಡೇ ಹೋಗುತ್ತದೆ. ಇದಕ್ಕೆ ದೃಷ್ಟಾಂತವಾಗಿ ಇಲ್ಲಿ ಒಂದನ್ನು ತಿಳಿಸುತ್ತೇವೆ. ದೊಡ್ಡ ಎತ್ತರವಾದ ಮೈದಾನದಲ್ಲಿ ಎಲ್ಲಿಯಾದರೂ ಒಂದು ಗುಂಡಿ ಬಿದ್ದಿದ್ದರೆ ಜನಗಳ ತುಳಿತ, ಮಳೆ, ಗಾಳಿಗಳ ಹೊಡತ ಮುಂತಾದ್ದರಿಂದ ಆ ಗುಂಡಿಯು ಕಾಲಕ್ರಮವಾಗಿ ಮುಚ್ಚಿಹೋಗಿ ಅದರರಿಗಿನ ನೆಲದಮಟ್ಟಕ್ಕೆ ಸಮನಾಗುವದು; ಹಾಗೆಯೇ ಒಂದು ತಗ್ಗು ಮೈದಾನದಲ್ಲಿ ನಡುವೆ ಒಂದೇ ಒಂದು ಮಣ್ಣಿನ ಕುಪ್ಪೆಯು ಕಂಬದಂತೆ ಎತ್ತರವಾಗಿದ್ದಲ್ಲಿ ಅದೂ ಸಹಾ ಮಳೆ ಗಾಳಿಗಳ ಹೊಡತಕ್ಕೂ, ಜನಗಳ ತುಳಿತಕ್ಕೂ ಅದರ ಅರಗಿನ ತಗ್ಗಿನ ನೆಲದಸಮಕ್ಕೇ ಕುಸಿಯುತ್ತಾ ಬರುತ್ತದೆ. ಇದರಂತೆ ಬಂಧುವರ್ಗದಲ್ಲಿ ಎಲ್ಲರೂ ಶ್ರೀಮಂತರಾಗಿದ್ದು ಒಬ್ಬನೇ ಬಡವನಿದ್ದರೆ ಅವನೂ ಸಹ

ಎತ್ತರದ ಮೈದಾನದ ಗುಂಡಿಯಂತೆ ಕಾಲಾನುಸಾರವಾಗಿ ತನ್ನ ಇತರ ಬಂಧುಗಳಂತೆ ತಾನೂ ಶ್ರೀಮಂತನೇ ಆಗುತ್ತಾನೆ. ಹಾಗಿಲ್ಲದೆ ತನ್ನ ಬಂಧುಗಳೆಲ್ಲರೂ ಬಡವರಾಗಿರುವಾಗ ತಾನು ಒಬ್ಬನು ಮಾತ್ರವೇ ಮಹಾ ಹಣವಂತನಾಗಿದ್ದಲ್ಲಿ ತಗ್ಗಿನ ಮೈದಾನದ ಮಣ್ಣಿನ ದಿಬ್ಬದಂತೆ ಕಾಲಾನುಸಾರವಾಗಿ ತನ್ನ ಇತರ ಬಂಧುಗಳಂತೆ ತಾನೂ ಹೀನಸ್ಥಿತಿಗೆ ಬಂದೇಬಿಡುವನು. ಅಂದರೆ ನಮ್ಮ ಜಾತಿಯ ಬಾಂಧವ್ಯ ಸಂಪ್ರದಾಯಗಳಲ್ಲಿ ಒಂದು ವಿಶೇಷವಾದ ಪಾರಸ್ಪರಿಕ ವ್ಯವಹಾರದ ಕಟ್ಟಳೆಯು ಬಲಾತ್ಕಾರದಿಂದ ಆಚರಿತವಾಗುತ್ತಾ ಇದೆ. ಇದು ಈ ಬಂಧುವರ್ಗದ ಸಂಬಂಧದ್ದು—ನಾವು ಪ್ರಯತ್ನಿಸಲಿ, ಸುಮ್ಮನಿರಲಿ, ನಮ್ಮ ಹತ್ತಿರದ ಸಂಬಂಧಿಯು ಸ್ವತ್ತು ನಮ್ಮ ಮನೇಪೆಟ್ಟಿಗೆಯ ಹಣದಂತಾಗುವದು. ಇದೆಲ್ಲಾ ಈ ವಿವಾಹವೆಂಬ ನಮ್ಮ ಹಿರಿಯರು ಕಲ್ಪಿಸಿರುವ ದೀರ್ಘಾಲೋಚನೆಯ ಕಾರ್ಯದ ಫಲವಾಗಿದೆ. ಈ ಬಂಧುವರ್ಗ ಸುಖವೆಂಬದರಲ್ಲಿ ಮತ್ತೊಂದು ಲಾಭವೇನೆಂದರೆ-ಸಮಯಾಸಮಯದಲ್ಲಿ ನಮಗೆ ಆಪ್ತಬಂಧುವೆನ್ನುವವನು ನಮ್ಮ ಕಷ್ಟಕಾಲದಲ್ಲಿ ಸಹಾಯ ಮಾಡಲು ಸಿದ್ಧನಾಗುತ್ತಾನೆ. ನಮಗಾಗಿ ಅವನು ನಮ್ಮಲ್ಲಿ ಹಿತಾಚರಣೆ ಮಾಡದಿದ್ದರೂ, ಅವನ ರಕ್ತಸಂಬಂಧಿಯಾದ ಬೇರೊಬ್ಬ ವ್ಯಕ್ತಿಗಾಗಿಯಾದರೂ ನಮ್ಮನ್ನು ಪ್ರೀತಿಸಬೇಕಾಗುವದು. ಇತ್ಯಾದಿ ಮಹಾ ಪ್ರಯೋಜನವು ಇದರಲ್ಲಿರುವದನ್ನು ನೋಡಿದರೆ ನಮ್ಮ ಆದಿಪಿತೃಗಳಾದ ಮಹರ್ಷಿಗಳು ಈ ಪ್ರತಿಯೊಂದನ್ನು ನಮಗಾಗಿ ಏರ್ಪಡಿಸಿ ನಮ್ಮನ್ನು ಉದ್ಧಾರಮಾಡಿದ್ದಕ್ಕಾಗಿ ನಾವು ಅವರಿಗೆ ಶಾಶ್ವತವಾದ ಋಣಿಗಳಾಗಿರುವೆವೆಂದು ಮಾತ್ರ ತಿಳಿಯಬಹುದು. ಅವರ ಈ ಉಪಕಾರಕ್ಕೆ ಪ್ರತಿಯಾಗಿ ಏನನ್ನೂ ಮಾಡಲಾರೆವು.

ಮನುಷ್ಯಜಾತಿಯ ಮಧ್ಯದಲ್ಲಿ ನಡಿಯುವ ಈ "ವಿವಾಹ" ವೆಂಬ ಪದ್ಧತಿಯು ಸಾಮಾನ್ಯವಾದದ್ದಲ್ಲ; ಮಹಾ ವ್ಯಾಪಾರವು! ಇದಕ್ಕೆ ಕರಾರು ಬರದು ರಿಜಸ್ಟರ್ ಮಾಡಿಸಬೇಕಾಗಿಲ್ಲ! ವಿವಾಹವಾಯಿತೆಂದರೆ ಆಯಿತು; ಒಬ್ಬನಿದ್ದ; ಇಬ್ಬರಾಯಿತು; ಒಬ್ಬರ ಸುಖದುಃಖಕ್ಕೆ ಮತ್ತೊಬ್ಬರೂ ಭಾಗಿಗಳಾದರು. ಶರೀರದಲ್ಲಿಯೂ, ಮನಸ್ಸಿನಲ್ಲಿಯೂ ಬೇರೆಬೇರೆಯಾಗಿ ಕಾಣುತ್ತಿದ್ದರೂ ಇಬ್ಬರಚಿಂತೆಯೂ ಒಂದೇಕಡೆಯಿಂದೇಳಲಾರಂಭಿಸಿತು. ಇದರಿಂದ ಶಾರೀರಕ, ಮಾನಸಿಕ ಪರಿವರ್ತನೆಯಾರಂಭವಾಯಿತು! ಬೇರೆಬೇರೆ ಇದ್ದ ಎರಡುದಾರಗಳು ಒಂದೇಹುರಿಯಾಗಿ ಹೊಸದಂತಾಯಿತು. ಒಬ್ಬರ ಸಂತೋಷಕ್ಕಾಗಿ ಮತ್ತೊಬ್ಬರು ಆನಂದಿಸುವದೂ, ಹಾಗೆಯೇ ಒಬ್ಬರ ದುಃಖಕ್ಕೂ ಮತ್ತೊಬ್ಬರು ಈಡಾಗುವದೂ ಸಾಮಾನ್ಯವಿಷಯವಲ್ಲ; ಇದೇ ದೈವತಂತ್ರ, ದೈವಿಕದಿಗ್ಬಂಧನೆ, ದೈವಿಕಸಂಘಟನೆ !!

ಈ ಮಹಾರ್ಘವ್ಯಾಪಾರವು ನಮ್ಮ ದೇಶದಂತೆಯೇ ಜಗತ್ತಿನ ಬೇರೆಬೇರೆ ಭಾಗಗಳಲ್ಲಿರುವ ನಾಗರಿಕ ದೇಶಗಳಲ್ಲೆಲ್ಲಾ ನಡಿಯುತ್ತಿರುವದೆಂದು ತಿಳಿಯಬೇಡಿರಿ, ಒಂದೊಂದು ದೇಶದಲ್ಲಿ ಒಂದೊಂದು ಪ್ರಕಾರವಿದೆ. ಯಾವದು ಒಳ್ಳೆಯಪದ್ಧತಿಯೋ ನಾವು ಹೇಳಲಾಗುವದಿಲ್ಲ—ಅವರಿಗೆ ಅದೇಸುಖ ; ನಮಗೆ ಇದೇಹಿತ!! ಆದರೂ—"ಅನಾಘ್ರಾತಂ ಪುಷ್ಪಮ್" ಎಂಬ ಕಾಳಿದಾಸನ ಉಕ್ತಿಯಂತೆ "ಕನ್ಯಾ ಸ್ಯಾಯವಾಗಿಯೂ ಕನ್ಯಾಲಕ್ಷಣದಲ್ಲಿಯೇ ಇರಬೇಕಾದದ್ದು ಪ್ರಶಸ್ತವಿವಾಹದ ವಿಷಯವು!!" ಈ ಕಾಲದಲ್ಲಿ ಅದನ್ನೂ ಹೇಳಲಾಗುವದಿಲ್ಲ! ಇದಕ್ಕಾಗಿಯೇ ಧರ್ಮಜ್ಞರಾದ, ಧರ್ಮಾಚಾರರತರಾದ ಅಜ್ಞಾತಕುಲ ಶೀಲಗೋತ್ರರಲ್ಲದವರ ಕನ್ಯಾಪ್ರತಿಗ್ರಹವು ಯಾವವಿಷಯದಲ್ಲಿಯೂ ಮನೋವ್ಯಥೆಗೆ ಕಾರಣವಾಗುವದಿಲ್ಲ.

**"ಕನ್ಯಾ ವರಯತೇ ರೂಪಂ, ಮಾತಾ ವಿತ್ತಂ ಪಿತಾ ಶ್ರುತಮ್॥**
**ಬಾಂಧವಾಃ ಕುಲಮಿಚ್ಛಂತಿ ಮೃಷ್ಟಾನ್ನಮಿತರೇ ಜನಾಃ ॥"**

"ಕನ್ನಿಕೆಗೆ ವರನು ರೂಪವಂತನಾಗಿರಬೇಕು; ಅತ್ತೆಗೆ ಹಣವಂತನಾಗಿರಬೇಕು; ಮಾವನು ಅಳಿಯನ ವಿದ್ಯಾಶೀಲತ್ವವನ್ನು ಹುಡುಕುತ್ತಾನೆ. ಬಂಧುಗಳು ಸತ್ಕುಲಪ್ರಸೂತನೆಂಬುದನ್ನು ವಿಚಾರಿಸುತ್ತಾರೆ. ಇತರ ಜನರು ಹ್ಯಾಗಾದರೂ ಆಗಲಿ ಸಮೃದ್ಧಿಯಾಗಿ ಭಕ್ಷ್ಯಾದಿಗಳಸಂತರ್ಪಣೆ ನಡೆದರೆ ಸಾಕೆಂದು ತಿಳಿಯುತ್ತಾರೆ."

ವಿವಾಹಕಾಲದಲ್ಲಿ-ಸಾಲಮಾಡಿ, ದುಂದುವೆಚ್ಚಮಾಡುವಿಕೆ, ವಿವಾಹವಾಗುವ ವರನು ವಿದ್ಯಾವಂತನಾಗದೆ ಏನಾದರೂ ಜೀವನಕ್ಕೆ ಸಂಪಾದಿಸಲಾರದೆ ಇರುವಿಕೆ-ಇವೆಲ್ಲವೂ ಆ ವಧುವಿನ ಮುಂದಿನ ಸ್ಥಿತಿಗೆ ಹಾನಿಕರಗಳಾಗುತ್ತವೆ. ಬಂಧುಜನರೂ, ಕುಲಗುರುಗಳೂ ಈ ವಿಧವಾದ ದುಷ್ಪರಿಪಾಟಿಯನ್ನು ತಲೆಯತ್ತದಂತೆ ಮಾಡದೆ ಉಪೇಕ್ಷಿಸುವದಾದರೆ ನಮ್ಮ ದೇಶವು ಇನ್ನೂ ರಸಾತಲಕ್ಕಿಳಿಯುವದರಲ್ಲಿ ಅಡ್ಡಿಯಿಲ್ಲ !!

ಇಂತು ವಿವಾಹವೆಂಬ ಹನ್ನೆರಡನೆಯ ಆಶಯವು.

## ಹದಿಮೂರನೆ ಆಶಯವು.

### ದಾಂಪತ್ಯಸುಖ.

ಹೇಗೆ ಕಷ್ಟಪಟ್ಟು ಅಡಿಗೆ ಮಾಡುವದು ಸುಖವಾಗಿ ಊಟಮಾಡುವದಕ್ಕೋಸ್ಕರವೋ ಹಾಗೆಯೇ ಸಮಾನಕುಲ, ಶೀಲ, ಗೌರವ, ಸದ್ಗುಣಗಳಿಂದ ಅಲಂಕೃತವಾದ ಕನ್ಯಾರತ್ನವನ್ನು ವರಿಸುವದು ದಾಂಪತ್ಯಸುಖವನ್ನನುಭವಿಸುವದಕ್ಕೇ ಆಗಿದೆ. ವಿವಾಹವಾದ ವಧುವು ಋತುಮತಿಯಾದನಂತರ ಗರ್ಭಾ

ಧಾನವಾದನಂತರ—ಅತಿಸಿಬಿಡವಾದ ಸಂಸಾರ ಮಧ್ಯದಲ್ಲಿ ನೂತನ ದಂಪತಿಗಳು ತಮ್ಮತಮ್ಮ ವಿನೋದವಾರ್ತಾಲಾಪ, ಮನಸ್ಸಿಗೆ ಬೇಕಾದ್ದನ್ನು ನೋಡುವಿಕೆ, ಇಷ್ಟಬಂದಂತೆ ಪರಸ್ಪರ ಮೈತ್ರೀವೃದ್ಧ್ಯರ್ಥ ವ್ಯವಹಾರಗಳನ್ನಾಚರಿಸುವಿಕೆ ಇವೇ ಮೊದಲಾದ ವಿಷಯಗಳಿಗೆ ಮಹತ್ತರವಾದ ಆತಂಕಬಂದೊದಗುವದು. ಇದಕ್ಕಾಗಿಯೇ ಎಷ್ಟೋ ದಂಪತಿಗಳು ಸ್ವಲ್ಪ ಕಾಲದಲ್ಲಿಯೇ ಬೇರೇ ಮನೆ ಮಾಡಿಕ್ಕೊಂಡು, ಸರ್ವಥಾ ಮಾತಾಪಿತೃಗಳನ್ನೂ ವರ್ಜಿಸುತ್ತಾರೆ. ಹಾಗೆ ಮಾಡದಂತೆ ನಿಷೇಕವಾದ ಸ್ವಲ್ಪ ದಿನದವರಿಗೆ ಈ ನೂತನ ದಂಪತಿಗಳು ೬ ತಿಂಗಳವಟ್ಟಿಗೆ ಇಬ್ಬರೇ ಪರಿಮಿತ ಪರಿಜನರಾಗಿ ದೂರ ದೇಶ ಪ್ರಯಾಣದಿಂದ ಸುಖವಾದ ವಾಯುಗುಣ ಪದಾರ್ಥಗಳು ದೊರಿಯುವಿಕೆ ಮುಂತಾದ್ದನ್ನುಳ್ಳ ಪ್ರದೇಶದಲ್ಲಿದ್ದು ಬರುವದು ಒಳ್ಳೆಯದು. ಇದರಿಂದ ನೂತನ ವಧುವಿಗೆ ಗಂಡನಲ್ಲಿರುವ ಅನುರಾಗವೆಂಬ ಗಿಡವು ವೃಕ್ಷಾಕಾರವಾಗಿ ಬೆಳೆದು, ಅಲ್ಲಿಂದ ಮನೆಗೆ ಬಂದಮೇಲೂ ಆ ಪತಿಭಕ್ತಿ ವಿಶ್ವಾಸಾದಿಗಳು ಶಾಶ್ವತವಾಗಿರಲನುಕೂಲವಾಗುವದು.

**ಸಹವಾಸ**—ಜಗತ್ತಿನ ಪ್ರಜಾವೃದ್ಧ್ಯರ್ಥವಾಗಿಯೇ ಪರಿಣಯವನ್ನು ಮಾಡಿಕೊಳ್ಳುವದರಿಂದ ಈ ಈಶ್ವರೀಯ ನಿಯಮವನ್ನು ನ್ಯಾಯವಾಗಿಯೂ ಪರಿಪಾಲಿಸಬೇಕು.

**" ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ||**
**ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧೃವಮ್ || "**

" ಯಾವ ಕುಲದಲ್ಲಿ ದಂಪತಿಗಳು ಪ್ರಸನ್ನರಾಗಿ ದಿವ್ಯಾನಂದಭಾಗಿಗಳಾಗಿರುವರೋ ಆ ಕುಲವೇ ಕಲ್ಯಾಣವನ್ನು ಪಡಿಯುವದು. "

**" ಮಿತಂ ದದಾತಿ ಹಿ ಪಿತಾ, ಮಿತಂ ಭ್ರಾತಾ, ಮಿತಂ ಸುತಃ ||**
**ಅಮಿತಸ್ಯ ತು ದಾತಾರಂ ಭರ್ತಾರಂ ಕಾ ನ ಪೂಜಯೇತ್ || "**

ಧರ್ಮಜ್ಞಳಾದ ಸೀತೆಯು ದಶರಥನೊಂದಿಗೆ ಹೇಳಿದ್ದೇನೆಂದರೆ:—" ಸ್ತ್ರೀಯರಿಗೆ ತಂದೆಯೂ, ಭ್ರಾತನೂ, ಸುತನೂ ಅಲ್ಪಾಲ್ಪ ಸುಖಗಳನ್ನು ಕೊಡತಕ್ಕವರು; ಆದರೆ ಪತಿಯು ಅನಂತಸುಖವನ್ನೀಯುವನಾದ್ದರಿಂದ ಇಂತಹ ಪರದೈವನಾದ ಪತಿಯನ್ನು ಸೇವಿಸದಂತಹ ಸ್ತ್ರೀಯು ದೌರ್ಭಾಗ್ಯವುಳ್ಳವಳೇ ಸರಿ " ಎಂದು ಹೇಳಿರುವಳು.

**" ಸ್ನಾತಶ್ಚಂದನ ಲಿಪ್ತಾಂಗಃ ಸುಗಂಧ ಸುಮನೋಜ್ಜ್ವಲಃ || ಭುಕ್ತವೃಷ್ಯಃ ಸುವಸನಃ ಸುವೇಷಃ ಸಮಲಂಕೃತಃ || ತಾಂಬೂಲ ವದನಃ ಪತ್ನ್ಯಾ ಮನುರಕ್ತೋಽಧಿಕ ಸ್ಮರಃ || ಪುತ್ರಾರ್ಥೀ ಪುರುಷೋ ನಾರೀ ಮುಪೇಯಾಚ್ಛಯನೇ ಶುಭೇ || "**

"ಸ್ನಾನವಮಾಡಿ ಪರಿಶುದ್ಧಾಂಗನಾಗಿರಬೇಕಲ್ಲದೆ, ಕೊಳಕು ಬೆವರಿನ ವಾಸನೆಯಿಂದಿರಬಾರದು, ದಿವ್ಯಸುಗಂಧವನ್ನು ಹಚ್ಚಿಕೊಂಡವನಾಗಿ, ಸುಗಂಧಿತ ಪುಷ್ಪಗಳನ್ನು ಧರಿಸಿದವನಾಗಿ, ವೀರ್ಯವೃದ್ಧಿಕಾರಕಗಳಾದ ಹಾಲು, ಸಕ್ಕರೆ, ಬಾದಾಮಿ, ಕೇಸರಿ ಇನ್ನೂ ಒಳ್ಳೊಳ್ಳೆ ಹಲ್ವಾಗಳನ್ನು ಸೇವಿಸಿದವನಾಗಿ, ಬಿಳ್ಳೀ ವಸ್ತ್ರವನ್ನು ಧರಿಸಿದವನಾಗಿ, ಸುಂದರ ವೇಷ (ಪೋಷಾಕು) ಧರಿಸಿದವನಾಗಿ, ಒಡವೆಗಳನ್ನೂ ಇಟ್ಟುಕೊಂಡವನಾಗಿ, ತಾಂಬೂಲವನ್ನು ಸೇವಿಸಿದವನಾಗಿ, ಸ್ತ್ರೀಯಲ್ಲಿ ಅತುಲಿತ ಪ್ರೇಮವುಳ್ಳವನಾಗಿ, ಕಾಮೋತ್ಪತ್ತಿಯಿಂದ ಕೂಡಿದ ಪುರುಷನು ಸುಂದರವಾದ ಮಂಚದಮೇಲಿರುವ ಶಯ್ಯೆದಲ್ಲಿ, ತನ್ನ ಕಾಂತೆಯೊಡನೆ ಕ್ರೀಡಿಸತಕ್ಕದ್ದು."

"ಭಾರ್ಯಾಂ ರೂಪಗುಣೋಪೇತಾಂ, ತುಲ್ಯಶೀಲಾಂ ಕುಲೋದ್ಭವಾಮ್ ॥ ಅತಿಕಾಮೋಽಭಿಕಾಮಾಸ್ತು ಹೃಷ್ಟೋ ಹೃಷ್ಟಾಮಲಂಕೃತಾಮ್ ॥ ಸೇವೇತ ಪ್ರಮದಾಂ ಯುಕ್ತಾಂ ವಾಜೀಕರಣ ಜೃಂಹಿತಃ ॥"

"ಅಧಿಕ ಕಾಮಾತುರನಾಗಿ ಪುರುಷನು ಪ್ರಸನ್ನಚಿತ್ತನಾಗಿ, ವಾಜೀಕರಣೌಷಧಿಗಳನ್ನು ಸೇವಿಸಿದವನಾಗಿ, ರೂಪದಿಂದಲೂ, ಗುಣದಿಂದಲೂ ಯುಕ್ತಳಾಗಿಯೂ, ತನಗೆ ತಕ್ಕ ಸ್ವಭಾವವುಳ್ಳವಳಾಗಿಯೂ, ಕುಲೀನಳಾಗಿಯೂ, ಕಾಮದ ಅಧಿಕವೇಗದಿಂದ ಯುಕ್ತಳಾಗಿಯೂ, ಪ್ರಸನ್ನಳಾಗಿಯೂ, ಭೂಷಣಾದಿಗಳನ್ನು ಧರಿಸಿದವಳಾಗಿಯೂ ಇರುವ ಸ್ವಸ್ತ್ರೀಯಲ್ಲಿ ಸಂಭೋಗಿಸಬೇಕು."

"ವಿಸ್ತೀರ್ಣೇ ಸಜಲೇ ಸುಧಾ ಧವಲಿತೇ ಚಿತ್ರಾದಿನಾಲಂಕೃತೇ ।
ರಮ್ಯೇ ಪ್ರೋನ್ನತ ಚತ್ವರೇಽಗರು ಮಹಾಧೂಪಾದಿ ಪುಷ್ಪಾನ್ವಿತೇ॥
ಸಂಗೀತಾಂಗ ವಿರಾಜಿತೇ ಸ್ವಭವನೇ ದೀಪಪ್ರಭಾ ಭಾಸುರೇ ।
ನಿಶ್ಶಂಕಂ ಸುರತಂ ಯಥಾಭಿಲಷಿತಂ ಕುರ್ಯಾತ್ಸಮಂ ಕಾಂತಯಾ ॥"

"ವಿಶಾಲವಾದ, ಪ್ರಕ್ಷಾಲನಾರ್ಥವಾಗಿ ಜಲಪಾತ್ರೆಗಳಿರುವ, ದಿವ್ಯ ಶುಭ್ರವರ್ಣ ವಿಶಿಷ್ಟವಾದ, ಚಿತ್ರಾದಿಗಳಿಂದಲಂಕೃತವಾದ, ರಮ್ಯವಾದ, ಅತ್ಯುನ್ನತ ಚಂದ್ರಶಾಲೆಯಲ್ಲಿರುವ, ಅಗರು ಮುಂತಾದ ಸುಧೂಪದಿಂದ ಘಮಘಮಿಸುತ್ತಿರುವ, ಪುಷ್ಪರಚಿತವಾದ, ವೀಣಾದಿಗಾನ ವಿಶಿಷ್ಟವಾದ, ದೀಪಗಳಿಂದ ದೇದೀಪ್ಯಮಾನವಾದ ತನ್ನ ಮನೆಯಲ್ಲಿ, ಭಯಶಂಕಾದಿಗಳಿಲ್ಲದವನಾಗಿ ತನ್ನ ಮನೋವೃತ್ತಿಗನುಕೂಲವಾಗಿ ಸ್ವಭಾರ್ಯೆಯೊಂದಿಗೆ ರತಿಕ್ರೀಡೆಯನ್ನು ಮಾಡತಕ್ಕದ್ದು."

**" ಶೃಂಗಾರದ್ರುಮ ನೀರದೇ ಪ್ರಸೃಮರ ಕ್ರೀಡಾರಸ ಸ್ರೋತಸಿ |**
**ಪ್ರದ್ಯುಮ್ನ ಪ್ರಿಯಬಾಂಧವೇ ಚತುರವಾಙ್ಮುಕ್ತಾಫಲೋದನ್ವತಿ ||**
**ತನ್ವೀ ನೇತ್ರ ಚಕೋರ ಪಾರ್ವಣವಿಧೌ ಸೌಭಾಗ್ಯಲಕ್ಷ್ಮೀ ನಿಧೌ |**
**ಧನ್ಯಃ ಕೋऽಪಿ ನ ವಿಕ್ರಿಯಾಂ ಕಲಯತೇ ಪ್ರಾಪ್ತೇ ನವೇ ಯೌವನೇ||**

" ಪ್ರಲಂಬರೂಪ ಶೃಂಗಾರರಸವೆಂಬ ವೃಕ್ಷವನ್ನು, ಅಂಕುರಿಸುವಂತೆ, ಕಂದಳಿತವಾಗುವಂತೆ, ಪಲ್ಲವಿತವಾಗುವಂತೆ, ಪುಷ್ಪಿತವಾಗುವಂತೆ, ಪ್ರೋಕ್ಷಣೆ ಮಾಡತಕ್ಕ ಮೇಘದಂತಿರುವದಾಗಿಯೂ, ವ್ಯಾಪನಶೀಲವಾದ ಕ್ರೀಡಾರಸದ ಪ್ರವಾಹದಂತೆ ಇರುವದಾಗಿಯೂ, ಮನ್ಮಥನಿಗೆ ಪ್ರಿಯವಾದ ಬಂಧುವಿನಂತಿರುವದಾಗಿಯೂ, ನಿಪುಣವಾಕ್ಯಗಳೆಂಬ ಮುಕ್ತಾಫಲಗಳಿಗೆ ಸಮುದ್ರಪ್ರಾಯವಾಗಿಯೂ, ಕಾಂತೆಯರ ನೇತ್ರಗಳೆಂಬ ಚಕೋರ ಪಕ್ಷಿಗಳಿಗೆ ಪೂರ್ಣಚಂದ್ರನಂತೆ ಉಲ್ಲಾಸಕರವಾಗಿಯೂ, ಸೌಂದರ್ಯ ಸಂಪತ್ತಿಗೆ ನಿಧಿಪ್ರಾಯವಾಗಿಯೂ ಇರುವ ನೂತನವಾದ ಯೌವನವು ಪ್ರಾಪ್ತವಾಗುತ್ತಿರಲು ಯಾವ ಸುಕೃತಿಯುತಾನೆ ಮನ್ಮಥವಿಕಾರವನ್ನು ಹೊಂದುವದಿಲ್ಲ ? ಎಲ್ಲರೂ ಹೊಂದುವರೆಂದು ಆಶಯವು. "

**" ರಾಗಸ್ಯಾಗಾರಮೇಕಂ ನರಕ ಶತಮಹಾ ದುಃಖಸಂಪ್ರಾಪ್ತಿ ಹೇತುಃ |**
**ಮೋಹಸ್ಯೋತ್ಪತ್ತಿಬೀಜಂ, ಜಲಧರಪಟಲಂ ಜ್ಞಾನತಾರಾಧಿಪಸ್ಯ ||**
**ಕಂದರ್ಪಸ್ಯೈಕಮಿತ್ರಂ, ಪ್ರಕಟಿತ ವಿವಿಧಸ್ಪಷ್ಟದೋಷ ಪ್ರಬಂಧಮ್|**
**ಲೋಕೇऽಸ್ಮಿನ್ನಹ್ಯನರ್ಥ ವ್ರಜಕುಲಭವನಂ ಯೌವನಾದನ್ಯದಸ್ತಿ || "**

" ಮಾತ್ಸರ್ಯಕ್ಕೆ ಮುಖ್ಯಾಧಾರ ಸ್ಥಾನವಾಗಿಯೂ, ನರಕಪರಂಪರೆಗಳ ಮಹಾ ತೀವ್ರ ಯಾತನೆಗಳನ್ನು ಹೊಂದಿಸುವದಕ್ಕಾದಿಕಾರಣವಾಗಿಯೂ, ಅಜ್ಞಾನದ ಉತ್ಪತ್ತಿಸ್ಥಾನವಾಗಿಯೂ, ಜ್ಞಾನವೆಂಬ ಚಂದ್ರನನ್ನು ಪ್ರಬಂಧಪಡಿಸುವದಾಗಿಯೂ, ಮನ್ಮಥನನ್ನು ಮುಖ್ಯವಾಗಿ ಉದ್ರೇಕಪಡಿಸತಕ್ಕದ್ದಾಗಿಯೂ, ಪ್ರವೃದ್ಧವಾದ ನಾನಾವಿಧ ದೋಷಗಳ ಪಾತನಬಂಧುವಾಗಿಯೂ ಇರತಕ್ಕ ಯೌವನಕ್ಕಿಂತಲೂ ಈ ಲೋಕದಲ್ಲಿ ಅನ್ಯವಾದ ಅನರ್ಥ ವ್ಯಾಪಾರಗಳ ಉತ್ಪತ್ತಿ ನಿಕೇತನವು ಮತ್ತಾವದೂ ಇಲ್ಲ. "

**" ಉರಸಿ ನಿಪತಿತಾನಾಂ ಸ್ರಸ್ತ ಧಮ್ಮಿಲ್ಲಕಾನಾಮ್ |**
**ಮುಕುಳಿತ ನಯನಾನಾಂ ಕಿಂಚಿದುನ್ಮೀಲಿತಾನಾಮ್ ||**
**ಉಪರಿ ಸುರತ ಖೇದ ಸ್ವಿನ್ನ ಗಂಡಸ್ಥಲಾನಾ |**
**ಮಧರ ಮಧುವಧೂನಾಂ ಭಾಗ್ಯವಂತಃ ಪಿಬಂತಿ || "**

" ಪುರುಷಾಯಿತ ಬಂಧಕ್ರಮದಂತೆ ವಕ್ಷಸ್ಥಲದಲ್ಲಿ ಅಧಿಷ್ಠಿತರಾದಂಥಾ, ರತಿರಭಸವಶದಿಂದ ಬಿಚ್ಚಿದ ಜಡೆಗಳುಳ್ಳಂಥಾ, ಸುಖ ಪಾರವಶ್ಯತೆ

ಅಥವಾ ಲಜ್ಜಾನುಭಾವದಿಂದ ಸಹ ಮುಚ್ಚಲ್ಪಟ್ಟ ನೇತ್ರಗಳುಳ್ಳಂಥಾ, ಈ ಉಪರಿಸುರತಜನ್ಯವಾದ ಖೇದದಿಂದುಂಟಾದ ಸ್ವೇದದಿಂದ ನೆನದಿರುವ ಗಂಡ ಸ್ಥಳವುಳ್ಳಂಥಾ ಪ್ರಿಯತಮೆಯುರ ಅಧರಸ್ಥ ಮಧುವನ್ನು ಭಾಗ್ಯವಂತನಾದವನೇ ಚುಂಬಿಸುತ್ತಿರುವನು. ''

" ಆದರ್ಶನೇ ದರ್ಶನಮಾತ್ರ ಕಾಮಾ ।
ದೃಷ್ಟ್ವಾ ಪರಿಷ್ವಂಗಸುಖೈಕಲೋಲಾ ॥
ಆಲಿಂಗಿತಾಯಾಂ ಪುನರಾಯತಾಕ್ಷ್ಯಾಂ।
ಆಶಾಸ್ಮಹೇ ವಿಗ್ರಹಯೋರಭೇದವತ್ ॥ "

" ಪ್ರಿಯತಮನನ್ನು ಕಾಣದೇ ಇರತಕ್ಕ ಕಾಲದಲ್ಲಿ—' ಆತನನ್ನು ನೋಡಿದರೆ ಸಾಕು' ಎಂಬದಾಗಿ ಅಪೇಕ್ಷಿತಳಾಗಿಯೂ, ನೋಡಿದನಂತರ"ಆಲಿಂಗನವನ್ನು ಮಾಡಿದರೆ ಸಾಕು'' ಎಂದು ಬಯಸುತ್ತಿರುವಳಾಗಿಯೂ ಇರುತ್ತಾಳೆ. ಅನಂತರ ಪ್ರಿಯನನ್ನು ಆಲಿಂಗನ ಮಾಡಿದಮೇಲೆ ಆ ಸ್ತ್ರೀಪುರುಷರ ಶರೀರಗಳೆರಡರಲ್ಲಿಯೂ ಗಾಢಾಲಿಂಗನದಿಂದ ಅಭೇದವೇ ಉಂಟಾಯಿತೆಂದು ತಿಳಿಯುತ್ತೇವೆ. ''

" ಪ್ರಾಙ್ಮಾಮೇತಿ, ಮನಾಗನಾಗತರಸಂ, ಜಾತಾಭಿಲಾಷಂ ತತಃ ।
ಸವ್ರೀಡಂ, ತದನು ಶ್ಲಥೋದ್ಯಮಮಥ ಪ್ರಧ್ವಸ್ತ ಧೈರ್ಯಂ ಪುನಃ ॥
ಪ್ರೇಮಾರ್ದ್ರಂ, ಸ್ಪೃಹಣೀಯ ನಿರ್ಭರ ರಹಃ ಕ್ರೀಡಾ ಪ್ರಗಲ್ಭಂ ತತೋ।
ನಿಸ್ಸಂಗಾಂಗ ವಿಕರ್ಷಣಾಧಿಕಸುಖಂ ರಮ್ಯಂ ಕುಲಸ್ತ್ರೀ ರತಮ್ ॥ "

ಕುಲಸ್ತ್ರೀಯ ರತಿಪ್ರಕಾರವನ್ನು ವರ್ಣಿಸಿದರೆ:—" ಮೊದಲುಮೊದಲು ಮೌಗ್ಧ್ಯದಿಂದ ಅನುತ್ಪನ್ನವಾದ ಅನುರಾಗವುಳ್ಳವಳಂತೆ " ಬೇಡ, ಬೇಡ '' ಎಂದು ನಿಷೇಧಿಸುತ್ತಾಳೆ; ಆ ನಿಷೇಧಾನಂತರ (ಬಲಾತ್ಕಾರದಿಂದ) ಅಭಿಲಾಷೆಯಂಕುರಿಸಲು—ಲಜ್ಜೆಯಿಂದ ನೀರೇಸ್ರಂಸನ್ಯಾ (ಸಡಿಸಲಿಸುವಿಕೆ)ದಿ ಕಾರ್ಯಗಳಲ್ಲಿ ಶಿಥಿಲಪ್ರಯತ್ನವೂ, ಪುನಃ ಪ್ರಧ್ವಸ್ತ (ವಿಗಳಿತವಾದ) ಧೈರ್ಯವೂ, ಅನಂತರ ಪ್ರೇಮವೆಂಬ ಪ್ರಣಯರಸ ಪರಿಪ್ಲುತತ್ವವೂ, ಆ ಮುಂದೆ, (ಸ್ಪೃಹಣೀಯ) ಅನ್ಯೋನ್ಯವಾಗಿ ಅಭಿಲಾಷಣೀಯವಾದ (ಉದ್ವೇಲಾ) ಹದ್ದನ್ನು ಮೀರಿದ ರಹಃಕೇಳಿವಿಲಾಸವೂ, ಇವುಗಳಲ್ಲಿ ಪ್ರೌಢತನವೂ, ಅನಂತರ ಪ್ರತಿಬಂಧವಿಲ್ಲದೆ ಕುಚಾದ್ಯಂಗ ವಿಕರ್ಷಣದಿಂದಧಿಕ ಆನಂದದಾಯಕವೂ ಆದ ಕುಲಸ್ತ್ರೀಯರ ರತಿಕ್ರೀಡೆಯು ಸಾಮಾನ್ಯವಾದದ್ದಲ್ಲ !!! ''

ರತಿಗೆ ಅಯೋಗ್ಯರು:—" ರಜಸ್ವಲಾಮಕಾಮಾಂ ಚ, ಮಲಿನಾಮಪ್ರಿಯಾಂ ತಥಾ ॥ ವರ್ಣವೃದ್ಧಾಂ ವಯೋವೃದ್ಧಾಂ ತಥಾ ವ್ಯಾಧಿಪ್ರಪೀಡಿತಾಮ್ ॥ ಹೀನಾಂಗೀಂ ಗರ್ಭಿಣೀಂ ದ್ವೇ

**ಷ್ಯಾಂ ಯೋನಿರೋಗಸಮನ್ವಿತಾಮ್ ॥ ಸಗೋತ್ರಾಂ ಗುರುಪ
ತ್ನೀಂ ಚ ತಥಾ ಪ್ರವ್ರಜಿತಾಮಪಿ ॥ ನಾಭಿಗಚ್ಛೇತ್ಪ್ರವಾನ್ನಾ
ರೀಂ, ಭೂರಿ ವೈಗುಣ್ಯ ಶಂಕಯಾ ॥ "**

" ರಜಸ್ವಲೆ, ಕಾಮವೇಗವಿಲ್ಲದವಳು, ಮಲಿನಳು, ಅಪ್ರಿಯಳು, ವರ್ಣ ಮತ್ತು ಅವಸ್ಥೆಯಲ್ಲಿ ವೃದ್ಧಳು, ರೋಗದಿಂದ ವ್ಯಾಕುಲಳು, ಗರ್ಭಿಣೀ, ದ್ವೇಷಯುಕ್ತಳು, ಯೋನಿಯಲ್ಲಿ ರೋಗಿಣಿ, ಸಮಾನಗೋತ್ರದವಳು, ಗುರುಪತ್ನೀ, ಸನ್ಯಾಸಿನೀ ಈ ಸ್ತ್ರೀಯರೊಡನೆ ಸಂಭೋಗಿಸಬಾರದು. ಯಾಕೆಂದರೆ ಇದರಿಂದ ಭಾರೀ ಹಾನಿಯಾಗುವದು. "

**" ರಜಸ್ವಲಾಂ ಗತವತೋ ನರಸ್ಯಾಸಂಯತಾತ್ಮನಃ ॥ ದೃಷ್ಟ್ಯಾ
ಯುಸ್ತೇಜಸಾಂ ಹಾನಿರಧರ್ಮಶ್ಚ ತತೋ ಭವೇತ್ ॥ "**

" ಇಂದ್ರಿಯಗಳಿಗೆ ವಶೀಭೂತನಾಗಿ ರಜಸ್ವಲೆಯೊಡನೆ ಯಾವನು ರಮಿಸುವನೋ ಅವನಿಗೆ ದೃಷ್ಟಿ, ಆಯು, ತೇಜಸ್ಸು ಇವು ನಾಶಗಳಾಗುವವು; ಅಧರ್ಮದ ವೃದ್ಧಿಯೂ ಆಗುತ್ತದೆ. "

**" ಲಿಂಗಿನೀಂ ಗುರುಪತ್ನೀಂ ಚ ಸಗೋತ್ರಾಮಥ ಪರ್ವಸು ॥ ವೃ
ದ್ಧಾಂ ಚ ಸಂಧ್ಯಯೋಶ್ಚಾಪಿ ಗಚ್ಛತೋ ಜೀವಸಕ್ಷಯಃ ॥ ಗ
ರ್ಭಿಣ್ಯಾಂ ಗರ್ಭಪೀಡಾ ಸ್ಯಾತ್ ವ್ಯಾಧಿತಾಯಾಂಬಲಕ್ಷಯಃ ॥
ಹೀನಾಂಗೀಂ ಮಲಿನಾಂ ದ್ವೇಷ್ಯಾಂ ಕಾಮಾಂ ವಂಧ್ಯಾಮಸಂವೃ
ತೇ ॥ ದೇಶೇಽಭಿಗಚ್ಛತೋ ರೇತಃ ಕ್ಷೀಣಂ ಗ್ಲಾನಂ ಮನೋಭವೇತ್॥"**

" ಸನ್ಯಾಸಿನೀ, ಗುರುಪತ್ನೀ, ಸಮಾನಗೋತ್ರದವಳು, ವೃದ್ಧಸ್ತ್ರೀ ಇವರೊಡನೆ ಭೋಗಮಾಡುವದರಿಂದಲೂ, ಪರ್ವದಿನ, ಸಂಧ್ಯಾಕಾಲಗಳಲ್ಲಿ ಭೋಗಮಾಡುವದರಿಂದಲೂ, ಜೀವನಾಶವೇ ಆಗುವದು. ಗರ್ಭಿಣಿಯೊಂದಿಗೆ ಕೂಡಿದರೆ ಗರ್ಭಬಾಧಾ ಉಂಟಾಗುತ್ತದೆ. ವ್ಯಾಧಿಯುಕ್ತಳೊಡನೆ ಕೂಡಿದರೆ ಬಲದ ಹಾನಿಯಾಗುವದು. ಹೀನಾಂಗಿ, ಮಲಿನಳು, ದ್ವೇಷಯುಕ್ತಳು, ದುರ್ಬಲಳು, ವಂಧ್ಯಾ ಇವರ ಸಹವಾಸವೂ, ಹಾಗೆಯೇ ಅಂತರಂಗವಾಗಿರದ ಬೈಲಿನಲ್ಲಿ ಸ್ತ್ರೀಸಂಪರ್ಕ ಮಾಡುವದೂ ಇದರಿಂದ ವೀರ್ಯದಕ್ಷೀಣತೆಯೂ, ಮನಸ್ಸಿನ ಗ್ಲಾನಿಯೂ ಉಂಟಾಗುತ್ತದೆ. "

**" ಕ್ಷುಧಿತಃ ಕ್ಷುಬ್ಧಚಿತ್ತಶ್ಚ ಮಧ್ಯಾಹ್ನೇ ತೃಷಿತೋಽಬಲಃ ॥ ಸ್ಥಿ
ತಸ್ಯ ಹಾನಿಂ ಶುಕ್ರಸ್ಯ ವಾಯೋಃ ಕೋಪಶ್ಚ ವಿಂದತಿ ॥ ವ್ಯಾಧಿ
ತಸ್ಯ ರುಜಾ ಪ್ಲೀಹಾ ಮೂರ್ಛಾ ಮೃತ್ಯುಶ್ಚ ಜಾಯತೇ ॥ "**

" ಕ್ಷುಧಾತುರ, ಗಾಬರಿಯಿಂದಿರುವವನು, ಬಾಯಾರಿಕೆಯುಳ್ಳವನು, ದುರ್ಬಲ ಇವರು ಮೈಥುನ ಮಾಡಿದರೆ ವೀರ್ಯದ ಹಾನಿಯೂ, ವಾಯುವಿಷ

ಪ್ರಕೋಪವೂ ಆಗುತ್ತದೆ. ಮಧ್ಯಾಹ್ನದಲ್ಲಿ ಸಹವಾಸ ಮಾಡಿದರೂ ಇದೇ ದೋಷವುಂಟಾಗುವದು. ವ್ಯಾಧಿಯುಕ್ತ ಪುರುಷನು ಸಹವಾಸ ಮಾಡಿದರೆ-- ಪ್ಲೀಹಾ, ಮೂರ್ಛಾ ಆದಿ ಅನೇಕ ರೋಗಗಳೂ, ಮೃತ್ಯುವೂ ಸಂಭವಿಸು ವದು. ''

" ಅತ್ಯಾಶಿತೋಽಧೃತಿಃ ಕ್ಷುದ್ವಾನ್ ಸವ್ಯಥಾಂಗಃ ಪಿಪಾಸಿತಃ ||
ಬಾಲೋ ವೃದ್ಧೋಽನ್ಯವೇಗಾರ್ತಃ ತ್ಯಜೇದ್ರೋಗೀ ಚ ಮೈಥುನಮ್ || "

" ಬಹು ಭೋಜನ ಮಾಡಿರುವವನು, ಧೈರ್ಯರಹಿತನು, ಕ್ಷುಧಾವ್ಯಾಕುಲನು, ಶರೀರದಲ್ಲಿ ಪೀಡಾಯುಕ್ತನು, ಬಾಯಾರಿಕೆಯುಳ್ಳವನು, ಬಾಲಕ, ವೃದ್ಧ, ಮಲಮೂತ್ರಾದಿ ವೇಗಗಳಿಂದ ವ್ಯಾಕುಲನು, ರೋಗೀ—ಇವರು ಸ್ತ್ರೀಸಮಾಗಮ ಮಾಡಬಾರದು. ''

**ಪತಿವ್ರತಾಧರ್ಮ:—**

" ಪತ್ಯಾವಭುಕ್ತವತಿ ಸುಂದರಿ ಮಾಸ್ಮ ಭುಂಕ್ಷ್ವ |
ಯಾತೇ ಪ್ರಿಯಾತಮಪಿ ಮಾಸ್ಮ ಭವೇದ್ವಿಭೂಷಾ ||
ಸ್ನಾತ್ವಾಪರಾದಿ ನಿಯಮೋಽಸ್ತಿ ನಿಮಜ್ಜನಾದೌ |
ವೃದ್ಧಾಂಗನಾ ಚರಿತಮೇವ ಪರಂ ಪ್ರಮಾಣಮ್ || "

(ಶಂಕರವಿಜಯ)

" ಗಂಡನು ಊಟಮಾಡದಿರುವಾಗ ಸ್ತ್ರೀಯೂ ಊಟಮಾಡದಿರಬೇಕು, ಪತಿಯು ಪರದೇಶಗಮನ ಮಾಡಿರುವಾಗ ಅಲಂಕಾರಾದಿಗಳನ್ನು ಮಾಡಿಕೊಳ್ಳಬಾರದು, ಪತಿಯ ಸ್ನಾನಕ್ಕಿಂತಲೂ ಮೊದಲೇ ಸ್ತ್ರೀಯು ಸ್ನಾನಮಾಡಿರಬೇಕು, ಭೋಜನದ ವಿಷಯದಲ್ಲಿ ಪತಿಯನಂತರ ಭೋಜನ ಮಾಡಬೇಕು; ಈ ಪತಿವ್ರತಾಧರ್ಮ ವಿಷಯದಲ್ಲಿ-ಲೋಪಾಮುದ್ರಾ, ಅರುಂಧತೀ, ಸಾವಿತ್ರೀ, ಸೀತಾ ಮುಂತಾದ ವೃದ್ಧಸ್ತ್ರೀಯರುಗಳ ಆಚರಣೆಯೇ (ವೇದದಂತೆ) ಪ್ರಮಾಣವಾದದ್ದೆಂದರಿಯಬೇಕು. ''

" ಗೃಹ ಕರಣ ನಿಯೋಗೇ ಚಾರ್ಚನೇ ವೃದ್ಧಪೂರ್ಗಾ |
ಪರಹಿತ ಕರಣೇರ್ಥೇ ಭರ್ತೃವಾಚಂ ಯಮಿನಾ ಸ್ಯಾತ್ ||
ಸಕೃದಪಿ ಧವಚಿತ್ತ ಪ್ರಾತಿಕೂಲ್ಯಂ ಚ ನಿಂದಾಮ್ |
ಹೃದಯ ತನು ವಚಸ್ಯಾಪ್ಯಾಚರೇನ್ನೋ ಕದಾಪಿ || "

(ಭಾ—ಸಂಹಿತಾ)

" ಮನೆಯ ಕೆಲಸಗಳಲ್ಲಿಯೂ, ವೃದ್ಧರಾದ ಬಂಧುಗಳ ಸತ್ಕಾರದಲ್ಲಿಯೂ, ಪರರಿಗೆ ಉಪಚಾರ ಮಾಡುವದರಲ್ಲಿಯೂ ಗಂಡನ ಚಿತ್ತವೃತ್ತಿಯ

ಕರ್ಮಗಳು ನಿಷ್ಫಲಗಳಾಗಿರುವವು. ಯಾವ ಕುಲದಲ್ಲಿ ಜಾಮಿಗಳೆಂಬ ಆಗ ತಾನೇ ಮೈನೆರೆದು ಬಂದ ಸೊಸೆಯರು ಮುಂತಾದವರು ಅಲ್ಲಿನ ಹಿಂಸೆಯಿಂದ ದುಃಖಮಗ್ನರಾಗಿರುವರೋ ಆ ಕುಲವು ಕ್ಷಿಪ್ರವಾಗಿ ನಾಶವನ್ನು ಪಡಿಯು ತ್ತದೆ. ಯಾವ ಕುಲದಲ್ಲಿ ಅವರು ಶೋಕಾತುರರಾಗದೆ ಸಂತುಷ್ಟರಾಗಿರು ವರೋ ಅಲ್ಲಿ ಸರ್ವಸಂಪತ್ತೂ ವರ್ಧಿಸುವದು. ''

**" ಪತಿಂ ಯಾ ನಾಭಿಚರತಿ ಮನೋ ವಾಗ್ದೇಹ ಸಂಯುತಾ ॥ ಸಾ ಭರ್ತೃಲೋಕಾನಾಪ್ನೋತಿ ಸದ್ಭಿಃ ಸಾಧ್ವೀತಿ ಚೋಚ್ಯತೇ ॥ "**

"ಯಾವ ಸ್ತ್ರೀಯು ಮನಸ್ಸು, ವಾಣೀ ದೇಹಗಳನ್ನು ಸಂಯಮವಮಾಡಿ ಕೊಂಡು ವ್ಯಭಿಚಾರ ವೃತ್ತಿಯಿಂದ ದೂರಳಾಗಿರುವಳೋ (ಅಂದರೆ ಮನಸ್ಸಿ ನಲ್ಲಿಯೂ, ವಾಕ್ಕಿನಲ್ಲಿಯೂ, ಕಾರ್ಯದಲ್ಲಿಯೂ ಸಹ ಅನ್ಯಪುರುಷನಮೇಲೆ ಇಚ್ಛೆಯಿಲ್ಲದೆ ಶುದ್ಧಳಾಗಿರುವಳೋ) ಅವಳು ತನ್ನ ಪತಿಯೊಡನೆ ಸ್ವರ್ಗಾದಿ ಲೋಕಗಳಲ್ಲಿ ಆನಂದದಿಂದಿರುತ್ತಾಳಲ್ಲದೆ, ಸೀತಾ, ಲೋಪಾಮುದ್ರಾ ಮುಂ ತಾದ ಸಾಧ್ವಿಯರ ಶ್ರೇಣಿಯಲ್ಲಿ ಗಣನೆಗೆ ಬರುವಳು. ''

**" ಪಾನಂ ದುರ್ಜನಸಂಸರ್ಗಃ ಪತ್ಯಾ ಚ ವಿರಹೋಟನಮ್ ॥ ಸ್ವಪ್ನೋಽನ್ಯಗೇಹೇ ವಾಸಶ್ಚ ನಾರೀ ಸಂದೂಷಣಾನಿ ಷಟ್ ॥ "**

" ಮದ್ಯಪಾನ, ದುಷ್ಟರೊಡನೆ ಗೋಷ್ಠೀ, ಪತಿಯನ್ನು ಬಿಟ್ಟಿರುವಿಕೆ, ಸಿಕ್ಕಿದಕಡೆ ತಿರುಗುತ್ತಾ ಇರುವಿಕೆ, ಪರರ ಮನೇಲಿ ನಿದ್ರಿಸುವಿಕೆ, ಪರರ ಮನೆ ಯಲ್ಲಿ ವಾಸ, ಈ ೬ ನಡತೆಗಳು ಸ್ತ್ರೀಯರನ್ನು ವ್ಯಭಿಚಾರಿಗಳನ್ನಾಗಿ ಮಾಡುವವು. ''

**" ಯಾದೃಶಂ ಭಜತೇ ಹಿ ಸ್ತ್ರೀ ಸುತಂ ಸೂತೇ ತಥಾ ವಿಧಮ್ ॥ ತಸ್ಮಾತ್ಪ್ರಜಾವಿಶುದ್ಧ್ಯರ್ಥಂ ಸ್ತ್ರಿಯಂ ರಕ್ಷೇತ್ಪ್ರಯತ್ನತಃ ॥ "**

" ಸ್ತ್ರೀಯು ಯಾವವಿಧವಾದ ಪುರುಷನಿಂದ ಸಂತತಿಯನ್ನು ಪಡಿಯು ವಳೋ ಆ ಸಂತತಿಯು ಆ ಪುರುಷನನ್ನನುಸರಿಸಿ ಉತ್ಕೃಷ್ಟವಾಗಿಯೂ, ನಿಕೃಷ್ಟವಾಗಿಯೂ ಆಗುವದು. ಸಂತತಿಯ ಶುದ್ಧೀಕರಣಾರ್ಥವಾಗಿ ಪತ್ನಿ ಯನ್ನು ಯತ್ನದಿಂದ ಕಾಪಾಡುತ್ತಿರಬೇಕು. ''

ಉನ್ಮಾರ್ಗರತ ದಂಪತಿಗಳ ಸ್ಥಿತಿ:—

**" ಅನರ್ಥಮರ್ಥತಃ ಪಶ್ಯನ್ ಅರ್ಥಂ ಚೈವಾಪ್ಯನರ್ಥತಃ ॥ ಇಂ ದ್ರಿಯೈರಜಿತೈರ್ಮೂಢಃ ಸುದುಃಖಂ ಮನ್ಯತೇ ಸುಖಮ್ ॥ "**

" ಇಂದ್ರಿಯೇಚ್ಛಾಲಂಪಟನಾದ ಪುರುಷನು ಮೂಢನಾಗಿ ಅರ್ಥ(ಹಿತ) ವನ್ನು ಅಹಿತವನ್ನಾಗಿಯೂ, ಅಹಿತವನ್ನು ಹಿತವನ್ನಾಗಿಯೂ ತಿಳಿಯುತ್ತಾ ಮಹಾ ದುಃಖಾಬ್ಧಿಯಲ್ಲಿ ಮುಳುಗುತ್ತಿರುತ್ತಾನೆ. ''

" ಧರ್ಮಾರ್ಥೌ ಯಃ ಪರಿತ್ಯಜ್ಯ ಸ್ಯಾದಿಂದ್ರಿಯವಶಾನುಗಃ || ಶ್ರೀ
ಪ್ರಾಣ ಧನ ದಾರೇಭ್ಯಃ ಕ್ಷಿಪ್ರಂ ಚ ಪರಿಹೀಯತೇ || "

" ಧರ್ಮ ಮತ್ತು ಅರ್ಥ ಪುರುಷಾರ್ಥಗಳನ್ನು ತ್ಯಜಿಸಿ ಯಾವನು ಇಂದ್ರಿಯ ವಶವರ್ತಿಯಾಗಿರುವನೋ ಅವನು ಸತ್ವರವಾಗಿ ಶ್ರೀ, ಪ್ರಾಣ, ಧನ, ಭಾರ್ಯಾದಿಗಳಿಂದ ಚ್ಯುತನಾಗುತ್ತಾನೆ. "

" ಅರ್ಥಾನಾಮೀಶ್ವರೋ ಯಃ ಸ್ಯಾದಿಂದ್ರಿಯಾಣಾಮನೀಶ್ವರಃ||
ಇಂದ್ರಿಯಾಣಾಮನೈಶ್ವರ್ಯಾದೈಶ್ವರ್ಯಾದ್ಭ್ರಶ್ಯತೇ ಹಿ ಸಃ || "

" ಯಾವನು ಐಶ್ವರ್ಯವಂತನೆಂದು ತಿಳಿದು ತನ್ನ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳದೆ ಅವುಗಳಮೇಲೆ ಪ್ರಭುತ್ವಮಾಡತಕ್ಕ ಸಾಮರ್ಥ್ಯರಹಿತನಾಗಿರುತ್ತಾನೋ ಅವನು ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳಲಾರದ ಹೀನತ್ವದಿಂದ ಧನವನ್ನು ಕಳದುಕೊಳ್ಳುತ್ತಾನೆ. "

" ಲೋಭಃ ಪ್ರಜ್ಞಾನಮಾಹಂತಿ, ಪ್ರಜ್ಞಾ ಹಂತಿ ಹತಹ್ರಿಯ
ಮ್ || ಶ್ರೀರ್ಹತಾ ಬಾಧತೇ ಧರ್ಮಂ ಧರ್ಮೋಹಂತಿ ಹತಶ್ರಿಯಮ್||"

" ಲೋಭ ಹೆಚ್ಚಿದರೆ ಬುದ್ಧಿ ನಷ್ಟವಾಗುವದು. ಬುದ್ಧಿ ಹತವಾಗಲು ಲಜ್ಜೆಯು ದೂರವಾಗುವದು, ಲಜ್ಜಾರಹಿತನಲ್ಲಿ ಧರ್ಮವು ನಿಲ್ಲಲಾರದೆ ತಲ್ಲಣಿಸುವದು. ಧರ್ಮನಾಶವಾಗಲು ಮಂಗಲಾಸ್ಪದವಾದ ಸರ್ವವೂ ನಾಶವಾಗುವವು. "

" ಉತ್ಪಾದನಮಪತ್ಯಸ್ಯ, ತಾತಸ್ಯ ಪರಿಪಾಲನಮ್ || ಪ್ರತ್ಯಹಂ
ಲೋಕಯಾತ್ರಾಯಾಃ ಪ್ರತ್ಯಕ್ಷಂ ಸ್ತ್ರೀನಿಬಂಧನಮ್ || "

" ಸಂತಾನೋತ್ಪತ್ತಿ, ಅದರ ಪಾಲನೆ, ಪ್ರತಿದಿನದ ಅತಿಥಿ ಅಭ್ಯಾಗತರ ಸತ್ಕಾರ ಇವೆಲ್ಲಕ್ಕೂ ಸತಿಯೇ ಕಾರಣಳು. " ಇದನ್ನೇ ಬೇರೆಬೇರೆಯಾಗಿ " ದಾರಾಧೀನಸ್ತಥಾಸ್ವರ್ಗಃ " ಎಂತಲೂ, " ದಾರಾಸ್ವರ್ಗಸ್ಯಸಾಧನಮ್ " ಎಂತಲೂ, ಹೇಳುತ್ತಾ, ಧರ್ಮಕಾರ್ಯ ನಿರ್ವಹಣೆಯನ್ನು ಹೆಂಡತಿಯಲ್ಲಿಯೇ ಮನ್ವಾದಿ ಸ್ಮೃತಿಕಾರರು ತಿಳಿಸುತ್ತಿದ್ದಾರೆ.

" ವಿಶುದ್ಧ ಸತ್ವಂ ಭಯಲೇಶವರ್ಜಿತಮ್ ।
ಗಾಂಭೀರ್ಯಶೌರ್ಯಾದಿಗುಣಪ್ರಭಾಯುತಮ್ ||
ಸುತಂ ಚ ಸೂತೇ ಬಹುಪುಣ್ಯಭಾಜನಾ ।
ನಹೀದೃಶಂ ದುಶ್ಚರಿತಾ ಲಭೇತಸಾ || "

(ಭಾ—ಸಂಹಿತಾ)

" ಬಹು ಪುಣ್ಯಭಾಜನಳಾದ, ಪತಿಪರಾಯಣೆಯಾದ ಸ್ತ್ರೀಯು ಶುದ್ಧ ಸತ್ವನಾದ, ಭಯವೇನೆಂಬದನ್ನರಿಯದಂತೆಹ, ಗಾಂಭೀರ್ಯ ಶೌರ್ಯಪ್ರಭಾ ಸಂಪನ್ನನಾದ ಮಗನನ್ನು ಪಡಿಯುವಳು. ಅಂದರೆ ಅವಳ ಮನೋವೃತ್ತಿಯು

ಪ್ರಾಬಲ್ಯವಿದ್ದ ಗುಣವುಳ್ಳ ಪುತ್ರನನ್ನು ಪಡೆಯುವಳು, ಹಾಗಿಲ್ಲದೆ ದುಶ್ಚರಿತ್ರಳಾದ ಜಾರಿಣಿಯ ಮನೋವೃತ್ತಿಯು ಬಹುಜನ ವಿಟರ ಗೋಷ್ಠಿಯಲ್ಲಿ ಹೇಗೆ ಸದ್ಗುಣಗಳಿಂದ ಶಾಂತವಾಗಿದ್ದೀತು ? ಅದಕ್ಕಾಗಿ ವ್ಯಭಿಚಾರಿಯಾದ ಸ್ತ್ರೀಯು ತನಗೆ ಈಶ್ವರನಿಂದ ದತ್ತವಾಗಿರುವ ಮಹಚ್ಛಕ್ತಿಯನ್ನು ಹಾಳುಮಾಡಿಕೊಂಡಿರುವದರಿಂದ ಸದ್ಗುಣಾಲಂಕೃತ ಸುತನನ್ನು ಎಂದೆಂದಿಗೂ ಪಡೆಯಲಾರಳು.''

" ತಾಸಾಂ ದೈವೀಯಶಕ್ತಿಂ ಲಿಖಿತುಮಪಿ ವಿಧಿರ್ನೋ ಸುಧೀ ಶ್ಚಾಹುರಿತ್ಥಮ್ ।
ಯಾಂ ಯಾಂ ವೃತ್ತಿಂ ಮನೋಜ್ಞಾಂ ವಹತಿ ಗುರುತರಾ ಗರ್ಭಿಣೀ ಶುದ್ಧಚಿತ್ತೇ ॥
ತಾಂ ತಾಂ ವೃತ್ತಿಂ ದಧಾನಂ ಸಮುದಯಸಹಿತಂ ಬಾಲಕಂ ಸಾ ಪ್ರಸೂತೇ ।
ನೋಚೇದ್ವಿಕ್ಷೋಭಚಿತ್ತಾಪ್ಯದಿಕಗರಯುತಾ ಕಷ್ಟಭೋಗಾ ಸದುಃಖಮ್ ॥ "

(ಭಾ—ಸಂಹಿತಾ)

" ಸ್ತ್ರೀಯರ ದೈವಿಕ ಶಕ್ತಿಯನ್ನು ವರ್ಣಿಸುವದು ಬ್ರಹ್ಮನಿಂದಲೂ ಆಗುವದಿಲ್ಲ ; ಗರ್ಭಧಾರಣೆಯ ಕಾಲದಲ್ಲಿ ಗರ್ಭಿಣಿಯು ತನ್ನ ಶುದ್ಧ ಚಿತ್ತದಲ್ಲಿ ಯಾವಯಾವ ಸದ್ಭಾವಗಳನ್ನು ವಹಿಸಿರುವಳೋ ಆ ಲಕ್ಷಣಗಳಿಂದ ಶೋಭಿಸುತ್ತಿರುವ, ಸರ್ವ ಸೌಭಾಗ್ಯಯುಕ್ತನಾದ ಮಗನನ್ನು ಪಡಿಯುವಳು. ಹಾಗಲ್ಲದೆ ಗರ್ಭಧಾರಣೆಯ ಕಾಲದಲ್ಲಿ ಚಿಂತೆ, ದುಃಖ, ಪೀಡಾ, ಮುಂತಾದ ತನ್ನ ಮನೆಯ ದುರ್ಗುಣಗಳಿಂದ ವಿಕ್ಷೋಭಚಿತ್ತಳಾದರೆ ನಿತ್ಯದುಃಖನಾದ ಮಗನನ್ನು ಹೆರುವಳು. ''

ಇತ್ಯಾದಿ ವೈದ್ಯಶಾಸ್ತ್ರಗಳಲ್ಲಿ:—

" ಆಹಾರಾಚಾರಚೇಷ್ಟಾಭಿಃ ಯಾದೃಶೀಭಿಸ್ಸಮನ್ವಿತೌ ॥ ಸ್ತ್ರೀ ಪುಂಸೌ ಸಮುಪೇಯಾತಾಂ, ತಯೋಃ ಪುತ್ರೋಽಪಿ ತಾದೃಶಃ॥"

(ಸುಶ್ರುತ)

" ಸ್ತ್ರೀ ಪುರುಷರಿಗೆ ಎಂತಹ ಆಹಾರ, ಆಚಾರ, ಚೇಷ್ಟೆಗಳಿರುವವೋ ಅಂತಹ ಗುಣವಿಶಿಷ್ಟನಾದ ಪುತ್ರನನ್ನು ಪಡಿಯುವರು. '' ಎಂದು ಸುಶ್ರುತದಲ್ಲಿ ಇದೆ. ಇವರಲ್ಲಿ ತಾಯಿಯ ಮನೋವೃತ್ತಿಯೇ ಹೆಚ್ಚಾಗಿ ಪುತ್ರನಲ್ಲಿ ಘಟಿಸುವದು.

ಇಂತಹ ದೇವಸದೃಶಳಾದ ಭಾರ್ಯೆಯನ್ನು ವರ್ಜಿಸಿ, ದುರ್ವೃತ್ತಿಯಲ್ಲಿ ಮುಳುಗಾಡುತ್ತಾ, ಪರಸ್ತ್ರೀಯರಲ್ಲಿಯೂ, ವೇಶ್ಯೆಯರಲ್ಲಿಯೂ ಗಮಿಸುವದು !! ಪರದಾರಾಗಮನವು ಸ್ವರ್ಗಹಾನಿ, ಧರ್ಮ ಹಾನಿಗಳನ್ನುಂಟುಮಾಡುವ

ದೆಂದು ಶಾಸ್ತ್ರಗಳು ಉದ್ಘೋಷಿಸುತ್ತಾ ಇವೆ. ಇವೆಲ್ಲಕ್ಕಿಂತಲೂ ಈ ವ್ಯಭಿಚಾರದಿಂದ ಸಾಕ್ಷಾತ್ ಫಲವೊಂದು ಉಂಟಾಗುವದು. ಏನೆಂದರೆ:—ಗಂಡನ ಈ ವ್ಯಭಿಚಾರವೃತ್ತಿಯಿಂದ ಹೆಂಡತಿಯು ದುಃಖದಲ್ಲಿ ಮಗ್ನಳಾಗಿ, ಖಿನ್ನಳಾಗಿ ಪವದರಿಂದ, ಅವಳ ದೈವಿಕ ಶಕ್ತಿಗಳು ದೋಷಗ್ರಸ್ತಗಳಾಗುವವು. ಇಂತಹ ವ್ಯಭಿಚಾರವೃತ್ತಿಯ ತಂದೆಯಿಂದಾದ ಸಂತತಿಯಲ್ಲಿ ಮಹಾನ್ ದೋಷ ಗುಣ ಗಳು ಮೂರ್ತಿವತ್ತಾಗಿ ಕಂಡುಬರುತ್ತಿರುವವು. ಈ ಪುರುಷನ ಪರದಾರೋಪಸೇವನೆಯ ದೋಷದೊಂದಿಗೆ ಸ್ತ್ರೀಯೂ ಸಹ ಪರಪುರುಷರಲ್ಲಿ ನೆರೆಯತಕ್ಕ ಜಾರವೃತ್ತಿಯನ್ನು ಕಲಿಯುವದಾದರೆ ಮತ್ತೂ ಅನರ್ಥಗಳು ತಪ್ಪದೆ ಸಂಭವಿಸುವವು. ಇದಕ್ಕಾಗಿ ದಂಪತಿಗಳ ಈ ದುರಾಚಾರವು ಕುಲವನ್ನೇ ನಾಶಮಾಡುವದಾದ್ದರಿಂದ ಈ ದೋಷವನ್ನು ತ್ಯಜಿಸುವದು ಶ್ರೇಯಸ್ಕರವಾದದ್ದು.

**“ ಯಶ್ಚೈತಾನ್ ಪ್ರಾಪ್ನುಯಾತ್ ಸರ್ವಾನ್ ಯಶ್ಚೈತಾನ್ ಕೇವಲಾಂಸ್ತ್ಯಜೇತ್ ॥ ಪ್ರಾಪಣಾತ್ ಸರ್ವಕಾಮಾನಾಂ, ಪರಿತ್ಯಾಗೋ ವಿಶಿಷ್ಯತೇ ॥ (ಮನು)**

“ ಎಲ್ಲಾ ಬಗೆಯ ವಿಷಯಸುಖಗಳನ್ನೂ ಅನುಭವಿಸುವದೊಂದು, ಇಲ್ಲವೆ; ಇವೆಲ್ಲಾ ಅನರ್ಥಕಾರಿಗಳೆಂದುಪೇಕ್ಷಿಸಿ ಬಿಟ್ಟುಬಿಡುವದೊಂದು—ಈ ಎರಡರಲ್ಲಿ ವಿಷಯಸುಖಗಳನ್ನು ಉಪೇಕ್ಷೆ ಮಾಡುವದೇ ಶ್ರೇಯಸ್ಸಿಗೆ ಸಾಧನೆಯಾದದ್ದು. ” ಇದೇ ವಿಷಯದಲ್ಲಿ ಭಗವಾನ್ ಭರ್ತೃಹರಿಯು:—

**“ ನ ಸಂಸಾರೋತ್ಪನ್ನಂ ಚರಿತಮನುಪಶ್ಯಾಮಿ ಕುಶಲಮ್ ।**
**ವಿಪಾಕಃ ಪುಣ್ಯಾನಾಂ ಜನಯತಿ ಭಯಂ ಮೇ ವಿಮೃಶತಃ ॥**
**ಮಹದ್ಭಿಃ ಪುಣ್ಯೌಘೈಶ್ಚಿರಪರಿಗೃಹೀತಾಶ್ಚ ವಿಷಯಾಃ ।**
**ಮಹಾಂತೋ ಜಾಯಂತೇ ವ್ಯಸನಮಿವದಾತುಂ ವಿಷಯಿಣಾಮ್ ॥ ”**

“ ಸಂಸಾರ ಮಧ್ಯದಲ್ಲಿ ಉತ್ಪನ್ನವಾದ ಪುಣ್ಯಾಚರಣೆಯನ್ನು ಕ್ಷೇಮಕರವಾದದ್ದೆಂದು ತಿಳಿಯಬಾರದು. ಯಾಕೆಂದರೆ ಪುರಾಕೃತ ಸುಕೃತಗಳ ಸಂಪದ್ರೂಪ ಪರಿಪಾಕವು ತತ್ವವಿಚಾರದಿಂದ ನೋಡುತ್ತಾ ಬಂದದ್ದರಲ್ಲಿ ನನಗೆ ಭಯಂಕರವಾಗಿ ತೋರುತ್ತಾ ಇದೆ. ಅಂದರೆ ಅದರ ಪರ್ಯಾಲೋಚನೆ ಮಾಡಿದ್ದರಲ್ಲಿ ಸಂಪತ್ತುಗಳ ವ್ಯಯವಾದನಂತರ ಭಯಾವಹವಾಗುವದು. ಇದೇ ವಿಷಯದಲ್ಲಿ ಮಹಾಕವಿಯಾದ ಶ್ರೀಹರ್ಷನು—‘ ಪೂರ್ವಪುಣ್ಯವಿಭವವ್ಯಯಲಬ್ಧಾಃ ಸಂಪದೋವಿಪದಏವವಿಮೃಷ್ಟಾಃ ’ ಅಂದರೆ ಪೂರ್ವಪುಣ್ಯದಿಂದುತ್ಪನ್ನವಾದ ಸಂಪತ್ತೂ ಸಹ ವಿಮರ್ಶಿಸಿ ನೋಡಿದಲ್ಲಿ ವಿಪತ್ತೇ ಆಗುತ್ತದೆ ಎಂದು ಹೇಳಿದ್ದಾನೆ. ಯಾಕೆಂದರೆ ‘ ಕ್ಷೀಣೇಪುಣ್ಯೇ ಮರ್ತ್ಯಲೋಕಂವಿಶಂತಿ ’

ಪುಣ್ಯ ಕ್ಷೀಣವಾಗಲು ಪುನಃ ಮರ್ತ್ಯಲೋಕಕ್ಕೆ ಬರಲೇಬೇಕಾಗುತ್ತದೆ ಯಷ್ಟೆ? ಮಹತ್ತಾದ ಪುಣ್ಯಸಂಚಯವು ಕಾರಣದಿಂದ ಚಿರಕಾಲದಿಂದಲೂ ಸಂಗ್ರಹೀತಗಳಾದ ಸ್ರಕ್ಚಂದನ ವನಿತಾಧನಾದಿ ಭೋಗವಸ್ತುಗಳು ವಿಷಯಾ ಸಕ್ತರಾದವರಿಗೆ ವಿಪತ್ತನ್ನು ಕೊಡತಕ್ಕವುಗಳೇ ಆಗಿವೆ;' ಅಂದರೆ ಸರ್ವಸಂಗ ಪರಿತ್ಯಾಗಪೂರ್ವಕ ಜ್ಞಾನಿಯಾಗಬೇಕಾದ್ದು ಶ್ರೇಯಸ್ಕರವು."

"ನಾಮೃತಂ ನವಿಷಂ ಕಿಂಚಿದೇಕಾಂ ಮುಕ್ತ್ವಾ ನಿತಂಬಿನೀಮ್॥
ಸೈವಾಮೃತಲತಾ ರಕ್ತಾ, ವಿರಕ್ತಾ ವಿಷವಲ್ಲರೀ ॥"

"ಪ್ರಾಣಪ್ರಿಯಸಿಯಾದ ನಿತಂಬಿನಿಯನ್ನು ಬಿಟ್ಟರೆ ಲೋಕದಲ್ಲಿ ಅಮೃತವೆಂಬ ಪದಾರ್ಥವು ಬೇರೇ ಇಲ್ಲ. ವಿಷವೆಂಬ ಪದಾರ್ಥವೂ ಬೇರೇ ಇಲ್ಲ!! ಇವಳೇ ಅಮೃತಪ್ರಾಯಳೂ, ವಿಷಪ್ರಾಯಳೂ ಆಗಿದ್ದಾಳೆ. ಹೇಗೆಂದರೆ ಈ ಪ್ರಾಣಪ್ರೇಯಸಿಯು (ಅನುರಕ್ತಳು) ಅನುರಾಗವತಿಯಾಗಿದ್ದದ್ದಾದರೆ ಅವಳಿಗಿಂತ ಹೆಚ್ಚಾದ ಅಮೃತವೇ ಎಲ್ಲೆಲ್ಲಿಯೂ ದೊರಿಯಬಾರದು; ಅವಳೇ ಸಾಕ್ಷಾತ್ ಅಮೃತಲತೆಯು, ಸಮಸ್ತ ಇಷ್ಟಾರ್ಥ ಸುಖಸಿದ್ಧಿಯನ್ನುಂಟುಮಾಡುವ ಕಲ್ಪಲತೆಯೇ! ಹಾಗಿಲ್ಲದೆ (ವಿರಕ್ತ) ಅನುರಾಗವಿಲ್ಲದವಳಾದರೆ ಅವಳೇ ವಿಷವಲ್ಲರೀ-ಪ್ರಾಣಾಪಹಾರಿಣಿಯೇ ಆಗುತ್ತಾಳೆ."

"ಆವರ್ತಸ್ಸಂಶಯಾನಾಮವಿನಯಭುವನಂ ಪಟ್ಟಣಂ ಸಾಹಸಾನಾಮ್।
ದೋಷಾಣಾಂ ಸನ್ನಿಧಾನಂ ಕಪಟಶತಮಯಂ ಕ್ಷೇತ್ರಮಪ್ರತ್ಯಯಾನಾಮ್॥
ಸ್ವರ್ಗದ್ವಾರೈಕ ವಿಘ್ನೋ ನರಕಪುರಮುಖಂ ಸರ್ವಮಾಯಾಕರಂಡಮ್।
ಸ್ತ್ರೀಯಂತ್ರಂ ಕೇನಸೃಷ್ಟಂ ವಿಷಮಮೃತಮಯಂ ಪ್ರಾಣಿಲೋಕಸ್ಯ ಪಾಶ॥"

"ಈ ಸ್ತ್ರೀ ಎಂಬ ಯಂತ್ರವು—ಸಕಲ ಸಂದೇಹಗಳ ಪರಿಪಾಕರೂಪವಾದದ್ದು! ಅವಿನಯ (ಅವಿಧೇಯತೆ) ದ ಲೋಕವೇ! ಸಾಹಸಕಾರ್ಯಗಳ ಪಟ್ಟಣವೆ! ರಾಗದ್ವೇಷಾದಿ ದೋಷಗಳ ಅಕ್ಷಯವಾದ ನಿಧಿಯೇ! (ಯಾವಾಗ್ಯೂ ಇವಳಲ್ಲಿ ದೋಷಗಳು ಕ್ಷಯಿಸುವದೇ ಇಲ್ಲ!) ಅನೇಕ ಕಪಟವ್ಯಾಪಾರಗಳ ಮಯವಾದದ್ದು! ಅವಿಶ್ವಾಸಗಳ ಉತ್ಪತ್ತಿ ಭೂಮಿಯು! ಸ್ವರ್ಗಸಾಧನಾನುಷ್ಠಾನ ಕರ್ಮಗಳಿಗೆ ಇದೇ ವಿಘ್ನಕಾರಿ! ಯಮಲೋಕಕ್ಕೆ ಹೋಗತಕ್ಕ ದಾರಿ! ಸರ್ವ ಇಂದ್ರಜಾಲಾದಿಗಳ ಪೆಟ್ಟಿಗೆಯೇ! ಹೊರಗೆ ನೋಡುವವರಿಗೆ ಅಮೃತಮಯವಾದದ್ದೇ! ಅಂತರಂಗದಲ್ಲಿ ವಿಷಪುಂಜವಾಗಿದ್ದು ಪ್ರಾಣವನ್ನೇ ಅಪಹರಿಸತಕ್ಕದ್ದು! ಈ ಪ್ರಾಣಿಲೋಕವಾದ ಸಂಸಾರದಲ್ಲಿ ಪಾಶರೂಪವು! ಇಂತಹ ಸ್ತ್ರೀ ಎಂಬ ಯಂತ್ರವನ್ನು ಯಾವನು ನಿರ್ಮಿಸಿರಬಹುದು?"

"ಜಲ್ಪಂತಿ ಸಾರ್ಧಮನ್ಯೇನ ಪಶ್ಯಂತ್ಯನ್ಯಂ ಸವಿಭ್ರಮಾಃ॥ ಹೃದ್ಗ
ತಂ ಚಿಂತಯತ್ಯನ್ಯಂ ಪ್ರಿಯಃ ಕೋ ನಾಮ ಯೋಷಿತಾಮ್ ॥"

"ಒಬ್ಬ ಪುರುಷನೊಂದಿಗೆ ಮಹಾ ವಿಶ್ವಾಸದಿಂದ ಮಾತನಾಡುತ್ತಾ ಇರುತ್ತಾರೆ, ಆಗಲೇ ವಿಲಾಸಾತಿಶಯಮದ್ಯೋತನಪೂರ್ವಕವಾಗಿ ಮತ್ತೊಬ್ಬ ಪುರುಷನನ್ನು ನೋಡುತ್ತಾ ಇರುತ್ತಾರೆ. ಅದೇ ಸಮಯದಲ್ಲಿ ಅವರ ಹೃದಯದಲ್ಲಿ ಬೇರೊಬ್ಬ ಪ್ರಿಯನನ್ನು ಚಿಂತಿಸುತ್ತಾ ಇರುತ್ತಾರೆ. ಇಂತಾದ್ದರಲ್ಲಿ ಸ್ತ್ರೀಯರಿಗೆ ಯಾವನು ಪ್ರಿಯತಮನೆಂದು ನಿಯತನಾಗಿರುವನು ? ಯಾರೂ ಇಲ್ಲವೆಂತಲೇ ಭಾವವು."

"ನ ಗಮ್ಯೋ ಮಂತ್ರಾಣಾಂ ನ ಚ ಭವತಿ ಭೈಷಜ್ಯ ವಿಷಯೋ ।
ನ ಚಾಪಿ ಪ್ರಧ್ವಂಸಂ ವ್ರಜತಿ ವಿವಿಧೈಃ ಶಾಂತಿಕ ಶತೈಃ ॥
ಭ್ರಮಾವೇಶಾದಂಗೇ ಕಮಪಿ ವಿದಧದ್ಭಂಗಮಸಕೃತ್ ।
ಸ್ಮರಾಪಸ್ಮಾರೋಽಯಂ ಭ್ರಮಯತಿ ಭೃಶಂ ಘೂರ್ಣಯತಿ ಚ ॥"

"ಈ ಮನ್ಮಥಾವೇಶವೆಂಬ ಅಪಸ್ಮಾರ ರೋಗವು—ಮಂತ್ರಗಳಿಂದ ಸಾಧ್ಯವಾಗತಕ್ಕದ್ದಲ್ಲ, ಔಷಧಾದಿಗಳಿಂದ ಗುಣವಾಗತಕ್ಕದ್ದಲ್ಲ, ನಾನಾಪ್ರಕಾರವಾದ ಶಾಂತಿಕರ್ಮಗಳಿಂದ ಇದು ನಾಶವಾಗತಕ್ಕದ್ದಲ್ಲ; ಪರಂತು ಕಾಮೋತ್ತೇಜನವೆಂಬ ಭ್ರಮೆಯೆಂಬ ಶರೀರದಲ್ಲಿ ಅನಿರ್ವಾಚ್ಯವಾದ ಜಾಡ್ಯವುಂಟಾಗಿ ಈ ಅಪಸ್ಮಾರ ರೋಗವು ಬಾರಿಬಾರಿಗೂ ವ್ಯತ್ಯಾಸವನ್ನುಂಟುಮಾಡುತ್ತಾ, ಚಕ್ರದಂತೆ ತಲೆಯನ್ನೇ ತಿರುಗಿಸುತ್ತಾ ಇದೆ."

"ಸ್ಮೃತಾ ಭವತಿ ತಾಪಾಯ, ದೃಷ್ಟಾ ಚೋನ್ಮಾದಕಾರಿಣೀ ॥
ಸ್ಪೃಷ್ಟಾ ಭವತಿ ಮೋಹಾಯ ಸಾ ನಾಮ ದಯಿತಾ ಕಥಮ್?॥"

"ಸ್ತ್ರೀಯನ್ನು ಯಾವಾಗಲಾದರೂ ಸ್ಮರಿಸಿದಮಾತ್ರಕ್ಕೇ ತಾಪವನ್ನುಂಟುಮಾಡುತ್ತಾಳೆ, ನೋಡಿದಮಾತ್ರಕ್ಕೆ ಚಿತ್ತವಿಭ್ರಮವನ್ನುಂಟು ಮಾಡುತ್ತಾಳೆ; ಸ್ಪರ್ಶನಸುಖವೆಂದಾಲಿಂಗನ ಮಾಡಿದ ನಂಗಡಲೇ ಹೊರಗಿನ ಪ್ರಪಂಚವನ್ನು ಮರೆಯುವಂತಹ ಮೋಹವನ್ನೇ ಉಂಟುಮಾಡುತ್ತಿದ್ದಾಳೆ; ಇಂತಾದ್ದರಲ್ಲಿ ಇವಳು ಅಪ್ರಿಯತಮೆಯಲ್ಲದೆ ಪ್ರಿಯತಮೆಯಾದಾಳೆ ?"

"ನೋ ಸತ್ಯೇನ ಮೃಗಾಂಕ ಏಷ ವದನೀಭೂತೋನ ಚೇಂದೀವರ ।
ದ್ವಂದ್ವಂ ಲೋಚನತಾಂ ಗತಂ ನ ಕನಕೈರಪ್ಯಂಗಯಷ್ಟಿಃ ಕೃತಾ ॥
ಕಿಂತ್ವೇವಂ ಕವಿಭಿಃ ಪ್ರತಾರಿತಮನಾಸ್ತತ್ತ್ವಂ ವಿಜಾನನ್ನಪಿ ।
ತ್ವಙ್ಮಾಂಸಾಸ್ಥಿಮಯಂ ವಪುರ್ಮೃಗದೃಶಾಂ ಮಂದೋ ಜನಸ್ಸೇವತೇ ॥"

"ಈ ಪರಿದೃಶ್ಯಮಾನನಾದ ಚಂದ್ರನು ಸತ್ಯವಾಗಿಯೂ (ಸ್ತ್ರೀಜನರ) ವದನತ್ವವಾಗಿ ಪರಿಣಮಿಸಲಿಲ್ಲ; ಇದರಂತೆಯೇ ಇಂದೀವರದ್ವಂದ್ವವು ಲೋಚನತ್ವವನ್ನೂ ಪಡಿಯಲಿಲ್ಲ, ಹಾಗೆಯೇ ಸುವರ್ಣವಾಗಲೀ, ಚಂಪಕಪುಷ್ಪದಳಗಳಾಗಲೀ ಈ ಸ್ತ್ರೀಯ ಅಂಗಯಷ್ಟಿಯಾಗಿ ನಿರ್ಮಿಸಲ್ಪಡಲಿಲ್ಲ; ಕಿಂತು ಮೂಢಜನರು ಚರ್ಮ, ಮಾಂಸ, ಎಲುಬುಗಳಿಂದಲೇ ಸ್ತ್ರೀಯರ ಶರೀರವು ಮಾಡಲ್ಪಟ್ಟಿರುವದೆಂಬ ನ್ಯಾಯವಾದ ತತ್ವವನ್ನು ತಿಳಿದಿದ್ದಾಗ್ಯೂ ಕವಿಗಳ ಚಮತ್ಕಾರವಾದ ವರ್ಣನೆಗಳಿಂದ ವಂಚಿಸಲ್ಪಟ್ಟವರಾಗಿ ಈ ಕಾಮಿನಿಯರನ್ನು ದಾಸಾನುದಾಸರಾಗಿ ಸೇವಿಸುತ್ತಿರುವರು."

ಧರ್ಮ ಪ್ರಶಂಸೆ:—" ಏಕ ಏವ ಸುಹೃದ್ಧರ್ಮೋ ನಿಧನೇಪ್ಯನು ಯಾತಿ ಯಃ || ಶರೀರೇಣ ಸಮಂ ನಾಶಂ ಸರ್ವಮನ್ಯತ್ತು ಗಚ್ಛತಿ || " (ಮನು)

"ಕೇವಲ ಧರ್ಮವೊಂದೇ ಮನುಷ್ಯನ ನಿಷ್ಕಪಟಿಯಾದ ಮಿತ್ರನಾಗಿದೆ. ಇದು ಮಾತ್ರ ಮನುಷ್ಯನ ಜತೆಯಲ್ಲಿ ಪರಲೋಕಕ್ಕೂ ಬರುವದು. ಉಳಿದವೆಲ್ಲವೂ ಶರೀರದ ಜತೆಯಲ್ಲಿಯೇ ಇಲ್ಲಿಯೇ ನಾಶವಾಗುವವು."

" ನಾಮುತ್ರ ಹಿ ಸಹಾಯಾರ್ಥಂ ಪಿತಾ ಮಾತಾ ಚ ತಿಷ್ಠತಃ ||
ನ ಪುತ್ರದಾನಂ ನ ಜ್ಞಾತಿಃ ಧರ್ಮಸ್ತಿಷ್ಠತಿ ಕೇವಲಃ || " (ಮನು)

"ಪರಲೋಕದಲ್ಲಿ ಮಾತಾ, ಪಿತಾ, ಪ್ರಾಣಪ್ರೇಯಸಿಯಾದ ಸ್ತ್ರೀ, ಪುತ್ರ ಮುಂತಾದ ಯಾರೂ ಸಹಾಯಮಾಡಲಾರರು. ಧರ್ಮವೊಂದೇ ಅಲ್ಲಿಯೂ ಸಹಾಯಕನಾಗಿರುವದು."

" ಏಕಃ ಪ್ರಜಾಯತೇ ಜಂತುರೇಕ ಏವ ಪ್ರಲೀಯತೇ || ಏಕೋಽನುಭುಙ್ಕ್ತೇ ಸುಕೃತಮೇಕ ಏವ ಚ ದುಷ್ಕೃತಮ್|| "

"ಜೀವನು ಒಂಟಿಯಾಗಿ ಬಂದು ಭೂಮಿಯಲ್ಲಿ ಹುಟ್ಟುತ್ತಾನೆ. ಒಬ್ಬನೇ ಯಮಲೋಕಕ್ಕೂ ಹೋಗುವನು (ಜತೆಯಲ್ಲಿ ಯಾವ ನೆಂಟರೂ, ಪುತ್ರಾದಿಗಳೂ ಬರುವದಿಲ್ಲ;) ತಾನು ಮಾಡಿದ ಸತ್ಕರ್ಮ ಅಥವಾ ದುಷ್ಕರ್ಮದ ಫಲಗಳನ್ನು ತಾನೊಬ್ಬನೇ ಪರಲೋಕದಲ್ಲಿ ಅನುಭವಿಸುವನು."

" ಧರ್ಮಂ ಶನೈಃ ಸಂಚಿನುಯಾದ್ವಲ್ಮೀಕಮಿವ ಪುತ್ತಿಕಾಃ || ಪರಲೋಕಸಹಾಯಾರ್ಥಂ ಸರ್ವಭೂತಾನ್ಯಪೀಡಯನ್ || "

"ಕೇವಲ ಚಿಕ್ಕಪ್ರಾಣಿಗಳಾದ ಗೆದ್ದಲು ಹುಳುಗಳು ಮಹಾ ಎತ್ತರವಾದ ಹುತ್ತವನ್ನು ಹೇಗೆ ಕಟ್ಟುವವೋ ಹಾಗೆಯೇ ಪರಲೋಕದಲ್ಲಿ ಸಹಾಯವಾಗುವದಕ್ಕಾಗಿ ಧರ್ಮವನ್ನು ಆಚರಿಸಬೇಕಲ್ಲದೆ ದೊಡ್ಡ ಧರ್ಮವನ್ನು ಒಟ್ಟಿಗೆ ಫಳಿ

ಸುವೆನೆಂದು ಯತ್ನಿಸಬಾರದು. ಯಾವ ಭೂತಗಳಿಗೂ ಪೀಡಿಸದೆ ಆಚರಿಸು ವದೇ ಧರ್ಮವು !! " (ಮನು)

" ಅದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾ ಗಿರಾ || ಅನು ಗ್ರಹಂ ಚ ದಾನಂ ಚ ಸತಾಂ ಧರ್ಮಃ ಸನಾತನಃ ||" (ಮನು)

" ಕರ್ಮದಿಂದಲೂ, ಮನಸ್ಸಿನಿಂದಲೂ, ವಾಕ್ಕಿನಿಂದಲೂ ಯಾವ ಪ್ರಾಣಿಗೂ ಅನಿಷ್ಟ (ಕೆಡಕು) ವನ್ನು ಮಾಡದಿರುವಿಕೆ, ಕೃಪಾ, ದಾನ ಇವೇ ಸಜ್ಜನರ ಸನಾತನವಾದ ಧರ್ಮವು. "

" ಮೃತಂ ಶರೀರಮುತ್ಸೃಜ್ಯ ಕಾಷ್ಠ ಲೋಷ್ಟ ಸಮಂ ಕ್ಷಿತೌ || ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ || ತಸ್ಮಾದ್ಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿನುಯಾಚ್ಛನೈಃ || ಧರ್ಮೇಣ ಹಿ ಸಹಾಯೇನ ತಮಸ್ತರತಿ ದುಸ್ತರಮ್ || "

" ಮೃತನಾದವನ ಹೆಣವನ್ನು ಕಟ್ಟಿಗೆಯಂತೆಯೂ, ಲೋಷ್ಟದಂತೆಯೂ ಭೂಮಿಯಲ್ಲಿ (ಸುಟ್ಟು ಬೂದೀಮಾಡಿ) ಬಿಸಾಟು, ಬಂಧುಗಳು ಹಿಂದಿರುಗಿ ತಮ್ಮತಮ್ಮ ಮನೆಗಳಿಗೆ ಬಂದುಬಿಡುತ್ತಾರೆ. ಆಗ ಪರಲೋಕ ಸಹಾಯಕನಾದ ಧರ್ಮವು ಆ ಜೀವನನ್ನು ಅನುಸರಿಸಿಕೊಂಡು ಮುಂದೆ ಪರಲೋಕಕ್ಕೆ ತೆರಳುವದು. ಇದಕ್ಕಾಗಿಯೇ ಮನುಷ್ಯನು ಪರಲೋಕ ಸಹಾಯಾರ್ಥವಾಗಿ ನಿತ್ಯವೂ ಸ್ವಲ್ಪ ಸ್ವಲ್ಪ ಧರ್ಮವನ್ನು ಸಂಚಯಮಾಡುತ್ತಾ ಇರಬೇಕು. ಇದರ ಸಹಾಯದಿಂದಲೇ ದುಸ್ತರವಾದ ಅಂಧಕಾರಮಯ ಕುಂಭೀಪಾಕ, ವೈತರಣೀ, ರೌರವ ಮುಂತಾದ ನರಕಗಳನ್ನು ದಾಟುತ್ತಾನೆ. "

" ಸತ್ಯಂ ಮೃದು ಹಿತಂ ವಾಕ್ಯಂ ಧೀರೋ ಹಿತಕರಂ ವದೇತ್ || ಆತ್ಮೋತ್ಕರ್ಷಂ ತಥಾ ನಿಂದಾಂ ಪರೇಷಾಂ ಪರಿವರ್ಜಯೇತ್||"

" ಧೀರರಾದ ಜನರು—ಸತ್ಯವಾದ, ಮೃದುವಾದ, ಪ್ರಿಯವಾದ ಉಪಕಾರಕರ ವಾಕ್ಯಗಳನ್ನೇ ಉಚ್ಚರಿಸುತ್ತಾ ಇರಬೇಕು. ಆದರೆ ತನ್ನ ಉತ್ಕರ್ಷತೆಯನ್ನೂ, ಪರರ ನಿಂದೆಯನ್ನೂ ಸರ್ವಥಾ ಕಥನಮಾಡಬಾರದು. "

" ಕಾಲೇ ಹಿತಂ ಮಿತಂ ಬ್ರೂಯಾದವಿ ಸಂವಾದಿ ಪೇಶಲಮ್ ||"

(ವಾಗ್ಭಟ).

" ಕಾಲಾನುಸಾರವಾಗಿ ಹಿತವಾಗಿಯೂ, ಮಿತವಾಗಿಯೂ, ಮೃದುಮಧುರ ವಾಕ್ಯಗಳನ್ನು ಅನುಕೂಲವಾಗಿಯೂ ಹೇಳಬೇಕು. "

" ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ |
ನ ಬ್ರೂಯಾತ್ಸತ್ಯಮಪ್ರಿಯಮ್ ||

ನಾऽನೃತಂ ಚ ಪ್ರಿಯಂ ಬ್ರೂಯಾತ್ ।
ಏಷ ಧರ್ಮಃ ಸನಾತನಃ ॥ "                    (ಮನು)

"ಸತ್ಯವಾಗಿಯೂ, ಪ್ರಿಯವಾಗಿಯೂ ಇರುವ ಮಾತುಗಳನ್ನು ನುಡಿಯುತ್ತಾ ಇರಬೇಕು; ಸತ್ಯವಾದದ್ದೆಂದು ಅಪ್ರಿಯವಾದ ವಾಕ್ಯನ್ನು ನುಡಿಯಬಾರದು; ಪ್ರಿಯವಾದದ್ದೆಂದು ಸುಳ್ಳನ್ನು ನುಡಿಯಬಾರದು; ಇದೇ ಸನಾತನವಾದ ಧರ್ಮವು !! "

"ಭದ್ರಂ ಭದ್ರ ಮಿತಿಬ್ರೂಯಾದ್ಭದ್ರಮಿತ್ಯೇವ ವಾ ವದೇತ್ ॥
ಶುಷ್ಕವೈರಂ ವಿವಾದಂ ಚ ನಕುರ್ಯಾತ್ಕೇನಚಿತ್ ಸಹ ॥ "

"ಎಲ್ಲರಿಗೂ ಮಂಗಲ, ಮಂಗಲ, ಮಂಗಲವಾಗಲಿ ಎಂದು ಕಲ್ಯಾಣೋಕ್ತಿಗಳನ್ನೇ ನುಡಿಯುತ್ತಿರಬೇಕು. ಹಾಗಲ್ಲದೆ, ಶುಷ್ಕವಾದ ಜಗಳಗಂಟಕತನದ ವೈರವನ್ನೂ, ವಿವಾದವನ್ನೂ ಯಾರೊಂದಿಗೂ ಮಾಡಬಾರದು. "

"ನ ಹಿಂಸ್ಯಾತ್ಸರ್ವಭೂತಾನಿ ಮೈತ್ರಾಯಣಗತಿಶ್ಚರೇತ್ ॥ ನೇದಂ ಜೀವಿತಮಾಸಾದ್ಯ ವೈರಂ ಕುರ್ವೀತ ಕೇನಚಿತ್ ॥ "

"ಎಲ್ಲಾ ಜೀವಿಗಳಿಗೂ ಮಿತ್ರಭಾವದಿಂದಿರುತ್ತಾ ಅಹಿಂಸಾವ್ರತವನ್ನಾಚರಿಸುತ್ತಾ ಇರಬೇಕು. ಈ ಜೀವಶಕ್ತಿಯನ್ನು ಪಡದುಕೊಂಡು ಮನುಷ್ಯನಾಗಿ ಹುಟ್ಟಿರುವವನು ಯಾರೊಂದಿಗೂ ವೈರವನ್ನು ಮಾಡಬಾರದು. "

"ಅತಿವಾದಾಂಸ್ತಿತಿಕ್ಷೇತ ನಾಭಿಮನ್ಯೇತ ಕಂಚನ ॥ ಕ್ರೋಧ್ಯಮಾನಃ ಪ್ರಿಯಂಕುರ್ಯಾದಾಕ್ರುಷ್ಟಃ ಕುಶಲಂ ವದೇತ್ ॥ "

"ಪರರ ಅತ್ಯುಕ್ತಿಗಳನ್ನು ಸಹಿಸಬೇಕು, ಸ್ವಲ್ಪವೂ ಅಭಿಮಾನಪಡಬಾರದು, ಕ್ರೋಧಮಾಡಿದವನಿಗೂ ಪ್ರಿಯೋಕ್ತಿಗಳನ್ನೇ ನುಡಿಯುತ್ತಿರಬೇಕು. ಯಾರಾದರೂ ಆಕ್ರೋಶ ಮಾಡಿದರೂ ಅವರಿಗೂ ಹಿತವಾದ ವಾಕ್ಯಗಳನ್ನೇ ಹೇಳಬೇಕು. "

ಸದುಪದೇಶ:—" ವೃತ್ತಂ ಯತ್ನೇನ ಸಂರಕ್ಷೇದ್ವಿತ್ತಮೇತಿ ಚ ಯಾತಿ ಚ॥ ಅಕ್ಷೀಣೋ ವಿತ್ತತಃ ಕ್ಷೀಣೋ ವೃತ್ತಿತಸ್ತು ಹತೋ ಹತಃ ॥ "

"ಯತ್ನದಿಂದ ತನ್ನ ಆಚರಣೆಯನ್ನು ಸಚ್ಚಾರಿತ್ರನಾಗಿರುವಂತೆ ರಕ್ಷಿಸುತ್ತಾ ಇರಬೇಕು. ಚಂಚಲ ಸ್ವಭಾವವುಳ್ಳ ಧನವನ್ನು ಕುರಿತು ಯಾವಾಗಲೂ ಚಿಂತಿಸಬಾರದು; ಅದು ಬಂದೂ ಬರುತ್ತದೆ, ಹಾಗೆಯೇ ಕಣ್ಣಿಗೆ ಸಹ ಕಾಣದಂತೆ ನಾಶವಾಗಿ ಬಿಡುತ್ತದೆ; ಧನಕ್ಷಯವಾದಮಾತ್ರಕ್ಕೇ ಮನುಷ್ಯನೂ ಕ್ಷಯವಾಗುವದಿಲ್ಲ; ಪರಂತು ಚರಿತ್ರವು ನಷ್ಟವಾದರೆ ಅಂದರೆ ಕೆಟ್ಟದಾರಿ

ಯಲ್ಲಿಳಿದರೆ ಈ ಜನ್ಮವೇ ನಷ್ಟವಾಗುತ್ತದೆ. 'ಅಡಿಕೆಗೆ ಹೋದ ಮಾನ ಆನೆಕೊಟ್ಟರೂ ಬರುವದಿಲ್ಲವಷ್ಟೆ?''

"ಪ್ರಿಯೇ ನಾತಿಭೃಶಂ ಹೃಷ್ಯೇದಪ್ರಿಯೇ ನ ಚ ಸಂಜ್ವರೇತ್ ||
ನ ಮುಹ್ಯೇದರ್ಥಕೃಚ್ಛ್ರೇಷು ನ ಚ ಧರ್ಮಂ ಪರಿತ್ಯಜೇತ್ ||"

"ಪ್ರಿಯಘಟನೆಗಳಲ್ಲಿ ಅತಿಯಾಗಿ ಆನಂದಪಡಬಾರದು; ಅಪ್ರಿಯವಾದ ಕಷ್ಟಪರಂಪರೆಗಳೊದಗಿದರೆ ಅಂತರಂಗದಲ್ಲಿಯೂ (ಸಂಜ್ವರಿತ) ಮಹಾ ಸಂಕಟಕ್ಕೀಡಾಗಬಾರದು. (ಇವೆರಡರಲ್ಲಿಯೂ ಶರೀರಕ್ಕೆ ತುಂಬಾ ಧಕ್ಕೆ ಯುಂಟಾಗುವದು, ಕೊನೆಗೆ ಪ್ರಾಣವೇ ಹೋಗಿಬಿಡುವದಾದ್ದರಿಂದ ಅತ್ಯಂತ ಸಂತೋಷ ಮತ್ತು ಅತ್ಯಂತ ದುಃಖಗಳ ಫಲವು ಒಂದೇ ಆಗಿದೆ, ಇವುಗಳನ್ನು ವರ್ಜಿಸಬೇಕು.) ಅರ್ಥಾಭಾವದಿಂದ ಕಷ್ಟವಾದರೂ ವಿಕಲನಾಗಬಾರದು, ಯಾವಾಗಲೂ ಧರ್ಮವನ್ನು ಮಾತ್ರ ತ್ಯಜಿಸಬಾರದು.''

"ವಿರಕ್ತಃ ಪರದಾರೇಷು, ನಿಸ್ಪೃಹಃ ಪರವಸ್ತುಷು || ದಂಭಮಾ
ತ್ಸರ್ಯಹೀನೋ ಯಸ್ತೇನ ಲೋಕತ್ರಯಂ ಜಿತಮ್ ||"

"ಪರಸ್ತ್ರೀಯರಲ್ಲಿ ವಿರಕ್ತನಾಗಿರಬೇಕು, ಅಪೇಕ್ಷಿಸಬಾರದು; ಪರ ದ್ರವ್ಯ ವಿಷಯದಲ್ಲಿ ನಿಸ್ಪೃಹನಾಗಿರಬೇಕು; ದಂಭಮಾತ್ಸರ್ಯರಹಿತನಾಗಿರಬೇಕು. ಈ ಮೂರು ಗುಣವುಳ್ಳವನೇ ಮೂರು ಲೋಕಗಳನ್ನೂ ಜೈಸಿದವನಾಗಿರುವನು.''

"ಜಲಾಶಯಾಶ್ಚ ವೃಕ್ಷಾಶ್ಚ ವಿಶ್ರಾಮಗೃಹಮಧ್ವನಿ || ಸೇತುಃ
ಪ್ರತಿಷ್ಠಿತೋ ಯೇನ ತೇನ ಲೋಕತ್ರಯಂ ಜಿತಮ್ ||"

"ಯಾವನು ರಸ್ತೆಗಳಲ್ಲಿ ಜಲಾಶಯಗಳಾದ--ವಾಪೀಕೂಪ ತಟಾಕ ಪುಷ್ಕರಣಿಗಳನ್ನೂ, ವೃಕ್ಷಗಳನ್ನೂ, ವಿಶ್ರಾಮ ಗೃಹಗಳನ್ನೂ, ಸೇತುವೆಗಳನ್ನೂ ಕಟ್ಟಿಸುತ್ತಾನೋ ಅವನೇ ಮೂರು ಲೋಕಗಳನ್ನೂ ಜೈಸಿದವನು.''

"ವಿಮುಖಾನ್ನಾರ್ಥಿನಃ ಕುರ್ಯಾನ್ನಾವಮನ್ಯೇತ ಕಾನಪಿ || ಉಪ
ಕಾರಪ್ರಧಾನಃ ಸ್ಯಾದಪಕಾರಪರೇಽಪ್ಯರೌ ||"

"ತನ್ನಲ್ಲಿಗೆ ಸಹಾಯಾತುರರಾಗಿ ಬಂದವರನ್ನು ವಿಮುಖರನ್ನಾಗಿ ಮಾಡದೆ ಯತ್ಕಿಂಚಿತ್ ಸಹಾಯಮಾಡಿ ಸಂತೋಷಪಡಿಸಬೇಕು; ಯಾರನ್ನೂ ಅವಮಾನಪಡಿಸಬಾರದು, ಅಪಕಾರ ಮಾಡತಕ್ಕ ಗುಣವುಳ್ಳವನಾದ ಶತ್ರುವಿಗೂ ಸಹ ಉಪಕಾರ ಮಾಡತಕ್ಕ ಗುಣವುಳ್ಳವನಾಗಿರಬೇಕು.''

"ಜನಸ್ಯಾಶಯಮಾಲಕ್ಷ್ಯ ಯೋ ಯಥಾ ಪರಿತುಷ್ಯತಿ || ತಂ ತ
ಥೈವಾನುವರ್ತೇತ ಪರಾರಾಧನಪಂಡಿತಃ ||"

" ಜನರ ಆಶಯುವನ್ನು ತಿಳಿದುಕೊಂಡು, ನಾವು ಹೇಗೆ ನಡದುಕೊಂಡರೆ ಅವರಿಗೆ ಸಂತೋಷವಾಗುವದೋ ಹಾಗೆಯೇ ಆಚರಿಸುತ್ತಾ ಪರಾರಾಧನ ತತ್ಪರನಾಗಿರಬೇಕು. "

**" ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ॥ ಚತ್ವಾರಿ**
**ತಸ್ಯ ವರ್ಧಂತೇ ಆಯುರ್ವಿದ್ಯಾ ಯಶೋ ಬಲಮ್ ॥ "**

" ಹಿರಿಯರನ್ನೂ, ವೃದ್ಧರನ್ನೂ ಕಂಡೊಡನೆಯೇ ಎದ್ದು ಬಂದು ನಮಸ್ಕಾರಮಾಡಿ ಪ್ರತ್ಯುತ್ಥಾನ ಮಾಡತಕ್ಕ ಸ್ವಭಾವದವನೂ, ವೃದ್ಧರಾದ ಅಜ್ಜಿ, ಅಜ್ಜ ಮುಂತಾದವರನ್ನು ಭಕ್ತಿಯಿಂದ ಸೇವಿಸತಕ್ಕವನೂ ಸಹ ಆಯು, ವಿದ್ಯಾ, ಯಶಸ್ಸು, ಬಲ ಈ ನಾಲ್ಕನ್ನೂ ಹೊಂದುವನು. ಹಾಗಲ್ಲದೆ ಇತರರಿಗೆ ಇವು ದೊರಿಯಲಾರವು. "

**" ತೃಣಾನಿ ಭೂಮಿ ರುದಕಂ ವಾಕ್ಚತುರ್ಥೀ ಚ ಸೂನೃತಾ ॥**
**ಏತಾನ್ಯಪಿ ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ ॥ "**

" ತನ್ನ ಮನೆಗೆ ಬಂದವರ ಸನ್ಮಾನಾರ್ಥವಾಗಿ ಚಾಪೆ, ವಿಶ್ರಾಂತ್ಯರ್ಥವಾಗಿ ಭೂಮಿ, ಪಾದಪ್ರಕ್ಷಾಲನಾರ್ಥವಾಗಿ ಜಲ, ಪ್ರಿಯವಾಕ್ಕು ಈ ೪ ಎಲ್ಲಾ ಅತಿಥಿಗಳ ಸೇವೆಗಾಗಿ ಗೃಹಸ್ಥರ ಮನೆಗಳಲ್ಲಿ ಇದ್ದೇ ಇರಬೇಕು. "

**" ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ॥**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥ "**

" ಯಾವಾಗಲೂ ಧೈರ್ಯದಿಂದ ಕೆಲಸಮಾಡುವಿಕೆ, ನಿಂದಾಸ್ತುತಿಗಳಲ್ಲಿ ಸಹನಶೀಲನಾಗಿರುವಿಕೆ, ಮನಸ್ಸನ್ನು ಧರ್ಮದಲ್ಲಿಯೇ ದೃಢಪಡಿಸಿರುವಿಕೆ, ಕಳ್ಳತನ ಮಾಡದಿರುವಿಕೆ, ಶುಚಿತ್ವ, ಇಂದ್ರಿಯನಿಗ್ರಹ, ಬುದ್ಧಿ ಶಕ್ತಿಯನ್ನು ವೃದ್ಧಿಪಡಿಸುವಿಕೆ, ವಿದ್ಯಾಧ್ಯಯನ, ಸತ್ಯಭಾಷಣೆ, ಕ್ರೋಧವಿಲ್ಲದಿರುವಿಕೆ, ಇವೇ ಹತ್ತು ಗುಣಗಳೂ ಧರ್ಮದ ಮುಖ್ಯ ಲಕ್ಷಣಗಳಾಗಿವೆ. "

**" ಏಕಾಕೀ ಚಿಂತಯೇನ್ನಿತ್ಯಂ ವಿವಿಕ್ತೇ ಹಿತಮಾತ್ಮನಃ ॥ ಏಕಾ**
**ಕೀ ಚಿಂತ್ಯಮಾನೋ ಹಿ ಪರಂ ಶ್ರೇಯೋಽಧಿಗಚ್ಛತಿ ॥ "**

" ನಿರ್ಜನಸ್ಥಾನದಲ್ಲಿ ಒಬ್ಬನೇ ಇದ್ದುಕೊಂಡು ಸಾರ್ವದಾ ಆತ್ಮೋನ್ನತಿಯ ಚಿಂತನೆಯನ್ನು ಮಾಡುತ್ತಿರಬೇಕು. ಒಬ್ಬನೇ ಏಕಾಂತದಲ್ಲಿದ್ದುಕೊಂಡು ಚಿಂತಿಸುತ್ತಾ ಬರುವದರಿಂದ ಪರಮ ಪುರುಷಾರ್ಥಲಾಭವನ್ನು ಪಡಿಯುತ್ತಾನೆ. "

**" ವ್ರಜಂತಿ ನ ನಿವರ್ತಂತೇ ಸ್ರೋತಾಂಸಿ ಸರಿತಾಂ ಯಥಾ ॥**
**ಆಯುರಾದಾಯ ಮರ್ತ್ಯಾನಾಂ ತಥಾ ರಾತ್ರ್ಯಹನೀ ಸದಾ ॥ "**

"ನದಿಯು ಪ್ರವಾಹವು ಹಿಂದಿರುಗಿ ಸಹಾ ನೋಡದೆ ಮುಂದೆ ಮುಂದೆ ಹೇಗೆ ಹರಿಯುತ್ತಾ ಇರುವದೋ ಹಾಗೆಯೇ ಅಹೋರಾತ್ರಿಗಳು ಮನುಷ್ಯರ ಆಯುವನ್ನು ಕಳೆದುಕೊಂಡು ಮುಂದೆ ಮುಂದೆ ಸಾಗುತ್ತಾ ಇರುವವು; ಹಿಂದಿರುಗುವದಿಲ್ಲ."

**"ಅನಿತ್ಯಂ ಯೌವನಂ ರೂಪಂ, ಜೀವಿತಂ ದ್ರವ್ಯಸಂಚಯಃ || ಐ**
**ಶ್ವರ್ಯಂಪ್ರಿಯಸಂಭಾಷೋ ಮುಹ್ಯೇತ್ತತ್ರ ನ ಪಂಡಿತಃ ||"**

"ಜೀವನಾವಸ್ಥೆ, ರೂಪು, ಪ್ರಾಯ, ಸಂಚಯ, ಸಂಪತ್ತು, ಪ್ರಿಯಾಲಾಪಗಳು ಇವೆಲ್ಲವೂ ಅನಿತ್ಯಗಳೇ! ಜ್ಞಾನೀಜನರು ಇವುಗಳಲ್ಲಿ ಮೋಹಿತರಾಗಬಾರದು."

**"ಏಕಏವ ಚರೇದ್ಧರ್ಮಂ ನ ಧರ್ಮಧ್ವಜಿಕೋ ಭವೇತ್ || ಧರ್ಮ**
**ವಾಣಿಜಕಾಹ್ಯೇತೇ ಯೋ ಧರ್ಮಮುಪಭುಂಜತೇ ||"**

"ಒಬ್ಬನಾಗಿಯೇ ಧರ್ಮವನ್ನಾಚರಿಸಬೇಕು. "ನಾನು ಧರ್ಮಿಷ್ಟ" ನೆಂದು ಝಂಡಾ ನಿಲ್ಲಿಸಿಕೊಳ್ಳುವದರಿಂದ ಜೀವಿಸಬಾರದು. ಯಾರು ಧರ್ಮದ ಆಶ್ರಯದಲ್ಲಿ ಜೀವಿಸುತ್ತಿರುವರೋ ಅವರೇ ಧರ್ಮದ ವ್ಯಾಪಾರಿಗಳು!!"

**"ಏಕಏವ ಚರೇದ್ಧರ್ಮಂ ನಾಸ್ತಿ ಧರ್ಮೇ ಸಹಾಯತಾ || ಕೇವ**
**ಲಂ ವಿಧಿಮಾಸಾದ್ಯ ಸಹಾಯಃ ಕಿಂ ಕರಿಷ್ಯತಿ?"**

"ವಿಧಿಪೂರ್ವಕವಾಗಿ ಒಬ್ಬನೇ ಧರ್ಮಾಚರಣೆಯಲ್ಲಿ ರತನಾಗಿರಬೇಕು. ಧರ್ಮಾಚರಣೆಗೆ ಪರರ ಸಹಾಯವೇನು ಬೇಕಾಗಿದೆ? ಸಹಾಯಕರೆಂಬವರು ಏನನ್ನು ಮಾಡಬಲ್ಲರು?"

**"ನ ಧರ್ಮಕಾಲಃ ಪುರುಷಸ್ಯ ನಿಶ್ಚಿತೋ |**
**ನ ಚಾಽಪಿ ಮೃತ್ಯುಃ ಪುರುಷಂ ಪ್ರತೀಕ್ಷ್ಯತೇ ||**
**ಸದಾ ಹಿ ಧರ್ಮಸ್ಯ ಕ್ರಿಯೈವ ಶೋಭನಾ |**
**ಯದಾ ನರೋ ಮೃತ್ಯುಮುಖೇಽಭಿವರ್ತತೇ ||"**

"ಮೃತ್ಯುವು ಮನುಷ್ಯನನ್ನು ಕಳೆದುಕೊಂಡು ಹೋಗುವಾಗ "ಅವನಿಗೆ ಅವಕಾಶಕಾಲವ್ಯಾವದು" ಎಂದು ನಿರೀಕ್ಷಿಸುವದಿಲ್ಲ! ಅದಕ್ಕಾಗಿ ಮನುಷ್ಯನು ಧರ್ಮಸಾಧನೆಗಾಗಿ ಕ್ಲುಪ್ತವಾದ ಸಮಯವನ್ನು ಹುಡುಕುತ್ತಿರಬಾರದು; ಮೃತ್ಯುಮುಖದಿಂದ ಕಬಳಿಸಲ್ಪಡುತ್ತಿರುವಾಗಲೂ ಸಹ ಧರ್ಮಕ್ರಿಯಾರತನಾಗಿರುವದು ಶ್ರೇಯಸ್ಕರವು. ಇದೇ ಮಾನವಜನ್ಮಕ್ಕೆ ಸಾರ್ಥಕವಾದದ್ದು!"

**ಇಂದ್ರಿಯದಮನ:—**

**"ರಥಃ ಶರೀರಂ ಪುರುಷಸ್ಯ ದೃಷ್ಟ |**
**ಮಾತ್ಮಾನಿಯಂತೇಂದ್ರಿಯಾಣ್ಯಾಹುರಶ್ವಾನ್ ||**

ತೈರಪ್ರಮತ್ತಃ ಕುಶಲೀ ಸದಶ್ವೈಃ ।
ದಾಂತೈಸ್ಸೈ ಸ್ಸುಖಂ ಯಾತಿ ರಥೀವ ಧೀರಃ ॥ "

(ಮಹಾಭಾರತ)

" ಶರೀರವನ್ನು ರಥವನ್ನಾಗಿಯೂ, ಆತ್ಮನನ್ನು ಸಾರಥಿಯನ್ನಾಗಿಯೂ ಇಂದ್ರಿಯಗಳನ್ನು ಅಶ್ವಗಳನ್ನಾಗಿಯೂ ತಿಳಿಯಬೇಕು; ವಶೀಕೃತಗಳಾದ ಉತ್ತಮಾಶ್ವಗಳ ಮೂಲಕ ನಿಪುಣನಾದ ಸಾರಥಿಯು ಹೇಗೆ ಸುಖದಿಂದ ರಥವನ್ನು ನಡಿಸುತ್ತಾ ಇರುವನೋ ಹಾಗೆಯೇ ಸಂಯತೇಂದ್ರಿಯ ವರ್ಗಗಳನ್ನುಳ್ಳ ಜ್ಞಾನಿಯಾದ ಪುರುಷನು ಸುಖವಾಗಿ ತನ್ನ ಜೀವನಯಾತ್ರೆಯನ್ನು ನೆರವೇರಿಸಿಕೊಳ್ಳುವನು. "

" ದಮಸ್ತೇಜೋ ವರ್ಧಯತಿ ಪವಿತ್ರಂ ದಮ ಉತ್ತಮಃ ॥
ವಿಪಾಪ್ಮಾ ವೃದ್ಧತೇಜಾಸ್ತು ಪುರುಷೋ ವಿಂದತೇ ಮಹತ್ ॥ "

" ಇಂದ್ರಿಯ ದಮನವು ತೇಜಸ್ಸನ್ನು ವೃದ್ಧಿಮಾಡುವದು, ಇದು ಅತ್ಯಂತ ಪವಿತ್ರವಾದದ್ದು, ಇಂದ್ರಿಯದಮನ ಮಾಡುವದರಿಂದ ಮನುಷ್ಯನು ಪಾಪಶೂನ್ಯನಾಗಿ, ಮಹಾ ತೇಜಶ್ಶಾಲಿಯಾಗಿ ಪರಮಪದವಾದ ಮೋಕ್ಷ ಪುರುಷಾರ್ಥವನ್ನು ಹೊಂದುವನು. "

" ಸಂತೋಷಂ ಪರಮಾಸ್ಥಾಯ ಸುಖಾರ್ಥೀ ಸಂಯತೋ ಭವೇತ್ ॥ ಸಂತೋಷಮೂಲಂ ಹಿ ಸುಖಂ, ದುಃಖಮೂಲಂ ವಿಪರ್ಯಯಃ ॥"

" ಸುಖಾಭಿಲಾಷಿಯು ಪರಮ ಸಂತೋಷವನ್ನವಲಂಬಿಸಿಕೊಂಡು, ಜಿತೇಂದ್ರಿಯನಾಗಿರಬೇಕು. ಯಾಕೆಂದರೆ ಸುಖಕ್ಕೆ ಸಂತೋಷವೇ ಕಾರಣವು; ಅದರ ಅಭಾವವೇ ದುಃಖಮೂಲವು. "

" ಅಚಿಂತಿತಾನಿ ದುಃಖಾನಿ ಯಥೈವಾಯಾಂತಿ ದೇಹಿನಾಮ್ ॥
ಸುಖಾನ್ಯಪಿ ತಥಾ ಮನ್ಯೇ ದೈವಮತ್ರಾತಿರಿಚ್ಯತೇ ॥ "

" ಪ್ರಯತ್ನವೇ ಇಲ್ಲದೆ ಮನುಷ್ಯನಿಗೆ ಅಕಸ್ಮಾತ್ ಹೇಗೆ ದುಃಖವೇ ಘಟಿಸುವದೋ ಹಾಗೆಯೇ ಸುಖವೂ ಅಚಿಂತಿತವಾಗಿಯೇ ಬರುವದು; ಇದಕ್ಕೂ ಮೀರಿದ್ದು ದೈವಾಯತ್ತ ವೃತ್ತಿಯು ! "

" ನ ನಿತ್ಯಂ ಲಭತೇ ದುಃಖಂ, ನ ನಿತ್ಯಂ ಲಭತೇ ಸುಖಮ್ ॥
ಶರೀರಮೇವಾಯತನಂ ದುಃಖಸ್ಯ ಚ ಸುಖಸ್ಯ ಚ ॥ "

" ನಿತ್ಯವೂ ದುಃಖವೇ ಇರುವದಿಲ್ಲ ; ಹಾಗೆಯೇ ಯಾರಿಗೂ ನಿತ್ಯವೂ ಸುಖವೇ ಇರುವದಿಲ್ಲ ; ಅವುಗಳಿಗೆ ಶರೀರವೇ ಮನೆಯು !! ಅಂಥರೆ ಮನುಷ್ಯನು ಸುಖದುಃಖ ಸಹಿಷ್ಣುವಾಗಿ ಧರ್ಮಾಚರಣೆಯಲ್ಲಿಯೇ ನಿರತನಾಗಿ ರಬೇಕು. "

" ಸುಖದುಃಖೇ ಹಿ ಪುರುಷಃ ಪರ್ಯಾಯೇಣೋಪಸೇವತೇ ॥ ನ ಹ್ಯನಂತಂ ಸುಖಂ ಕಶ್ಚಿತ್, ಪ್ರಾಪ್ನೋತಿ ಪುರುಷರ್ಷಭ ॥ "

" ಮನುಷ್ಯನು ಸುಖದುಃಖಗಳನ್ನು ಬಂದರ ಹಿಂದೆ ಬಂದರಂತೆ ಅನುಭವಿಸುತ್ತಾನೆ. ಯಾರೂ ಅನಂತವಾದ ಸುಖವನ್ನು ಪ್ರಪಂಚದಲ್ಲಿ ಪಡೆಯಲಾರರು. "

" ಸುಖಸ್ಯಾನಂತರಂ ದುಃಖಂ, ದುಃಖಸ್ಯಾನಂತರಂ ಸುಖಮ್॥ ಪರ್ಯಾಯೇಣೋಪಸೇವಂತೇ ನರಂ ನೇಮಿಮರಾ ಇವ ॥ "

" ಸುಖದನಂತರ ದುಃಖ, ದುಃಖದನಂತರ ಸುಖ, ಇವು ಚಕ್ರದ ಅರೆ (ಹಾರೇಕೋಲು) ಗಳಂತೆ ಚಕ್ರರೂಪನಾದ ಮನುಷ್ಯನಿಗೆ ಬಂದರ ಹಿಂದೆ ಬಂದು ಬಂದೊದಗುತ್ತಾ ಇರುವವು. "

" ಸುಖಮಾಪತಿತಂ ಸೇವೇತ್, ದುಃಖಮಾಪತಿತಂ ವಹೇತ್ ॥ ಕಾಲಪ್ರಾಪ್ತಮುಪಾಸೀತ ಸಸ್ಯಾನಾಮಿವ ಕರ್ಷಕಃ ॥ "

" ಕಾಲಾನುಸಾರವಾಗಿ ಬಂದೊದಗಿದ ಸುಖವನ್ನು ಭೋಗಿಸಬೇಕು, ಹಾಗೆಯೇ ಬಂದೊದಗಿದ ದುಃಖವನ್ನೂ ಸಹಿಸಬೇಕು. ಹೇಗೆ ರೈತನು ತನ್ನ ಪೈರಿನ ಸಮಯ ನಿರೀಕ್ಷಣೆ ಮಾಡುತ್ತಾ ಬಂದದ್ದನ್ನೆಲ್ಲಾ ಸಹಿಸುವನೋ ಹಾಗೆಯೇ ಮನುಷ್ಯನು ಸಮಯಕ್ಕೆ ಪ್ರಾಪ್ತವಾದದ್ದನ್ನು ಅನುಭವಿಸಲೇಬೇಕು. "

" ಸರ್ವಾಃ ಸಂಪತ್ತಯಸ್ತಸ್ಯ, ಸಂತುಷ್ಟಂ ಯಸ್ಯಮಾನಸಮ್ ॥ ಉಪಾನದ್ಗೂಢಪಾದಸ್ಯ ನನು ಚರ್ಮಾವೃತೇವ ಭೂಃ ॥ "

" ಪಾದರಕ್ಷೆಯನ್ನು ಧರಿಸಿರುವವನು ಮೆಟ್ಟಿದ ಭೂಮಿಯಲ್ಲವೂ ಚರ್ಮಾವೃತವಾಗಿರುವಂತೆ ಹೇಗೆ ತಿಳಿಯುವನೋ ಹಾಗೆಯೇ ಜಗತ್ತೆಲ್ಲವೂ ಸಂತುಷ್ಟಾಂತರಂಗನಿಗಾಗಿ ಸುಖಮಯವಾಗಿಯೇ ಇರುತ್ತದೆ. ಅಂದರೆ ಅವನು ಯಾವದನ್ನೂ ಕಾಮಿಸುವದೇ ಇಲ್ಲವೆಂದು ಭಾವವು. "

ದಾನಮಹಿಮಾ:—" ದರಿದ್ರಾನ್ಭರ ಕೌಂತೇಯ ! ಮಾ ಪ್ರಯಚ್ಛೇಶ್ವರೇಧನಮ್ ॥ " (ಭಗವದ್ಗೀತಾ)

" ಎಲೈ ಅರ್ಜುನನೇ ! ದರಿದ್ರರಿಗೆ ದಾನವಿತ್ತು ಕಾಪಾಡು ; ಧನವುಳ್ಳವರಿಗೆ ದಾನವೀಯುವದು ಸರಿಯಲ್ಲವೆಂದು ಶ್ರೀ ಕೃಷ್ಣನು ಹೇಳಿದ್ದಾನೆ. "

" ದಾತವ್ಯಮಿತಿ ಯದ್ದಾನಂ ದೀಯತೇ ಽನುಪಕಾರಿಣೇ ॥ ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ವಿಕಂ ಸ್ಮೃತಮ್ ॥ "

(ಗೀತಾ)

" ಯಾವಾಗಲೂ ನಮಗೆ ಪ್ರತ್ಯುಪಕಾರವನ್ನು ಈತನಿಂದ ಹೊಂದಬೇಕೆಂಬ ಅಪೇಕ್ಷೆಯಿಲ್ಲದೆ ಕಾಲ ದೇಶಾನುಸಾರವಾಗಿ ದಾನಕ್ಕೆ ಪಾತ್ರನೆಂದು ತಿಳಿದು ಬುದ್ಧಿ ಪೂರ್ವಕವಾಗಿ ಅದಕ್ಕೆ ಪಾತ್ರನಲ್ಲಿ ಮಾಡುವ ದಾನವು ಸಾತ್ವಿಕವೆನ್ನಲ್ಪಡುವದು. "

**" ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ || ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ || " (ಗೀತಾ)**

" ದಾನ ಪಡೆಯುವವನಿಂದ ಮತ್ತೇನಾದರೂ ಉಪಕಾರ ಹೊಂದಬೇಕೆಂಬ ಇಚ್ಛೆಯಿಂದ ಅಥವಾ ಬೇರೇ ಫಲಾಭಿಲಾಷೆಯಿಂದ ಕೊಡತಕ್ಕ ದಾನವು ರಾಜಸವಾದದ್ದು. "

**" ಅದೇಶಕಾಲೇ ಯದ್ದಾನಂ ಅಪಾತ್ರೇಭ್ಯಶ್ಚ ದೀಯತೇ || ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ || " (ಗೀತಾ)**

" ಕಾಲದೇಶ ವಿಚಾರವಿಲ್ಲದೆ, ಸನ್ಮಾನವಿಲ್ಲದೆ, ಅವಮಾನಪುರಸ್ಸರವಾಗಿ ಮಾಡುವ ದಾನವೂ ಮತ್ತು ಅಪಾತ್ರನಿಗೆ ಕೊಡುವ ದಾನವೂ ತಾಮಸಸ್ವಭಾವವುಳ್ಳದ್ದು. "

**" ನಶ್ಯಂತಿ ಹವ್ಯಕವ್ಯಾನಿ ನರಾಣಾಮವಿಜಾನತಾಮ್ || ಭಸ್ಮೀಭೂತೇಷು ವಿಪ್ರೇಷು ಮೋಹಾದ್ದತ್ತಾನಿ ದಾತೃಭಿಃ || " (ಮನು)**

" ಪಾತ್ರಾಪಾತ್ರವರಿಯದೆ, ಅಜ್ಞಾನದಿಂದ ಬ್ರಹ್ಮತೇಜೋಹೀನರಾದ, ಪಾಮರರಾದ, ಭಸ್ಮಸದೃಶರಾದ, ಅಪಾತ್ರರಲ್ಲಿ ದಾತೃಗಳು ಮಾಡುವ ದಾನವು ಶುದ್ಧ ನಿಷ್ಫಲವು ! "

**" ಯಥಾ ಪ್ಲವೇನೋಪಲೇನ, ನಿಮಜ್ಜತ್ಯುದಕೇ ತರನ್ || ತಥಾ ನಿಮಜ್ಜತೋಽಧಸ್ತಾದಜ್ಞೌ ದಾತೃ ಪ್ರತೀಚ್ಛಕೌ || " (ಮನು)**

" ಕಲ್ಲಿನ ನಾಕೆಯಲ್ಲಿ ಕುಳಿತುಕೊಂಡು ನೀರನ್ನು ದಾಟುವವನು ಮುಳುಗಿಹೋಗುವಂತೆ ಅಪಾತ್ರರಲ್ಲಿ ದಾನಮಾಡುವ ಅಜ್ಞಾನಿಯಾದ ದಾತನೂ, ಆ ಅಪಾತ್ರನಾಗಿ ದಾನವನ್ನು ಪಡೆಯುವ ಗೃಹೀತನೂ ಈ ಇಬ್ಬರೂ ಅಧೋಗತಿಯನ್ನು ಪಡೆಯುವರು. "

**" ಅಥ ಯದಾತ್ಮಾನಾಂ ದರಿದ್ರೀಕೃತ್ಯೈವ ಭಿಕ್ಷತೇ ಯ ಏನಾಸ್ಯ ಮೃತ್ಯಾ ಪಾದಸ್ತಮೇವ ತೇನ ಪರಿಕ್ರೀಣಾತಿ || "**

**(ಶತಪಥಬ್ರಾಹ್ಮಣ)**

" ಯಾವನು ತನ್ನ ಜೀವಾತ್ಮನನ್ನು ದರಿದ್ರನನ್ನಾಗಿಮಾಡಿ ನಿರ್ಲಜ್ಜಸ್ವಭಾವದಿಂದ ಭಿಕ್ಷೆಯನ್ನು ಬೇಡುತ್ತಾ, ಅದೇ ಜೀವನದಿಂದ ಜೀವಿಸುತ್ತಿರುವನೋ ಅವನನ್ನು ಪ್ರಾಣವರ್ಜಿತ ಶರೀರ (ಶವ) ವನ್ನಾಗಿ ತಿಳಿಯಬೇಕು. "

" ಉಪಾಸತೇ ಯೇ ಗೃಹಸ್ಥಾಃ ಪರಪಾಕಮಬುದ್ಧಯಃ || ತೇನ
ತೇ ಪ್ರೇತ್ಯ ಪಶುತಾಂ ವ್ರಜನ್ತ್ಯನ್ನಾದಿ ದಾಯಿನಾಮ್ || "

" ಪರಾನ್ನವನ್ನು ತಿನ್ನುವದರಿಂದಲೇ ಉದರಂಭರಣ ಮಾಡುತ್ತಾ ಇದರಿಂದಾಗುವ ಹಾನಿಯನ್ನು ತಿಳಿಯದಿರುವ ಗೃಹಸ್ಥನು ಲೋಭಬುದ್ಧಿಯಿಂದ ಕೂಡಿದವನಾಗಿ ಪರಪಿಂಡೋಪಜೀವಿಯಾಗಿ ಇರುವನಾದರೆ ಅಂತವನು ಈ ಪರಾನ್ನ ಭೋಜನ ದೋಷದಿಂದ ಮತ್ತೊಂದು ಜನ್ಮದಲ್ಲಿ ಪಶುವಾಗಿ ಹುಟ್ಟಿ ಈ ಅನ್ನದಾಯಿಯ ಮನೆಯಲ್ಲಿ ದುಡಿಯುತ್ತಾ ಇರಬೇಕಾಗುವದು " ಎಂದು ಮನುವು ಬೋಧಿಸುವನು. ಇದಕ್ಕಾಗಿ ಗೃಹಸ್ಥನು ತನಗೆ ಉಕ್ತವಾದ ಪಂಚಮಹಾ ಯಜ್ಞಗಳು, ಅತಿಥಿ ಅಭ್ಯಾಗತಸೇವೆ ಮುಂತಾದ್ದರಿಂದ ತಾನು ಪುನೀತನಾಗಬೇಕಲ್ಲದೆ, ಪರಾನ್ನ ಭೋಜನ ರುಚಿಯಾಗಿ ವರ್ತಿಸುತ್ತಿರುವದು ನಿಷಿದ್ಧವೆಂದು ಶಾಸ್ತ್ರಕಾರರ ತಾತ್ಪರ್ಯವು.

" ಯಸ್ಮಿನ್ ಜೀವತಿ ಜೀವಂತಿ ಬಹವಸ್ಸ ತು ಜೀವತು|| ಕಾಕೋ
ಽಪಿ ಕಿಂ ನ ಕುರುತೇ ಚಂಚ್ವಾ ಸ್ವೋದರಪೂರಣಮ್ || "

" ಯಾವನು ತನ್ನಮಟ್ಟಿಗೆ ಮಾತ್ರವೇ ಉದರಭರಣ ಮಾಡಿಕೊಳ್ಳದೆ ತನ್ನ ಪರಿವಾರವೆಲ್ಲವನ್ನೂ ಕಾಪಾಡುತ್ತಿರುವನೋ ಅವನ ಜೀವನವೇ ಪ್ರಶಸ್ತವಾದದ್ದು ! ಕಾಗೆಯು ತನ್ನ ಮೂತಿಯಿಂದ ತನ್ನ ಹೊಟ್ಟೆಯನ್ನು ಹೊರಿಯುವದಿಲ್ಲವೆ ? " ತಾನೊಬ್ಬನೇ ಬದುಕುವದು ನಿಂದ್ಯವಾದದ್ದು !!

" ಯಸ್ಯ ಚಾತ್ಮಾರ್ಥ ಏವಾರ್ಥಃ ಸ ಚ ನಾರ್ಥಸ್ಯಕೋವಿದಃ ||
ರಕ್ಷೇತ ಭೃಥಕೋಽರಣ್ಯೇ ಯಥಾ ಗಾಸ್ತಾದೃಶೇವ ಸಃ || "

" ಯಾವನು ತನ್ನ ಪರಿವಾರವನ್ನು ಪೋಷಿಸದೆ ತನ್ನ ದ್ರವ್ಯದಿಂದ ತಾನು ಮಾತ್ರ ಜೀವಿಸುತ್ತಿರುವನಾದರೆ ಅವನಿಗೆ ದೊರಕಿರುವ ಧನದಿಂದೇನು ಲಾಭವಾದೀತು ? ನೌಕರನಾದ ದನಾಕಾಯುವವನು ಕಂಡವರ ಮನೇದನಗಳನ್ನು ಅರಣ್ಯದಲ್ಲಿ ಕಾಯುತ್ತಿರುವಂತೆ ಇವನೂ ಧನವನ್ನು ಕಾಯುತ್ತಿದ್ದಾನೆ. "

" ದೇವತಾಽತಿಥಿ ಭೃತ್ಯಾನಾಂ ಪಿತೄಣಾಮಾತ್ಮನಶ್ಚ ಹ|| ನ
ನಿರ್ವಪ ಪಂಚಾನಾಮುಚ್ಛ್ವಸನ್ನ ಸ ಜೀವತಿ || "        (ಮನು)

" ವಿದ್ವಾಂಸರು, ಅತಿಥಿಗಳು, ಸೇವಕರು, ವೃದ್ಧರಾದ ಮಾತಾಪಿತೃಗಳು ಮುಂತಾದ ಪೋಷ್ಯವರ್ಗವನ್ನು ಪೋಷಿಸದೆ ಇರುವ ಮನುಷ್ಯನು ಶ್ವಾಸೋಚ್ಛ್ವಾಸ ಮಾಡುತ್ತಿದ್ದರೂ ಬದುಕಿರುವನಲ್ಲವೆಂದರಿಯಬೇಕು. "

" ಅಘಂ ಸ ಕೇವಲಂ ಭುಙ್ಕ್ತೇ ಯಃ ಪಚತ್ಯಾತ್ಮಕಾರಣಾತ್|| "

"ಯಾವ ಲೋಭಿಯು ತನ್ನ ಪರಿವಾರವನ್ನು ಪೋಷಿಸದೆ ತನ್ನವುಟ್ಟಗೇ ಅನ್ನವನ್ನು ಪಾಕಮಾಡಿಕೊಂಡು ಭುಜಿಸುವನೋ ಅವನು ಕೇವಲ ಪಾಪವನ್ನು ಭುಜಿಸುತ್ತಾ ಇರುವನಲ್ಲದೆ, ಅನ್ನವನ್ನು ತಿನ್ನುವದಿಲ್ಲ."

"ಧಾನ್ಯಾನಿ ಕೀರ್ಣಾನಿ ಯಥಾ ಪೃಥಿವ್ಯಾಂ ।
ಸಮ್ಮಾರ್ಜನೀ ಸಂಚಿನುತೇ ಸಮಂತಾತ್ ॥
ಲುಬ್ಧಸ್ತಥಾ ಸಂಚಿನುತೇ ಧನಾನಿ ।
ದಾತಾ ಚ ಭೋಕ್ತಾ ಚ ಪರಸ್ತು ತೇಷಾಮ್ ॥"

"ಕಣದಲ್ಲಿ ಅಲ್ಲಲ್ಲಿ ಹಾರಿಬಿದ್ದಿರುವ ಧಾನ್ಯವೆಲ್ಲವನ್ನೂ ಕಸಪೊರಕೆಯು ಕ್ಷಣಮಾತ್ರದಲ್ಲಿ ಏಕತ್ರಮಾಡಿ ರಾಶಿಯನ್ನಾಗಿ ಮಾಡಿಬಿಡುವಂತೆ ಲುಬ್ಧನೂ ಅನೇಕರಲ್ಲಿರುವ ಧನವನ್ನು ತನ್ನಲ್ಲಿ ಶೇಖರಿಸಿಕೊಳ್ಳುವನು. ಆದರೆ ಆ ರಾಶಿಯು ಧಾನ್ಯದಲ್ಲಿ ಆ ಪೊರಕೆಯು ಹೇಗೆ ಪರರಿಗೂ ದಾನಮಾಡದೆ, ತಾನೂ ತಿನ್ನಲಾರದೆ ಇರುವದೋ, ಲುಬ್ಧನೂ ಸಹ ಹಾಗೆಯೇ ತನ್ನ ಧನದಿಂದ ಪರರಿಗೆ ದಾನವನ್ನೂ ಮಾಡಲಾರನು, ತಾನೂ ಭುಜಿಸಲಾರನು."

"ಸುವಾಸಿನೀ ಕುಮಾರಾಶ್ಚ ರೋಗಿಣ್ಯಃ ಗರ್ಭಿಣೀ ಸ್ತ್ರಥಾ ॥ ಅತಿಥಿಭ್ಯೋಽಗ್ರ ಏವೈತಾನ್ ಭೋಜಯೇದವಿಚಾರಯನ್ ॥" (ಮನು)

"ಸುವಾಸಿನಿ, ಬಾಲಕರು, ರೋಗಿಷ್ಠರು, ಗರ್ಭಿಣಿಯರು ಇವರುಗಳನ್ನು ಅತಿಥಿಗಳಿಗಿಂತಲೂ ಪೂರ್ವದಲ್ಲಿಯೇ ಭೋಜನ ಮಾಡಿಸಬೇಕು."

"ಬಾಲ ಸ್ಸುವಾಸಿನೀ ವೃದ್ಧಗರ್ಭಿಣ್ಯಾತುರಕನ್ಯಕಾಃ ॥ ಸಂಭೋಜ್ಯಾತಿಥಿ ಪೂಜ್ಯಾಂಶ್ಚ ದಂಪತ್ಯೋಃ ಶೇಷ ಭೋಜನಮ್ ॥"

"ಬಾಲಕರು, ಸುವಾಸಿನಿಯರು, ವೃದ್ಧರು, ಗರ್ಭಿಣಿಯರು, ರೋಗಿಗಳು, ಕನ್ನಿಕೆಯರು, ಅತಿಥಿಗಳು, ಪೂಜ್ಯರು ಇವರುಗಳೆಲ್ಲರ ಭೋಜನವನ್ನೂ ಮಾಡಿಸಿದನಂತರವೇ ದಂಪತಿಗಳಾದ ಗೃಹಸ್ವಾಮಿಗಳು ಶೇಷಭೋಜನವನ್ನು ಮಾಡತಕ್ಕದ್ದು."

"ಅದತ್ವಾ ತು ಯ ಏತೇಭ್ಯಃ ಪೂರ್ವಂ ಭುಂಕ್ತೇ ವಿಚಕ್ಷಣಃ ॥
ಸ ಭುಂಜಾನೋ ನ ಜಾನಾತಿ ಶ್ವಗೃಧ್ರೈ ರ್ಜಗ್ಧಿಮಾತ್ಮನಃ ॥"

"ಈ ವೃದ್ಧರೂ, ಅತಿಥಿ ಅಭ್ಯಾಗತರು ಮುಂತಾದವರ್‍ಯಾರಿಗೂ ಭೋಜನ ಮಾಡಿಸದೆ ಯಜಮಾನನಾದವನು ಮೊದಲೇ ಭೋಜನ ಮಾಡಿದಲ್ಲಿ ಅವನು ಸತ್ತನಂತರ ತನ್ನ ಶರೀರವನ್ನು ನಾಯಿ ಗೃಧ್ರಗಳು ತಿನ್ನುವದನ್ನು ತಿಳಿಯಲಾರನು."

ಲೋಕದಲ್ಲಿ ಶ್ರೀಮಂತರಾದವರು ದರಿದ್ರರಿಗೆ ಉಪಕಾರ ಮಾಡದಿರುವದು ಬಹಳ ದೊಡ್ಡ ತಪ್ಪಾಗಿದೆ. ಯಾರು ಯಾವ ವಿಧವಾದ ದಾನಕ್ಕೆ ಅರ್ಹ

ರೋ ಅದನ್ನು ತಿಳಿದು ಪಾತ್ರಾಪಾತ್ರವರಿತು ದಾನಮಾಡಬೇಕು. ದಾನಗಳಲ್ಲಿ ತಿಲದಾನ, ಹತ್ತಿಯದಾನ, ಕಬ್ಬಿಣದಾನ ಮುಂತಾದ ದುರ್ದಾನಗಳೆಂದು ದಾತೃಗೆ ಈ ಭಾಗದಲ್ಲಿರುವ ಶ್ರದ್ಧೆಯನ್ನು ಹೋಗಲಾಡಿಸುವಿಕೆಯು ನ್ಯಾಯವಲ್ಲ! ಸಕಲ ದಾನಗಳಲ್ಲಿಯೂ ಉಭಯ ಸುಖವನ್ನುಂಟುಮಾಡುವ ವಿದ್ಯಾದಾನವು ಶ್ರೇಷ್ಠವಾದದ್ದು; ತಾವು ವಿದ್ಯಾವಂತರಾಗಿರದಿದ್ದರೂ, ಒಳ್ಳೇ ವಿದ್ಯಾವಂತರಾಗಿಯೂ, ಬಡವರಾಗಿಯೂ ಇರುವವರಿಗೆ ಮಾಸಿಕ ವೇತನವಿತ್ತು ಕೈಲಾದಮಟ್ಟಿಗೆ ಕೆಲವರು ಬಾಲಕರಿಗಾದರೂ ವಿದ್ಯಾದಾನ ಮಾಡಿಸುವ ಪುಣ್ಯವನ್ನು ಯಾರೂ ವರ್ಣಿಸಲಳವಲ್ಲ! ಈ ವಿದ್ಯಾದಾನದ ಶ್ರೇಷ್ಠತೆಯನ್ನು ತಿಳಿದು ಸಕಲ ಶ್ರೀಮಂತರೂ ಈ ದಾನವನ್ನು ಅನುಷ್ಠಿಸುತ್ತಿರುವ ಯೂರೋಪ್, ಅಮೇರಿಕಾ ಮುಂತಾದ ಖಂಡಗಳ ಉಚ್ಛ್ರಾಯಸ್ಥಿತಿಗೆ ಇದೇ ಕಾರಣವು! ಹಾಗಲ್ಲದೆ, ನಮ್ಮ ದೇಶೀಯರಂತೆ ದೀಪದಾನ, ಪರಮಾನ್ನದಾನ, ತಿಲದಾನಗಳೆಂದು ಮೂರು ಮೂರು ಕಾಸು ಕೊಡುತ್ತಾ ಬರುವ ದುರಭ್ಯಾಸವು ಮತ್ತಾವ ರಾಜ್ಯದಲ್ಲಿದೆ? ಇದಕ್ಕೆ ಎರಡನೇದು ಅನ್ನದಾನ, ಯಾಕೆಂದರೆ ಅನ್ನವು ಸಮಸ್ತ ಪ್ರಾಣಿಗಳಿಗೂ ಅಗತ್ಯವಾದದ್ದು. ಈ ವಿಷಯದಲ್ಲಿ ನಮ್ಮ ಶಾಸ್ತ್ರದ ಮರ್ಮವನ್ನು ತಿಳಿಸುವೆವು.

**" ದೂರಾಧ್ವೋಪಗತಂ ಶ್ರಾಂತಂ, ವೈಶ್ವದೇವಮುಪಸ್ಥಿತಮ್॥**
**ಅತಿಥಿಂ ತಂ ವಿಜಾನೀಯಾನ್ನಾತಿಥಿಃ ಪೂರ್ವಮಾಗತಃ॥ ನೈಕ**
**ಗ್ರಾಮೀಣಮತಿಥಿಂ ಸಂಗ್ರಹಣ್ಯೇತ್ಕದಾ ಚನ॥ ನಪೃಚ್ಛೇದ್ಗೋ**
**ತ್ರಚರಣಂ ನಸ್ವಾಧ್ಯಾಯಂ ಕೃತಂ ತಥಾ॥ ಹೃದಯೇ ಕಲ್ಪಯೇ**
**ದ್ದೇವಂ ಸರ್ವದೇವಮಯೋ ಹಿ ಸಃ॥ "**

"ದೂರದಿಂದ ದಾರಿನಡೆದುಕೊಂಡು ಆಯಾಸದಿಂದ ಬಳಲಿದವನಾಗಿ ಮಧ್ಯಾಹ್ನದ ಹೊತ್ತಿಗೆ ಸರಿಯಾಗಿ ಮನೆಗೆ ಬಂದವನು ಅತಿಥಿಯು; ಪೂರ್ವದಿನದಲ್ಲಿ ಬಂದಿರುವವನು ಅತಿಥಿಯಾಗಲಾರನು; ತನ್ನ ಊರಿನಲ್ಲಿ ತನ್ನಂತೆಯೇ ಮನೆ, ಕುಟುಂಬವಿರುವವನೂ ಅತಿಥಿಯಾಗಲಾರನು. ಹೀಗೆ ಬಂದಿರುವ ಅತಿಥಿಯ ಗೋತ್ರ ಸೂತ್ರಗಳನ್ನು, ವಿದ್ಯಾಭ್ಯಾಸ ಮಾಡಿರುವದು, ಇಲ್ಲದ್ದು ಮುಂತಾದ್ದನ್ನು ವಿಚಾರಿಸಬಾರದು. ಇದರಿಂದ ಭಕ್ತಿಶ್ರದ್ಧೆಗಳಿಗೆ ಕುಂದಕವಾಗುವದು. ಆ ಅತಿಥಿಯನ್ನು ಸಾಕ್ಷಾತ್ ದೇವತುಲ್ಯನನ್ನಾಗಿ ತಿಳಿದು, ಅನ್ನಾದಿಗಳಿಂದ ಸತ್ಕರಿಸಬೇಕು."

**" ನ ವೈ ಸ್ವಯಂ ತದಶ್ನೀಯಾದತಿಥಿಂ ಯನ್ನ ಭೋಜಯೇತ್॥**
**ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ವಾ ತಿಥಿಪೂಜನಮ್॥"**

**(ಮನು)**

" ಯಾವ ಉತ್ತಮ ಪದಾರ್ಥವನ್ನಾದರೂ ಅತಿಥಿಗೆ ಇಕ್ಕದೆ ತಾನು ಮಾತ್ರ ಭುಜಿಸಬಾರದು. ಹೀಗೆ ಭಕ್ತಿಯಿಂದ ಮಾಡುವ ಅತಿಥಿಸೇವೆಯಿಂದ—ಧನ, ಯಶಸ್ಸು, ಆಯು, ಸ್ವರ್ಗ ಇವು ಲಭಿಸುವವು. "

**" ಆಶಾ ಪ್ರತೀಕ್ಷೇ ಸಂಗತಗ್ಂ ಸೂನೃತಾಂ ಚೇಷ್ಟಾಪೂರ್ತೇ ಪುತ್ರಪಶೂಗ್ಂ ಶ್ಚಸರ್ವಾನ್ || ಏತದ್ವೃಙ್ಕ್ತೇ ಪುರುಷಸ್ಯಾಲ್ಪಮೇದಸೋ ಯಸ್ಯಾನಶ್ನನ್ ವಸತಿ ಬ್ರಾಹ್ಮಣೋ ಗೃಹೇ || "**
**(ಕಠೋಪನಿಷತ್)**

" ಯಾವನ ಮನೆಯಲ್ಲಿ ಅತಿಥಿಯು ಭೋಜನ ದೊರಿಯದೆ ಹೊರಡುವನೋ ಆ ಮೂಢನಾದ ಗೃಹಸ್ಥನ ಕಾಮಸಂಕಲ್ಪಗಳೂ, ಸತ್ಸಂಗತಿ ಫಲಗಳೂ, ಸತ್ಯವಾಕ್ಕು, ಯಾಗತಟಾಕಾದಿ ಸತ್ಕ್ರಿಯೆಗಳು, ಪುತ್ರಪಶುಗಳೂ ಮುಂತಾದವೆಲ್ಲವೂ ನಶಿಸುವವು. "

**ಧನಾರ್ಜನೆಯ ಅಗತ್ಯ:**—ಧನವೇ ಸಕಲ ವ್ಯವಹಾರಕ್ಕೂ ಬೀಜವಾಗಿದೆ. ಇದನ್ನು ಸಂಪಾದಿಸದೆ ಪ್ರತಿಗ್ರಹರುಚಿಯಾಗಿ ಮೈಗಳ್ಳತನದಿಂದ ಹೊಟ್ಟೆಹೊರಿಯುತ್ತಿರಬಾರದಾಗಿ ಹಿಂದೆಯೇ ಹೇಳಿದ್ದೇವೆ.

**" ಆಪದರ್ಥಂ ಧನಂ ರಕ್ಷೇತ್ ದಾರಾನ್ ರಕ್ಷೇದ್ಧನೈರಪಿ || ಆತ್ಮಾನಂ ಸತತಂ ರಕ್ಷೆದ್ದಾರೈರಪಿ ಧನೈರಪಿ || "**

" ವಿಪತ್ತು ಬಂದಾಗ ರಕ್ಷಿಸುವದಕ್ಕಾಗಿ ಧನವನ್ನು ಕೂಡಿಸಿಡಬೇಕು. ಧನದಿಂದ ಸ್ತ್ರೀಯರನ್ನು ರಕ್ಷಿಸಬೇಕು. ಧನ ಮತ್ತು ಭಾರ್ಯಾ ಇವರಿಂದ ತನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕು. "

**" ಭೂತ್ಯೈ ನ ಪ್ರಮದಿತವ್ಯಮ್ || "  (ತೈತ್ತಿರೀಯೋಪನಿಷತ್)**

" ಧನೋಪಾರ್ಜನೆಯನ್ನು ಮಾಡುವದರಲ್ಲಿ ಎಂದೆಂದಿಗೂ ಪ್ರಮಾದವನ್ನು ಮಾಡಬಾರದು. "

**" ಧನಮಾಹುಃ ಪರಂಧರ್ಮಂ, ಧನೇ ಸರ್ವಂ ಪ್ರತಿಷ್ಠಿತಮ್ || ಜೀವಂತಿ ಧನಿನೋ ಲೋಕೇ ಮೃತಾ ಯೇತ್ವಧನಾ ನರಾಃ || "**

" ಧನವನ್ನೇ ಪರಮ ಧರ್ಮಕಾರಕವೆಂದು ತಿಳಿಯುತ್ತಾರೆ. ಯಾಕೆಂದರೆ ಇದರಲ್ಲಿಯೇ ಸಕಲ ಪದಾರ್ಥಗಳೂ ವಿದ್ಯಮಾನಗಳಾಗಿರುವವು. ಯಾವನಲ್ಲಿ ಧನವಿರುವದೋ ಅವನೇ ಸಜೀವ ಪುರುಷನು ! ನಿರ್ಧನನು ಶವಸದೃಶನು. "

**" ನಹಿ ತದ್ವಿದ್ಯತೇ ಕಿಂಚಿದ್ಯದರ್ಥೇನ ನ ಸಿಧ್ಯತಿ|| ಯತ್ನೇನ ಮತಿಮಾಂಸ್ತಸ್ಮಾದರ್ಥಮೇಕಂ ಪ್ರಸಾಧಯೇತ್||" (ಪಂಚತಂತ್ರ)**

" ಲೋಕದಲ್ಲಿ ಧನದಿಂದ ದೊರಿಯಲಾರದೆಂಬ ಯಾವ ವಸ್ತುವೂ ಇಲ್ಲ; ಅದಕ್ಕಾಗಿ ಯತ್ನದಿಂದ ಧನೋಪಾರ್ಜನೆಯನ್ನು ಮಾಡಬೇಕು. "

" ಧನಮೂಲಮಿದಂ ಜಗತ್ ॥ "

" ಈ ಜಗತ್ತಿಗೆ ಧನವೇ ಆದಿಕಾರಣವು. "

" ಯಸ್ಯಾರ್ಥಾಸ್ತಸ್ಯಮಿತ್ರಾಣಿ ಯಸ್ಯಾರ್ಥಾಸ್ತಸ್ಯಬಾಂಧವಾಃ ॥
ಯಸ್ಯಾರ್ಥಾಃಸ ಪುಮಾ್ಂ ಲೋಕೇ ಯಸ್ಯಾರ್ಥಾಃಸ ಚ ಪಂಡಿ
ತಃ ॥ ಇಹಲೋಕೇ ಹಿ ಧನಿನಾಂ ಪರೋಽಪಿ ಸ್ವಜನಾಯತೇ ॥
ಸ್ವಜನೋಪಿ ದರಿದ್ರಾಣಾಂ ಸರ್ವದಾ ದುರ್ಜನಾಯತೇ ॥ "

" ಧನವಿದ್ದವನಿಗೆ ಮಿತ್ರರೂ, ಬಂಧುಗಳೂ ತಮ್ಮತಮ್ಮ ವ್ಯವಹಾರ ದಲ್ಲಿ ಅನುಕೂಲರಾಗಿರುವರು. ಧನವಿದ್ದವನೇ ಜಗತ್ತಿನಲ್ಲಿ ಪುರುಷನು ; ಅವನೇ ಪಂಡಿತನು ; ಈ ಸಂಸಾರದಲ್ಲಿ ಧನಾಢ್ಯನಿಗೆ ಶತ್ರುಗಳೂ ಮಿತ್ರರಾಗುವರು ; ಆದರೆ ದರಿದ್ರನಿಗೆ ಅವನ ಬಂಧುಗಳೂ ವೈರಿಗಳಾಗುವರು. "

" ಪೂಜ್ಯತೇ ಯದಪೂಜ್ಯೋಽಪಿ, ಯದಗಮ್ಯೋಽಪಿ ಗಮ್ಯತೇ ॥
ವಂದ್ಯತೇ ಯದವಂದ್ಯೋಽಪಿ ಸ ಪ್ರಭಾವೋ ಧನಸ್ಯ ಚ ॥ "

" ಧನದ ಪ್ರಭಾವದಿಂದ ಅಪೂಜ್ಯನೂ ಪೂಜ್ಯನಾಗುವನು, ಹೊಂದಲ ನರ್ಹನಾದ ನೀಚನೂ ಸೇವಾರ್ಹನಾಗುವನು ; ಪ್ರಣಾಮಕ್ಕೆ ಅನರ್ಹನೂ ಪ್ರಣಾಮಯೋಗ್ಯನಾಗುವನು. "

" ಯಸ್ಯಾಸ್ತಿ ವಿತ್ತಂ ಸನರಃ ಕುಲೀನಃ ।
ಸ ಪಂಡಿತಃ ಸ ಶ್ರುತವಾ್ಂ ಗುಣಜ್ಞಃ॥
ಸ ಏವ ವಕ್ತಾ ಸ ಚ ದರ್ಶನೀಯಃ ।
ಸರ್ವೇ ಗುಣಾಃ ಕಾಂಚನಮಾಶ್ರಯಂತಿ ॥ "

" ಧನವಿದ್ದವನೇ ಕುಲಶ್ರೇಷ್ಠನು, ಪಂಡಿತನು, ವಿದ್ವಾಂಸನು, ಗುಣಜ್ಞನು, ದರ್ಶನೀಯನೂ ಆಗುತ್ತಾನೆ. ಅಂದರೆ ಈ ಗುಣಗಳೆಲ್ಲವೂ ಧನವನ್ನಾಶ್ರೈಸುತ್ತಿರುವವು. "

" ಬುಭುಕ್ಷಿತೈರ್ವ್ಯಾಕರಣಂ ನ ಭುಜ್ಯತೇ ।
ಪಿಪಾಸಿತೈಃ ಕಾವ್ಯರಸೋ ನ ಪೀಯತೇ ॥
ನ ಛಂದಸಾ ಕ್ವಾಽಪಿ ಸಮುದ್ಧೃತಂ ಕುಲಮ್ ।
ಹಿರಣ್ಯಮೇವಾರ್ಜಯ ನಿಷ್ಫಲಾಗುಣಾಃ ॥ "

" ಮನುಷ್ಯನಿಗೆ ಹಸಿವಾದರೆ ವ್ಯಾಕರಣ ಶಾಸ್ತ್ರವನ್ನು ತಿನ್ನಲಾಗುವದಿಲ್ಲ ; ಬಾಯಾರಿದರೆ ಕಾವ್ಯರಸದಿಂದ ತೃಷೆಯಡಗದು ! ಛಂದೋಗ್ರಂಥವು

ಯಾವ ಕುಲವನ್ನೂ ಉದ್ಧಾರ ಮಾಡಲಿಲ್ಲ ; ಇದಕ್ಕಾಗಿ ಧನವನ್ನು ಸಂಪಾ ಸುವದುತ್ತಮವು. "

" ಶೀಲಂ ಶೌಚಂ ಕ್ಷಾಂತಿಃ |
ದಾಕ್ಷಿಣ್ಯಂ ಮಧುರತಾ ಕುಲೇ ಜನ್ಮ ||
ನ ವಿರಾಜಂತಿ ಹಿ ಸರ್ವೇ |
ವಿತ್ತಹೀನಸ್ಯ ಪುರುಷಸ್ಯ || "

" ಶೀಲ, ಶುಚಿತ್ವ, ಶಾಂತಿ, ಚಾತುರ್ಯ, ಮಧುರತಾ, ಕುಲೀನತಾ ಈ ಎಲ್ಲಾ ಗುಣಗಳೂ ಧನಹೀನನಲ್ಲಿದ್ದರೆ ಶೋಭೆಗೆ ಪಾತ್ರಗಳಾಗಲಾರವು. "

" ನಶ್ಯತಿ ವಿಪುಲಮತೇರಪಿ |
ಬುದ್ಧಿಃ ಪುರುಷಸ್ಯ ಮಂದವಿಭವಸ್ಯ ||
ಘೃತ ಲವಣ ತೈಲ ತಂಡುಲ |
ವಸ್ತ್ರೇಂಧನ ಚಿಂತಯಾ ಸತತಮ್ || "

" ಧನಹೀನನು ಮಹಾ ವಿದ್ವಾಂಸನಾದರೂ ತುಪ್ಪ, ತೈಲ, ಲವಣ, ಅಕ್ಕಿ, ವಸ್ತ್ರ, ಕಟ್ಟಿಗೆ ಮುಂತಾದ ಚಿಂತೆಯು ಸದಾ ಪೀಡಿಸುತ್ತಿರುವದರಿಂದ ಅವನ ಬುದ್ಧಿಯು ನಷ್ಟವಾಗುತ್ತಿರುವದು. "

" ನಾತ್ಮಾನಮವಮನ್ಯೇತ ಪೂರ್ವಾಭಿರಸಮೃದ್ಧಿಭಿಃ || ಆಮೃ
ತ್ಯೋಃ ಶ್ರೀಯಮನ್ವಿಚ್ಛೇನ್ನೈನಾಂ ಮನ್ಯೇತ ದುರ್ಲಭಾಮ್ ||"
(ಮನು)

" ಪೈತೃಕ ನಿರ್ಧನತೆಯ ಕಾರಣದಿಂದ ತನ್ನನ್ನು ತಾನೇ ಅನಾಥ, ದರಿದ್ರನೆಂದು ತಿಳಿದುಕೊಂಡು ಹತೋತ್ಸಾಹನಾಗಬಾರದು ; ಮರಣಪರ್ಯಂತವೂ ಧನವನ್ನೇ ಇಚ್ಛಿಸುತ್ತಾ, ಅದರ ಪ್ರಯತ್ನಗಳನ್ನು ಮಾಡುತ್ತಾ ಧನಸಂಚಯವನ್ನು ಮಾಡಲೇಬೇಕು. "

" ಅದೀನಾಸ್ಯಾಮ ಶರದಃ ಶತಮ್ " (ಯಜುರ್ವೇದ)

" ನಾವು ಶತವರ್ಷಕಾಲ ಬದುಕಿದ್ದರೂ ದರಿದ್ರರಾಗಿ ಇರಬಾರದು, ಏನಾದರೊಂದು ಮಾರ್ಗದಿಂದ ಧನವನ್ನು ದುಡಿಯಲೇಬೇಕು. "

" ಉದ್ಯಮೇನ ಹಿ ಸಿಧ್ಯಂತಿ ಕಾರ್ಯಾಣಿ ನ ಮನೋರಥೈಃ || ನಹಿ
ಸಿಂಹಸ್ಯ ಸುಪ್ತಸ್ಯ ಪ್ರವಿಶಂತಿ ಮುಖೇ ಮೃಗಾಃ || " (ಪಂಚತಂತ್ರ)

" ಮನುಷ್ಯರು ಧನೋಪಾರ್ಜನೆಗಾಗಿ ಉದ್ಯೋಗಗಳೇನ್ನಾದರೂ ನಡಿಸಬೇಕಲ್ಲದೆ, ಕೇವಲ ಮನೋರಥಗಳಿಂದಲೇ ಧನವು ದೊರಿಯಲಾರದು. ಮಲಗಿರುವ ಸಿಂಹದ ಮುಖದಲ್ಲಿಯೇ ಮೃಗಗಳು ತಮ್ಮಷ್ಟಕ್ಕೇ ಬಂದು ಬೀಳುವದಿಲ್ಲ. "

☞ ನಮ್ಮ ದೇಶದ ಅನೇಕರು—

“ ನಮ್ಮ ಪ್ರಯತ್ನವ್ಯಾತಕ್ಕೆ ? ಭಾಗ್ಯಕಾಲ ಒದಗಿತೆಂದರೆ ತನ್ನಷ್ಟಕ್ಕೆ ತಾನೇ ಧನವು ಶಿಗುವದು ” ಎಂದು ಪ್ರಾರಬ್ಧ, ಅದೃಷ್ಟ, ಹಣೇಬರಹವೆಂದು ಮುಂತಾದ ನಿರರ್ಥಕ ಸಿದ್ಧಾಂತಗಳನ್ನು ನಂಬಿದ್ದಾರೆ. ಇದು ಯುಕ್ತವಲ್ಲ ; ಇದೇ ವಿಷಯದಲ್ಲಿ ಪಂಚತಂತ್ರವು ;—

“ ಪಶ್ಯ ಕರ್ಮವಶಾತ್ಪ್ರಾಪ್ತಂ ಭೋಜ್ಯಕಾಲೇಽಪಿ ಭೋಜನಮ್ ||
ಹಸ್ತೋದ್ಯಮಂ ವಿನಾ ವಕ್ತ್ರೇ ಪ್ರವಿಶೇನ್ನ ಕದಾಚನ || ”

“ ಭಾಗ್ಯವಶದಿಂದ ಭೋಜನಕಾಲಕ್ಕೆ ಸರಿಯಾಗಿ ಭೋಜನವು ಎಲ್ಲಾದರೂ ಶಿಕ್ಕಿದರೂ ಶಿಕ್ಕಬಹುದು ; ಆದರೆ ಹಸ್ತಪ್ರಯತ್ನದಿಂದ ವ್ಯಂಜನಾದಿಗಳೊಡನೆ ಅನ್ನವನ್ನು ಕಲೆಸಿ, ತುತ್ತುಮಾಡಿ, ಬಾಯಲ್ಲಿ ಹಾಕಿಕೊಳ್ಳುವದಾದರೂ ನಮ್ಮ ಯತ್ನವಾಯಿತಷ್ಟೆ ? ಇಂತಾದ್ದರಲ್ಲಿ ಪ್ರಯತ್ನವೇ ಬೇಡವೆಂಬ ಮಾತು ನಿರರ್ಥಕವಾದದ್ದು !! ”

“ ಯಲ್ಲಭಸೇ ನಿಜಕರ್ಮೋಪಾತ್ತಂ ವಿತ್ತಂ ತೇನ ವಿನೋದಯ ಚಿತ್ತಂ || ” (ಶಂಕರಾಚಾರ್ಯರವರು)

“ ಸ್ವಂತ ಕರ್ಮಾರ್ಜಿತ ದ್ರವ್ಯವೆಷ್ಟೋ ಅಷ್ಟರಲ್ಲಿಯೇ ಸಂತುಷ್ಟಿಯನ್ನು ಪಡಿ ; ದುರಾಶೆಯನ್ನು ಮಾಡಬೇಡ. ”

“ ಮಾಗೃಧಃ ಕಸ್ಯಚಿದ್ಧನಮ್ || ” (ಯಜುರ್ವೇದ)

“ ಎಲೈ ಮಾನವರಿರಾ ! ಇತರರ ಧನವನ್ನಪಹರಿಸುವ ಆಶೆಯನ್ನು ಸರ್ವಥಾ ಮಾಡಬೇಡಿರಿ. ”

“ ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ || ” (ಯಜುಃ)

“ ನಿಮ್ಮ ಪ್ರಯತ್ನಗಳಿಂದ ಉಪಾರ್ಜನೆಯನ್ನು ಮಾಡಿಕೊಂಡು ಅವುಗಳಿಂದಲೇ ಜೀವಿಸುವ ಇಚ್ಛೆಯನ್ನು ಮಾಡಿರಿ. ”

“ ಸಿಂಹಾಃ ಸತ್ಪುರುಷಾಶ್ಚೈವ ನಿಜದರ್ಪೋಪಜೀವಿನಃ || ಪರಾಶ್ರಯೇಣ ಜೀವಂತಿ ಕಾತರಾಃ ಶಿಶವಃ ಸ್ತ್ರೀಯಃ || ”

“ ಸಿಂಹ ಮತ್ತು ಸತ್ಪುರುಷರು ತಮ್ಮತಮ್ಮ ಗೌರವ ಪ್ರಯತ್ನಗಳಿಂದಲೇ ಜೀವಿಸುವರು ; ಆದರೆ ಕಾತುರರು, ಎಳೇ ಮಕ್ಕಳಂತೆಯೂ, ಸ್ತ್ರೀಯರಂತೆಯೂ ಪರಾಶ್ರಯದಿಂದ ಜೀವಿಸುವದಕ್ಕೆ ಯತ್ನಿಸುವರು. ” ಇದಕ್ಕಾಗಿ ಮನುಷ್ಯನು ಸ್ವಪ್ರಯತ್ನದಿಂದಲೇ ಜೀವಿಸುತ್ತಾ ಗೌರವದಿಂದ ಬದುಕಬೇಕಲ್ಲದೆ, ಪರಪಿಂಡೋಪಜೀವಿಯಾಗಿಯೂ, ಸೋಮಾರಿಯಾಗಿಯೂ ಇರಬಾರದು.

ಇಂತು ದಾಂಪತ್ಯ ಸುಖವೆಂಬ ಹದಿಮೂರನೇ ಆಶಯವು.



## ಹದಿನಾಲ್ಕನೆಯ ಆಶಯವು.

# ವಾಜೀಕರಣವೆಂಬ ಧಾತುವೃದ್ಧ್ಯೌಷಧಿಗಳು

**" ಯೇನ ನಾರಿಷು ಸಾಮರ್ಥ್ಯಂ ವಾಜೀವಲ್ಲಭತೇ ನರಃ ॥ ವ್ರ ಜೇಚ್ಚಾಭ್ಯಧಿಕಂ ಯೇನ ವಾಜೀಕರಣಮೇವತತ್ ॥ "** (ಚರಕ)

" ಯಾವ ಔಷಧ ಸೇವನೆಯಿಂದ ಪುರುಷನು ಕುದುರೆಯಂತೆ ಅತ್ಯುತ್ಕಟವಾದ ಕಾಮಶಕ್ತಿಯನ್ನು ಪಡೆದು ಸ್ತ್ರೀಯಲ್ಲಿ ರಮಿಸುವನೋ, ಹಾಗೆಯೇ ಪದೇಪದೇ ರತಿಯನ್ನು ಮಾಡುವ ಶಕ್ತಿಯನ್ನು ಪಡೆಯುವನೋ ಆ ಸರ್ವೋತ್ತಮವಾದ ಔಷಧವೇ ವಾಜೀಕರಣೌಷಧವು. "

**" ಯದ್ದ್ರವ್ಯಂ ಪುರುಷಂ ಕುರ್ಯಾದ್ವಾಜೀವ ಸುರತಕ್ಷಮಮ್ ॥ ತದ್ವಾಜೀಕರಮಾಖ್ಯಾತಂ ಮುನಿಭಿರ್ಭಿಷಜ್ವರೈಃ ॥ "**

" ಯಾವ ದ್ರವ್ಯಗಳ ಸಂಯೋಗವು ಪುರುಷ (ಯೌವನಸ್ಥ) ನಿಗೆ ವಾಜಿಯಂತಹ (ರತಿಮಾಡುವ) ಶಕ್ತಿಯನ್ನುಂಟು ಮಾಡುವದೋ ಅದಕ್ಕೇನೇ ವಾಜೀಕರಣೌಷಧಗಳೆಂದು ಹೆಸರು. " ಅಂದರೆ ಈ ಔಷಧಗಳು ಕೇವಲ ವೀರ್ಯವಾಹಿನೀ ನರಗಳಮೇಲೆಯೇ ತಮ್ಮ ಸಾಮರ್ಥ್ಯವನ್ನು ತೋರಿಸಿ ವೀರ್ಯಕೋಶ ಸಂಬಂಧ ವ್ಯಾಪಾರವನ್ನೇ ಹೆಚ್ಚಿಸುವವು. ಇದಕ್ಕಾಗಿ ಇವಕ್ಕೆ ವಾಜೀಕರಣಗಳೆಂದು ಹೇಳುತ್ತಾರ.

## ವಾಜೀಕರಣೌಷಧಿಗಳು.

### ಮಾಷಾದಿ ಉತ್ಕರಿಕಾ (ಪೂರೀ)

**" ತಿಲ ಮಾಷವಿದಾರೀಣಾಂ ಶಾಲೀನಾಂ ಚೂರ್ಣಮೇವ ವಾ ॥**
**ಪೌಂಡ್ರಕೇಕ್ಷುರಸೇನಾರ್ದ್ರಂ ಮರ್ದಿತಂ ಸೈಂಧವಾನ್ವಿತಮ್ ॥**
**ವರಾಹಮೇಧಸಾ ಯುಕ್ತಾಂ ಘೃತೇನೋತ್ಕಾರಿಕಾಂ ಪಚೇತ್ ॥**
**ತಾಂ ಭಕ್ಷಯಿತ್ವಾ ಪುರುಷೋ ಗಚ್ಛೇತ್ತು ಪ್ರಮದಾಶತಮ್ ॥**

" ಎಳ್ಳು, ಉದ್ದಿನಬೇಳೆ, ನೆಲಗುಂಬಳ, ಕೆಂಪು ಅಕ್ಕಿಯಹಿಟ್ಟು ಇವುಗಳನ್ನು ಶೇರಿಸಿ ಕೆಂಪುಕಬ್ಬಿನ ರಸದಿಂದ ಕಲಿಸಿ, ಮೃದುವಾಗುವಂತೆ ಮರ್ದಿಸುತ್ತಾ ಬರುವದು. ಮೊದಲೇ ಇದಕ್ಕೆ ತಕ್ಕಷ್ಟು ಸೈಂಧವಲವಣದ ಚೂರ್ಣವನ್ನೂ ಬೆರಸಿರಬೇಕು. ಅನಂತರ ಇದನ್ನು ಕಾಡುಹಂದಿಯ ಕೊಬ್ಬಿನಿಂದ ಚನ್ನಾಗಿ ಸಾಟೀಕೊಟ್ಟು ಪೂರಿಗಳನ್ನು ಮಾಡಿ, ತುಪ್ಪದಲ್ಲಿ ಕರಿಯುವದು. ಈ ಪೂರೀಗಳನ್ನು ದಿನಂಪ್ರತಿ ೨ ಹೊತ್ತೂ ಮಿತವಾಗಿ

ಸೇವಿಸುತ್ತಾ (ಅನಂತರ ಹಾಲು ಸಕ್ಕರೆ ಬೆಚ್ಚಗೆಮಾಡಿದ್ದನ್ನು ಪಾನಮಾಡುತ್ತಾ ಮಧುರಾಹಾರವನ್ನು ಭುಜಿಸುತ್ತಾ ಹಾಸಿಗೆಪಥ್ಯದಲ್ಲಿರಲು) ೪೦ ದಿನ ಈ ಪೂರಿಯ ಸೇವನೆಯಿಂದ ನೂರಾರು ಸ್ತ್ರೀಯರನ್ನು ಭೋಗಿಸುವಂತಹ ವೀರ್ಯ ಬಲವುಂಟಾಗುವದು." ☞ ಇಲ್ಲಿ ಹೇಳಿದ ಹಾಲು ಮುಂತಾದ ಪೌಷ್ಟಿಕ ಪದಾರ್ಥದ ಅನುಪಾನವೂ, ಪಥ್ಯವೂ, ಹಾಸಿಗೇ ಪಥ್ಯಕ್ರಮವೂ ಶಾಸ್ತ್ರಗಳಲ್ಲಿ ಅಲ್ಲಲ್ಲಿ ಉಕ್ತವಾಗಿರುವದಿಲ್ಲ ; ಒಂದೇಕಡೆ ಹೇಳಲ್ಪಟ್ಟಿದೆ. ಅದಕ್ಕಾಗಿ ಎಲ್ಲಾ ಕಡೆಯಲ್ಲಿಯೂ ಪೌಷ್ಟಿಕಾಹಾರ ಸೇವನೆಯೂ, ಅತಿಯಾದ ಹುಳಿ,ಕಾರ ಮುಂತಾದ ವಸ್ತುಗಳೂ, ವೀರ್ಯನಾಶಕಗಳಾದ ದುಷ್ಟಪದಾರ್ಥಗಳೂ ಇವುಗಳನ್ನು ಬಿಡುವಿಕೆ, ಹಾಗೂ ವೀರ್ಯವೃದ್ಧಿಯಾಗುವವರೆಗೆ ಸ್ತ್ರೀಸಂಗವನ್ನು ಮಾಡದಿರುವಿಕೆ ಇವನ್ನು ಆಚರಿಸುತ್ತಾ ಬರಬೇಕೆಂಬುದನ್ನು ಎಲ್ಲಾ ವಾಜೀಕರಣೌಷಧಗಳಲ್ಲಿಯೂ ತಿಳಿಯಬೇಕು.

ಪಾಯಸಃ—" ಶರ್ಕರಾಯಾಸ್ತುಲೈಕಾ ಸ್ಯಾದೇಕಾ ಗವ್ಯಸ್ಯ ಸರ್ಪಿಷಃ || ಪ್ರಸ್ಥಂ ವಿದಾರ್ಯಾ ಚೂರ್ಣಸ್ಯ ಪಿಪ್ಪಲ್ಯಾಃ ಪ್ರಸ್ಥ ಏವ ಚ || ಅರ್ಧಾಢಕಂ ತುಗಾಕ್ಷೀರ್ಯಾಃ ಕ್ಷೌದ್ರಸ್ಯಾಭಿನವಸ್ಯ ಚ || ತತ್ಸರ್ವಂ ಮಿಶ್ರಿತಂ ತಿಷ್ಠೇನ್ಮಾರ್ತಿಕೇ ಘೃತ ಭಾಜನೇ || ಮಾತ್ರಾದಗ್ನಿಸಮಾಂ ತಸ್ಯ ಪ್ರಾತಃ ಪ್ರಾತಃ ಪ್ರಯೋಜಯೇತ್|| ಏಷ ವೃಷ್ಯಃ ಪರಂ ಯೋಗಃ ಕಂಠೋ ಬೃಂಹಣ ಏವ ಚ || "

" ಸಕ್ಕರೆ ೪೦೦ ತೊಲೆ, ಗೋವಿನ ಶುದ್ಧವಾದ ಘೃತ ೬೪ ತೊಲೆ, ನೆಲಗುಂಬಳಗೆಡ್ಡೆ ೬೪ ತೊಲೆ, ಹಿಪ್ಪಲಿಯಚೂರ್ಣ ೬೪ ತೊಲೆ, ಬಿದರುಪ್ಪಿನಚೂರ್ಣ ೧೨೮ ತೊಲೆ, ಹಾಗೆಯೇ ನವೀನವಾದ ಜೇನುತುಪ್ಪ ೧೨೮ ತೊಲೆ, ಎಲ್ಲವನ್ನೂ ಕೂಡಿಸಿ ಘೃತ್ಸ್ನಿಗ್ಧ ಮಣ್ಣಿನ ಪಾತ್ರೆಯಲ್ಲಿಟ್ಟು ಕಲಸಿ, ಬಾಯಿ ಮುಚ್ಚಿಡುವದು. ಜಠರಾಗ್ನಿಯ ಬಲವನ್ನು ನೋಡಿಕೊಂಡು ಪ್ರತಿದಿನವೂ ಪ್ರಾತಃಕಾಲ ಒಂದೊಂದು ತೊಲೆಯಂತೆ ಸೇವಿಸುತ್ತಾ ಪಥ್ಯದಿಂದ ಇದ್ದರೆ ಮಂಡಲಕಾಲದಲ್ಲಿ ಪರಮವೃಷ್ಯವನ್ನುಂಟು ಮಾಡುವದು. ಈ ಪಾಯಸವು ಕಂಠರೋಗವನ್ನೂ ನಾಶಮಾಡಿ ವೀರ್ಯವನ್ನೂ, ರಸರಕ್ತಾದಿ ಧಾತುಗಳ ವೃದ್ಧಿಯನ್ನೂ ಉಂಟುಮಾಡಿ, ತೇಜಸ್ಸನ್ನುಂಟು ಮಾಡುತ್ತದೆ. "

ಅಶ್ವಗಂಧಾದಿಚೂರ್ಣ:— ಲವಂಗ ೧ ವರಹಾತೂಕ, ನಾಗಕೇಸರ ೨ ವರಹಾತೂಕ, ಯಾಲಕ್ಕಿ ೪ ವರಹಾತೂಕ, ಮೆಣಸು ೮ ವರಹಾತೂಕ, ಹಿಪ್ಪಲಿ ೧೬ ವರಹಾತೂಕ, ಶುಂಠಿ ೩೨ ವರಹಾತೂಕ, ಅಶ್ವಗಂಧಿ ೬೪ ವರಹಾತೂಕ ಈ ದಿನಸುಗಳನ್ನು ಚೂರ್ಣಿಸಿ ವಸ್ತ್ರಗಾಳಿತಮಾಡಿ ದಿನಂಪ್ರತಿ ೨ ಹೊತ್ತು, ಹೊತ್ತಿಗೆ ಅರ್ಧತೊಲಾ ಚೂರ್ಣ, ಅರ್ಧತೊಲಾ ಸಕ್ಕರೆ ಬೆರಸಿ ತುಪ್ಪ

## ಹದಿನಾಲ್ಕನೆಯ ಆಶಯವು.

# ವಾಜೀಕರಣವೆಂಬ ಧಾತುವೃದ್ಧ್ಯೌಷಧಿಗಳು.

**"ಯೇನ ನಾರಿಷು ಸಾಮರ್ಥ್ಯಂ ವಾಜೀವಲ್ಲಭತೇ ನರಃ ॥ ವೃಜೇಚ್ಚಾಭ್ಯಧಿಕಂ ಯೇನ ವಾಜೀಕರಣಮೇವತತ್ ॥"** **(ಚರಕ)**

"ಯಾವ ಔಷಧ ಸೇವನೆಯಿಂದ ಪುರುಷನು ಕುದುರೆಯಂತೆ ಅತ್ಯುತ್ಕಟವಾದ ಕಾಮಶಕ್ತಿಯನ್ನು ಪಡೆದು ಸ್ತ್ರೀಯಲ್ಲಿ ರಮಿಸುವನೋ, ಹಾಗೆಯೇ ಪದೇಪದೇ ರತಿಯನ್ನು ಮಾಡುವ ಶಕ್ತಿಯನ್ನು ಪಡೆಯುವನೋ ಆ ಸರ್ವೋತ್ತಮವಾದ ಔಷಧವೇ ವಾಜೀಕರಣೌಷಧವು."

**"ಯದ್ದ್ರವ್ಯಂ ಪುರುಷಂ ಕುರ್ಯಾದ್ವಾಜೀವ ಸುರತಕ್ಷಮಮ್ ॥**
**ತದ್ವಾಜೀಕರಮಾಖ್ಯಾತಂ ಮುನಿಭಿರ್ಭಿಷಜ್ಯೈರ್ವರೈಃ ॥"**

"ಯಾವ ದ್ರವ್ಯಗಳ ಸಂಯೋಗವು ಪುರುಷ (ಯೌವನಸ್ಥ) ನಿಗೆ ವಾಜಿಯಂತಹ (ರತಿಮಾಡುವ) ಶಕ್ತಿಯನ್ನುಂಟು ಮಾಡುವದೋ ಅದಕ್ಕೇನೇ ವಾಜೀಕರಣೌಷಧಗಳೆಂದು ಹೆಸರು." ಅಂದರೆ ಈ ಔಷಧಗಳು ಕೇವಲ ವೀರ್ಯವಾಹಿನೀ ನರಗಳಮೇಲೆಯೇ ತಮ್ಮ ಸಾಮರ್ಥ್ಯವನ್ನು ತೋರಿಸಿ ವೀರ್ಯಕೋಶ ಸಂಬಂಧ ವ್ಯಾಪಾರವನ್ನೇ ಹೆಚ್ಚಿಸುವವು. ಇದಕ್ಕಾಗಿ ಇವಕ್ಕೆ ವಾಜೀಕರಣಗಳೆಂದು ಹೇಳುತ್ತಾರ.

## ವಾಜೀಕರಣೌಷಧಿಗಳು.

### ಮಾಷಾದಿ ಉತ್ಕರಿಕಾ (ಪೂರೀ)

**"ತಿಲ ಮಾಷವಿದಾರೀಣಾಂ ಶಾಲೀನಾಂ ಚೂರ್ಣಮೇವ ವಾ ॥**
**ಪೌಂಡ್ರಕೇಕ್ಷು ರಸೇನಾರ್ದ್ರಂ ಮರ್ದಿತಂ ಸೈಂಧವಾನ್ವಿತಮ್ ॥**
**ವರಾಹಮೇಧಸಾ ಯುಕ್ತಾಂ ಘೃತೇನೋತ್ಕಾರಿಕಾಂ ಪಚೇತ್ ॥**
**ತಾಂ ಭಕ್ಷಯಿತ್ವಾ ಪುರುಷೋ ಗಚ್ಛೇತ್ತು ಪ್ರಮದಾಶತಮ್ ॥**

"ಯಳ್ಳು, ಉದ್ದಿನಬೇಳೆ, ನೆಲಗುಂಬಳ, ಕೆಂಪು ಅಕ್ಕಿಯಹಿಟ್ಟು ಇವುಗಳನ್ನು ಶೇರಿಸಿ ಕೆಂಪುಕಬ್ಬಿನ ರಸದಿಂದ ಕಲಿಸಿ, ಮೃದುವಾಗುವಂತೆ ಮರ್ದಿಸುತ್ತಾ ಬರುವದು. ಮೊದಲೇ ಇದಕ್ಕೆ ತಕ್ಕಷ್ಟು ಸೈಂಧವಲವಣದ ಚೂರ್ಣವನ್ನೂ ಬೆರಸಿರಬೇಕು. ಅನಂತರ ಇದನ್ನು ಕಾಡುಹಂದಿಯ ಕೊಬ್ಬಿನಿಂದ ಚನ್ನಾಗಿ ನಾಟೀಕೊಟ್ಟು ಪೂರಿಗಳನ್ನು ಮಾಡಿ, ತುಪ್ಪದಲ್ಲಿ ಕರಿಯುವದು. ಈ ಪೂರೀಗಳನ್ನು ದಿನಂಪ್ರತಿ ೨ ಹೊತ್ತೂ ಮಿತವಾಗಿ

ಸೇವಿಸುತ್ತಾ (ಅನಂತರ ಹಾಲು ಸಕ್ಕರೆ ಬೆಶಿಮಾಡಿದ್ದನ್ನು ಪಾನಮಾಡುತ್ತಾ ಮಧುರಾಹಾರವನ್ನು ಭುಜಿಸುತ್ತಾ ಹಾಸಿಗೆಪಥ್ಯದಲ್ಲಿರಲು) ೪೦ ದಿನ ಈ ಪ್ರಯೋಗದ ಸೇವನೆಯಿಂದ ನೂರಾರು ಸ್ತ್ರೀಯರನ್ನು ಭೋಗಿಸುವಂತಹ ವೀರ್ಯ ಬಲವುಂಟಾಗುವದು.'' ☞ ಇಲ್ಲಿ ಹೇಳಿದ ಹಾಲು ಮುಂತಾದ ಪೌಷ್ಟಿಕ ಪದಾರ್ಥದ ಅನುಪಾನವೂ, ಪಥ್ಯವೂ, ಹಾಸಿಗೇ ಪಥ್ಯಕ್ರಮವೂ ಶಾಸ್ತ್ರಗಳಲ್ಲಿ ಅಲ್ಲಲ್ಲಿ ಉಕ್ತವಾಗಿರುವದಿಲ್ಲ ; ಒಂದೇಕಡೆ ಹೇಳಲ್ಪಟ್ಟಿದೆ. ಅದಕ್ಕಾಗಿ ಎಲ್ಲಾ ಕಡೆಯಲ್ಲಿಯೂ ಪೌಷ್ಟಿಕಾಹಾರ ಸೇವನೆಯೂ, ಅತಿಯಾದ ಹುಳಿ,ಕಾರ ಮುಂತಾದ ವಸ್ತುಗಳೂ, ವೀರ್ಯನಾಶಕಗಳಾದ ದುಷ್ಟಪದಾರ್ಥಗಳೂ ಇವುಗಳನ್ನು ಬಿಡುವಿಕೆ, ಹಾಗೂ ವೀರ್ಯವೃದ್ಧಿಯಾಗುವವರೆಗೆ ಸ್ತ್ರೀಸಂಗವನ್ನು ಮಾಡದಿರುವಿಕೆ ಇವನ್ನು ಆಚರಿಸುತ್ತಾ ಬರಬೇಕೆಂಬುದನ್ನು ಎಲ್ಲಾ ವಾಜೀಕರಣೌಷಧಗಳಲ್ಲಿಯೂ ತಿಳಿಯಬೇಕು.

**ಪಾಯಸ:—**" ಶರ್ಕರಾಯಾಸ್ತುಲೈಕಾ ಸ್ಯಾದೇಕಾ ಗವ್ಯಸ್ಯ ಸರ್ಪಿಷಃ ॥ ಪ್ರಸ್ಥಂ ವಿದಾರ್ಯಾ ಚೂರ್ಣಸ್ಯ ಪಿಪ್ಪಲ್ಯಾಃ ಪ್ರಸ್ಥ ಏವ ಚ ॥ ಅರ್ಧಾಢಕಂ ತುಗಾಕ್ಷೀರ್ಯಾಃ ಕ್ಷೌದ್ರಸ್ಯಾಭಿನವಸ್ಯ ಚ ॥ ತತ್ಸರ್ವಂ ಮಿಶ್ರಿತಂ ತಿಷ್ಠೇನ್ಮಾರ್ತಿಕೇ ಘೃತ ಭಾಜನೇ ॥ ಮಾತ್ರಾಮಗ್ನಿಸಮಾಂ ತಸ್ಯ ಪ್ರಾತಃ ಪ್ರಾತಃ ಪ್ರಯೋಜಯೇತ್॥ ಏಷ ವೃಷ್ಯಃ ಪರಂ ಯೋಗಃ ಕಂಠರೋ ಬೃಂಹಣ ಏವ ಚ ॥ "

" ಸಕ್ಕರೆ ೪೦೦ ತೊಲೆ, ಗೋವಿನ ಶುದ್ಧವಾದ ಘೃತ ೬೪ ತೊಲೆ, ನೆಲಗುಂಬಳಗೆಡ್ಡೆ ೬೪ ತೊಲೆ, ಹಿಪ್ಪಲಿಯುಚೂರ್ಣ ೬೪ ತೊಲೆ, ಬಿದರುಪ್ಪಿನಚೂರ್ಣ ೧೨೮ ತೊಲೆ, ಹಾಗೆಯೇ ನವೀನವಾದ ಜೇನುತುಪ್ಪ ೧೨೮ ತೊಲೆ, ಎಲ್ಲವನ್ನೂ ಕೂಡಿಸಿ ಮಣ್ಣಿನ ಜಿಡ್ಡುಳ್ಳ ಪಾತ್ರೆಯಲ್ಲಿಟ್ಟು ಕಲಸಿ, ಬಾಯಿ ಮುಚ್ಚಿಡುವದು. ಜಠರಾಗ್ನಿಯ ಬಲವನ್ನು ನೋಡಿಕೊಂಡು ಪ್ರತಿದಿನವೂ ಪ್ರಾತಃಕಾಲ ಒಂದೊಂದು ತೊಲೆಯಂತೆ ಸೇವಿಸುತ್ತಾ ಪಥ್ಯದಿಂದ ಇದ್ದರೆ ಮಂಡಲಕಾಲದಲ್ಲಿ ಪರಮವೃಷ್ಯವನ್ನುಂಟು ಮಾಡುವದು. ಈ ಪಾಯಸವು ಕಂಠರೋಗವನ್ನೂ ನಾಶಮಾಡಿ ವೀರ್ಯವನ್ನೂ, ರಸರಕ್ತಾದಿ ಧಾತುಗಳ ವೃದ್ಧಿಯನ್ನೂ ಉಂಟುಮಾಡಿ, ತೇಜಸ್ಸನ್ನುಂಟು ಮಾಡುತ್ತದೆ. "

**ಅಶ್ವಗಂಧಾದಿಚೂರ್ಣ:—** ಲವಂಗ ೧ ವರಹಾತೂಕ, ನಾಗಕೇಸರ ೨ ವರಹಾತೂಕ, ಯಾಲಕ್ಕಿ ೪ ವರಹಾತೂಕ, ಮೆಣಸು ೮ ವರಹಾತೂಕ, ಹಿಪ್ಪಲಿ ೧೬ ವರಹಾತೂಕ, ಶುಂಠಿ ೩೨ ವರಹಾತೂಕ, ಅಶ್ವಗಂಧಿ ೬೪ ವರಹಾತೂಕ ಈ ದಿನಸುಗಳನ್ನು ಚೂರ್ಣಿಸಿ ವಸ್ತ್ರಗಾಳಿತಮಾಡಿ ದಿನಂಪ್ರತಿ ೨ ಹೊತ್ತು, ಹೊತ್ತಿಗೆ ಅರ್ಧತೊಲಾ ಚೂರ್ಣ, ಅರ್ಧತೊಲಾ ಸಕ್ಕರೆ ಬೆರಸಿ ತುಪ್ಪ

ಕಾಲುತೊಲಾ ಜೇನುತುಪ್ಪ ಬೇಳೆ ತೊಲಾ ಕಲಿಸಿ ಗುಳಿಗೆಮಾಡಿ ನುಂಗಿ ಮೇಲೆ ಹಾಲು ಕುಡಿಯುವದು, ವಿಶೇಷ ವೀರ್ಯವೃದ್ಧಿಯನ್ನು ಮಾಡುವದು, ಇದಲ್ಲದೆ ಅರೋಚಕ, ಅಗ್ನಿಮಾಂದ್ಯ, ಶ್ವಾಸ, ಕಾಸ, ಕೈಕಾಲುಉರಿ ಇವೇ ಮೊದಲಾದ ವ್ಯಾಧಿಗಳು ನಾಶವಾಗುವವು.

ಜೇಷ್ಟಮಧು, ಅಶ್ವಗಂಧಿ, ನೆಲಗುಂಬಳಗೆಡ್ಡೆ, ಸಣ್ಣನೆಗ್ಗಿಲು, ನೆಲತಾಟಿಗೆಡ್ಡೆ, ಉದ್ದು, ಮಜ್ಜಿಗೇಗೆಡ್ಡೆ (ಸಫೇದುಮುಸಲಿ) ದ್ರಾಕ್ಷೆ, ನೆಲ್ಲಿಚಟ್ಟು, ಬೂರಗದಮೇಣ ಈ ದಿನಸುಗಳು ಸಮಭಾಗವಾಗಿ ಚೂರ್ಣಿಸಿ, ವಸ್ತ್ರಗಾಳಿತ ಮಾಡಿಡುವದು. ದಿನ ೨ ಹೊತ್ತು, ಬೆಳಗ್ಗೆ ಅರ್ಧತೊಲೆ ಚೂರ್ಣಕ್ಕೆ ಅರ್ಧ ತೊಲೆ ತುಪ್ಪ ಮತ್ತು ಸಕ್ಕರೆ ಹಾಕಿಕೊಳ್ಳುವದು; ರಾತ್ರಿಯಲ್ಲಿ ಹಾಲು ಸಕ್ಕರೆಯಲ್ಲಿ ಸೇವಿಸುವದು. ವಿಶೇಷವಾಗಿ ಧಾತುವೃದ್ಧಿಯುಂಟಾಗುವದು.

ನಪುಂಸಕತ್ವಕ್ಕೆ ಚಿಕಿತ್ಸೆ:—ನಾನಾಪ್ರಕಾರದ ಮಧುರ, ಮನೋಹರ, ಅತಿಸ್ವಾದಯುಕ್ತ ಭೋಜನ ಮಾಡುವದರಿಂದ ನಪುಂಸಕತ್ವವು ನಾಶವಾಗುವದು; ಅಥವಾ ಸರ್ವಾಂಗಸುಂದರಿಯಾದ, ಮನೋಹರ ಲಾವಣ್ಯವತಿಯ ಅಂತರಂಗಕ್ಕೆ ಪಾತ್ರನಾಗಲು ನಪುಂಸಕತ್ವವು ಹೋಗುವದು; ಅಥವಾ ಮಹಾ ಸುಂದರಿಯಾದ ಸ್ತ್ರೀಯೊಡನೆ ಯಾವಾಗಲೂ ಏಕಾಂತವಾಸ ಮಾಡಲು ನಪುಂಸಕತ್ವವು ಹೋಗುವದು; ಅಥವಾ:—

"ಕಾಮಂ ಪ್ರದೀಪಯತಿ ರೂಪಮಭಿವ್ಯನಕ್ತಿ ।
ಸೌಭಾಗ್ಯಮಾವಹತಿ ವಕ್ತ್ರ ಸುಗಂಧಿತಾಂ ಚ ॥
ಊರ್ಜಂ ಕರೋತಿ ಕಫಜಾಂಶ್ಚ ನಿಹಂತಿರೋಗಾ ।
ತಾಂಬೂಲಮೇವಮಪರಾಂ ಶ್ಚಗುಣಾ ಕರೋತಿ ॥"

"ತಾಂಬೂಲವು—ಕಾಮೋದ್ದೀಪನ, ರೂಪಕ್ಕೆ ಉಜ್ವಲ, ಸುಭಗತಾ, ಮುಖಕ್ಕೆ ಸುಗಂಧತ್ವ, ಬಲಕಾರಿ, ಕಫರೋಗವನ್ನು ನಾಶಮಾಡುವದು, ಇನ್ನೂ ಅನೇಕ ಗುಣಗಳು ಸಹಾ ಇದರಲ್ಲಿರುವವು" ಎಂದು ಶಾಸ್ತ್ರದಲ್ಲಿ ಹೇಳಲ್ಪಟ್ಟ ತಾಂಬೂಲ, ಸುಂದರವಾದ ಆಸವ, ಅರಿಷ್ಟ, ಶೀಧುಗಳನ್ನು ಕುಡಿಯುವಿಕೆ, ಉಪವನವಿಹಾರ, ಪುಷ್ಟಿಕರವಾದ ಹಾಲು, ಸಕ್ಕರೆ ಶೇರಿಸಿ ಕುಡಿಯುವಿಕೆ, ದಧಿ, ಶಿಖರಣಿ, ಉದ್ದಿನ ವಿಕಾರವಾದ ಮಧುರ ಪದಾರ್ಥಗಳನ್ನು ಸೇವಿಸುವಿಕೆ ಇವೆಲ್ಲವೂ ನಪುಂಸಕತ್ವವನ್ನು ನಾಶಮಾಡತಕ್ಕ ವೀರ್ಯವೃದ್ಧಿಕರಗಳು. ಅಥವಾ ಭೀಮಸೇನೀ ಕರ್ಪೂರ ಮತ್ತು ಶುದ್ಧವಾದ ನೇಪಾಳದ ಕಸ್ತೂರಿ ಇವುಗಳೊಂದಿಗೆ ನಿತ್ಯವೂ ತಾಂಬೂಲವನ್ನು ಸೇವಿಸುವಿಕೆ ಇದರಿಂದ ವೀರ್ಯವೃದ್ಧಿಯಾಗಿ, ನಪುಂಸಕತಾ ನಾಶವಾಗುವದು."

ಚೋಪಚಿನ್ನಿಗೋಲಿ:—" ಚೋಪಚೀನೀಭವಂ ಚೂರ್ಣಂ ಪಲಂ ದ್ವಾದಶಮೇವ ಚ || ಪಿಪ್ಪಲೀ, ಪಿಪ್ಪಲೀ ಮೂಲಂಮರಿಚಂ ನಾಗರಂ ತ್ವಚಕಮ್ || ಆಕಲ್ಲಕಂ, ಲವಂಗಂ ಚ ಪ್ರತ್ಯೇಕಂ ಕರ್ಷ ಸಮ್ಮಿತಮ್ || ಶರ್ಕರಾಸಮ ಚೂರ್ಣಂಚ ಪಾಚಯೇತ್ಸರ್ವಮೇಕತಃ || ಮೋದಕಂ ಕಾರಯೇತ್ತಂತು ಹ್ಯೇಕ ಕರ್ಷಪ್ರಮಾಣತಃ || ಸಾಯಂ ಪ್ರಾತರ್ನಿಷೇವ್ಯಸ್ತು ಪಥ್ಯಂಯೋಗ್ಯಂ ಸಮಾಚರೇತ್ || ಉಪದಂಶೇ ವ್ರಣೇ ಕುಷ್ಟೇ ವಾತರೋಗೇ ಭಗಂಧರೇ || ಧಾತುಕ್ಷಯಕೃತೇ ಕಾಸೇ ಪ್ರತಿಶ್ಯಾಯೇ ಚ ಯಕ್ಷ್ಮಣಿ|| ಸರ್ವಾನ್‌ರೋಗಾನ್ ನಿಹಂತ್ಯಾಶು ತತಃ ಪುಷ್ಟಿಕರೋ ಭವೇತ್||"

"ಚೋಪಚೀನಿಚೂರ್ಣ ೪೮ ತೊಲೆ, ಹಿಪ್ಪಲೀ, ಹಿಪ್ಪಲೀಮೂಲ, ಮೆಣಸು, ಶುಂಠಿ, ದಾಲಚಿನ್ನಿ, ಅಕಳಕರೆ, ಲವಂಗ ಎಲ್ಲಾ ೧—೧ ತೊಲೆ, ಸಕ್ಕರೆ ೪೮ ತೊಲೆ, ಎಲ್ಲವನ್ನೂ ಚೂರ್ಣಿಸಿ ಪಾಕಮಾಡುವದು. ಒಂದೊಂದು ತೊಲೆಯಂತೆ ದಿನ ೨ ಹೊತ್ತು ಸೇವಿಸುತ್ತಾ ಬರುವದು. ಯೋಗ್ಯವಾದ ಪಥ್ಯಮಾಡುವದು. ಈ ಚೋಪಚೀನಿ ಗೋಲಿಯು—ಉಪದಂಶ, ವ್ರಣ, ಕುಷ್ಟ, ವಾತರೋಗ, ಭಗಂದರ, ಧಾತುಕ್ಷಯ, ಕಾಸ, ಪ್ರತಿಶ್ಯಾಯ, ರಾಜಯಕ್ಷ್ಮ ಈ ರೋಗಗಳನ್ನು ನಿವಾರಣೆಮಾಡಿ, ಉತ್ತಮವಾದ ವೀರ್ಯವೃದ್ಧಿಯನ್ನುಂಟು ಮಾಡುವದು."

ಗೋಕ್ಷುರಾದಿಚೂರ್ಣ:—ಆನೆನೆಗ್ಗಿಲು, ತಾಲಮಖಾನಾಬೀಜ, ಅಶ್ವಗಂಧಿ, ಶತಾವರಿ, ಮಜ್ಜಿಗೆಗಡ್ಡೆ, ನಸುಗುನ್ನಿಬೀಜ, ಜೇಷ್ಟಮಧು, ಪೇರಾಮುಟ್ಟೇಚಕ್ಕೆ ಇವೆಲ್ಲ ಸಮತೂಕವಾಗಿ ಚೂರ್ಣಿಸಿ, ವಸ್ತ್ರಗಾಳಿತಮಾಡಿ ದಿನವೂ ೨ ಹೊತ್ತು ಸಕ್ಕರೆ ಕಾಸಿದ ಹಾಲಲ್ಲಿ ಸೇವಿಸಲು ನಪುಂಸಕತೆಯು ನಾಶವಾಗುವದು, (ಪಥ್ಯದಿಂದಿರಬೇಕು.)

ಪಾಯಸ:—" ಗವಾಂ ನಿರೂಢವತ್ಸಾನಾಂ ಸಿದ್ಧಂ ಪಯಸಿ ಪಾಯಸಮ್|| ತಥಾ ಗೋಧೂಮ ಚೂರ್ಣಂಚ ಸಿತಾ ಮಧು ಘೃತಾನ್ವಿತಮ್ ||ಭುಕ್ತ್ವಾ ಹೃಷ್ಯತಿ ಜೀರ್ಣೋಽಪಿ ದಶದಾರಾನ್ ವ್ರಜತ್ಯಪಿ || "

"ಕರು ಬದುಕಿರುವ ಆಕಳ ಹಾಲಿನಲ್ಲಿ ಗೋಧೀರವೆಯನ್ನು ಹಾಕಿ ಖೀರು (ಪಾಯಸ) ಮಾಡಬೇಕು. ಅದರಲ್ಲಿ ಬಿಳೀಸಕ್ಕರೆ, ಜೇನುತುಪ್ಪ, ಮತ್ತು ಆಕಳತುಪ್ಪ ಹಾಕಿ ಸೇವನೆ ಮಾಡಿದರೆ ಅದು ಪಚನವಾಗುವಾಗ ವೀರ್ಯವು ಯಥೇಚ್ಛವಾಗಿ ವೃದ್ಧಿಯಾಗುವದು. ಹತ್ತು ಸ್ತ್ರೀಯರಿದ್ದರೂ ಅವರಲ್ಲಿ ಭೋಗಿಸುವ ಶಕ್ತಿಯುಂಟಾಗುವದು." ☞ ಇಂತಹ ಔಷಧ

ಗಳು ನೋಡುವದಕ್ಕೆ ಸುಲಭವಾಗಿ ಕಾಣುತ್ತವೆ. ದಿನಂಪ್ರತಿ ಒಬ್ಬನವು ಟ್ಟಿಗೆ ಕ್ಲುಪ್ತವಾಗಿ ಆಗತಾನೇ ಮಾಡಿ ಸೇವಿಸುತ್ತಾ ಪಥ್ಯವಾದ ಕಲದಿವರ್ಜಿತವಾದ ಊಟ, ಹಾಸಿಗೆಪಥ್ಯ ಮಾಡುತ್ತಾ ಒಂದು ಮಂಡಲ ಹೀಗೆ ದಿನಂಪ್ರತಿ ಹೊಸಹೊಸದಾಗಿ ಮಾಡುತ್ತಾ ಬರಬೇಕು. ಇದರಲ್ಲಿ ಗುಣವು ಅಗತ್ಯವಾಗಿ ಬರುವದು. ''

ಇದರಂತೆಯೇ ವೈದ್ಯಜೀವನದಲ್ಲಿ:—

" ಉಚ್ಚಟಾ ಮರ್ಕಟೀ ಗೋಕ್ಷುರೈ ಶ್ಚೂರ್ಣಿತೈಃ |
ಶರ್ಕರಾ ದುಗ್ಧ ಸಮ್ಮಿಶ್ರಿತೈಃ ಸಾಧಿತೈಃ ||
ಸೇವಿತೈ ರ್ವಾರ್ಧಕೇ ಮಾನವೋ ಮಾನಿನೀ |
ಗರ್ವಮುಚ್ಛೇದಯೇತ್ಕಿಂ ಪುನರ್ಯೌವನೇ ||

"ಭದ್ರಮುಸ್ತೆ, ನಸುಗುನ್ನಿಬೀಜ, ನೆಗ್ಗಿಲು ಇವುಗಳನ್ನು ಚೂರ್ಣಿತೈಃ-(ದಿನಂಪ್ರತಿ) ಚೂರ್ಣಮಾಡುತ್ತಾ, ಶರ್ಕರಾದುಗ್ಧಸಮ್ಮಿಶ್ರಿತೈಃ-ಸಕ್ಕರೆ ಹಾಲುಗಳಿಂದ ಕೇರಿಸಿ, ಸಾಧಿತೈಃ-ಸಾಧಿಸುತ್ತಾ ಬರುವದಾದರೆ, ಮುದುಕನೂ ಸಹ ಸ್ತ್ರೀಯರನ್ನು ರತಿಯಲ್ಲಿ ಜೈಸುವನು, ಇಂತಾದ್ದರಲ್ಲಿ ಯೌವನಸ್ಥನ ವಿಷಯದಲ್ಲಿ ಕೇಳಬೇಕಾದ್ದೇನಿದೆ ? ಎಂದು ಬರಿಯುತ್ತಿದ್ದಾರೆ. ಇಂತಹ ಔಷಧಗಳು ದಿನಂಪ್ರತಿ ಹೊಸಹೊಸದಾಗಿ ಮಾಡಿಕೊಂಡು ಸೇವಿಸತಕ್ಕವುಗಳು, ಆಗ ಗುಣ ಬರುತ್ತದೆ ಎಂದು ಭಾವವು. ''

" ಕಪಿಕಚ್ಛುಭವಂ ಮೂಲಂ ಕ್ಷೀರಪಿಷ್ಟಂ ಪಿಬೇನ್ನರಃ || ಅಕ್ಷಯಂ ಜಾಯತೇ ಶುಕ್ರಂ ಕಾಮಯೇತ್ಸ್ತ್ರೀ ಸಹಸ್ರಶಃ || "

" ನಸುಗುನ್ನಿ ಬೇರನ್ನು ಕುಟ್ಟಿ ವಸ್ತ್ರಗಾಳಿತಮಾಡಿ ಹಾಲಿನಲ್ಲಿ ಕುಡಿಯುತ್ತಾ ಬರುವದರಿಂದ ಸಹಸ್ರ ಸ್ತ್ರೀಗಮನ ಮಾಡುವಷ್ಟು ವೀರ್ಯವೃದ್ಧಿಯಹುದು. ''

ಜೇಷ್ಟಮಧು, ನೆಲಕುಂಬಳಗಡ್ಡೆ, ದಾಲ್ಚಿನ್ನಿ, ಲವಂಗ, ಆನೆನೆಗ್ಗಿಲು, ಅಮೃತಬಳ್ಳಿಯಸಾರ, ಸಫೇದಮುಸಲೀ ಇವುಗಳನ್ನು ಸಮತೂಕವಾಗಿ ಚೂರ್ಣಿಸಿ; ವಸ್ತ್ರಗಾಳಿತಮಾಡಿ ০॥ ಕಾಸುತೂಕ ಚೂರ್ಣವನ್ನು ಹಾಲಿನೊಂದಿಗೆ ಸೇವಿಸುತ್ತಾ ಪಥ್ಯವಾಗಿರಲು ಪುರುಷತ್ವ ವೃದ್ಧಿಯಹುದು.

" ಸಹಿಂತೇ ಘೃತೇನ ಮಧುನಾ ಮಧುಕೇ |
ಪರಿಸೇವಿತೇ ಪಿಬತಿ ಯೋऽನು ಪಯಃ ||
ನವಸುಭ್ರುವಾ ಸುಖಕರ ಸ್ಸತತಮ್ |
ಬಹುಬೀಜಪೂರಸಹಿತೋ ಭವತಿ || "

"ಯಾವನು ಘೃತದಿಂದಲೂ ಜೇನುತುಪ್ಪದಿಂದಲೂ ಕೂಡಿದ ಅತಿಮಧುರದ ಚೂರ್ಣವನ್ನು ಸೇವಿಸುತ್ತಾ ಅದನ್ನು ಸೇವಿಸಿದೊಡನೆಯೇ ನೀರನ್ನು ಕುಡಿಯುತ್ತಾ ಬರುವನೋ ಅವನು ನೂತನ ಪ್ರಾಯದ ಸ್ತ್ರೀಯರನ್ನು ರತಿಯಲ್ಲಿ ಸುಖಪಡಿಸುವವನೂ ಬಹು ವೀರ್ಯವೃದ್ಧಿಯುಳ್ಳವನೂ ಆಗುತ್ತಾನೆ."

ಮೆಣಸು, ಕಂಕೋಲ, ಲವಂಗ, ಕಸಕಸೆ, ರಕ್ತಚಂದನ, ಕಮಲದ ಗಡ್ಡೆ, ಕಲೊಂಜಿ, ಅಗರು, ನಾಗಕೇಸರಿ, ಹಿಪ್ಪಲಿ, ಸೊಂಟಿ, ಸೋಂಚರಲವಣ, ಸೊಗದೆ, ಕರ್ಪೂರ, ಜಾಫಲ, ಬಿದುರುಪ್ಪು, ಖರ್ಜೂರ, ದಾಲಚಿನ್ನಿ, ಲವಂಗಪತ್ರೆ, ನಸುಗುನ್ನಿಬೀಜ, ಅಶ್ವಗಂಧಿ, ಬೂರಗದಬಂಕೆ, ತುಂಗಮುಸ್ತೆ, ಸಿಂಘಾಡಾ, ಬಿಳೇಉದ್ದಿನಬೇಳೆ, ಗಾಂಗೇರುಕೀ, ಅಂಜೂರ, ಶತಾವರಿ, ನೆಲತಾಟಗಡ್ಡೆ, ಸಫೇದುಮುಸಲೀ, ಲಕ್ಕಿ, ಮುಂಡೀ, ಗರಗ ಇವೆಲ್ಲಾ ೨ ತೊಲೆ, ಅಭ್ರಕಭಸ್ಮ ೧೦ ತೊಲೆ, ವಂಗಭಸ್ಮ ೧೦ ತೊಲೆ ಇವೆಲ್ಲಾ ಚೂರ್ಣಿಸಿ ಕಲ್ಲುಸಕ್ಕರೆ ಸಮವಾಗಿ ಹಾಕಿ ಮೃನ್ಮಯ ಭಾಂಡದಲ್ಲಿಟ್ಟು ದಿನವೂ ೨ ಹೊತ್ತು ಅರ್ಧಅರ್ಧ ತೊಲೆಯಂತೆ ಸೇವಿಸುತ್ತಾ ಬಂದರೆ—ಸಕಲ ಪ್ರಮೇಹಗಳೂ ನಾಶವಾಗುವವು. ಬಹುಮೂತ್ರವೂ ನಿಲ್ಲುವದು, ದಾಹಹರ, ವೀರ್ಯವೃದ್ಧಿಯಾಗುವದು. ಕಾಸ, ಶೂಲಿ, ವಾತರೋಗ ಸಹಾ ಹರವಾಗುವದು. ಸ್ತ್ರೀಯರಿಗೆ ಗರ್ಭಕೋಶದ ಶೂಲಿಹರವಾಗುವದು.

"ತಿಲಾಽಶ್ವಗಂಧಾ ಕಪಿಕಚ್ಛುಮೂಲೈಃ ।
ವಿದಾರಿಕಾ ಯಷ್ಟಿಕ ಪಿಷ್ಟಯೋಗಃ।
ಆಜೇನ ಪಿಷ್ಟಃ ಪಯಸಾ ಘೃತೇನ ।
ಪಕ್ವಾ ಭವೇಚ್ಛಷ್ಕುಲಿಕಾ ಽತಿವೃಷ್ಯಾ ॥"

"ತೊಳಿಯದ ಯಳ್ಳು (ಶನಿಗ್ರಹ), ಅಶ್ವಗಂಧಿ, ನಸುಗುನ್ನಿಬೀಜ, ವಿದಾರೀಕಂದ ಇವು ಸಮಾನವಾಗಿ ಚೂರ್ಣಿಸಿ ಇವುಗಳ ಸಮತೂಕ ಷಷ್ಠಿಕಾ ಎಂಬ ೬೦ ದಿನಕ್ಕೆ ಬೆಳದು ಬರುವ ಭತ್ತದ ಅಕ್ಕಿಹಿಟ್ಟು ಸೇರಿಸಿ ಆಡಿನ ಹಾಲಿನಲ್ಲಿ ಕಲಿಸಿ ಪೂರೀಮಾಡಿ ಆಡಿನತುಪ್ಪದಲ್ಲಿಯೇ ಕರಿಯಬೇಕು. ಈ ಪೂರೀ ನಿತ್ಯವೂ ೨ ಹೊತ್ತು ಕ್ಲುಪ್ತವಾಗಿ ಬಂದೊಂದರಂತೆ ಸೇವಿಸುತ್ತಾ ಬಂದಲ್ಲಿ ಅತಿಯಾಗಿ ವೀರ್ಯವೃದ್ಧಿಯಾಗುವದು. ನಪುಂಸಕತಾಹರವಾಗುತ್ತದೆ."

ಕಾಮಾಸ್ತ್ರಲೇಹ:— ಸಣ್ಣನೆಗ್ಗಿಲು ಪಾವು, ನುಗ್ಗಿ ಅಂಟು ಪಾವು, ಕಸಕಸೆ ಪಾವು, ಸಿಯಾಮಿಶ್ರಿ ಪಾವು, ಮುಟ್ಟಿದರೆಮುನಿಯ ಸಮೂಲ ಪಾವು, ರತ್ನಪುರುಷ ಅಚ್ಚೀರು, ಬೇದಾನ ಪಾವು, ನಸುಗುನ್ನಿಬೀಜ ಪಾವು, ಜಾಲಿ ಅಂಟು ೧॥ ತೊಲೆ, ಬೆಳವಲ ಅಂಟು ೧॥ ತೊಲೆ, ಹೊನ್ನಾವರಿಕೆಬೀಜ ೧ ತೊಲೆ, ಬೀಜಬಂದು ೧॥ ತೊಲೆ, ತಾಲಮಖಾನಾ (ನಸುಗುನ್ನಿ) ಬೀಜ ಪಾವು

ಶೇರು (೬ ತೊಲೆ), ಶುಂಠಿ ೧॥ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಲವಂಗ ೧ ತೊಲೆ, ಯಾಲಕ್ಕಿ ೧ ತೊಲೆ, ಆನೆನೆಗ್ಗಿಲು ಅರ್ಧತೊಲೆ, ರುಮ್ಮಿಮಸ್ತಕಿ ೧ ತೊಲೆ, ಸಾಲಾಮಿಶ್ರಿ ೧ ಕಾಸುತೂಕ, ಸಫೇದಮಿಶ್ರಿ ೧ ಕಾಸುತೂಕ, ಜಾಕಾಯಿ ೩ ತೊಲೆ, ಜಾಪತ್ರಿ ೩ ತೊಲೆ, ಬಾದಾಮಿ ೧ ಕಾಸುತೂಕ, ಚೀನಿಸಕ್ಕರೆ ೧೨॥ ಶೇರು ಈ ಜಿನಿಸುಗಳನ್ನು ಚೂರ್ಣಿಸಿ ವಸ್ತ್ರಗಾಳತಮಾಡಿ ಸಕ್ಕರೆಪಾಕದಲ್ಲಿ ಹಾಕಿ ಹದವರಿತು ಇಳಿಸಿ ಆಮೇಲೆ ಯಾಲಕ್ಕಿ, ಜಾಕಾಯಿ, ಜಾಪತ್ರಿಯಚೂರ್ಣ ಹಾಕಿ ತಿರುವಿ, ಪಡಿಕಟ್ಟಿ ಜೇನುತುಪ್ಪ ಬೆರಸಿಟ್ಟುಕೊಂಡು ಸೇವಿಸುವದು. ದಿನ ೨ ಹೊತ್ತು ಅರ್ಧತೊಲೆ ಲೇಹ್ಯ ಕಾಲುತೊಲೆ ಆಕಳತುಪ್ಪದಲ್ಲಿ ಬೆರಸಿ ತೆಕೊಳ್ಳುತ್ತಾ ಬರುವದು. ಪಥ್ಯ ಹುಳಿವಗೈರೆ ಕಲದೀಪದಾರ್ಥ ಬಿಡಬೇಕು. ೨೧ ದಿನ ಸೇವಿಸಬೇಕು. ಹಳೇ ರೋಗಿಗಳು ೪೮ ದಿನ ತಿನ್ನಬೇಕು. ಆನೆಯಂತೆ ಬಲಬರುವದು, ವೀರ್ಯ ವೃದ್ಧಿ, ರಕ್ತಶುದ್ಧಿ ಆಗುವದು.

"ಮಧುಯಷ್ಟಿ ಕಣಾ ತುಕಾ ವರಾ ।
ವರಚೂರ್ಣಂ ಸಿತಯಾ ಸಮನ್ವಿತಮ್ ॥
ವಲಿತಂ ಪಲಿತಂ ವಿನಾಶಯೇ ।
ಸ್ಮತಿವೀರ್ಯಾಯು ರಕಾರ್ಶ್ಯ ಕಾರಣಮ್ ॥"

"ಅತಿಮಧುರ, ಹಿಪ್ಪಲಿ, ತವಕ್ಷೀರ, ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು ಇವುಗಳು ಸಮತೂಕವಾದ ಚೂರ್ಣವನ್ನು ವಸ್ತ್ರಗಾಳತಮಾಡಿ ಸಕ್ಕರೆ ಸಮವಾಗಿ ಬೆರಸಿ ದಿನವೂ ೨ ಹೊತ್ತು ಸೇವಿಸುವದು. ಇದರಿಂದ ಬುದ್ಧಿವೃದ್ಧಿ, ರೇತೋವೃದ್ಧಿ, ಆಯುವೃದ್ಧಿ, ಆಯುಃಕಾರಕ, ಅಂಗಪುಷ್ಟಿ ಇವುಗಳುಂಟಾಗುವವು."

"ತಾಲೀಸಪತ್ರಿ, ಲವಂಗ, ಲವಂಗಪತ್ರಿ, ಹಿಪ್ಪಲಿ, ಪುಷ್ಕರಮೂಲ, ವಾಯುವಿಳಂಗ, ಜಾಫಲ, ಜಾಪತ್ರಿ, ಕಾಚು, ಗಂಟುಭಾರಂಗಿ, ಭಜೆ, ೨ ಬಗೆ ಜೀರಿಗೆ, ಕಟ್ಫಲ, ವಿಷಮುಷ್ಟಿ (ಇದನ್ನು ಶುದ್ಧಿಮಾಡುವ ವಿಧಾನವನ್ನು ಶುದ್ಧಿಪ್ರಕರಣದಲ್ಲಿ ತಿಳಿಸುತ್ತೇವೆ.) ಗಜಹಿಪ್ಪಲಿ, ಕಲೌಂಜಿ, ಅಶ್ವಗಂಧಿ, ಮೆಣಸು, ಆಕಳಕರೆ, ಅಜವಾನ, ಅಜಮೋದ, ಖುರಾಸಾನಿ ಅಜವಾನ, ಹುರಿದ ಪಟಿಕ, ಶುಂಠಿ, ಚಿರಾಯಿತ, ಇಂಗು, ತ್ರಿಫಲೆ, ಕಟುಕರೋಹಿಣಿ, ಕರ್ಕಾಟಕಶೃಂಗಿ, ಅಳಲೇಕಾಯಿ ಚಿಕ್ಕದು ಮತ್ತು ದೊಡ್ಡದೂ ಸಹ, ಸೈಂಧವಲವಣ ಈ ಎಲ್ಲಾ ಔಷಧಗಳೂ ಸಮತೂಕವಾಗಿ ಕುಟ್ಟಿ ಶೋಧಿಸಿಕೊಂಡು ಇಟ್ಟುಕೊಳ್ಳುವದು. ಪಲೇಮೇಲೆ ೪ ಶೇರು ಹಾಲನ್ನು ಕಾಸುತ್ತಾ ತಳ ಹಿಡಿಯದಂತೆ ಬತ್ತಿಸುತ್ತಾ ಬಂದು ಅದು ೧ ಶೇರಿಗೆ ಇಳಿದು ಗಟ್ಟಿಯಾದಾಗ

ಈ ಚೂರ್ಣವೆಲ್ಲಾ ಹಾಕಬೇಕು. ಜತೇಲಿ ಪ್ರತಿಯೊಂದು ಪದಾರ್ಥದ ತೂಕದಂತೆ ವಂಗಭಸ್ಮ ಮತ್ತು ಅಭ್ರಕಭಸ್ಮ ಸಹಾ ಬೆರಸಿ ಎಲ್ಲಾ ಕೂಡಿಸಿ ಮೃಣ್ಮಯಪಾತ್ರೆಲಿ ತುಂಬಿಟ್ಟುಕೊಂಡು ದಿನ ೨ ಹೊತ್ತು ೧—೧ ತೊಲೆಯಂತ ಆಕಳತುಪ್ಪದಲ್ಲಿ ಸೇವಿಸುತ್ತಾ ಬರುವದು. ಪುಷ್ಟಿಯಾಗುವದು, ವೀರ್ಯವೃದ್ಧಿಯಾಗುವದು. ಹುಳಿ, ಕಲದಿ ವರ್ಜ್ಯ.

« ಶತಾವರೀ ಶ್ವದಂಷ್ಟ್ರಾ ಚ ಬಲಾಚಾತಿಬಲಾ ತಥಾ ॥ ಮರ್ಕಟೀಕ್ಷುರಭೀಜಂ ಚ ವಿದಾರೀಕಂದಜಂ ರಸಃ ॥ ಏತಾನಿ ಸಮಭಾಗಾನಿ ಪಲಿಕಾನಿ ವಿಚೂರ್ಣಯೇತ್ ॥ ತಸ್ಮಾಚ್ಚತುರ್ಗುಣಂ ದೇಯಂ, ತ್ರೈಲೋಕ್ಯವಿಜಯಾರಸಃ॥ ಏತದೇಕೀಕೃತಂ ಯಾವತ್ತದರ್ಧಂ ಮಹಿಷಂ ಪಯಃ ॥ ತಾವನ್ಮಾತ್ರೇಣ ದಾತವ್ಯಃ ಶತಾವರ್ಯಾ ರಸಸ್ತಥಾ ॥ ವಿದಾರ್ಯಾಃ ಸ್ವರಸಃ ಪ್ರಸ್ಥಂ ಸಿತಾ ಪಲಶತದ್ವಯಮ್ ॥ ಮೇಲಯಿತ್ವಾ ಸಿತಾಂ ಚೈವ ಪಾತ್ರೇ ತಾಮ್ರಮಯೇ ದೃಢೇ ॥ ಪಾಚಯಿತ್ವಾ ಕವಿರ್ವೈದ್ಯೋ ಮೋದಕಂ ಪರಮಂ ಹಿತಮ್ ॥ ಕರೋತಿ ಧಾತುವೃದ್ಧಿಂಚ ಕಾಂತಿಂ ಸೌಖ್ಯಂ ಬಲಂ ಶುಚಿಮ್ ॥ ನಾರೀಣಾಂ ವಿಜಯಂ ಚೈವ ರತೌ ಕಾಮಾಯತೇ ನರಃ ॥ »

“ ಶತಾವರಿ, ಆನೆನೆಗ್ಗಲು, ಚಿಟ್ಟಾಮುಟ್ಟಿ, ಪೇರಾಮುಟ್ಟಿ, ನಸುಗುನ್ನಿಬೀಜ, ತಾಲಮಖಾನಾ, ವಿದಾರೀಕಂದ ಇವೆಲ್ಲಾ ೪-೪ ತೊಲಾ ಚೂರ್ಣಮಾಡಿ, ಇದರ ನಾಲ್ಕುಪಾಲು ಶುದ್ಧ ಭಂಗೀಸೊಪ್ಪುಚೂರ್ಣ ಎಲ್ಲವನ್ನೂ ಕೇರಿಸಿ ಚೂರ್ಣದ ಅರ್ಧಪಾಲು ಯಮ್ಮೆಯ ಹಾಲು, ಇದರ ಸಮವಾಗಿ ಶತಾವರೀರಸ—ನೆಲನೆಲ್ಲಿಯರಸ ೬೪ ತೊಲೆ, ಸಕ್ಕರೆ ೮೦೦ ತೊಲಾ, ಇವೆಲ್ಲವನ್ನೂ ಪಾತ್ರೇಲಿ ಹಾಕಿ ಮೊದಲು ಸಕ್ಕರೆ ಪಾಕಮಾಡಿ, ಚೂರ್ಣವೆಲ್ಲ ಹಾಕಿ ಲೇಹಪಾಕದಂತೆ ಇಳಿಸಿ ದಿನಂಪ್ರತಿ ಪಾವಲಿತೂಕ ಲೇಹ್ಯ ಪಾವಲಿತೂಕ ಆಕಳತುಪ್ಪದಲ್ಲಿ ಕಲಿಸಿ ಸೇವಿಸುತ್ತಾ ಬರಬೇಕು. ಧಾತುಪುಷ್ಟಿ, ಕಾಂತಿವೃದ್ಧಿ, ಸೌಖ್ಯ, ಬಲ, ಶುಚಿಯನ್ನೀಯುತ್ತದೆ. ಈ ಲೇಹವನ್ನು ಸೇವಿಸಿದವನು ರತಿಯಲ್ಲಿ ಕಾಮನಾಗಿ ಸ್ತ್ರೀಯನ್ನು ಜೈಸುತ್ತಾನೆ. ”

« ಮಾಷೋ ಯವಃ ಶ್ವದಂಷ್ಟ್ರಾ ನಾ ವಾನರೀ ಶತಮೂಲಿಕಾ॥ ಪಯಸಾ ಪೇಷಯೇತ್ತೇನ ಪಕ್ವಯೇದ್ಘೃತಪೂಪಕಮ್ ॥ ದಿನಾಂತೇ ಭಕ್ಷಯೇದೇಕಂ ತತಃ ಕ್ಷೀರಂ ಪಿಬೇನ್ನರಃ ॥ ಷಣ್ಮಾಸಾಭ್ಯಂತರೇ ಚೈವ ವೃದ್ಧೋಽಪಿ ತರುಣಾಯತೇ ॥ ಮಾಸಮೇಕಂ ಪ್ರಯೋಗೇಣ ಶುಕ್ರವೃದ್ಧಿರ್ಭವೇದ್ಧ್ರುವಮ್ ॥ »

"ತೊಳೆದ ಉದ್ದಿನಬೇಳೆ, ಯವ, ಆನೆನೆಗ್ಗಿಲು, ನಸುಗುನ್ನಿಬೀಜ, ಶತಾವರಿ ಇವೆಲ್ಲಾ ಸಮಾನವಾಗಿ ಶೇರಿಸಿ ಕುಟ್ಟಿ, ವಸ್ತ್ರಗಾಳಿತಮಾಡಿ, ಹಾಲಿನಲ್ಲಿ ನುಣ್ಣಗರದು ಅದರ ಖೀವರ್ ಮಾಡಬೇಕು. ರಾತ್ರಿಗೆ ಇದರಲ್ಲಿ ೪ ತೊಲೆಯಷ್ಟು ತಿಂದು ಕಾಶಿದ ಹಾಲನ್ನು ಕುಡಿಯುವದು. ೬ ತಿಂಗಳು ಸೇವಿಸಿದರೆ ವೃದ್ಧನೂ ತರುಣನಾಗುತ್ತಾನೆ. ಒಂದು ತಿಂಗಳು ಸೇವಿಸಿದರೆ ನಿಶ್ಚಯವಾಗಿಯೂ ಶರೀರದಲ್ಲಿ ವೀರ್ಯದ ವೃದ್ಧಿಯಾಗುತ್ತದೆ. ಇದರಲ್ಲಿ ಸಂದೇಹವಿಲ್ಲ. (ಖೀವರ್ ಮಾಡುವ ವಿಧ:— ಹಿಟ್ಟನ್ನು ದೋಸೆಯ ಹಿಟ್ಟಿಗಿಂತ ಸ್ವಲ್ಪ ತೆಳುವಾಗಿ ನುಣ್ಣಗೆ ಅರದು ಹಾಲಲ್ಲಿ ಕೂಡಿಸಿಟ್ಟುಕೊಂಡು ಕಾದ ತುಪ್ಪದಲ್ಲಿ ಒಂದೇಕಡೆ ನಡುವೆ ಉಪಾಯವಾಗಿ ಸುರಿಯುತ್ತಾ ಬರುವದು ಸುತ್ತಲೂ ಪಸರಿಸುತ್ತಾ ಎಲ್ಲಾ ಕಡೆಗೂ ಒಂದೇ ವಿಧವಾದ ದಪ್ಪಗಾಗಬೇಕು. ಇದು ಅಗಲವಾಗಿ ದುಂಡಗೆ ಇರುತ್ತೆ. ಪಕ್ವವಾದನಂತರ ಜೇನಿನ ಹುಟ್ಟದಂತೆ ಕಣ್ಣುಕಣ್ಣಾಗುತ್ತದೆ. ಅದಕ್ಕೆ ಮೊದಲೇ ಮಾಡಿಟ್ಟುಕೊಂಡಿದ್ದ ಸಕ್ಕರೆಪಾಕದ ಪಾತ್ರೆಯಮೇಲೆ ಅಡ್ಡ ೨ ಕಡ್ಡಿಗಳಿಟ್ಟು ಈ ಖೀವರ್ ಬೆಂದನಂತರ ಆ ಕಡ್ಡಿಗಳಮೇಲಿಟ್ಟು ಇದು ಕುಡಿಯುವಷ್ಟು ಸಕ್ಕರೆಪಾಕವನ್ನು ಅದಕ್ಕೆ ಕುಡಿಸಬೇಕು.)

"ಕ್ಷೀರೇಣ ಬಸ್ತಾಂಡಯುಜಾ ಶೃತೇನ ।
ಸಂಪ್ಲಾವ್ಯ ಕಾಮೀ ಬಹುಶಃ ತಿಲಾನ್ ಯಃ ॥
ಸುಶೋಷಿತಾನತ್ತಿ ಪಿಬೇತ್ಪಯಶ್ಚ ।
ತಸ್ಯಾಗ್ರತಃ ಕಿಂ ಚಟಕಃ ಕರೋತಿ? ॥"

"ಆಡಿನ ಅಂಡಕೋಶವನ್ನು ಹಾಲಿನಲ್ಲಿ ಹಾಕಿ ಪಕ್ವಮಾಡಿ, ಪಕ್ವವಾದನಂತರ ಆ ಹಾಲಿನಲ್ಲಿ ತೊಳಿಯದ ಯಳ್ಳನ್ನು ಭಾವನೆಮಾಡುವದು, ಒಣಗಿಸುವದು, ಮತ್ತೆ ಭಾವನೆ ಕೊಡುವದು, ಒಣಗಿಸುವದು, ಹೀಗೆ ಅನೇಕಸಾರಿ ಭಾವನೆಮಾಡಿ ಒಣಗಿಸಿದ ಯಳ್ಳನ್ನು ಇಟ್ಟುಕೊಂಡು ಅದರಲ್ಲಿ ದಿನವೂ ೧ ತೊಲೆ ಯಳ್ಳನ್ನು ತಿಂದು ಮೇಲೆ ಕಾದಹಾಲನ್ನು ಕುಡಿಯುವದು. ಈ ಯೋಗವನ್ನು ಸಾಧಿಸಿದವನ ಪರಾಕ್ರಮವು ರತಿಯಲ್ಲಿ ಅಸಾಧಾರಣವಾಗಿರುತ್ತದೆ. ಇವನು ಸೋಲದೆ ರತಿಕ್ರೀಡೆಯಲ್ಲಿ ಹೆಂಗಸನ್ನು ಸೋಲಿಸುತ್ತಾನೆ. ಗುಬ್ಬಚ್ಚಿಗಿಂತಲೂ ಇವನ ರತಿಶಕ್ತಿಯು ಹೆಚ್ಚಾಗಿರುತ್ತದೆ ಎಂದು ಭಾವವು."

ರತ್ನಪುರುಷ ೬ ತೊಲಾ, ಬೀಜಬಂದು ೨ ತೊಲಾ, ತಾಲಮಖಾನಾ ೪ ತೊಲಾ, ಕಲಮಿದಾಲಚಿನ್ನಿ ೪ ತೊಲಾ, ಕಬಾಬಚಿನ್ನಿ ೧ ತೊಲಾ, ನಾಗಕೇಸರಿ ೧ ತೊಲಾ, ಜಾಪತ್ರಿ ೧ ತೊಲಾ, ನುಗ್ಗಿಅಂಟು ೬ ತೊಲಾ, ಬೆಳವಲಅಂಟು ೬ ತೊಲಾ, ಜಾಲಿಅಂಟು ೬ ತೊಲಾ, ಸಣ್ಣನೆಗ್ಗಿಲು ೨ ತೊಲಾ, ಜೋ

ಪಚಿಕಸ್ಸಿ ೨ ತೊಲಾ, ಖರ್ಜೂರ ಅರ್ಧತೊಲಾ, ವಿಷ್ಣುಕ್ರಾಂತಿ ೨ ತೊಲಾ, ಮದನಮಸ್ತಕಿ ಅರ್ಧತೊಲಾ, ಭ್ರೋಸ್ತು ಅರ್ಧತೊಲಾ, ಕಸಕಸೆ ೨ ತೊಲಾ, ಬಾದಾಮಿ ೬ ತೊಲಾ, ಶುಂಠಿ ೬ ತೊಲಾ, ಮೆಣಸು ೨ ತೊಲಾ, ಹಿಪ್ಪಲಿ ೨ ತೊಲಾ, ಲವಂಗ ೨ ತೊಲಾ, ಮೋಡಿ ೨ ತೊಲಾ, ಖುರಾಸಾನಿ ಅಜವಾನ ೨ ತೊಲಾ, ನಸುಗುನ್ನಿಬೀಜ ೨ ತೊಲಾ, ಅಜವಾನ ೨ ತೊಲಾ, ಸಾಲಾಮಿಶ್ರಿ ೬ ತೊಲಾ, ಸಫೇದಮುಸಲಿ ೬ ತೊಲಾ, ಸಿಯಾಮುಸಲಿ ೨ ತೊಲಾ, ಭೂರಗಡಬಂಕೆ ೧ ತೊಲಾ, ಜಾಕಾಯಿ ೧॥ ತೊಲಾ, ಲವಂಗಪತ್ರಿ ೧॥ ತೊಲಾ, ಕೇಸರಿ ೨ ತೊಲಾ, ಕಸ್ತೂರಿ ಮಾಷತೂಕ, ಸಿಲಾಜಿತುಭಸ್ಮ ೧ ತೊಲಾ, ಹವಳದಭಸ್ಮ ೧ ತೊಲಾ, ಯಾಲಕ್ಕಿ ಅರ್ಧತೊಲಾ, ಸುನ್ನಾಮುಖಿ ದೇಶಾವಾರದ್ದು ೪ ತೊಲಾ, ಬಾಲಹರಡಾ ೨ ತೊಲಾ, ತಿಗಡಿ ೨ ತೊಲಾ, ಉತ್ತುತ್ತಿ ೧॥ ಶೇರು, ಬೇದಾನ ೬ ತೊಲಾ, ಮೊಗಲಾಯಿ ಬೇದಾನ ೪ ತೊಲಾ, ಕಾಂತಭಸ್ಮ ೧ ತೊಲಾ, ಶ್ರೀಗಂಧ ೪ ತೊಲಾ, ದೇವದಾರು ೪ ತೊಲಾ, ಆನೆನೆಗ್ಗಿಲು ೪ ತೊಲಾ, ಬಂಗಾರದ ವರಕು ೮ ಹಾಳೆ, ಬೂದಗುಂಬಳಕಾಯಿ ತುರದದ್ದು ೬ ಶೇರು (ಇದನ್ನು ತುರದು ರಸಹಿಂಡಿಕೊಂಡು ಚರಟವನ್ನು ಆಕಳತುಪ್ಪದಲ್ಲಿ ಕರಿಯಬೇಕು. ಅದರಲ್ಲಿ ಹೊರಟ ಬೀಜಸಹ ಆಕಳತುಪ್ಪದಲ್ಲಿ ಕರಿಯಬೇಕು.) ಮೇಲಿನ ಯಾವತ್ತು ಜಿನಸುಗಳನ್ನು ಚೂರ್ಣಮಾಡಿ, ವಸ್ತ್ರಗಾಳಿತಮಾಡಿ ಈ ಎಲ್ಲಾ ಜಿನಸಿನ ಎರಡುಪಾಲು ತೂಕ ಬಿಳೇಸಕ್ಕರೆಯನ್ನು ಬೂದಗುಂಬಳ ರಸದಲ್ಲಿ ಪಾಕಕ್ಕೆ ಇಟ್ಟು ಪಾಕಬಂದನಂತರ ಚೂರ್ಣವೆಲ್ಲಾ ಹಾಕಿ ಕಲಸುತ್ತಾ ಹದವರಿತು ಪಾಕಮಾಡಬೇಕು. ಮೇಲಿನದರಲ್ಲಿ ಸುಗಂಧಿ ವಸ್ತುಗಳಾದ ಜಾಪತ್ರಿ, ಜಾಕಾಯಿ, ಬಾದಾಮಿ, ಯಾಲಕ್ಕಿ, ಬೇದಾನ ಇವುಗಳನ್ನು ಪಾಕ ಇಳದನಂತರ ಹಾಕಬೇಕು. ಕೂಷ್ಮಾಂಡ ಕರರದ್ದನ್ನು ಕೊನೆಗೆ ಹಾಕಬೇಕು. ಕಸ್ತೂರಿ, ಕೇಸರಿ, ಹವಳಭಸ್ಮ, ಕಾಂತಭಸ್ಮ, ಭಂಗಾರದ ವರಕು, ಸಿಲಾಜಿತುಭಸ್ಮ ಇವನ್ನು ಕೊನೆಗೆ ಹಾಕಬೇಕು. ತಿರುವಿ ಒಂದು ಹೊಸಮಡಿಕೆಗೆ ತುಪ್ಪಹಚ್ಚಿ ಅದರಲ್ಲಿ ಈ ಲೇಹ್ಯವನ್ನು ಇಟ್ಟು ಮುಚ್ಚಿಟ್ಟುಕೊಳ್ಳಬೇಕು. ಆಕಳುತುಪ್ಪ, ಜೇನುತುಪ್ಪ ತಕ್ಕಷ್ಟು ಹಾಕಬೇಕು.

ಈ ತುಪ್ಪ, ಜೇನುತುಪ್ಪಗಳನ್ನು ಶೇರಿಸುವಾಗ ವಿಷಮವಾಗಿ ಅಂದರೆ ಒಂದನ್ನು ಸ್ವಲ್ಪ ಜಾಸ್ತಿಯಾಗಿಯೂ, ಒಂದನ್ನು ಕಡಿಮೆಯಾಗಿಯೂ ಶೇರಿಸಬೇಕು. ರೋಗಿಯು ಶೀತಪ್ರಕೃತಿಯುವನಾದರೆ ಜೇನುತುಪ್ಪ ಹೆಚ್ಚು ಹಾಕಬೇಕು. ಸಾಮಾನ್ಯ ಸಂದರ್ಭದಲ್ಲಿ ತುಪ್ಪವನ್ನು ಹೆಚ್ಚು ಹಾಕಬೇಕು. ತುಪ್ಪ ಜೇನುತುಪ್ಪ ಸಮತೂಕವಾಗಿ ಶೇರಿಸಿದರೆ ಅದು ವಿಷತುಲ್ಯವಾಗುತ್ತದೆಂಬುದನ್ನು ಎಲ್ಲಾ ಕಡೆಯಲ್ಲಿಯೂ ತಿಳಿಯತಕ್ಕದ್ದು.

ಮೇಲಿನ ಕೂಷ್ಮಾಂಡಾವಲೇಹವನ್ನು ದಿನ ೨ ಹೊತ್ತು ಹೊತ್ತಿಗೆ ೧ ತೊಲಾದಿಂದ ದೇಹದ ಸತ್ವವರಿತು ಸೇವಿಸುತ್ತಾ ಬರುವದು. ಇದರಿಂದ ಆನೆಯಷ್ಟು ಬಲವೂ, ರಕ್ತವೃದ್ಧಿಯೂ, ಅಪಾರವಾದ ವೀರ್ಯವೃದ್ಧಿಯೂ, ತೇಜಸ್ಸು, ಎಲ್ಲಾ ರಕ್ತಾದಿ ಧಾತುಗಳ ವೃದ್ಧಿಯೂ ಉಂಟಾಗುವದಲ್ಲದೆ, ಸಮಸ್ತ ಗರಮಿ ಜಾಡ್ಯಗಳೂ, ಮೂತ್ರ ದೋಷಗಳೂ, ಆಮ್ಲಪಿತ್ತ, ರಕ್ತಪಿತ್ತ, ಉಷ್ಣವಿಕಾರಗಳೂ ನಿರ್ನಾಮವಾಗುವವು. ಒಂದು ಮಂಡಲ ಸೇವಿಸುವದು. ಮಧುರಾಹಾರವನ್ನು ಹೆಚ್ಚಾಗಿ ಸೇವಿಸಬೇಕು. ಶಲದಿಯೂ, ಸ್ತ್ರೀಸಂಗವೂ ವರ್ಜ್ಯ.

"ತ್ರ್ಯೂಷಣಂ ತ್ರಿಫಲಾ ಮುಸ್ತಾ ತ್ರಿಜಾತಂ ಸೈಂಧವಂ ಶಟೀ ॥ ಧಾನ್ಯಕಂ ವಾಲುಕಂ ಚೈವ, ಕಸ್ತೂರೀ ಗೋಸ್ತನೀ ತುಗಾ ॥ ಜಾತೀಕೋಶಫಲಂ ಮಾಂಸೀ ಪತ್ರಂ ನಾಗೇಂದ್ರ ಗ್ರಂಥಿಕಮ್॥ ಶತಪುಷ್ಪಾ ವಿದಾರೀ ಚ ಪ್ರಿಯಂಗುಶ್ಚ ಲವಂಗಕಮ್ ॥ ಸರಲಂ ಶೈಲಜಂ, ಕುಂಭಂ, ಜಾತೀಪುಷ್ಪಂ ಯವಾನಿಕಾ ॥ ಕಟ್ಫಲಂ, ಕೇಸರಂ ಮೇಥೀ ಮಧುಕಂ ಸುರದಾರು ಚ ॥ ಮಿಸಿ ತಾಲೀಸಪತ್ರಂ ಚ ಖರ್ಜೂರಂ ಕೇತಕೀ ತಥಾ ॥ ಚಂದನಂ ತಗರಂ ಕ್ಷಾರಂ ಪ್ರತ್ಯೇಕಂ ಕರ್ಷಸಮ್ಮಿತಮ್ ॥ ಆಲೋಢ್ಯ ತ್ರಿಸುಗಂಧೇನ ಕರ್ಪೂರೇಣಾಧಿ ವಾಸಯೇತ್ ॥ ಮೃಣ್ಮಯೇ ಶುದ್ಧಪಾತ್ರೇ ತು ಸ್ಥಾಪಯೇತ್ತದ್ವಿಚಕ್ಷಣಃ ॥ ಕರ್ಷಪ್ರಮಾಣಂ ಕ್ರಮಶಃ ಕ್ಷೀರಂ ಚಾನುಪಯೇತ್ಫಲು ॥ ಪ್ರಾತರ್ಭೋಜನ ಕಾಲೇ ವಾ ಭಕ್ಷಯೇತ್ತದ್ವಿಚಕ್ಷಣಃ ॥ ಪ್ರಮದಾನಾಂ ದಶಂ ಭುಙ್ಕ್ತೇ ನ ಚ ಶುಕ್ರಕ್ಷಯೋ ಭವೇತ್ ॥ ನ ತಸ್ಯ ಲಿಂಗಶೈಥಿಲ್ಯಂ, ವೃದ್ಧಾನಾಂ ಚ ಪ್ರಶಸ್ಯತೇ ॥ ಮಾಸೈಕಮುಪಭೋಗೇನ ಜರಾಂ ಹಂತಿ ನ ಸಂಶಯಃ ॥ ಬಲ್ಯಂ ಪರಂ ವಾತಹರಂ ಶುಕ್ರ ಸಂಜನನಂ ತಥಾ ॥ ಕ್ಷಯಂ ಚೈವ ಮಹಾವ್ಯಾಧಿಂ ಪಂಚಕಾಸಾನ್ ಸುದುಸ್ತರಾನ್ ॥ ವಾತಜಾನ್ ಪೈತ್ತಿಕಾಂಶ್ಚೈವ ಕಫಜಾನ್ ಸನ್ನಿಪಾತಜಾನ್ ॥ ಹಂತ್ಯಷ್ಟಾದಶ ಕುಷ್ಠಾನಿ ವಾತರಕ್ತಾನಿ ಕಾನಿಚ ॥ ಪ್ರಮೇಹಂ ಶ್ಲೀಪದಂ ಶೋಥಂ ಲಕ್ಷ್ಮೀ ಕಾಂತಿ ವಿವರ್ಧನಮ್॥ ಸರ್ವಾನರ್ಶೋಗದಾನ್ ಹಂತಿ ವೃಕ್ಷ ಮಿಂದ್ರಾಶನಿರ್ಯಥಾ ॥ ನಾತಃ ಪರತರಂ ಶ್ರೇಷ್ಠಂ ವಿದ್ಯತೇ ವಾಜಿಕರ್ಮಸು ॥ ಸ್ತ್ರೀಣಾಂ ಚೈವಾಽನಪತ್ಯಾನಾಂ ದುರ್ಬಲಾನಾಂ ಚ ದೇಹಿನಾಮ್ ॥ ಕ್ಲೀಬಾನಾಮಲ್ಪಶುಕ್ರಾಣಾಂ ಶೀರ್ಣಾನಾಮಲ್ಪರೇತಸಾಮ್ ॥ ಓಜಸ್ತೇಜಃ ಸ್ವರಂ ಬುದ್ಧಿ ಮಾಯುಃಪ್ರಾಣಂ ವಿವರ್ಧಯೇತ್ ॥"

“ ತ್ರ್ಯೂಷಣ, ತ್ರಿಫಲೆ, ಮುಸ್ತಾ, ಧನಿಯ, ದಾಲಚಿನ್ನಿ, ಯಾಲಕ್ಕಿ, ಲವಂಗಪತ್ರಿ, ಸೈಂಧವಲವಣ, ಕಚೋರ, ಸೊಗದೆಬೇರು, ಗೇಕಿನಗೆಡ್ಡೆ, ಕಸ್ತೂರಿ, ದ್ರಾಕ್ಷಿ, ವಂಶಲೋಚನ, ಜಾಫಲ, ಕೋಶಫಲ, ಬಾಲಹರಡ, ನಾಗಕೇಸರಿ, ಇಂದ್ರಯವೆ, ಹಿಪ್ಪಲೀಮೂಲ, ಶತಾವರಿ, ಚವ್ಯ, ದಾರುಹಲದೀ, ಜ್ಯೋತಿಷ್ಮತೀ, ಲವಂಗ, ದೇವದಾರು, ಗುಗ್ಗುಲ, ಜಾಪತ್ರಿ, ಅಜವಾನ, ಕಟ್ಫಲ, ಕೇಸರಿ, ಮೆಂತ್ಯಾ, ಜೇಷ್ಟಮಧು, ಸೋಪು, ತಾಲೀಸಪತ್ರಿ, ಖರ್ಜೂರ, ಕೇತಕೀ, ಚಂದನ, ತಗರ, ಯವಕ್ಷಾರ, ಇವೆಲ್ಲಾ ೧-೧ ತೊಲಾ ದಂತೆ ತಂದು ಚೂರ್ಣಿಸಿ ದಾಲ್ಚಿನ್ನಿ, ಯಾಲಕ್ಕಿ, ಲವಂಗಪತ್ರಿ, ನಾಗಕೇಸರಿಯ ಚೂರ್ಣದಿಂದ ಆಲೋಡಿತವನ್ನಾಗಿ ಮಾಡಿ, ಪಚ್ಚಕರ್ಪೂರದಿಂದ ಅಧಿವಾಸಿತವನ್ನಾಗಿ ಮಾಡಬೇಕು. ಮಣ್ಣಿನ ಜಿಡ್ಡುಳ್ಳ ಪಾತ್ರೇಲಿ ಉತ್ತಮ ವೈದ್ಯನು ಇದನ್ನು ಇಟ್ಟು ದಿನವೂ ೧ ತೊಲಾ ಚೂರ್ಣವನ್ನು ಬೆಳಗ್ಗೆ ಅಥವಾ ಭೋಜನೋತ್ತರದಲ್ಲಿ ಸೇವಿಸುತ್ತಾ ಮೇಲೆ ಹಾಲು ಕುಡಿಯುವದು. ಇದರ ಸೇವನೆಯಿಂದ ಹತ್ತು ಸ್ತ್ರೀಯರ ಪತಿಯಾಗುತ್ತಾನೆ. ಇದರ ಸೇವನೆಯಿಂದ ಇಂದ್ರಿಯವು ಶಿಥಿಲವಾಗುವದಿಲ್ಲ; ವೃದ್ಧರಿಗೂ ಇದು ಶ್ರೇಷ್ಠವಾದದ್ದು. ೧ ಮಾಸ ಸೇವನೆಮಾಡಿದರೆ ವೃದ್ಧತ್ವವನ್ನು ನಾಶಮಾಡುತ್ತದೆ. ಬಲವೃದ್ಧಿಯಲ್ಲಿ ಹಿತವಾದದ್ದು. ವಾತನಾಶನವನ್ನು ಮಾಡುತ್ತದೆ. ವೀರ್ಯವನ್ನು ವಿಶೇಷವಾಗಿ ಹುಟ್ಟಿಸುತ್ತದೆ. ಕ್ಷಯರೋಗವನ್ನೂ, ೫ ಕಾಸಗಳನ್ನೂ, ವಾತಜ, ಪಿತ್ತಜ, ಕಫಜ, ಸನ್ನಿಪಾತಜ ರೋಗಗಳನ್ನೂ, ೧೮ ಕುಷ್ಟಗಳನ್ನೂ, ವಾತರಕ್ತ, ಪ್ರಮೇಹ, ಶ್ಲೀಪದ, ಶೋಭೆಗಳನ್ನು ಹರಿಸುತ್ತದೆ. ಕಾಂತಿ, ಸಂಪತ್ತುಗಳನ್ನುಂಟುಮಾಡುತ್ತದೆ. ಎಲ್ಲಾ ಅರ್ಶಸ್ಸುಗಳನ್ನೂ ನಾಶಮಾಡುತ್ತದೆ. ವಾಜೀಕರಣದಲ್ಲಿ ಇದಕ್ಕಿಂತಲೂ ಹೆಚ್ಚಾದದ್ದಿಲ್ಲ, ಬಂಜೆಯರಿಗೂ, ದುರ್ಬಲರಿಗೂ, ಕ್ಲೀಬರಿಗೂ, ಅಲ್ಪರೇತಸ್ಸಿನವರಿಗೂ, ಓಜಸ್ಸು, ತೇಜ, ಬಲ, ಸ್ವರ, ಬುದ್ಧಿ, ಆಯುಸ್ಸು ಇವುಗಳನ್ನು ವೃದ್ಧಿಮಾಡುತ್ತದೆ. ”

ವಸಂತಮಾಲಿನೀ ಮಾತ್ರೆ:—ಬಂಗಾರದ ವರ್ಕ ೧ ಭಾಗ, ತೂತು ಮಾಡದ ಮುತ್ತು ೨ ಭಾಗ, ಶಿಲಾಜಿತು ೩ ಭಾಗ, ಮೆಣಸು ೪ ಭಾಗ, ಗೋಮೂತ್ರದಲ್ಲಿ ಶುದ್ಧಿಮಾಡಿದ ಕಪರಿಸತ್ತು ೮ ಭಾಗ ಇವೆಲ್ಲವನ್ನೂ ಖಲ್ವದಲ್ಲಿ ಹಾಕಿಕೊಂಡು ಚನ್ನಾಗಿ ಚೂರ್ಣಿಸಿ ಆಕಳಬೆಣ್ಣೆಯನ್ನು ಬೇಕಾದಷ್ಟು ಹಾಕಿಕೊಂಡು ಅರಿಯುತ್ತಾ ಬರುವದು. ಚನ್ನಾಗಿ ಅರೆದನಂತರ ಅದರ ಜಿಡ್ಡು ಹೋಗುವವರೆಗೂ ನಿಂಬೇಹುಳಿಯಲ್ಲಿ ಅರಿಯುವದು. ಇದಾದನಂತರ ಇದನ್ನು ಶೀಸೆಯಲ್ಲಿಟ್ಟುಕೊಂಡು ಶರೀರ ಬಲವರಿತು ೧-೨ ಗುಂಜಿ ತೂಕವನ್ನು ಹಿಪ್ಪಲಿಚೂರ್ಣ ಜೇನುತುಪ್ಪದ ಅನುಪಾನದಲ್ಲಿ ಕೊಡುತ್ತಾ ಬಂದರೆ ಜೀರ್ಣಜ್ವರ,

ಧಾತುವಿಕಾರ, ಗರ್ಮೀ, ಸಂಗ್ರಹಣೀ, ಮೂತ್ರಕೃಛ್ರ, ಶ್ವಾಸ, ಕಾಸ, ಪ್ರದರ ರೋಗಗಳನ್ನೂ ಅನುಪಾನಭೇದದಿಂದ ನಾಶಮಾಡುವದು, ಆಯುಸ್ತೇಜೋ ವೀರ್ಯಗಳನ್ನುಂಟುಮಾಡುವದು. ಈ ವಸಂತಮಾಲಿನೀ ಮಾತ್ರೆಯು ರಮ್ಯ ವಾದದ್ದು, ವೈದ್ಯರಿಗೆ ಕೀರ್ತಿಯನ್ನು ತರುವದು.

☞ ಇಲ್ಲಿ ಖಪ್ಪರಿಸತ್ತು ಶುದ್ಧಿಮಾಡಬೇಕೆಂದು ಹೇಳಿದೆ. ಈ ಪುಸ್ತಕದಲ್ಲಿ ಎಲ್ಲಾ ದುಷ್ಟಪದಾರ್ಥಗಳನ್ನು ಶುದ್ಧಿಮಾಡುವ ಪ್ರಕರಣವನ್ನು ಬೇರೆ ಬರದಿರುವೆವು. ಅಲ್ಲಿ ನೋಡಿದರೆ ವಿವರವಾಗಿ ತಿಳಿಯುವದು.

**" ಧಾತಕೀ ತ್ರಿಫಲಾ ಚೂರ್ಣಂ ರಸೇನೇಕ್ಷುಜಕೇನ ತು || ಭಾವ ಯಿತ್ವಾ ತತಃ ಪಶ್ಚಾತ್ ಮಧು ಶರ್ಕರ ಸಂಯುತಮ್ || ಜೀ ರ್ಣಕಾಯೋಽಪಿ ತಲ್ಲೀಢ್ವಾ ಪಿಭೇತ್ಕ್ಷೀರಂ ತತೋ ನಿಶಿ || ಕಾಮ ಯೇತ್ಸ್ತ್ರೀಸುಖಂ ಸಮ್ಯಕ್ ಕಾಮಾಗ್ನಿಸ್ತಸ್ಯವರ್ಧತೇ || "**

" ಧಾತಕೀಕುಸುಮ, ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು ಇವು ನಾಲ್ಕನ್ನೂ ಸಮಭಾಗವಾಗಿ ಚೂರ್ಣಿಸಿ ವಸ್ತ್ರಗಾಳಿತಮಾಡಿ ಕಬ್ಬಿನರಸ ದಲ್ಲಿ ಭಾವನೆಮಾಡುತ್ತಾ ಬಿಸಿಲಲ್ಲಿ ಒಣಗಿಸುತ್ತಾ ೨೧ ಭಾವನೆ ಮಾಡಬೇಕು. ಅನಂತರ ಇದರಲ್ಲಿ ಕರ್ಷಮಾತ್ರವನ್ನು ಸಕ್ಕರೆ ಜೇನುತುಪ್ಪದೊಡನೆ ಸಾಯಂ ಕಾಲ ಸೇವಿಸಿ ಮೇಲೆ ಹಾಲು ಕುಡಿಯಬೇಕು. ಇದ್ದರ ಸೇವನೆಯಿಂದ ಜೀರ್ಣನಾದ ಪುರುಷನೂ ಸಹ ಕಾಮಸುಖವನ್ನು ಅತ್ಯಾನಂದದಿಂದನುಭವಿ ಸುವನು. ಕಾಮಾಗ್ನಿಯು ವೀರ್ಯವು ಈ ಚೂರ್ಣಬಲದಿಂದ ವೃದ್ಧಿಯಾ ಗುತ್ತವೆ. ತರುಣನಾದವನೇ ಇದನ್ನು ಸೇವಿಸಿದರೆ ಕೇಳಬೇಕಾದ್ದೇನಿದೆ?"

ವೀರ್ಯಸ್ತಂಭನಕ್ಕೆ:—ನೆಗ್ಗಿಲಬೇರು, ನೆಲ್ಲಿಯಚಟ್ಟು, ಅಮೃತದಬಳ್ಳಿ ಈ ಮೂರನ್ನೂ ಸಮಭಾಗ ಚೂರ್ಣಮಾಡಿ, ಶೋಧಿಸಿಕೊಂಡು ಆ ಚೂ ರ್ಣದ ಸಮತೂಕ ಯಳ್ಳುಹಾಕಿ ಎಲ್ಲವನ್ನೂ ನುಣ್ಣಗರದು ಸಕ್ಕರೆ ಬೆರಸಿ ರಾತ್ರಿ ಅರ್ಧತೊಲೆಯಷ್ಟು ತಿಂದು ಹಾಲು ಕುಡಿಯುವದು. ಆ ರಾತ್ರಿ ರತಿ ಕಾಲದಲ್ಲಿ ನಿಪುಣನಾಗಿರುತ್ತಾನೆ.

ಜೀವಂತಿಯಚೂರ್ಣ ೧ ತೊಲೆಯನ್ನು ಕರೀ ಆಕಳಹಾಲು ೧ ಪಾವು ಕಾಶಿದ್ದರಲ್ಲಿ ಶೇರಿಸಿ ಕುಡಿಯುತ್ತಾ ಪಥ್ಯ ಶಲದಿ, ಸ್ತ್ರೀಸಂಗವಿಲ್ಲದೆ ೨೧ ದಿನ ಸೇವಿಸಲು ನಪುಂಸಕತನವು ನಿರ್ಮೂಲವಾಗಿ ಮಹಾ ವೀರ್ಯವೃದ್ಧಿಯಾಗುವದು. ಹೋದ ಗಂಡಸುತನ ಬರುತ್ತದೆ.

**" ಅಮೃತಾಽಮಲಕೀ ತ್ರಿಕಂಟಕಾನಾಮ್ |**
**ಹವಿಷಾ ಶರ್ಕರಯಾ ನಿಷೇವಣೇನ ||**

**ಅಜರಾ ಅಮರಾ ಅಪಾರವೀರ್ಯಾ ।**
**ಅಳಿಕೇಶಾ ಅದಿತೇಸ್ಸುತಾ ಅಭೂವನ್ ॥"**

"ಅಮೃತದಬಳ್ಳಿಯಸತ್ತು, ನೆಲ್ಲೀಚಟ್ಟು, ಆನೆನೆಗ್ಗಿಲು ಇವುಗಳನ್ನು ಚೂರ್ನಮಾಡಿ, ವಸ್ತ್ರಗಾಳಿತಮಾಡಿ ಅದನ್ನು ತುಪ್ಪ, ಸಕ್ಕರೆ ಬೆರಸಿ ಸೇವಿಸುತ್ತಾ ಬರುವದು (ಮೇಲೆ ಹಾಲು ಕುಡಿಯಬೇಕು.) ಇದರ ಸೇವನೆಯಿಂದಲೇ ಅದಿತಿಯ ಪುತ್ರರಾದ ದೇವತೆಗಳು ಜರಾರಹಿತರಾಗಿಯೂ, ಮರಣರಹಿತರಾಗಿಯೂ, ಅಪಾರ ವೀರ್ಯರಾಗಿಯೂ, ಕಪ್ಪಾದ ಕೂದಲುಳ್ಳವರಾಗಿಯೂ ಆಗಿದ್ದಾರೆ." ಅಂದರೆ ಈ ಚೂರ್ಣ ಸೇವನೆಯಿಂದ ಇವೆಲ್ಲಾ ಗುಣಗಳೂ ಉಂಟಾಗುವವೆಂದು ಭಾವವು.

**"ವಿದಾರೀ ಕಂದ ಕಲ್ಕಂ ತು ಘೃತೇನ ಪಯಸಾ ನರಃ ॥ ಉ**
**ದುಂಬರಸಮಂ ಖಾದನ್ ವೃದ್ಧೋಽಪಿ ತರುಣಾಯತೇ ॥"**

"ನೆಲಗುಂಬಳಗಡ್ಡೆ ೧ ತೊಲೆ ಚೂರ್ಣವನ್ನು ಘೃತದೊಂದಿಗೆ ಸೇವಿಸಿ ಮೇಲೆ ಹಾಲು ಕುಡಿಯುತ್ತಾ ಬಂದರೆ ವೃದ್ಧನೂ ತರುಣನಾಗುತ್ತಾನೆ. ಇಂತಾದ್ದರಲ್ಲಿ ತರುಣನೇ ಸೇವಿಸಿದರೆ ಸ್ತ್ರೀಸೌಖ್ಯದಲ್ಲಿ ಮನ್ಮಥನೇ ಆಗುತ್ತಾನೆ."

**"ಚೂರ್ಣಂ ಘೃತಂಕ್ಷೌದ್ರಯುತಂ ರಸೈಸ್ಸ್ವೈಃ ।**
**ವಿಭಾವಿತಾಯಾ ಬಹುಧಾ ವಿದಾರ್ಯಾಃ ॥**
**ನಿಷೇವ್ಯಮಾಣೋಽನುದಿನಂ ವಿಲಾಸೀ ।**
**ದಶಾಂಗನಾ ಭಿಸ್ಸಹಸಾ ರಮೇತ ॥"**

"ವಿದಾರೀ (ನೆಲಗುಂಬಳಗಡ್ಡೆ) ರಸದಿಂದ ಅನೇಕಸಲ ಭಾವನೆಮಾಡಿ ಬಿಸಿಲಲ್ಲಿ ಒಣಗಿಸಿದ ನೆಲಗುಂಬಳಗೆಡ್ಡೆ ಚೂರ್ಣವನ್ನು ದಿನಂಪ್ರತಿ ೧ ಹೊತ್ತು ೧ ತೊಲೆಯಂತೆ ತುಪ್ಪ, ಜೇನುತುಪ್ಪ (ತುಪ್ಪಕ್ಕಿಂತ ಸ್ವಲ್ಪ ಕಡಮೆ) ಗಳಿಂದ ಕಲಿಸಿ ಸೇವಿಸುತ್ತಾ ಮೇಲೆ ಹಾಲು ಕುಡಿಯುತ್ತಾ ಬರುವ ವಿಲಾಸೀ ಪುರುಷನು ಹತ್ತು ಜನ ಸ್ತ್ರೀಯರನ್ನಾದರೂ ಜೈಸುವಷ್ಟು ವೀರ್ಯಯುಕ್ತನಾಗುವನು."

ಲಾಕ್ಷಾದಿ ತೈಲ:—ಅರಳೀಮರದ ಅರಗು ೨೦ ತೊಲಾ, ಶೀನೀರು ೪೮೦ ತೊಲಾ, ಪಠಾಣೀಲೋಧ್ರ ೫ ತೊಲಾ, ಇವನ್ನು ಕಷಾಯವಿಟ್ಟು ಲಘ್ವಗ್ನಿಯಿಂದ ಚತುರ್ಥಾಂಶ ಕಷಾಯವನ್ನು ಇಳಿಸಿಕ್ಕೊಂಡು, ಅದರಲ್ಲಿ ಆಕಳಮಜ್ಜಿಗೆ ೮೦ ತೊಲಾ, ಯಳ್ಳಯಣ್ಣೆ ೮೦ ತೊಲಾ, ಸೋಪು, ಅಶ್ವಗಂಧಿ, ಅರಿಶಿನ, ದೇವದಾರು, ಬೂರಗದಅಂಟು, ಪರ್ಪಾಷ್ಟಕ, ಕಟುಕರೋಹಿಣಿ, ಜೇಷ್ಟಮಧು, ತುಂಗಮುಸ್ತೆ, ರಕ್ತಚಂದನ, ರಾಸ್ಮೆ ಇವೆಲ್ಲಾ ತಲಾ ಒಂದೊಂ

ದು ತೊಲೆಯಂತೆ ಶೇರಿಸಿ ಚೂರ್ಣಿಸಿ, ವಸ್ತ್ರಗಾಳಿತಮಾಡಿ ಆ ತೈಲದಲ್ಲಿ ಹಾಕಿ ಎಲ್ಲವನ್ನೂ ಒಂದೇವಿಧವಾದ ಲಘ್ವಗ್ನಿಯಿಂದ ಪಾಕಮಾಡಬೇಕು, ತಳ ಹೀಯಬಾರದು, ರಸವೆಲ್ಲಾ ಇಮರಿ ತೈಲಮಾತ್ರ ಉಳಿದನಂತರ ಒಳ್ಳೇ ಸುವಾಸನೆ ಬರತೊಡಗಲು ಇಳಿಹಿಕೊಂಡು ಗಾಜಿನಕುಪ್ಪಿಯಲ್ಲಿ ತುಂಬಿಟ್ಟುಕೊಂಡು ಆ ತೈಲವನ್ನು ಮರ್ದನಮಾಡುವದರಿಂದ ಜೀರ್ಣಜ್ವರ, ವಿಷಮಜ್ವರ ನಿವಾರಣೆಯಾಗುವದಲ್ಲದೆ ರಕ್ತಶುದ್ಧಿ, ಧಾತುವೃದ್ಧಿಯಾಗುವದು. ಬಲ ಪುಷ್ಟಿಕಾರಿ.

"ಸ್ವಯಂಗುಪ್ತೇಕ್ಷುರಕಯೋಃ ಬೀಜಚೂರ್ಣಂ ಸಶರ್ಕರಮ್॥ ಧಾರೋಷ್ಣೇನ ನರಃ ಪೀತ್ವಾ ಪಯಸಾ ನ ಕ್ಷಯಂ ವ್ರಜೇತ್॥"

"ನಸುಗುನ್ನಿಬೀಜ, ಕೊಳವಳಿಕೆಬೀಜ ಸಮವಾಗಿ ಚೂರ್ಣಿಸಿ, ದಿನ ೧ ಹೊತ್ತು ಸಕ್ಕರೆಯೊಡನೆ ಧಾರೋಷ್ಣ ಹಾಲಿನಲ್ಲಿ ಸೇವಿಸುತ್ತಾ ಬಂದರೆ ಅವನಿಗೆ ವೀರ್ಯವು ಎಂದೆಂದಿಗೂ ಕ್ಷೀಣಿಸುವದಿಲ್ಲ."

"ಶಕ್ರಾಶನಸ್ಯ ಬೀಜಾನಾಂ ಚೂರ್ಣಾನ್ಯಷ್ಟ ಪಲಾನಿ ಚ ॥ ಹವಿಷಃ ಕುಡವಂ ಚೈಕಂ ಸಿತಾ ಪ್ರಸ್ಥಂ ಪ್ರಗೃಹ್ಯ ಚ ॥ ಶತಾವರೀರಸಃ ಪ್ರಸ್ಥಂ ತಥಾ ಶಕ್ರಾಸನಸ್ಯ ಚ ॥ ಗವಾಮಜಾ ಪಯಃ ಪ್ರಸ್ಥಂ ತತಃ ಪ್ರಸ್ಥದ್ವಯಂ ಪಚೇತ್॥ ಧಾತ್ರೀ ದ್ವಿಜೀರಕಂ ಮುಸ್ಥಂ ತ್ವಗೇಲಾ ಪತ್ರಕೇಸರಮ್ ॥ ಆತ್ಮಗುಪ್ತಾ ಜಾತಿಬಲಾ ತಾಲಾಂಕುರಕ ಸೇರುಕಮ್ ॥ ಶೃಂಗಾಟಕಂ ತ್ರಿಕಟುಕಂ ಧಾನ್ಯಮಭ್ರಂ ಚವಂಗಕಮ್ ॥ ಪಥ್ಯಾ ದ್ರಾಕ್ಷಾ ಚ ಕಾಕೋಲ್ಯೌ, ಖರ್ಜೂರಂ ಕ್ಷುರಕಂ ತಥಾ ॥ ಕಟುಕಾ ಮಧುಕಂ ಕುಷ್ಟಂ ಲವಂಗಂ ಸಾರಸೈಂಧವಮ್ ॥ ಯವಾನೀ ಜಾಜನೋದಾ ಚ ಜೀವಂತೀ ಗಜಪಿಪ್ಪಲೀ ॥ ಪ್ರತ್ಯೇಕಂ ಕರ್ಷಮೇಕಂತು ಚೂರ್ಣಿತಾನಿ ಶುಭಾನಿ ಚ ॥ ಕುಡವಾರ್ಧಂ ಪಾಕಶೇಷೆ ಮಧುನಃ ಪ್ರಕ್ಷಿಪೇತ್ತತಃ॥ ಮೃಗಾಂಡಜಂ ಸಕರ್ಪೂರಂ ಯಥಾಲಾಭಂ ವಿನಿಕ್ಷಿಪೇತ್ ॥ ರತಿವಲ್ಲಭನಾಮಾಯಂ ಸೇವ್ಯಮಾನೋ ಮಹಾರಸಃ॥ ಪರಮೌಜಸ್ಕರೋ ಬಲ್ಯೋ ವಾತವ್ಯಾಧಿ ವಿನಾಶನಃ ॥ ರಕ್ತಪಿತ್ತಹರೋ ವೃಷ್ಯೋ ದೃಷ್ಟಿಸಂದೀಪನಃ ಪರಃ॥ ಪಿತ್ತಶ್ಲೇಷ್ಮಾಮಪಿತ್ತಘ್ನೋ ವಿಷಗುಲ್ಮಜ್ವರಾಪಹಃ॥ ಯಾಪಯನ್ಯೇಷಮಂದಾಗ್ನಿಂ ರೋಗಾಣಾಂ ಕ್ಷಯಹೇತುಕಃ ॥ ನ ಭವೇಲ್ಲಿಂಗಶೈಥಿಲ್ಯಂ ವೃದ್ಧಾನಾಂ ಪುಷ್ಟಿವರ್ಧನಃ ॥ ಯಸ್ಯ ಗೇಹೇ ಸದಾಬಹ್ವ್ಯಃ ಪತ್ನ್ಯಃ ಸ್ಯುಃ ಸುಮನೋಹರಾಃ ॥ ರಸಃ ಸೇವ್ಯಃ ಸದೈವಾಯಂ ಮೋದಕೋ ರತಿವಲ್ಲಭಃ ॥"

“ಇಂದ್ರಜವೆಯಚೂರ್ಣ ೩೨ ತೊಲೆ, ಆಕಳತುಪ್ಪ ೧೬ ತೊಲೆ, ಸಕ್ಕರೆ ೬೪ ತೊಲೆ, ಶತಾವರಿಯರಸ ೬೪ ತೊಲೆ, ಇಂದ್ರಜವೆಯರಸ ೬೪ ತೊಲೆ, ಆಕಳಹಾಲು ೬೪ ತೊಲೆ, ಆಡಿನಹಾಲು ೬೪ ತೊಲೆ ಇವುಗಳನ್ನು ಪಾಕಮಾಡಬೇಕು. ತದನಂತರ—ನೆಲ್ಲೀಚಟ್ಟು, ೨ ಜೀರಿಗೆ, ತುಂಗಮುಸ್ತೆ, ದಾಲಚಿನ್ನಿ, ಯಾಲಕ್ಕಿ, ಲವಂಗಪತ್ರ, ಕೇಸರಿ, ನಸುಗುನ್ನಿಬೀಜ, ಪೇರಾಮುಟ್ಟ (ಬಟ್ಟಗಡಲೆ), ತಾಳೆಯಚಿಗರು, ಕಸೇರುವೆಂಬ ಗ್ರಂಥಿಕದ್ರವ್ಯ, ಶಿಂಘಾಡಾ ಎಂಬ ದ್ರವ್ಯ, ತ್ರಿಕಟುಕ, ಕೊತ್ತುಂಬರೀಬೀಜ, ಅಭ್ರಕಭಸ್ಮ, ವಂಗಭಸ್ಮ, ಅಳಲೇಕಾಯಿ, ದ್ರಾಕ್ಷೆ, ಕಾಕೋಲೀ, ಕ್ಷೀರಕಾಕೋಲೀ, ಖರ್ಜೂರ, ತಾಲಮಖಾನಾಬೀಜ, ಕಟುಕರೋಹಿಣಿ, ಜೇಷ್ಟಮಧು, ಚಂಗಲಕೋಷ್ಟ, ಲವಂಗ, ಸೈಂಧವಲವಣ, ಅಜವಾನ, ಅಜಮೋದ, ಜೀವಂತೀ, ಗಜಹಿಪ್ಪಲಿ ಇವೆಲ್ಲಾ ೧—೧ ತೊಲಾದಂತೆ ಶೇರಿಸಿ, ಚೂರ್ಣಿಸಿ, ವಸ್ತ್ರಗಾಳಿತಮಾಡಿ ಪಾಕಕ್ಕೆ ಹಾಕಿ ಕೂಡಿಸಿದನಂತರ ೧೬ ತೊಲೆ ನವೀನವಾದ ಜೇನುತುಪ್ಪವನ್ನೂ ಹಾಕಿ—ಸ್ವಲ್ಪ ಕಸ್ತೂರಿ, ಪಚ್ಚಕರ್ಪೂರ (ಶಿಕ್ಕಿದಷ್ಟು) ಹಾಕುವದು. ಇದು ರತಿವಲ್ಲಭವೆಂಬ ಪಾಕವು, ಬಹು ಪುಷ್ಟಿಯನ್ನುಂಟುಮಾಡುತ್ತದೆ. ವಾತವ್ಯಾಧಿಗಳನ್ನು ನಾಶಮಾಡುತ್ತದೆ. ರಕ್ತಪಿತ್ತವನ್ನು ಧ್ವಂಸಮಾಡುತ್ತದೆ. ವೀರ್ಯವೃದ್ಧಿಕರ, ದೃಷ್ಟಿಯನ್ನು ಪ್ರಕಾಶಪಡಿಸುತ್ತದೆ. ಪಿತ್ತ, ಕಫ, ಆಮಪಿತ್ತ, ವಿಷ, ಗುಲ್ಮ, ಜ್ವರ ಇವುಗಳನ್ನು ಹರಿಸುತ್ತದೆ. ಮಂದಾಗ್ನಿಯನ್ನು ದೂರಮಾಡುತ್ತದೆ. ಇದರ ಸೇವನೆಯಿಂದ ಲಿಂಗವು ಯಾವಾಗಲೂ ಶಿಥಿಲವಾಗುವದಿಲ್ಲ; ವೃದ್ಧರಿಗೂ ಪುಷ್ಟಿಪ್ರದವು. ಯಾರ ಮನೆಯಲ್ಲಿ ಮಹಾವಿಲಾಸಯುಕ್ತರಾದ ಅನೇಕ ಹೆಂಡತಿಯರು ಇರುವರೋ ಆ ಪುರುಷನು ಈ ರತಿವಲ್ಲಭಪಾಕವನ್ನು ಸೇವಿಸಬೇಕು. ಅವನು ರತಿಯಲ್ಲಿ ಇಂದ್ರನಂತಾಗುವನು.”

ಆನೆನೆಗ್ಗಿಲು, ತಾಲಮಖಾನಾ, ಅಶ್ವಗಂಧಿ, ಶತಾವರಿ, ಸಫೇದಮುಸಲೀ, ನಸುಗುನ್ನಿಬೀಜ, ಜೇಷ್ಟಮಧು, ಚಿಟ್ಟಾಮುಟ್ಟ, ಬಟ್ಟಗಡಲೆ (ಪೇರಾಮುಟ್ಟ) ಇವೆಲ್ಲಾ ಸಮತೂಕವಾಗಿ ಚೂರ್ನಿಸಿ, ವಸ್ತ್ರಗಾಳಿತಮಾಡಿ ದಿನವೂ ರಾತ್ರಿಹೊತ್ತು ಅರ್ಧತೊಲಾ ಚೂರ್ನ, ಅರ್ಧತೊಲೆ ಸಕ್ಕರೆ ಶೇರಿಸಿ ಸೇವಿಸುವದು, ಮೇಲೆ ಕಾದ ಆಕಳಹಾಲನ್ನು ಅಥವಾ ಯಮ್ಮೇಹಾಲನ್ನು ಕುಡಿಯುವದು. ಪಥ್ಯದಲ್ಲಿದ್ದರೆ ಮಹಾವೀರ್ಯಪ್ರದವು. ನಪುಂಸಕತೆಯನ್ನು ನಿವಾರಿಸುತ್ತದೆ. ೧ ಮಂಡಲ ಸ್ತ್ರೀಭೋಗ ಕೂಡದು.

**“ಕಪಿಕಚ್ಛುಕ ಮೂಲಾನಿ, ತಿಲಾಶ್ಚೈವಾಶ್ವಗಂಧಿಕಾ ॥ ವಿದಾರೀ ಕಂದಜಂ ಚೂರ್ಣಂ ಷಷ್ಟಿಕಾ ತಂಡುಲಾನಿ ಚ ॥ ಏತಾನಿ ಪಯ**

ಸಾ ಪಿಷ್ಟ್ವಾಘೃತೇನ ಸಹ ಪಾಯಯೇತ್ ॥ ದಿನೇ ದಿನೇ ಚ ಸಂ
ಭಕ್ಷ್ಯೇದ್ಯದಿ ನಾರೀ ಗೃಹೇ ಭವೇತ್ ॥ "

" ನಸುಗುನ್ನಿಬೀಜ, ತೊಳಿಯದ ಎಳ್ಳು, ಅಶ್ವಗಂಧಿ, ನೆಲಗುಂಬಳ ಗಡ್ಡೆಯ ಚೂರ್ಣ, ೬೦ ದಿನಕ್ಕೆ ಬೆಳೆಯುವ ಭತ್ತದ ಅಕ್ಕಿ ಹಿಟ್ಟು ಇವೆಲ್ಲ ಸಮವಾಗಿ ಚೂರ್ಣಿಸಿ ದಿನ ೨ ಹೊತ್ತು ೧__೧ ತೊಲೆಯಂತೆ ಚೂರ್ಣವನ್ನು ಸಕ್ಕರೆಯೊಡನೆ ಸೇವಿಸಿ ಮೇಲೆ ಕಾದಹಾಲಿಗೆ ತುಪ್ಪಹಾಕಿಕೊಂಡು ಕುಡಿಯುತ್ತಾ ೨೧ ದಿನ ಅಥವಾ ೧ ಮಂಡಲ ಸೇವಿಸಿದರೆ ಅವನಮನೇಲಿ ನವಯೌವನಾಸ್ತ್ರೀ ಇರಲೇಬೇಕು. ಇಲ್ಲವಾದರೆ ನಿತ್ಯವೂ ಸೇವಿಸಲಿಕ್ಕಾಗದು. "

" ಮಾಷಾ ಯವೋ ಽಶ್ವಗಂಧಾಚ ವಾನರೀ ಶತಮೂಲಿಕಾ ॥
ಕೋಕಿಲಾಕ್ಷಸ್ಯ ಬೀಜಾನಿ ಶಾಲ್ಮಲೀ ಚ ಶತಾವರೀ ॥ ಸಘೃತಂ
ಪಯಸಾ ಪೀತ್ವಾ ಷಂಡೋಽಪಿ ರಮಯೇತ್ಸ್ತ್ರಿಯಂ ॥ "

" ಉದ್ದು, ಯವ, ಅಶ್ವಗಂಧಿ, ನಸುಗುನ್ನಿಬೀಜ, ಶತಾವರಿ, ತಾಲಮಖಾನಾ, ಬೂರಗದಅಂಟು, ಮಜ್ಜಿಗೆಗಡ್ಡೆ ಇವೆಲ್ಲಾ ಸಮವಾಗಿ ಚೂರ್ಣಿಸಿ ರಾತ್ರಿಕಾಲ ೧ ತೊಲೆ ಸಕ್ಕರೆ ತುಪ್ಪದೊಂದಿಗೆ ಸೇವಿಸಿ ಕಾದಹಾಲು ಕುಡಿಯುತ್ತಾ ಬರಲು ಷಂಡನು ಸಹ ಸ್ತ್ರೀಸುಖದಲ್ಲಿ ಸಮರ್ಥನಾಗುತ್ತಾನೆ. "

" ಶತಾವರೀ ತು ನಿಷ್ಪೀಡ್ಯ ರಸಪ್ರಸ್ಥದ್ವಯಂ ಹರೇತ್ ॥ ತೈಲಂ ತೇನ ಪಚೇತ್ಪ್ರಸ್ಥಂ ಕ್ಷೀರಂ ದತ್ವಾ ಚತುರ್ಗುಣಮ್ ॥ ತತ್ತೈಲಂ ಚ ಪಚೇದ್ಧೀರಃ ಶನೈಃ ಮೃದ್ವಗ್ನಿನಾ ಶುಭಮ್ ॥ ಓಷಧೀನಾಂ ತತೋಭಾಗಂ ದಾಪಯೇತ್ಕರ್ಷಮಾತ್ರಕಮ್ ॥ ಶತಪುಷ್ಪಾ ದೇವದಾರು ಮಾಂಸೀ ಶೈಲೇಯಕಂ ವಚಾ ॥ ಚಂದನಂ ತಗರಂಕುಷ್ಟಂ ಏಲಾಚಾಂಶುಮತೀ ಬಲಾ ॥ ರಾಸ್ನಾಚೈವಾಶ್ವಗಂಧಾ ಚ ವಿಡಂಗಂ ಮರಿಚಾನಿ ಚ ॥ ಪೀಲುಪರ್ಣೀ ಚತ್ವಕ್ಪತ್ರಂ ತಥಾಗಂಧರ್ವಹಸ್ತಿಕಾ ॥ ಸೈಂಧವಂ ಚ ಸಮಂ ದದ್ಯಾದ್ದ್ವಿಶ್ವಭೇಷಜಮೇವಚ ॥ ಏಷಾಂ ಕಲ್ಕೈಃ ಪಚೇದ್ಧೀಮಾನ್ ಶೃಂಗಬೇರರಸೇ ತತಃ ॥ ಸಿದ್ಧಂ ಜ್ಞಾತ್ವಾ ಸಮುತ್ತಾರ್ಯ ಮುದ್ಧಾರಯೇಚ್ಛುಭ ವಾಸರೇ ॥ ಕುಬ್ಜಾ ಯೇ ವಾಮನಾಶ್ಚೈವ ಪಂಗುಪಾದ ಜಡಾಶ್ಚ ಯೇ ॥ ಮಹಾವಾತೇನ ಯೇ ಭಗ್ನಾ, ಹಿತಂ ತೇಷಾಂ ವಿಸರ್ಪಿಣಾಮ್ ॥ ಸಂಕೋಚನೇ ತು ಗಾತ್ರಾಣಾಮ್ ಸನ್ನಿಪಾತೇ ಚ ದಾರುಣೇ ॥ ಗ್ರಂಥಿರೋಗೇ ಚ ಹೃಚ್ಛೂಲೇ ಹಿತಮೇತ ಚ್ಛಿರೋಗ್ರಹೇ ॥ ಶಮಯೇತ್ಕುಕ್ಷಿಶೂಲಾನಿ, ಕರ್ಣಶೂಲಾನ್ಯನೇಕಶಃ ॥ ರೋಗಾಸಂತರ್ಗತೋಕ್ತಾಂಶ್ಚ ಸರ್ವಾನೇತದ್ವ್ಯ

ಪ್ರೋಹತಿ ॥ ಯೇಷಾಂ ಶುಷ್ಯತಿ ವೈಕಾವೋ, ಯೇಷಾಂ ಚಿತ್ತ ಭ್ರಮೋ ಭವೇತ್ ॥ ಜೀರ್ಣೇಂದ್ರಿಯಾಶ್ಚ ಯೇ ಮರ್ತ್ಯಾಃ ಜರಯಾಜರ್ಜರೀಕೃತಾಃ ॥ ಮಂದ ಮೇಧಾವಿನೋ ಯೇ ಚ ಶ್ರುತಿರ್ಯೇಷಾಂ ಪ್ರಣಶ್ಯತಿ ॥ ಭುಕ್ತಂ ನಜೀರ್ಯತೇ ಯೇಷಾಂ ಅಗ್ನಿರ್ಮಂದತರೋ ಭವೇತ್ ॥ ಯಾ ಚ ವಂಧ್ಯಾ ಭವೇನ್ನಾರೀ ಕಾಕವಂಧ್ಯಾಚಯಾಭವೇತ್ ॥ ಯೋನಿ ರೋಗಗತಾ ಕಾಚಿದ್ಗರ್ಭಂ ಗೃಹ್ಣಾತಿ ಯಾ ನವಾ ॥ ಪ್ರಮೇಹೇಷು ಚ ಸರ್ವೇಷು ಹ್ಯಂಡವೃದ್ಧಿ ಗದೇಷು ಚ ॥ ಭ್ರಮೇಷು ಪಾಂಡುರೋಗೇಷು ಕಾಮಲಾ ಯಾಮಿದಂ ಹಿತಮ್॥ ಅಪಸ್ಮಾರಂ ಗಂಡಮಾಲಾಂ ವಾತಶೋಣಿತಮೇವ ಚ ॥ ಪಿಟಕಾಃ ಸರ್ವ ಕುಷ್ಠಾಂಶ್ಚ ದದ್ರುಂ ಪಾಮಾಂ ವಿಚರ್ಚಿಕಾಮ್ ॥ ವಿನಿಹಂತಿ ಜ್ವರಾನ್ ಸರ್ವಾನ್ ವಾತಪಿತ್ತಕಫೋತ್ಥಿತಾನ್ ॥ ಮಾಸಮೇಕಂ ಪಿಬೇದ್ಯಸ್ತು ಯೌವನಸ್ಥಃ ಪುನರ್ಭವೇತ್ ॥ ಕಾಮಾಗ್ನಿ ಜನನಂ ಚೈತತ್ ಬಲವೀರ್ಯವಿವರ್ಧನಮ್ ॥ ನಸ್ಯೇ ಪಾನೇ ತಥಾಭ್ಯಂಗೇ ನರೋ ನಿತ್ಯಂ ಚ ಸೇವಯೇತ್ ॥ ಏತಚ್ಛತಾವರೀ ತೈಲಂ ನರನಾರೀ ಹಿತಾವಹಮ್ ॥ "

"ಹಶೀ ಶತಾವರೀ ಗಡ್ಡೆಗಳಿಂದ ತೆಗದ ಅಪ್ರೂಟರಸ ೧೬೦ ತೊಲಾ, ಯಳ್ಳಯಣ್ಣೆ ೪೦ ತೊಲಾ, ಆಕಳಹಾಲು ೩೨೦ ತೊಲಾ, ಇದನ್ನು ಕೂಡಿಸಿ ಪಾಕಮಾಡುತ್ತಾ ಈ ಕೆಳಗಿನ ಔಷಧಗಳನ್ನು ತಲಾ ೧—೧ ತೊಲಾದಂತೆ ಹಾಕಬೇಕು. ಸೋಪ್ರು, ದೇವದಾರು, ಬಾಲಹರಡಾ, ಶಿಲಾಜಿತು, ಬಜೆ, ಕೆಂಪುಚಂದನ, ತಗರ, ಕೋಷ್ಟ, ಯಾಲಕ್ಕಿ, ಅಂಶಮತೀ, ಕಳ್ಳಂಗಡಲೆ, ರಾಸ್ನೆ, ಅಶ್ವಗಂಧಿ, ವಾಯುವಿಳಂಗ, ಮೋಸು, ಪೀಲುಪರ್ಣೀ, ದಾಲಚಿನ್ನಿ, ಲವಂಗಪತ್ರಿ, ಹರಳಬೇರು, ಸೈಂಧವಲವಣ, ಶುಂಠಿ ಇವೆಲ್ಲಾ ಶೇರಿಸಿ ಚೂರ್ಣಿಸಿ, ವಸ್ತ್ರಗಾಳಿತಮಾಡಿ ಶೇರಿಸುವದು. ಸ್ವಲ್ಪ ಹಶೀಶುಂಠೀರಸವನ್ನೂ ಹಾಕಬೇಕು. ಪಾಕವಾಗಿ ಇಳಿಸಿಕೊಂಡು, ಇದನ್ನು ದಿನವೂ ಶರೀರಕ್ಕೆ ಮಾಲಿಸ್ (ಲೇಪ) ಮಾಡುತ್ತಾ ಬರಬೇಕು. ಇದರಿಂದ ವಾಶಿಯಾಗುವ ರೋಗಗಳು—ಕುಬ್ಜ, ವಾಮನ, ಪಂಗು, ಪಾದಜಡತಾ ಮುಂತಾದ ವಾಯು ವಿಕಾರಗಳಿಗೂ, ಭಗ್ನರೋಗ, ವಿಸರ್ಪ, ಗಾತ್ರಸಂಕೋಚನ, ದಾರುಣವಾದ ಸನ್ನಿಪಾತ, ಗ್ರಂಥಿರೋಗ, ಹೃದಯಶೂಲಿ, ಶಿರೋಗ್ರಹ, ಕುಕ್ಷಿಶೂಲೆ, ಕರ್ಣಶೂಲೆ, ಅಂತರ್ಗಲದಲ್ಲಿ ಹುಟ್ಟಿರುವ ವ್ಯಾಧಿಗಳು ಇವೆಲ್ಲಾ ನಿವಾರಣೆಯಾಗುವವು. ಕಾಮೋತ್ಪತ್ತಿ ಇಲ್ಲದವರೂ, ಚಿತ್ತಭ್ರಮೆಯುವರೂ,

ಷ್ಟೇಂದ್ರಿಯರೂ, ಜರಾದಿಂದ ಜರ್ಝರಿತರಾದವರೂ, ಬುದ್ಧಿಮಾಂದ್ಯರೂ, ಕಿವುಡಾಗಿರುವವರೂ, ಅಜೀರ್ಣಾತುರರೂ ಇವರೆಲ್ಲರೂ ಇದರ ನಸ್ಯ, ಹೊಟ್ಟೆಗೆ ಸೇವಿಸುವಿಕೆ, ಮೇಲೆ ಮರ್ದನೆ ಈ ಮೂರರಿಂದಲೂ ಗುಣವಾಗುವರು. ಬಂಜೆಯರೂ, ಕಾಕವಂಧ್ಯಾ, ಯೋನಿರೋಗವುಳ್ಳವಳೂ ಇದರಿಂದ ಗುಣವನ್ನು ಪಡಿಯುತ್ತಾರೆ. ಇದರಿಂದ ಎಲ್ಲಾ ವಿಧವಾದ ಪ್ರಮೇಹಗಳೂ, ಅಂಡವೃದ್ಧಿ, ಭ್ರಮೆ, ಪಾಂಡುರೋಗ, ಕಾಮಲಾ, ಅಪಸ್ಮಾರ, ಗಂಡಮಾಲೆ, ವಾತರಕ್ತ, ಪಿಟಕಗಳು, ಎಲ್ಲಾ ಕುಷ್ಟವ್ಯಾಧಿಗಳು, ದದ್ದು, ಕಜ್ಜಿ, ತುರಿ, ವಿಚರ್ಚಿಕಾ, ವಾತಪಿತ್ತ ಕಫದ ಎಲ್ಲಾ ಜ್ವರಗಳು ಇವೆಲ್ಲಾ ನಿರ್ನಾಮವಾಗುವವು. ಒಂದು ಮಾಸಮಾತ್ರ ಇದನ್ನು ಸೇವಿಸಿದರೆ ಹೊಸ ಯೌವನವೇ ಬರುತ್ತದೆ. ಕಾಮಾಗ್ನಿಯುಂಟಾಗಿ ಬಲ ವೀರ್ಯಗಳನ್ನು ಉತ್ಪತ್ತಿ ಮಾಡುತ್ತದೆ. ಈ ತೈಲವನ್ನು ನಸ್ಯಮಾಡುವಿಕೆಯಿಂದಲೂ, ಹೊಟ್ಟೆಗೆ ಸೇವಿಸುವದರಿಂದಲೂ, ಅಭ್ಯಂಗಸ್ನಾನ ಮಾಡುವದರಿಂದಲೂ, ನಿತ್ಯದಲ್ಲಿಯೂ ಸೇವಿಸತಕ್ಕದ್ದು ಸರ್ವರಿಗೂ ಹಿತವಾದದ್ದು."

"ವಾರಾಹೀ ಕಂದ ಶೃಂಗಾಟಕ ಪಲಯುಗಲಂ ಚೂರ್ಣಿತಂ ಕಿಂಚಿದಾಜ್ಯೇ ।
ಭೃಷ್ಟಂ ಜಾತೀಫಲ ತ್ವಕ್ಸುರಕುಸುಮ ಕಣಾ ಕೇಸರಾಣಾಂ ಪಲಂ ಚ ॥
ಶ್ವೇತಾ ಸರ್ವೈಃ ಸಮಾನಾಂ ಪಯಸಿ ದಶಗುಣೇ ಸಾಧುಪಕ್ತ್ವಾ ಮಹಿಷ್ಯಾಃ ।
ಕಾಮೋ ದ್ದ್ಯೋಧಾಯ ಕಾರ್ಯಾಸ್ತದನು ಚ ವಟಿಕಾಃ ಕಾಮುಕೈಃ ಶುಕ್ರವೃದ್ಧ್ಯೈಃ ॥
ಏನಾಂ ಸದಾಸೇವ್ಯಮಾನೋ ವೃದ್ಧೋಽಪಿ ತರುಣಾಯತೆ ॥
ತರುಣೀನಾಂ ಶತಂ ಯಾತಿ ತರುಣಸ್ಯತು ಕಾ ಕಥಾ ? ॥"

"ವಾರಾಹೀಕಂದ, (ಹಂದಿಯ ಮುಸುಡಿಯಂತೆ ಬೆಳದಿರುವ ಕರೀಬಣ್ಣದ ಕಾಡುಗೆಣಸಿನಭೇದ) ಸಿಂಘಾಡಾ (ಇದು ಉತ್ತರರಾಜ್ಯದಲ್ಲಿ ಪುಷ್ಕಳವಾಗಿ ಶಿಗುತ್ತದೆ) ಇವೆರಡೂ ೧-೧ ಪಲ (ಪಲಕ್ಕೆ ೪ ರೂಪಾಯಿತೂಕ) ಚೂರ್ಣಿಶಿ ತುಪ್ಪದಲ್ಲಿ ಸ್ವಲ್ಪ ಹುರಿಯಬೇಕು. ಅದಕ್ಕೆ ಲವಂಗಪತ್ರೆ, ದಾಲಚಿನ್ನಿ, ಲವಂಗ, ಹಿಪ್ಪಲಿ, ಕೇಸರಿ, ಇವೆಲ್ಲಾ ೧-೧ ಪಲ, ಇವೆಲ್ಲದರ ಸಮತೂಕ ಸಕ್ಕರೆ ೭ ಪಲ ಸೇರಿಸಿ ಯಮ್ಮೆಯಹಾಲು ೭೦ ಪಲದಲ್ಲಿ ಇವೆಲ್ಲವನ್ನೂ ಪಕ್ವಮಾಡುವದು. ಖೋವಾ ಆಗುತ್ತದೆ. ಇದರ ೨-೨ ತೊಲೆಯ ಉಂಡೆ ಮಾಡಿ ಇದನ್ನು ದಿನ ೨ ಹೊತ್ತು ಸೇವಿಸುತ್ತಾ ಯಮ್ಮೆಹಾಲು ಕುಡಿಯುತ್ತಾ

ಬರಲು ಅವನ ಇಂದ್ರಿಯವು ಸ್ತ್ರೀಭೋಗದಲ್ಲಿ ಅತಿ ತೀವ್ರವಾಗಿರುತ್ತದೆ, ಎಂದೆಂದಿಗೂ ಕ್ಷೀಣವಾಗುವದಿಲ್ಲ. ವೃದ್ಧನೂ ಈ ಗೋಲಿಗಳನ್ನು ಸೇವಿಸಿ ತರುಣನೇ ಆಗುತ್ತಾನೆ, ತರುಣನ ವಿಷಯದಲ್ಲಿ ಹೇಳಬೇಕಾದ್ದೇನೂ ಇಲ್ಲ; ಸಾಕ್ಷಾತ್ ಕಾಮಸನ್ನಿಭನೇ ಆಗುವನು."

"ಲಘುಶಾಲ್ಮಲಿ ಮೂಲೇನ ತಾಲಮೂಲೀ ಸುಚೂರ್ಣಿತಾಮ್ ||
ಸರ್ಪಿಷಾ ಪಯಸಾ ಪೀತ್ವಾ ನರಶ್ಚಟಕವದ್ಭವೇತ್ ||"

"ಕಿರೀಬೂರಗದಬೇರು, ತಾಳೆಯಬೇರು ಇವೆರಡನ್ನೂ ಚೂರ್ಣಿಸಿದ ಚೂರ್ಣ ದಿನ ೧ ತೊಲದಂತೆ ಸೇವಿಸಿ ಮೇಲೆ ಕಾದಹಾಲು ಸಕ್ಕರೆ ಕೇರಿಸಿ ಕುಡಿಯುವದು. ಇದರಿಂದ ಗುಬ್ಬಿಯಷ್ಟು ಕಾಮೋತ್ತೇಜನವಾಗುತ್ತದೆ."

(ಇಲ್ಲಿ "ಲಘುಶಾಲ್ಮಲೀ" ಎಂಬದರಲ್ಲಿ ಬೂರಗದ ಎಳೇಗಿಡದ ಬೇರೆಂದು ತಿಳಿಯಬೇಕು. ಯಾಕೆಂದರೆ ಮುಂದಿನ ಯೋಗದಲ್ಲಿ "ವೃದ್ಧಶಾಲ್ಮಲೀ" ಎಂದು ಬಲಿತ ಬೂರಗದ ಮರದ ಬೇರಿನ ಪ್ರಯೋಗವನ್ನು ಹೇಳುತ್ತಾನೆ.)

"ವೃದ್ಧಶಾಲ್ಮಲಿ ಮೂಲಸ್ಯ ರಸಂ ಶರ್ಕರಯಾ ಪಿಬೇತ್ || ೭
ತತ್ಪ್ರಯೋಗಾತ್ಸಪ್ತಾಹಾ ಚ್ಛುಕ್ರವೃದ್ಧಿಃ ಪ್ರಜಾಯತೇ ||"

"ಬೂರಗದ ಹಳೇಮರದ ಬೇರಿನ ರಸಕ್ಕೆ ಸಕ್ಕರೆಬೆರಸಿ ೭ ದಿನ ಕುಡಿಯಲು ವೀರ್ಯವೃದ್ಧಿಯುಂಟಾಗಿ ಕಾಮೋತ್ತೇಜನವುಂಟಾಗುವದು."

"ತ್ರೈಫ ಕ್ಷೀರ ವಿದಾರಿಕಾ ಕುರುವಕಶ್ಚೇಕಾಢಕಾದ್ಯಾರ್ದ್ರಕಮ್ |
ಪ್ರಸ್ಥಂ ಶಾಲ್ಮಲಿಮೂಲ ಜಾತರಸತೋ ನೀತ್ವಾ ತಥಾಗ್ನೌ ಪಚೇತ್ ||
ಜಾತಜಾತಫಲಾನ್ವಿತೋ ಮಧುಯುತಃ ಕಾರ್ಯಂ ಪರಂ ಶುಕ್ರಲೋ |
ಲೇಹೋಽಯಂ ಪಲಿತಾಂಗ ಕೋಮಲಕರಃ ಖ್ಯಾತೋ ವಲೀನಾಶಕಃ ||"

"ತ್ರಿಫಲಾ, ಕ್ಷೀರಕಾಕೋಲೀ, ನೆಲಗುಂಬಳ, ಕುರವಕವೃಕ್ಷದ ಚಕ್ಕೆ, ಸಕ್ಕರೆ ಇವೆಲ್ಲಾ ೧-೧ ಆಢಕ ಪ್ರಮಾಣ, ಹಳೇಬೂರಗದ ಬೇರಿನರಸ ೧ ಪ್ರಸ್ಥ (೮೦ ತೊಲೆ,) ಇವೆಲ್ಲಾ ಕೇರಿಸಿ ಅಗ್ನಿಯಲ್ಲಿ ಲೇಹ್ಯವನ್ನು ಮಾಡಿದ ನಂತರ ಯಾಲಕ್ಕಿ, ನಾಗಕೇಸರಿ, ದಾಲ್ಚಿನ್ನಿ, ಲವಂಗಪತ್ರಿಗಳ ಚೂರ್ಣವನ್ನೂ ಹಾಕಬೇಕು. ಇಳಿಸಿದನಂತರ ಸ್ವಲ್ಪ ಜೇನುತುಪ್ಪವನ್ನು ಹಾಕಿ ಸೇವಿಸುತ್ತಾಬಂದರೆ ಇದು ಬಹು ವಿಶೇಷವಾಗಿ ಶುಕ್ರವೃದ್ಧಿಯನ್ನು ಮಾಡುತ್ತದೆ. ಬಿಳೇಕೂದಲನ್ನು ಕಪ್ಪಾಗಿ ಮಾಡುತ್ತದೆ. ಈ ಅವಲೇಹವು ಪ್ರಖ್ಯಾತವಾದದ್ದು, ವಲೀಪಲಿತತ್ವವನ್ನು ತಪ್ಪಿಸಿ ವೃದ್ಧರನ್ನೂ ಯೌವನಸ್ಥರನ್ನಾಗಿ ಮಾಡುತ್ತದೆ."

"ಶತಾವರೀ ಗೋಕ್ಷುರಕಂ ಚ ದರ್ಭಮ್ |
ಶೃಂಗಾಟಕಂ ನಾಗಬಲಾತ್ಮಗುಪ್ತಾ ||

**ಸಿತಾ ಸಮಾನಂ ನಿಶಿ ಚೂರ್ಣಮೇತಾವತ್ ।**
**ದುಗ್ಧೇನ ಪೀತಂ ಪ್ರಕರೋತಿ ಪುಷ್ಟಿಮ್ ॥ "**

" ಶತಾವರೀ, ಆನೆನೆಗ್ಗಿಲು, ದರ್ಭೆಯಬೇರು, ಸಿಂಘಾಡೆ, ಪೇರಾಮುಟ್ಟಿ, ಸಮೂಲ, ನಸುಗುನ್ನೀಬೀಜ, ಈ ಔಷಧಗಳ ಸಮಾನವಾಗಿ ಚೂರ್ಣಿಸಿದ್ದನ್ನು ರಾತ್ರಿ ೧ ತೊಲೆ ಚೂರ್ಣವನ್ನು ಸಮ ಸಕ್ಕರೆ ಬೆರಸಿ ಮೆದು ಮೇಲೆ ಹಾಲು ಕುಡಿದರೆ ಎಂದೆಂದಿಗೂ ವೀರ್ಯನಾಶವಾಗದೆ, ಸದಾ ರತಿಯಲ್ಲಿ ನಿಪುಣನಾಗಿರುವನು.

**" ವಿಶದಾಫಲಬೀಜಾನಾಂ ಚೂರ್ಣಂ ಪೀತಂ ನಿಶಾಮುಖೇ ॥**
**ಪಯಸಾ ವರ್ಷಮಾತ್ರೇಣ ಷಂಡತ್ವಂ ನಾಶಯೇರ್ಧ್ರುವಮ್ ॥"**

" ಸಾಲಮ್ಮಿಶ್ರಿ ಚೂರ್ಣವನ್ನು ರಾತ್ರಿ ॥ ತೊಲೆಯನ್ನು ತಿಂದು ಮೇಲೆ ಹಾಲು ಕುಡಿಯುತ್ತಾ ಒಂದುವರ್ಷ ಸೇವಿಸಿದರೆ ನಿಜವಾಗಿಯೂ ನಪುಂಸಕತ್ವವು ನಾಶವಾಗುವದು. "

ದೇಶಾವಾರ ಅಡಕೆ ೪೦ ತೊಲಾ. ಅದನ್ನು ೨ ದಿನ ನೀರಿನಲ್ಲಿ ನೆನೆಹಾಕಿ ಆಮೇಲೆ ಸಣ್ಣಗೆ ಕತ್ತರಿಸಿ ಒಣಗಿಸುವದು. ಅದನ್ನು ಕುಟ್ಟಿ ವಸ್ತ್ರಗಾಳತ ಮಾಡುವದು. ಆ ಚೂರ್ಣವನ್ನು ಅದರ ಸಮತೂಕ ಆಕಳತುಪ್ಪದಲ್ಲಿ ಹುರಿದು ಅದರ ೪ ಪಾಲು ಆಕಳಹಾಲನ್ನು ಆ ಪಾತ್ರೆಗೆ ಸುರಿದು ಎಲ್ಲಾ ಶೇರಿಸಿ ತಳ ಹಿಡಿಯದಂತೆ ಕಲಕುತ್ತಾ ಕಲಕುತ್ತಾ ಗಟ್ಟಿಮಾಡಬೇಕು. ಅದರ ತೂಕದ ೪ ಪಾಲು ಸಕ್ಕರೆ ಪಾಕವಿಟ್ಟು ಪಾಕಬಂದನಂತರ ಈ ಅಡಕೆಯು ಗಟ್ಟಿಯಾದ ಖೋವಾ ಅದರಲ್ಲಿ ಹಾಕಿ, ಈ ಕೆಳಗಿನ ಔಷಧಗಳನ್ನೂ ಹಾಕಬೇಕು. ಯಾಲಕ್ಕಿ, ಚಿಟ್ಟಾಮುಟ್ಟಿ, ಪೇರಾಮುಟ್ಟಿ, ಜಾಫಲ, ಲವಂಗ, ಜಾಪತ್ರೀ, ಲವಂಗಪತ್ರಿ, ಶೊಂಠಿ, ಶತಾವರಿ, ನೆಲತಾಟಿಗಡ್ಡೆ, ನಸುಗುನ್ನೀಬೀಜ, ನೆಲಗುಂಬಳದಗೆಡ್ಡೆ, ಆನೆನೆಗ್ಗಿಲು, ದ್ರಾಕ್ಷಿ, ಸಾಲಮ್ಮಿಶ್ರಿ, ಸಿಂಘಾಡಾ, ಜೀರಿಗೆ, ವಂಶಲೋಚನ, ಅಶ್ವಗಂಧಿ, ಕೇಸರಿ, ಕಸ್ತೂರಿ, ಪಚ್ಚಕರ್ಪೂರ, ಚಂದನ, ಭೀಮಸೇನೀಕರ್ಪೂರ, ಅಗರು ಇವುಗಳಲ್ಲಿ ಶಿಕ್ಕದಿದ್ದವುಗಳನ್ನು ಬಿಟ್ಟು ಎಲ್ಲವೂ ಪ್ರತ್ಯೇಕ ೧-೧ ತೊಲಾ ಚೂರ್ನಿಸಿ ಅದರಲ್ಲಿ ಬೆರಸಿ, ಇಷ್ಟವಿದ್ದರೆ ಮೃಗಾಂಕ, ಚಂದ್ರೋದಯಾದಿ ಮಹಾ ಔಷಧಗಳನ್ನೂ ಬೆರಸಬಹುದು. ಈ ಅಡಕೆಯ ಪಾಕವು ॥ ತೊಲೆ ಹೊತ್ತಿಗೆ ದಿನ ೨ ಹೊತ್ತು ಸೇವಿಸುತ್ತಾ ಬಂದರೆ ನಪುಂಸಕತ್ವವು ನಾಶವಾಗುತ್ತದೆ. ಪಥ್ಯದಿಂದ ಸ್ತ್ರೀ ಸಹವಾಸ ಮಾಡದೆ ಇರಬೇಕು.

**" ವಿವಮಾಮಲಕಂ ಚೂರ್ಣಂ ಸ್ವರಸೇನೈವ ಭಾವಿತಮ್ ॥ ಶರ್ಕರಾ ಮಧು ಸರ್ಪಿರ್ಭಿ ರ್ಯುಕ್ತಂ ಲೀಢ್ವಾಪಯಃ ಪಿಬೇತ್ ॥**
**ಏತೇನಾಶೀತಿವರ್ಷಾಣಿ ಯುವೇವ ಪರಿಹೃಷ್ಯತೇ ॥ "**

" ನೆಲ್ಲೀಚಟ್ಟಿನ ಚೂರ್ಣವನ್ನು ವಸ್ತ್ರಗಾಳಿತಮಾಡಿ ಅದೇ ನೆಲ್ಲೀಕಾಯಿರಸದಲ್ಲಿ ೨೧ ಭಾವನೆಮಾಡಿಟ್ಟುಕೊಂಡು, ದಿನವೂ ಸಕ್ಕರೆ ಜೇನುತುಪ್ಪ ಮತ್ತು ತುಪ್ಪದಲ್ಲಿ ಸೇವಿಸುತ್ತಾ ಮೇಲೆ ಹಾಲುಕುಡಿಯುವದು. ಇದರ ಸಾಧನೆಯಿಂದ ೮೦ ವರ್ಷದವನೂ ತರುಣನಾಗುತ್ತಾನೆ. "

" ಗೋಕ್ಷುರಕಃ ಕ್ಷುರಕಃ ಶತಮೂಲೀ।
ವಾನರಿ ನಾಗಬಲಾ ಽತಿಬಲಾಚ ॥
ಚೂರ್ಣಮಿದಂ ಪಯಸಾ ನಿಶಿ ಪೇಯಮ್।
ಯಸ್ಯಗೃಹೇ ಪ್ರಮದಾ ಶತಮಸ್ತಿ ॥ "

" ಆನೆನೆಗ್ಗಿಲು, ತಾಲಮಖಾನಾ, ಶತಾವರಿ, ನಸುಗುನ್ನಿಬೀಜ, ಚಿಟ್ಟಾಮುಟ್ಟಿ, ಪ್ಯಾರಾಮುಟ್ಟಿ ಇವೆಲ್ಲಾ ಸಮಚೂರ್ಣಿಸಿ ಅದನ್ನು ಎಮ್ಮೆಯ ಹಾಲಿನಜತೇಲಿ ದಿನ ೧ ತೊಲೆಯಷ್ಟು ಸೇವಿಸಿದರೆ ನೂರು ಸ್ತ್ರೀಯರಿಗೂ ಒಬ್ಬನೇ ಪುರುಷನು ಸಾಕು. "

" ಘೃತಭೃಷ್ಟೋ ದುಗ್ಧಮಾಷ ಪಾಯಸೋ ವೃಷ್ಯಉತ್ತಮಃ ॥ "

" ಹಾಲಿನಲ್ಲಿ ತೊಳದ ಉದ್ದಿನಬೇಳೆ ಹಾಕಿ ಸಕ್ಕರೆಯೊಡನೆ ಖೀರು ತಯಾರ್ಮಾಡಬೇಕು. ಆಕಳತುಪ್ಪದಲ್ಲಿ ಈ ಖೀರನ್ನು ಹುರದರೆ ಅದು ಸರ್ವೋತ್ತಮ ವೃಷ್ಯ (ವೀರ್ಯವೃದ್ಧಿ) ಆಗುವದು. "

" ಘೃತಂ ಶತಾವರೀ ಗರ್ಭಂಕ್ಷೀರೇ ದಶಗುಣೇಪಚೇತ್॥ ಶರ್ಕರಾ ಪಿಪ್ಪಲೀ ಕ್ಷೌದ್ರಯುಕ್ತಂ ತದ್ವೃಷ್ಯಮುಚ್ಯತೇ ॥ "

" ೮೦ ತೊಲಾ ಗೋಘೃತ ಮತ್ತು ೮೦೦ ತೊಲಾ ಶತಾವರೀ ಸ್ವರಸ ಮತ್ತು ೮೦೦ ತೊಲಾ ಹಾಲು ಶೇರಿಸಿ ಘೃತ ಪಕ್ವಮಾಡುವದು. ಅನಂತರ ೧೦ ತೊಲಾ ಹಿಪ್ಪಲಿ, ೧೦ ತೊಲಾ ಜೇನುತುಪ್ಪ, ೨೦ ತೊಲಾ ಸಕ್ಕರೆ ಹಾಕಿ ಎಲ್ಲವನ್ನೂ ಕಲಕಿ ಈ ಘೃತವನ್ನು ೨ ತೊಲಾ ನಿತ್ಯವೂ ಸೇವಿಸುತ್ತಾ ಮೇಲೆ ಹಾಲು ಕುಡಿದರೆ ಇದು ವೀರ್ಯವೃದ್ಧಿಯನ್ನು ಮಾಡಿ, ಪುಷ್ಟಿಮಾಡುವದು. "

" ಕಲ್ಕೇನ ವಾಜಿಗಂಧಾಯಾ ವಿಪಚೇದ್ಘೃತಮುತ್ತಮಮ್ ॥
ಚತುರ್ಗುಣಮಜಾಕ್ಷೀರಂ ದತ್ವೋದ್ಧೃತ್ಯಾ ಥ ಸೀಲಿತೇ ॥ ಸಿ
ತಾಂ ಸಮಂ ಪ್ರದಾಯಾದ್ಯಾದ್ಬಲಪುಷ್ಟಿ ವಿವೃದ್ಧಯೇ ॥ "

" ೮೦ ತೊಲಾ ಉತ್ತಮ ಗೋಘೃತ, ೮೦ ತೊಲಾ ಅಶ್ವಗಂಧಿಯಕಲ್ಕ, ೩೨೦ ತೊಲಾ ಆಡಿನಹಾಲು ಇವೆಲ್ಲಾ ಶೇರಿಸಿ ಘೃತಪಾಕದಂತೆ ತಯಾರ್ಮಾಡಿಕೊಂಡು ಇದರ ಸಮಾನ ಸಕ್ಕರೆ ಶೇರಿಸುತ್ತಾ ನಿತ್ಯವೂ ಸೇವಿಸುತ್ತಾ ಬಂದರೆ ಬಲ ಪುಷ್ಟಿ ವೃದ್ಧಿಯಾಗುತ್ತದೆ. "

" ಗೋಧೂಮಮಾಂಶ್ಚ ಪಲಶತಂ ನಿಃಕ್ವಾಥಃ ಸಲಿಲಾಢಕೇ || ಪಾದಾವಶೇಷೇ ಪೂತೇಚದ್ರವ್ಯಾಣೀಮಾನಿ ದಾಪಯೇತ್ || ಗೋಧೂಮಂ ಮುಂಜಾತಫಲಂ, ಮಾಷ ದ್ರಾಕ್ಷಾ ಪರೂಷಕಮ್ || ಕಾಕೋಲೀ ಕ್ಷೀರಕಾಕೋಲೀ ಜೀವಂತೀ ಸಶತಾವರೀ || ಅಶ್ವಗಂಧಾ ಸಖರ್ಜೂರಂ ಮಧುಕಂ ತ್ರ್ಯೂಷಣಂ ಸಿತಾ || ಭಲ್ಲಾತಕಮಾತ್ಮಗುಪ್ತಾ ಸಮಭಾಗಾನಿ ಕಾರಯೇತ್ || ಘೃತಪ್ರಸ್ಥಂ ಪಚೇದೇಕಂ, ಕ್ಷೀರಂ ದತ್ವಾ ಚತುರ್ಗುಣಮ್ || ಮೃದ್ವಗ್ನಿನಾ ಚ ಸಂಸಿದ್ಧೇ ದ್ರವ್ಯಾಣ್ಯೇತಾನಿ ನಿಕ್ಷಿಪೇತ್ || ತ್ವಗೇಲಾ ಪಿಪ್ಪಲೀ ಧಾನ್ಯಂ ಕರ್ಪೂರಂ ನಾಗಕೇಸರಮ್ || ಯಥಾಲಾಭಂ ವಿನಿಕ್ಷಿಪ್ಯ ಸಿತಾಕ್ಷೌದ್ರ ಪಲಾಷ್ಟಕಮ್ || ದುಗ್ಧೇಕ್ಷುದಂಡೇನಾಲೋಡ್ಯ ವಿಧಿವದ್ವಿನಿಯೋಜಯೇತ್|| ಶಾಲ್ಯೋದನೇನ ಭುಂಜೀತ ಪಿಬೇ ಮಾಂಸ ರಸೇನ ವಾ || ಕೇವಲಸ್ಯ ಪಿಬೇದಸ್ಯ ಪಲಮಾತ್ರಪ್ರಮಾಣತಃ || ನ ತಸ್ಯ ಲಿಂಗಶೈಥಿಲ್ಯಂ ನ ಚ ಶುಕ್ರಕ್ಷಯಂ ವ್ರಜೇತ್ || ಬಲ್ಯಂ ಪರಂ ವಾತಹರಂ ಶುಕ್ರಸಂಜನನಂ ಪರಮ್ || ಮೂತ್ರಕೃಚ್ಛ್ರಪ್ರಶಮನಂ ವೃದ್ಧಾನಾಂಚಾಪಿ ಶಸ್ಯತೇ || ಪಲದ್ವಯಂ ತದಶ್ನೀಯಾದ್ದಶರಾತ್ರ ಮತಂದ್ರಿತಃ || ತಸ್ಮಿತೇ ದಶರಾವಾಭಿಃ ಪೀತ್ವಾ ಚಾನುಪಿಬೇತ್ಪಯಃ || ಅಶ್ವಿಭ್ಯಾಂ ನಿರ್ಮಿತಂ ಚೈತದ್ಗೋಧೂಮಾದ್ಯಂ ರಸಾಯನಮ್ || "

" ಗೋಧುವೆಯು ರವೆ ೫ ಶೇರನ್ನು ೨೦ ಶೇರು ಜಲದಲ್ಲಿ ಪಾಕಮಾಡಬೇಕು. (ಇಲ್ಲಿ ಶೇರಿಗೆ ೮೦ ರೂಪಾಯಿ ತೂಕವೆಂದರಿಯಬೇಕು.) ಯಾವಾಗ ೫ ಶೇರು ಶೇಷವಿರುವಾಗ ಅದನ್ನು ಶೋಧಿಸಬೇಕು. ಅದರಲ್ಲಿ—ಬಿಳೇಗೋಧಿ, ಮುಂಜಾತಕಫಲ, ಉದ್ದು, ದ್ರಾಕ್ಷಿ, ಪರೂಷಕ, ಕಾಕೋಲೀ, ಕ್ಷೀರಕಾಕೋಲೀ, ಜೀವಂತೀ, ಶತಾವರಿ, ಅಶ್ವಗಂಧ, ಖರ್ಜೂರ, ಜೇಷ್ಟಮಧು, ಶುಂಠಿ, ಮೆಣಸು, ಹಿಪ್ಪಲಿ, ಸಕ್ಕರೆ, ಗೇರುಬೀಜ, ನಸುಗುನ್ನಿಬೀಜ ಎಲ್ಲವೂ ೬-೬ ಮಾಷ (ಪಾವಲಿತೂಕ) ಆಕಳತುಪ್ಪ ೧ ಶೇರು, ಹಾಲು ೪ ಶೇರು, ಇವೆಲ್ಲವನ್ನೂ ಘೃತಪಾಕವಿಧಿಯಿಂದ ಮಂದಾಗ್ನಿಯಲ್ಲಿ ಪಾಕಮಾಡಬೇಕು. ಇದರಲ್ಲಿ ದಾಲಚಿನ್ನಿ, ಯಾಲಕ್ಕಿ, ಹಿಪ್ಪಲಿ, ಕೊತ್ತುಂಬರಿಬೀಜ, ಭೀಮಸೇನೀಕರ್ಪೂರ, ಪ್ರತ್ಯೇಕ ನಾಲ್ಕಾಣೆತೂಕ, ಇವನ್ನು ಸಣ್ಣಗರದು ಪಾಕದಲ್ಲಿ ಬೆರಸುವದು. ಸಿದ್ಧವಾದನಂತರ ಇಳಿಸಿ ೩೨ ತೊಲಾ ಜೇನುತುಪ್ಪ, ೩೨ ತೊಲಾ ಸಕ್ಕರೆ ಬೆರಸುವದು. ಇದನ್ನು ಇಕ್ಷುದಂಡದಿಂದ ಮಥನಮಾಡಿ ಜಾಲಿಸಲ್ಲಿ ಹಾಕಿ ಕುಡಿಯುತ್ತಾ ಬರಬೇಕು. ಇದರ ಪ್ರಮಾಣ ೨ ತೊಲಾ

ಿಂದ ದೇಹಧರ್ಮ ವರಿತು ೪ ತೊಲಾದವರಿಗೂ ಸೇವಿಸಬಹುದು. ಇದರ ಸೇವ ನೆಯಿಂದ ಲಿಂಗದಲ್ಲಿ ಶಿಥಲತೆಯುಂಟಾಗುವದಿಲ್ಲ; ವೀರ್ಯಕ್ಷೀಣತೆಯೂ ಉಂ ಟಾಗುವದಿಲ್ಲ; ವೀರ್ಯವು ಯಥೇಚ್ಛವಾಗಿ ವೃದ್ಧಿಯಾಗುವದು. ಇದು ಮೂತ್ರ ಕೃಚ್ಛ್ರವನ್ನು ನಾಶಮಾಡುವದು. ವಾತರೋಗಗಳನ್ನು ನಿರ್ಮೂಲಮಾಡು ತ್ತದೆ. ಬಲವನ್ನು ವೃದ್ಧಿಮಾಡುತ್ತದೆ. ವೃದ್ಧರು ಸೇವಿಸಿದರೆ ಬಹು ಉ ತ್ತಮ. ಹತ್ತು ದಿನ ಹಾಲಿನಲ್ಲಿ ಇದನ್ನು ಸೇವಿಸುವದರಿಂದ ಹತ್ತು ಸ್ತ್ರೀಯ ರನ್ನು ಭೋಗಿಸುವ ಶಕ್ತಿಯುಂಟಾಗುತ್ತದೆ. ಇದು ಅಶ್ವಿನೀಕುಮಾರರಿಂದ ನಿರ್ಮಿತವಾದದ್ದು.''

"ಬೀಜಾನಿ ಹಿ ಕಪಿಕಚ್ಛೋಃ ।
ಕುಡವಮಿತಾನಿ ತು ಸ್ವೇದಯೇಚ್ಛನಕೈಃ ॥
ಪ್ರಸ್ಥೆ ಗೋಭವದುಗ್ಧೇ ।
ದುಗ್ಧಂ ಯಾವದ್ಘನೀಭವೇದ್ಗಾಢಮ್ ॥
ತ್ವಗ್ರಹಿತಾನಿ ಚ ಕೃತ್ವಾ ।
ಸೂಕ್ಷ್ಮಂ ಸಂಪೇಷಯೇತ್ತಾನಿ ॥
ಪಿಷ್ಟಿಕಾಯಾಶ್ಚ ವಟಿಕಾಃ ।
ಕೃತ್ವಾ ಗವ್ಯೇ ಪಚೇದಾಜ್ಯೆ ॥
ದ್ವಿಗುಣಿತ ಶರ್ಕರಯಾ ತಾ ।
ವಟಿಕಾಸ ಪಕ್ವಯಾ ಲೇಪ್ಯಾ ॥
ವಟಿಕಾ ಮಾಕ್ಷಿಕಮಧ್ಯೆ ।
ಮಜ್ಜನ ಯೋಗೇಽಖಿಲಾಃ ಸ್ಥಾಪ್ಯಾಃ ॥
ಪಂಚ ಟಂಕ ಮಿತಾಸ್ತಾಸ್ತು, ಪ್ರಾತಃ ಸಾಯಂ ಚ ಭಕ್ಷಯೇತ್॥
ಅನೇನ ಶೀಘ್ರದ್ರಾವೀಯೋ, ಯಶ್ಚ ಸ್ಯಾತ್ಪತಿತೋ ಧ್ವಜಃ ॥
ಸೋಽಪಿ ಪ್ರಾಪ್ನೋತಿ ಸುರತೇ ಸಾಮರ್ಥ್ಯಂ ಮತ್ತ ವಾಜಿವತ್ ॥
ನಾನೇನ ಸದೃಶಂ ಕಿಂಚಿದ್ದ್ರವ್ಯಂ ವಾಜೀಕರಂ ಪರಮ್ ॥"

"೨೦ ತೊಲೆ ನಸುಗುನ್ನಿಬೀಜವನ್ನು ೮೦ ತೊಲಾ ಹಾಲಿನಲ್ಲಿ ಬೇಯಿ ಸಬೇಕು. ಯಾವಾಗ ಹಾಲು ಗಟ್ಟಿಯಾಗುತ್ತಾ ಬರುವದೋ ಆಗ ಇಳಿಸಿ ಬೀಜದಮೇಲಿನ ಹೊಟ್ಟನ್ನೆಲ್ಲವನ್ನೂ ತೆಗದು, ಆ ಪೊಪ್ಪೆಲ್ಲವನ್ನೂ ಉಳಿದಿ ರುವ ಹಾಲನ್ನು ಹಾಕಿಕೊಂಡು ಅರಿಯಬೇಕು. ಅದರಲ್ಲಿ ಒಂದೊಂದು ತೊಲೆಯ ಬಿಲ್ಲೆ ಮಾಡಿ ಗೋವಿನ ಘೃತದಲ್ಲಿ ಇವೆಲ್ಲವನ್ನೂ ಕರಿಯಬೇಕು. ೪೦ ತೊಲಾ ಸಕ್ಕರೆಯ ಪಾಕವನ್ನು ಮಾಡಿಕೊಂಡು ಆ ಪಾಕದಲ್ಲಿ ಮೇಲಿನ ಕರದಿರುವ ಬಿಲ್ಲೆಗಳನ್ನು ಮುಳುಗಿಸಿ ತೆಗದಿಡಬೇಕು. ಆ ಮೇಲೆ ಜೇನು

ತುಪ್ಪದಲ್ಲಿ ಇವೆಲ್ಲವನ್ನೂ ಮುಳುಗಿಸಿಡಬೇಕು. ಅದರಲ್ಲಿ ಪ್ರತಿನಿತ್ಯವೂ ೨ ತೊಲಾದಷ್ಟನ್ನು ಸೇವಿಸುತ್ತಾ ಬಿಸೀಹಾಲು ಕುಡಿಯುತ್ತಾ ಬರಬೇಕು. ದಿನವೂ ೨ ಹೊತ್ತು ಸೇವಿಸಬೇಕು. ಇದರ ಪ್ರಭಾವದಿಂದ (ಯಾವನಿಗೆ ಶೀಘ್ರಪತನವಾಗುವದೋ, ಇಂದ್ರಿಯವು ಶಿಥಿಲವಾಗಿದೆಯೋ) ಅಂತವರಿಗೆ ಸಕಲ ವಿಕಾರಗಳೂ ದೂರವಾಗಿ ಕುದುರೆಯಂತಹ ಬಲವೂ, ಅತುಲಿತವಾದ ವೀರ್ಯಪುಷ್ಟಿಯೂ, ರತಿಯಲ್ಲಿ ಸಾಮರ್ಥ್ಯವೂ ಬರುತ್ತದೆ. ಇದಕ್ಕಿಂತ ಹೆಚ್ಚಾದ ವಾಜೀಕರಣ ಪ್ರಯೋಗವೇ ಇಲ್ಲ !!

" ಗೃಷ್ಟೀನಾಂ ವೃದ್ಧವತ್ಸಾನಾಮ್ ।
ಮಾಷಪರ್ಣಭೃತಾಂ ಗವಾಮ್ ॥
ಯತ್ ಕ್ಷೀರಂ ತತ್ಪ್ರಶಂಸಂತಿ ।
ಬಲಕಾಮೇಷು ಜಂತುಷು ॥ "

" ಚೊಚ್ಚಲು ಕರುವಿನ ತಾಯಿಯಾದ ಆಕಳಿನ (ಅದರ ಕರು ದೊಡ್ಡದಾಗಿರಬೇಕು, ಅದು ಸಾರ್ವದಾ ಉದ್ದಿನ ಹೊಲದಲ್ಲಿ ಅದರ ಸಮೂಲವನ್ನೇ ಭಕ್ಷಿಸುತ್ತಾ ಇರುವದಾಗಿರಬೇಕು.) ಹಾಲು ಬಲ ಮತ್ತು ವೀರ್ಯವನ್ನು ವೃದ್ಧಿಮಾಡತಕ್ಕದ್ದರಲ್ಲಿ ಪರಮೋಪಯೋಗಿಯು. "

" ಅರ್ಧಾಢಕಂ ಚ ಶುಚಿ ಪರ್ಯುಷಿತಸ್ಯ ದಧ್ನಃ ।
ಖಂಡಸ್ಯ ಷೋಡಶಪಲಾನಿ ಶಶಿಪ್ರಭಸ್ಯ ॥
ಸರ್ಪಿಃ ಪಲಂ ಮಧುಯುತಂ ಮರಿಚಾರ್ಧಕರ್ಷಮ್ ।
ಶುಂಠ್ಯಾಸ್ತಥಾರ್ಧಪಲಮರ್ಧಪಲಂ ಚತುರ್ಣಾಮ್ ॥
ಶುಕ್ಲೇಪಟೇ ವರವಧೂ ಮೃದುಪಾಣಿಘೃಷ್ಟಾ ।
ಕರ್ಪೂರ ಗಂಧಸುರಭಿರ್ನವಭಾಂಡ ಸಂಸ್ಥಾ ।
ಏಷಾ ವೃಕೋದರಕೃತಾ ಸುರಸಾ ರಸಾಲಾ ।
ಯಾ ಸ್ವಾದಿತಾ ಭಗವತಾ ಮಧುಸೂದನೇನ ॥ "

" ಗಟ್ಟಿಯಾದ, ಶೀಯಾದ, ಮೇಲಿನ ಕೆನೆಯುಳ್ಳಂಥಾ ಮೊಸರು ೧೬೦ ತೊಲಾ, ಬಿಳೀಸಕ್ಕರೆ ೬೦ ತೊಲಾ, ಆಕಳತುಪ್ಪ ೪ ತೊಲಾ, ಜೇನುತುಪ್ಪ ೪॥ ತೊಲಾ, ಮೆಣಸು ಅರ್ಧತೊಲಾ, ಯಾಲಕ್ಕಿ, ದಾಲಚಿನ್ನಿ, ನಾಗಕೇಸರ, ಲವಂಗಪತ್ರೆ ಅರ್ಧ ಅರ್ಧ ತೊಲಾ, ಇವನ್ನು ನುಣ್ಣಗರದು ಮೊಸರಿನಲ್ಲಿ ಕೇರಿಸಿ ಮತ್ತೆ ಸ್ವಚ್ಛವಾದ ಬಿಳೀನಯವಾದ ವಸ್ತ್ರದಲ್ಲಿ ಪ್ರಿಯಭಾಮಿನಿಯ ಮೃದು ಕರಕಮಲದಿಂದ ಶೋಧಿಸುತ್ತಾ ಬರುವ ಈ "ರಸಾಲಾ" ವನ್ನು ಪಚ್ಚಕರ್ಪೂರದ ಸುವಾಸನೆಯನ್ನು ಕೊಟ್ಟಿರುವ ಮಣ್ಣಿನ ಹೊಸಮಡಿಕೆಯಲ್ಲಿ ಇಡಬೇಕು. ಇದು ಪೂರ್ವಕಾಲದಲ್ಲಿ ಭೀಮಸೇನನಿಂದ ಮಾಡಲ್ಪಟ್ಟು ಶ್ರೀ

ಕೃಷ್ಣನಿಗೆ ಭೋಜನ ಮಾಡಿಸಿದ "ರಸಾಲಾ" ಪರಮ ವೃಷ್ಯವಾದದ್ದು. ಇದನ್ನು ಆಗಾಗ್ಗೆ ಸೇವಿಸುವವನಿಗೆ ಧಾತುಪುಷ್ಟಿಗೆ ಔಷಧವೇ ಬೇಡ."

**॥ ಅಪರಂಚ ॥ " ದಧ್ನಃ ಸರಂ ಶರಚ್ಚಂದ್ರ ಸನ್ನಿಭಂ ದೋಷ ವರ್ಜಿತಮ್ ॥ ಶರ್ಕರಾಕ್ಷೌದ್ರಮರಿಚೈ ಸ್ತುಗಾಕ್ಷೀ ರ್ಯಾ ಚ ಬುದ್ಧಿಮಾ ॥ ಯುಕ್ತ್ಯಾ ಯುಕ್ತಂ ಸುಸೂಕ್ಷ್ಮೈಲಂ ನವೇ ಕುಂಭೇ ಶುಚೌ ಪಟೇ ॥ ಮಾರ್ಜಿತೇ ಪ್ರಕ್ಷಿಪೇಚ್ಛೀತೇ ಘೃತಾಢ್ಯಂ ಷಷ್ಟಿಕೌದನಮ್ ॥ ತದ್ವದ್ಭ್ಯಾದುಪರಿಷ್ಟಾಚ್ಚ ರಸಾಲಾ ಮಾತ್ರಯಾಪಿಬೇತ್ ॥ ವರ್ಣಸ್ವರಬಲೋಪೇತಃ ಪುಮಾಂಸ್ತೇನ ವೃಷಾಯತೇ ॥ "**

" ಉತ್ತಮವಾದ ಘಟ್ಟಿಯಾದ ಎಮ್ಮೆಯ ಮೊಸರು ೪೦೦ ತೊಲಾ, ಶುಭ್ರವಸ್ತ್ರದಲ್ಲಿ ಕಟ್ಟಿ ಅದರಲ್ಲಿರುವ ನೀರೆಲ್ಲವೂ ಕೆಳಗಿಳಿಯುವ ತಟ್ಟೆಗೆ ಸೋರುವಂತೆ ನೇತಗಟ್ಟಬೇಕು. ಅದರ ನೀರೆಲ್ಲವೂ ಹೋದನಂತರ ಆಗ ಇದರಲ್ಲಿ ಬಿಳೀಸಕ್ಕರೆ ೧೦೦ ತೊಲಾ, ಸೇರಿಸಿ ದಪ್ಪವಾದ ಬಿಳೀ ಶುಭ್ರವಾದ ಬಟ್ಟೆಯಲ್ಲಿ ಉಜ್ಜುತ್ತಾ ಶೋಧಿಸಬೇಕು. ಅನಂತರ ಜೇನುತುಪ್ಪ ೪೦ ತೊಲಾ, ಮೆಣಸು, ವಂಶಲೋಚನ, ಯಾಲಕ್ಕಿ ಇವುಗಳನ್ನು ಅನುಮಾನಕ್ಕನುಸರಿಸಿ ಚೆನ್ನಾಗಿ ಪುಡಿಮಾಡಿ ಅದಕ್ಕೆ ಸೇರಿಸಬೇಕು. ಇದನ್ನು ಹೊಸ ಮಣ್ಣಿನಪಾತ್ರೇಲಿಡುವದು. ಬಹು ಸಣ್ಣಗಿರುವ ಅಕ್ಕಿಯ ಅನ್ನಕ್ಕೆ ತುಪ್ಪವನ್ನು ಬೆರಸಿಕೊಂಡು ಊಟಮಾಡುತ್ತಾ ಈ ರಸಾಲಾ ಎಂಬ ಶಿಖರಣಿಯನ್ನು ಕುಡಿಯುತ್ತಾ ಬರಬೇಕು. ಇದರಿಂದ ದೇಹಕ್ಕೆ ವರ್ಣೋತ್ಕರ್ಷತೆ, ದಿವ್ಯಸ್ವರ, ದಿವ್ಯಬಲವುಂಟಾಗಿ ಅಪಾರ ವೀರ್ಯವೂ, ಕಾಂತಿವೃದ್ಧಿಯೂ ಆಗುವದು."

**" ಸ ಚತುರ್ಜಾತ ಕಾಜಾಜೀ ಸಗುಡಾರ್ದ್ರಕನಾಗರಮ್ ॥ ರಸಾಲಾಸ್ಯಾಚ್ಛಿಖರಣೀ ಸುಘೃಷ್ಟಂ ಸಸರಂ ದಧಿ ॥ "**

" ನಾಗಕೇಸರ, ಯಾಲಕ್ಕಿ, ದಾಲಚಿನ್ನಿ, ಜೀರಿಗೆ, ಬೆಲ್ಲ, ಹಸೀಶುಂಠಿ, ಶುಂಠಿ ಇವುಗಳನ್ನು ಅರದು ಮೇಲಿನ ಕೆನೆಯುಳ್ಳ ಮೊಸರಿನಲ್ಲಿ ಸೇರಿಸಿ ಕಡದರೆ ಅದಕ್ಕೆ ರಸಾಲಾ ಅಥವಾ ಶಿಖರಣಿ ಎಂದು ಹೆಸರು. ಇದು ಸರ್ವೋತ್ತಮವಾದ ವೃಷ್ಯವು."

**" ಶತಾವರೀ ನಾಗಬಲಾ ವಿದಾರೀ ।**
**ತ್ರಿಕಂಟಕೈರಾಮಲಕೀ ಫಲಾನ್ವಿತೈಃ ॥**
**ವಿಚೂರ್ಣಿತೈಃ ಪಂಚಭಿರೇಕಶಃ ಪೃಥಕ್ ।**
**ಪ್ರಕಲ್ಪಿತೈರ್ವಾ ಘೃತಮಾಕ್ಷಿಕಪ್ಲುತೈಃ ॥**

ಇತಿಪ್ರಯೋಗಾಃ ಷಡಿಮೇ ಭಿಷಗ್ವರೈಃ ।
ಉದೀರಿತಾಃ ಶರ್ಕರಯಾ ಸಮನ್ವಿತಾಃ ॥
ನೃಣಾಂ ಮದಾಂಧಪ್ರಮದೋಪಸರ್ಪಿಣಾಮ್ ।
ಪ್ರಧಾನಧಾತೋ ರತಿರೇಕ ಕಾರಣಮ್ ॥ ”

“ ಶತಾವರಿ, ಚಿಟ್ಟಾಮುಟ್ಟಿ, ಅಥವಾ ಪ್ಯಾರಾಮುಟ್ಟಿ, ನೆಗ್ಗಿಲು ನೆಲ್ಲೀಚೆಟ್ಟು ಇವೆಲ್ಲವುಗಳ ಬೇರೆ ಬೇರೆ ಅಥವಾ ಎಲ್ಲವನ್ನೂ ಸಮಾನವಾಗಿ ಏಕತ್ರ ಚೂರ್ಣಮಾಡಿ, ಇದಕ್ಕೆ ಘೃತ, ಜೇನುತುಪ್ಪ (ಹೆಚ್ಚು ಕಡಮೆಯಾಗಿ) ಸೇರಿಸಿ ಸಕ್ಕರೆಯನ್ನೂ ಕೂಡಿಸಬೇಕು. ಇವರಲ್ಲಿ ೬ ಪ್ರಯೋಗಗಳಾಗುತ್ತವೆ. ಈ ೬ ಪ್ರಯೋಗಗಳೂ ಕಾಮದೇವನಿಂದ ಮದಾಂಧರಾದ ಪ್ರಮದೆಯರಲ್ಲಿ ರಮಣಮಾಡತಕ್ಕ ವಿಲಾಸೀ ಪುರುಷರ ಪ್ರಧಾನ ಧಾತುವಾದ ವೀರ್ಯವನ್ನು ವೃದ್ಧಿಪಡಿಸತಕ್ಕ ಯೋಗಗಳೇ ಆಗಿವೆ. ”

“ ಮುಸಲಿ ಕೋಕಿಲ ಗೋಕ್ಷುರ ಚೂರ್ಣಕಮ್ ।
ಶಶಿವಿಲೋಚನರಾಮಮಿತಂ ಪಚೇತ್ ॥
ಪಯಸಿ ಪ್ರಾತರಿದಂ ಯದಿಕೋಷ್ಣಕೇ ।
ಸುಸಿತಯಾ ಖಲು ಟಂಕಕ ಷಟ್ಕಯಾ ॥
ತ್ರಿಗುಣ ಸಪ್ತದಿನಂ ಪರಿಭಕ್ಷಯೇತ್ ।
ಶತವಯಾ ಅಪಿ ಕಾಂಕ್ಷತಿ ಕಾಮಿನೀಮ್ ॥
ಕಿಮಿಹ ಚಿತ್ರಮುದಿತ್ವರಯೌವನಃ ।
ಶಶಿಮುಖೀಂ ಶಯನಾನ್ನಜಹಾತಿ ಸಃ ॥ ”

“ ನೆಲತಾಟಗಡ್ಡೆ, ಕೊಳವಳಿಕೆಬೀಜ, ನೆಗ್ಗಿಲು ಇವುಗಳನ್ನು ಕ್ರಮವಾಗಿ ೧-೨-೩ ಭಾಗ (ಅಂದರೆ ನೆಲತಾಟಗಡ್ಡೆ ೩ ತೊಲಾ, ಕೊಳವಳಿಕೆಬೀಜ ೬ ತೊಲಾ, ನೆಗ್ಗಿಲು ೯ ತೊಲಾ) ಇವನ್ನು ಚೂರ್ಣಮಾಡಿ ಶೋಧಿಸಿ, ಪ್ರಾತಃಕಾಲ ಅರ್ಧತೊಲೆ ಚೂರ್ಣ ಅರ್ಧತೊಲೆ ಸಕ್ಕರೆಯೊಡನೆ ಸೇರಿಸಿ ಸೇವಿಸುತ್ತಾ ಮಂದೋಷ್ಣವಾದ ಎಮ್ಮೆಹಾಲನ್ನು ಕುಡಿಯುತ್ತಾ, ೨೧ ದಿನ ಸೇವನೆಮಾಡಿ ಪಥ್ಯದಲ್ಲಿದ್ದರೆ ನೂರುವರ್ಷದ ಮುದುಕನೂ ಸ್ತ್ರೀಸುಖದಲ್ಲಿ ಹಿಂದೆಗೆಯುವದಿಲ್ಲ; ಇಂತಾದ್ದರಲ್ಲಿ ಏರುತ್ತಿರುವ ಯೌವನವುಳ್ಳ ತರುಣನು ತನ್ನ ನಾಯಕಿಯನ್ನು ಶಯನದಿಂದ ಹೊರಕ್ಕೆ ಬಿಡುತ್ತಾನೋ ಆಶ್ಚರ್ಯವು ! ”

“ ಗೋಕ್ಷುರೇಕ್ಷುರ ಬೀಜಾನಿ ವಾಜಿಗಂಧಾ ಶತಾವರೀ ॥ ಮುಸಲೀ ವಾನರೀ ಬೀಜಂ ಯಷ್ಟೀ ನಾಗಬಲಾ ಬಲಾ ॥ ಏಷಾಂ ಚೂರ್ಣಂ ದುಗ್ಧ ಸಿದ್ಧಂ ಗವ್ಯೇನಾಜ್ಯೇನ ಭರ್ಜಿತಮ್ ॥ ಸಿತಯಾ ಮೋದಕಂ ಕೃತ್ವಾ ಭಕ್ಷ್ಯಂ ವಾಜೀಕರಂ ಪರಮ್ ॥ ಚೂರ್ಣಾ

**ದಷ್ಟಗುಣಂ ಕ್ಷೀರಂ ಘೃತಂ ಚೂರ್ಣಸಮಂ ವಿದುಃ || ಸರ್ವ ತೋ ದ್ವಿಗುಣಾಖಂಡಂ, ಖಾದೇದಗ್ನಿಬಲಂ ಯಥಾ || ವಾಜೀಕ ರಾಣಿ ಭೂರೀಣಿ ಸಂಗೃಹ್ಯ ರಚಿತೋ ಯತಃ || ತಸ್ಮಾದ್ವಹುಷು ಯೋಗೇಷು ಯೋಗೋಽಯಂ ಪ್ರವರೋ ಮತಃ ||"**

"ನೆಗ್ಗಿಲು, ಕೊಳವಳಿಕೆಬೀಜ, ಅಶ್ವಗಂಧಿ, ಶತಾವರಿ, ನೆಲತಾಟಿಗಡ್ಡೆ (ಕಾಲೀಮುಸಲೀ), ನಸುಗುನ್ನಿಬೀಜ, ಜೇಷ್ಟಮಧು, ಚಿಟ್ಟಾಮುಟ್ಟೆ, ಪೆಟ್ಟಾರಾಮುಟ್ಟೆ, ಎಲ್ಲವನ್ನೂ ಸಮಾನಭಾಗ ತೆಗದುಕೊಂಡು ಚೂರ್ಣಿಸಿ, ಇದನ್ನು ಆಕಳಹಾಲಿನಲ್ಲಿ ಹಾಕಿ ಖೋವಾಮಾಡಬೇಕು. ಅದನ್ನು ಆಕಳತುಪ್ಪದಲ್ಲಿ ಹಾಕಿ ಹುರಿಯಬೇಕು. ಅದಕ್ಕೆ ಸಕ್ಕರೆ ಬೆರಸಿ ಲಡ್ಡು ಮಾಡಬೇಕು. ಅದರ ಸೇವನೆಯು ಅತ್ಯಂತ ವಾಜೀಕರಣವನ್ನು ಮಾಡುತ್ತದೆ. (ಎಲ್ಲಾ ದರೂ ಒಟ್ಟು ಓಷಧಿಗಳ ಚೂರ್ಣದ ೮ ಪಾಲು ಹಾಲೂ, ಚೂರ್ಣದತೂಕ ಆಕಳ ತುಪ್ಪ, ಇವೆಲ್ಲದರ ಅಂದರೆ ತುಪ್ಪ ಚೂರ್ಣ ಇವುಗಳ ಎರಡುಪಾಲು ಸಕ್ಕರೆ ಯನ್ನು ಶೇರಿಸಬೇಕು.) ಜಠರಾಗ್ನಿಯು ಬಲವರಿತು ಔಷಧವನ್ನು ಸೇವಿಸ ಬೇಕು. ಈ ಮೇಲಿನ ಪ್ರಯೋಗವು ಅನೇಕ ವಾಜೀಕರಣ ಔಷಧಗಳಲ್ಲಿ ಮುಖ್ಯವಾದದ್ದು. !!!"

**"ಪಲಂ ಗೋಕ್ಷುರಬೀಜಸ್ಯ, ದ್ವಿಪಲಂ ಕಪಿಕಚ್ಛುಕಾತ್|| ಪಲಂ ನಾಗಬಲಾಬೀಜಂ, ಪಲಮೇಕಂ ಶತಾವರೀ || ವಿದಾರೀಕಂದ ಚೂರ್ಣಸ್ಯ ಪಲದ್ವಯಮಥಾಪಿ ವಾ || ಪಲಂ ತ್ರಪುಷ ಬೀಜಂ ಚ ವಾಜಿಗಂಧಾ ಪಲತ್ರಯಮ್ || ವಾಸಾ ಚ ಶಾಲಮೂಲೀ ಚ ಗುಡೂಚೀ ರಕ್ತಚಂದನಮ್ || ತ್ರಿಸುಗಂಧಿ ಕಣಾ ಧಾತ್ರೀ ಲ ವಂಗಂ ನಾಗಕೇಸರಮ್ || ಏತಾನಿ ಕರ್ಷಮಾತ್ರಾಣಿ ಸೂಕ್ಷ್ಮ ಚೂರ್ಣಾನಿ ಕಾರಯೇತ್ || ಬಲಾ ಶಾಲ್ಮಲಿಮೂಲಂ ಚ ಭವೇ ದೇ ಕೈಕವಿಂಶತಿಃ|| ಕುಶ ಕಾಶ ಶಿಫಾಸಪ್ತ ಶರ್ಕರಾಸಪ್ತಯೋ ಜಿತಮ್ || ದುಷ್ಟಶುಕ್ರಂ ವೀರ್ಯಹಾನಿಂ ಮೂತ್ರಕೃಚ್ಛ್ರಾಣಿ ಯಾನಿಚ || ಮೂತ್ರಾಘಾತಂ ಮೂತ್ರದೋಷಾಂ ಜಯೇಚ್ಛು ಕ್ರ ವಿವರ್ಧನಮ್ || ದಶಕಂ ಗಚ್ಛತಿ ಸ್ತ್ರೀಣಾಂ ಹಯತುಲ್ಯಪ ರಾಕ್ರಮಃ || ಕಾಮದೇವಾಭಿಧಂ ಚೂರ್ಣಂ ಧನ್ವಂತರಿ ನಿರೂಪಿತಮ್||"**

"ನೆಗ್ಗಿಲು ೧ ಪಲ (ಪಲಕ್ಕೆ ೪ ತೊಲಾ) ನಸುಗುನ್ನಿಬೀಜ ೨ ಪಲ, ಪೇರಾಮುಟ್ಟೆ (ಬೋಳಗಡಲೆ, ಬೀಜ ೧ ಪಲ, ಶತಾವರಿ ೧ ಪಲ, ನೆಲಗುಂಬಳಗಡ್ಡೆ ೨ ಪಲ, ಅಶ್ವಗಂಧಿ ೩ ಪಲ, ಆಡುಸೋಗೆ, ನೆಲತಾಟಿಗಡ್ಡೆ, ಅಮೃತಬಳ್ಳಿಸಾರ, ಕೆಂಪುಚಂದನ, ದಾಲಚಿನ್ನಿ, ಯಾಲಕ್ಕಿ, ನಾಗಕೇಸರಿ, ಹಿಪ್ಪಲಿ,

ನೆಲ್ಲಿಚಟ್ಟು, ಲವಂಗ, ಇವೆಲ್ಲಾ ೨-೨ ತೊಲಾ, ಚಿಟ್ಟಾವುಟ್ಟು, ಬೂರುಗ ದಬೇರು ಇವು ೨೧-೨೧ ತೊಲಾ, ದರ್ಭೆಯಬೇರು, ಕಾಶವೆಂಬ ಹುಲಿ ಬೇರು ಇವು ೭-೭ ತೊಲೆ, ಇವೆಲ್ಲದರ ಸಮತೂಕ ಸಕ್ಕರೆ, ಈ ಚೂರ್ಣ ವನ್ನು ಸಿದ್ಧಮಾಡಿಕೊಂಡು, ನಿತ್ಯವೂ ಹಾಲಿನೊಡನೆ ಸೇವನೆಮಾಡಿದರೆ ದುಷ್ಟವೀರ್ಯ, ವೀರ್ಯಹ್ರಾಸ, ಮೂತ್ರಕೃಛ್ರ, ಮೂತ್ರಾಘಾತ, ಮೂತ್ರ ದೋಷ ಇವೆಲ್ಲವನ್ನೂ ನಾಶಮಾಡಿ, ವೀರ್ಯವನ್ನು ವೃದ್ಧಿಪಡಿಸುವದು, ಹತ್ತು ಸ್ತ್ರೀಯರಲ್ಲಿ ರಮಿಸುವ ಶಕ್ತಿಯನ್ನೀಯುವದು. ಕುದುರೆಯಂತೆ ಪರಾಕ್ರಮವುಂಟಾಗುವದು. ಈ ಕಾಮದೇವ ಚೂರ್ಣವು ಧನ್ವಂತರಿಪ್ರೋಕ್ತವು."

ಆಕಳಕರೆ, ಶುಂಠಿ, ಲವಂಗ, ಕೇಸರಿ, ಹಿಪ್ಪಲಿ, ಜಾಫಲ, ಜಾವಿತ್ರೀ ಬಿಳೀಚಂದನ, ಇವೆಲ್ಲಾ ಕಾಲು ಕಾಲು ತೊಲಾ, ಅಫೀಮು ಅರ್ಧತೊಲಾ, ಇವೆಲ್ಲಾ ಚೂರ್ಣಿಸಿ ಜೇನುತುಪ್ಪದಲ್ಲಿ ಅರದು ಉದ್ದಿನಕಾಳಿನಂತೆ ಮಾತ್ರೆ ಮಾಡಿ, ಒಂದು ಗೋಲಿಯನ್ನು ರಾತ್ರಿ ನಿತ್ಯವೂ ತಿಂದು ಮೇಲೆ ಹಾಲು ಕುಡಿಯುವದು; ವೀರ್ಯವು ಸಾವಕಾಶವಾಗಿ ಸ್ಖಲಿತವಾಗುವದು, ಷಂಡತ್ವ ನಿವೃತ್ತಿಯಾಗುತ್ತದೆ.

ಚೋಪಚೀನಿ, ಶುಂಠಿ, ಮೋಚರಸ (ಬೂರಗದಬಂಕೆ) ೨ ಮುಸಲೀ (ಸಫೇದ್‌ಮುಸಲೀ, ಕಾಲೀಮುಸಲೀ ಅಥವಾ ಶತಾವರಿ; ನೆಲತಾಟೀಗಡ್ಡೆ) ಮೆಣಸು, ವಾಯುವಿಳಂಗ, ಸೋಪು ಇವು ಸಮಾನ ಚೂರ್ಣಿಸಿ ಅರ್ಧತೊಲಾ ಚೂರ್ಣ ನಿತ್ಯವೂ ಅರ್ಧಶೇರು ಹಾಲಿನಲ್ಲಿ ಕುಡಿಯುತ್ತಾಬರಲು ಬಲ ಪುಷ್ಟಿಯುಂಟಾಗುತ್ತದೆ.

ಜೇನುತುಪ್ಪ ೧ ತೊಲಾ ಅರ್ಧಶೇರು ಆಕಳಹಾಲಿನಲ್ಲಿ ಕುಡಿಯುತ್ತಾ ಬಂದರೆ ಅಧಿಕ ವೀರ್ಯವೃದ್ಧಿ.

ಜೇಷ್ಟಮಧುವನ್ನು ಕರೀ ಆಡಿನಹಾಲಿನಲ್ಲಿ ನೆನೆಹಾಕಿ ಅನಂತರ ಆಕಳ ಹಾಲಿನಲ್ಲಿ ನೆನಸುವದು. ಮೂರುದಿನ ಒಣಗಬೇಕು. ಹೀಗೆ ಭಾವನೆಯಾದ ಜೇಷ್ಟಮಧು ೨೦ ತೊಲಾ, ನೆಗ್ಗಿಲು ೪ ತೊಲಾ, ಸಕ್ಕರೆ ೭೦ ತೊಲಾ ಕೂಡಿಸಿಟ್ಟುಕೊಂಡು ದಿನ ೨ ಹೊತ್ತು ಹೊತ್ತಿಗೆ ೧ ತೊಲೆಯಷ್ಟು ಚೂರ್ಣ ವನ್ನು ಆಕಳಹಾಲಲ್ಲಿ ಕುಡಿಯುವದು. ಪುಷ್ಟಿಯಾಗುವದು, ಷಂಡತ್ವ ನಾಶನವು.

ಅಶ್ವಗಂಧಿ, ಜಾಪತ್ರಿ, ಜಾಫಲ, ಲವಂಗ, ದಾಲಚಿನ್ನಿ ಇವೆಲ್ಲಾ ಸಮಾನವಾಗಿ ಚೂರ್ಣಿಸಿ ಇದರ ಸಮತೂಕ ಕರೀಯಳ್ಳು, ಜೇನುತುಪ್ಪ ಇವೆಲ್ಲಾ ಅರದು ಗೋಲೀಮಾಡಿ ೨೧ ದಿನ ಅರ್ಧತೊಲೆಯ ಗೋಲಿಯನ್ನು ಸೇವಿಸುತ್ತಾ ಬರುವದು. ನಪುಂಸಕತೆಯು ನಾಶವಾಗಿ ವೀರ್ಯವೃದ್ಧಿಯಾಗುತ್ತದೆ.

ಆಕಳಕರೆ ೨ ತೊಲಾ, ಅಫೀಮು ೧ ತೊಲಾ, ೨ ಮುಸಲೀಗಳೂ ತಲಾ ೨ ತೊಲಾದಂತೆ, ಕುಲೀಂಜನ ೨ ತೊಲಾ, ಲವಂಗ ೨ ತೊಲಾ, ಬಹು ಫಲೀ ೨ ತೊಲಾ, ಅಶ್ವಗಂಧಿ ೧ ತೊಲಾ, ಸಕ್ಕರೆ ೧೨ ತೊಲಾ, ಇವೆಲ್ಲಾ ಅರದು ಗೋಲೀಮಾಡಿ ದಿನ ಅರ್ಧತೊಲದಂತೆ ರಾತ್ರಿಹೊತ್ತು ಸೇವಿಸಬೇಕು. ನಪುಂಸಕತೆಯು ನಾಶವಾಗಿ ಬಲ ವೀರ್ಯಗಳುಂಟಾಗುವವು.

ತ್ರಿಫಲೆ, ಧಾತಕೀಕುಸುಮ ಇವು ನಾಲ್ಕನ್ನೂ ಸಮವಾಗಿ ಕೇರಿಸಿ ಹಸೀ ಶುಂಠಿಯರಸದಲ್ಲಿ ಭಾವನೆಯನ್ನು ಮಾಡಿ ೩ ದಿನ ಬಿಸಲಲ್ಲಿ ಒಣಗಿಸುವದು. ಸಂಧ್ಯಾಸಮಯದಲ್ಲಿ ಅರ್ಧತೊಲೆಯನ್ನು ಜೇನುತುಪ್ಪ ಮತ್ತು ಸಕ್ಕರೆಯೊ ಡನೆ ಸೇವಿಸಿ, ಮೇಲೆ ಹಾಲುಕುಡಿಯುತ್ತಾ ೧ ಮಂಡಲ ಸೇವಿಸಿದರೆ ಅಪರಿ ಮಿತ ವೀರ್ಯವೃದ್ಧಿಯಾಗುವದು.

ಆಕಳಕರೆ, ಲವಂಗಪತ್ರೆ, ಜಾಪತ್ರೆ, ನಾಗಕೇಸರ, ಜಾಫಲ, ಲವಂಗ, ಯಾಲಕ್ಕಿ, ಶತಾವರಿ ಇವೆಲ್ಲಾ ಸಮತೂಕ ಇವನ್ನು ಸಕ್ಕರೆ ಮತ್ತು ವಿಳ್ಳೇ ದೆಲೆರಸದಲ್ಲಿ ಅರದು ಗೋಲೀಮಾಡಿ ನಿತ್ಯವೂ ಬೆಳಗ್ಗೆ ಕಾಲುತೊಲೆ ಸೇವಿಸು ತ್ತಾಬಂದರೆ ನಿರ್ವೀರ್ಯನೂ ವೀರ್ಯವಂತನಾಗುವನು.

ತಾಲಮಖಾನಾ, ನೆಗ್ಗಿಲು, ಶಿಲಾಜತು ತಲಾ ೧—೧ ದುಡ್ಡುತೂಕ ಇವನ್ನು ಒಟ್ಟಾಗಿ ಅರದು ೪ ದುಡ್ಡುತೂಕ ಸಕ್ಕರೆ ಬೆರಸಿ ೩ ದಿನಕ್ಕೆ ಹಂಚಿ ಕೊಂಡು ದಿನಂಪ್ರತಿ ರಾತ್ರಿಕಾಲದಲ್ಲಿ ಸೇವಿಸುತ್ತಾ ಬರುವದು. ಪಥ್ಯದಿಂದಿ ರಬೇಕು. ಸ್ತ್ರೀಸಂಗ ಕೂಡದು. ಇದರಿಂದ ಅತುಲಿತವಾದ ವೀರ್ಯವೃದ್ಧಿ ಯುಂಟಾಗುತ್ತದೆ.

## ಅಶ್ವಗಂಧಾದಿಘೃತ.

“ಅಶ್ವಗಂಧಾ ಪ್ರಸ್ಥಮೇಕಂ ದುಗ್ಧಂ ಚೈವಾಢಕದ್ವಯಂ ॥
ಘೃತಪ್ರಸ್ಥಮಿತಂ ದದ್ಯಾಚ್ಚನೈ ರ್ಮೃದ್ವಗ್ನಿನಾ ಪಚೇತ್ ॥
ತ್ರ್ಯೂಷಣಂ ಚ ಚತುರ್ಜಾತಂ, ವಿಡಂಗಂ ಜಾತಿ ಪತ್ರಕಮ್ ॥
ಬಲಾ ಚಾತಿಬಲಾ ಚೈವ ಶ್ವದಂಷ್ಟ್ರಾ ವೃದ್ಧದಾರುಕಮ್ ॥ ಪ
ಲೈಕಂಚ ಪ್ರದಾತವ್ಯಂ ಲೋಹಂ ವಂಗಂ ತಥಾಭ್ರಕಮ್ ॥ ಪ್ರ
ಸ್ಥಾರ್ಧಂ ಮಾಕ್ಷಿಕಂ ದದ್ಯಾತ್ಪ್ರಸ್ಥಾರ್ಧಾ ಮಾಕ್ಷಿಕಾ ಶುಭಾ ॥
ಸರ್ವಮೇತದ್ವಿನಿಕ್ಷಿಪ್ಯ ಸ್ನಿಗ್ಧೇಭಾಂಡೇ ನಿಧಾಪಯೇತ್ ॥ ದ್ವೌ
ಕಾಲೌ ಭಕ್ಷಯೇನ್ನಿತ್ಯಂ ಸಮೀಕ್ಷ್ಯಾಗ್ನಿ ಬಲಂಯಥಾ ॥ ಆಢ್ಯ
ವಾತಂ ಹನುಸ್ತಂಭಂ ಸಂಧಿವಾತಂ ಕಟಿಗ್ರಹಮ್ ॥ ಗರ್ಭಪ್ರಸವ
ಜಾ ದೋಷಾ ಯಥಾಮತ್ತಗಜಂ ಹರಿಃ॥ ಅಶ್ವಗಂಧಾದಿ ವಿಖ್ಯಾ
ತಂ ಘೃತಂ ವಾಜೀಕರಂ ಪರಮ್ ॥”

" ಅಶ್ವಗಂಧ ೪೦ ತೊಲೆ, ಶುದ್ಧ ಆಕಳತುಪ್ಪ ೪೦ ತೊಲೆ, ಇವನ್ನು ಮಂದಾಗ್ನಿಯಿಂದ ಮೆಲ್ಲಮೆಲ್ಲಗೆ ಪಾಕಮಾಡುವದು. ಇದರಲ್ಲಿ—ತ್ರ್ಯೂಷಣ, ಚತುರ್ಜಾತ, ವಾಯುವಿಳಂಗ, ಜಾಪತ್ರಿ, ೨ ಚಿಟ್ಟಾಮುಟ್ಟೆ, ಪೇರಾಮುಟ್ಟೆ, ನೆಗ್ಗಿಲು, ವಿದಾರೀ ಇವುಗಳು ೪-೪ ತೊಲಾ, ಲೋಹಭಸ್ಮ, ವಂಗಭಸ್ಮ, ಅಭ್ರಕಭಸ್ಮ ಇವು ೪-೪ ತೊಲಾ, ಜೇನುತುಪ್ಪ ೩೨ ತೊಲಾ, ಸಕ್ಕರೆ ೩೨ ತೊಲಾ, ಇವೆಲ್ಲವನ್ನೂ ಸರಿಯಾಗಿ ಹಾಕಿ ಘೃತಪಾಕಮಾಡುವದು ಮಣ್ಣಿನ ಸ್ನಿಗ್ಧಪಾತ್ರದಲ್ಲಿಟ್ಟು ದಿನವೂ ೨ ಹೊತ್ತು ಅಗ್ನಿಬಲವರಿತು ಸೇವಿಸುತ್ತಾ ಬಂದರೆ—ಅರ್ದಿತವಾತ, ಹನುಸ್ತಂಭ, ಸಂಧಿಗತವಾಯು, ಕಟಿಗ್ರಹ, ಸ್ತ್ರೀಯರ ಗರ್ಭಸಂಬಂಧೀ ರೋಗಗಳೂ, ವೀರ್ಯವಿಕಾರವೂ, ಪ್ರಸವರೋಗವೂ ನಾಶವಾಗುವದಲ್ಲದೆ, ಮಹಾ ವೀರ್ಯಪ್ರದವಾಗುವದು. "

## ಮಾಷಾದಿಘೃತ.

" ಮಾಷಾಣಾಮಾತ್ಮಗುಪ್ತಾನಾಂ ಬೀಜಾನಾ ಮಾಢಕತ್ರಯಮ್‌॥ ಜೀವಕರ್ಷಭಕೌ ಮೇದೇ ವೀರಾವೃದ್ಧೀ ಶತಾವರೀ ॥ ಮಧುಕಂ ಚಾಶ್ವಗಂಧಾ ಚ ಸಾಧಯೇತ್ಕುಡವೋನ್ಮಿತಮ್‌॥ ತನೋವಾಸ್ಮಿನ್ ಘೃತಪ್ರಸ್ಥೇ ದ್ರವ್ಯಾದ್ದಶಗುಣಂ ಪಯಃ ॥ ವಿದಾರಿಕೋ ದಶಪ್ರಸ್ಥಂ ಪ್ರಸ್ಥಮಿಕ್ಷುರಸಸ್ಯ ಚ ॥ ದತ್ವಾ ಮೃದ್ವಗ್ನಿನಾ ಸಾಧ್ಯಂ ಸಿದ್ಧಂ ಸರ್ಪಿರ್ನಿಧಾಪಯೇತ್ ॥ ಶರ್ಕರಾಯಾಸ್ತು ಗೋಕ್ಷೀರ್ಯಾಃ ಕ್ಷೌದ್ರಸ್ಯ ಚ ಪೃಥಕ್‌ಪೃಥಕ್ ॥ ಭಾಗಾಂಶ್ಚ ತುಷ್ಪಲಾಂಶ್ಚಾತ್ರ ಪಿಪ್ಪಲ್ಯಾಶ್ಚ ದ್ವಯಂ ಪಲಮ್‌ ॥ ಬಲಪೂರ್ವಮತೋ ಲೀಢ್ವಾ ತತೋಽನ್ನಮುಪಯೋಜಯೇತ್ ॥ ಯದೀಚ್ಛೇದಕ್ಷಯಂ ಶುಕ್ರಂ ಶೇಫಸಶ್ಚೋತ್ತಮಂ ಬಲವತ್ ॥ "

" ನಸುಗುನ್ನಿಬೀಜ ೩೨೦ ತೊಲಾ, ಉದ್ದು ೩೨೦ ತೊಲಾ, ಜೀವಕ, ಋಷಭಕ, ಮೇದಾ, ಮಹಾಮೇದಾ, ಕಾಕೋಲೀ, ಕ್ಷೀರಕಾಕೋಲೀ, ಋದ್ಧೀ, ಮಹಾಋದ್ಧೀ, ಶತಾವರಿ, ಜೇಷ್ಟಮಧು, ಅಶ್ವಗಂಧಿ, ಇವೆಲ್ಲಾ ತಲಾ ೧೬-೧೬ ತೊಲೆ, ಎಲ್ಲಕ್ಕೂ ಎಂಟುಪಾಲು ನೀರಿನಲ್ಲಿ ಪಕ್ವಮಾಡುವದು, ಪಾಕವಾಗುತ್ತಾ ಆಗುತ್ತಾ ೪ನೇ ಬಂದುಭಾಗ ನಿಲ್ಲುವದನ್ನು ನೋಡಿ ಆಗ ಇಳಿಸಿ ಸೋಧಿಸುವದು. ಅನಂತರ ಇದರಲ್ಲಿ ಘೃತ ೪೦ ತೊಲೆ, ಹಾಲು ೪೦೦ ತೊಲೆ, ವಿದಾರೀಕಂದ (ನೆಲಗುಂಬಳ) ಸ್ವರಸ ೪೦೦ ತೊಲಾ ಹಾಕಿ ಪಾಕಮಾಡಬೇಕು. ಪಾಕವಾಗುತ್ತಾ ಘೃತಮಾತ್ರ ನಿಲ್ಲಲು ಅದರಲ್ಲಿ ಸಕ್ಕರೆ, ವಂಶಲೋಚನ, ಜೇನುತುಪ್ಪ ಎಲ್ಲಾ ೧೬ ತೊಲಾದಂತೆ ಹಾಕಬೇಕು. (ಜೇನುತುಪ್ಪ ಸ್ವಲ್ಪ ಕಡಮೆಮಾಡುವದು, ತುಪ್ಪವೂ ಅದೂ ಸಮತೂಕವಾಗಬಾ

ರದು.) ಹಿಪ್ಪಲಿ ೮ ತೊಲೆ ಹಾಕಿ ಮಣ್ಣಿನ ಸ್ನಿಗ್ಧಭಾಂಡದಲ್ಲಿ ಬಾಯಿಕಟ್ಟಿ ಡುವದು. ಅಗ್ನಿಬಲಾನುಸಾರವಾಗಿ ಈ ಘೃತವನ್ನು ದಿನ ೨ ಹೊತ್ತು ಸೇವಿಸುತ್ತಾ ಮೇಲೆ ಹೆಸರುಬೇಳೆ ತೊವ್ವೆಅನ್ನ ತುಪ್ಪ ಊಟಮಾಡುವದು. ಇದರ ಪ್ರಭಾವದಿಂದ ಎಂದೆಂದಿಗೂ ವೀರ್ಯ ಕ್ಷಯವಾಗುವದಿಲ್ಲ. ಲಿಂಗದಲ್ಲಿ ಅಪೂರ್ವವಾದ ಬಲವಿರುತ್ತದೆ.

## ಮ ಹಾ ಸು ಗ ಂ ಧಿ ತೈ ಲ.

" ಕರ್ಪೂರಾಗರು ಚೋಚಪತ್ರ ನಲಿಕಾ ಲಾಕ್ಷಾ ಸಟೀ ಧಾತುಕೀ ।
ಪುಷ್ಪೈಃ ಸಪ್ತದಲೈಲ ವಾಲು ಸರಲೈಃ ಶೈಲೇಯ ಮಾಂಸೀ ಪ್ಲವೈಃ ॥
ಏಲಾಕುಂಕುಮರೋಚನಾ ದಮನಕೈಃ ಶ್ರೀವಾಸ ಜಾತೀಫಲೈಃ ।
ಕಂಕೋಲಕ್ರಮುಕೋಚ್ಚಟಾ ಮದಮುರಾ ಕಾಂತಾಲವಂಗಾಮಯೈಃ ॥
ವಾಲೋಶೀರ ಹರೇಣುಕಾಮಲಯಜ ಸ್ಥೌಣೇಯ ಚಂಡಾನಖೈಃ ।
ಜಾತೀಕೋಶ ಕುಲೀರ ಪದ್ಮಕನತೈಃ ಸ್ಪೃಕ್ಕಾನ್ವಿತೈಃ ಪಾಲಿಕೈಃ ॥
ಲಾಕ್ಷಾ ಯೋಜನವಲ್ಲಿ ಲೋಧ್ರ ಸಲಿಲೈಸ್ತೈಲಂ ವಿಪಕ್ವ್ಯಾಥಕಮ್ ।
ತೈಲಾಭ್ಯಕ್ತತನು ರ್ಜರನ್ನಪಿ ಭವೇತ್ಸ್ತ್ರೀಣಾಂ ಪರಂ ವಲ್ಲಭಃ ॥
ಶುಕ್ರಾಢ್ಯೋ ದ್ಯುತಿಮಾನ್ ಅನಲ್ಪತನಯಃ ಷಂಡೋಽಪಿ ರತ್ಯುತ್ಸುಕೋ ।
ವಂಧ್ಯಾಗರ್ಭವತೀ ಭವೇದಪಿ ತಥಾ ವೃದ್ಧಾಽಪಿ ಸೂತೇಸುತಮ್ ॥
ಕಂಡೂಸ್ವೇದವಿಚರ್ಚಿಕಾಮಲಹರಂ ದೌರ್ಗಂಧ್ಯ ಕುಷ್ಠಾಪಹಮ್ ।
ಅಶ್ವಿಭ್ಯಾಂ ಪರಿಕೀರ್ತಿತಂ ಬಹುಗುಣಂ ತೈಲಂ ಸುಗಂಧಂ ಮಹತ್ ॥ "

"ಪಚ್ಚಕರ್ಪೂರ, ಅಗರು, ದಾಲಚಿನ್ನಿ, ಲವಂಗಪತ್ರೆ, ನಲಿಕಾ, ಅರಗು, ಕಚೋರ, ಧಾತಕೀಕುಸುಮ, ಏಳೆಲೆಹೊನ್ನೆ, ಚಿಟ್ಟಾಮುಟ್ಟಿ, ಸುಗಂಧದ್ರವ್ಯ, ಸರಲದೇವದಾರು, ಜಟಾಮಾಂಸೀ, ಸೊಗದೆ, ಯಾಲಕ್ಕಿ, ಕೇಸರಿ, ಗೋರೋಜನ, ೨ ಬಗೆ ದವನ, ಶ್ರೀವಾಸ, ಜಾಯಿಕಾಯಿ, ತಕ್ಕೋಲ, ಅಡಕೆ, ಬಿಳೀಗುಲಗಂಜಿ, ಕಸ್ತೂರೀ, ಮುರಾ, ಪ್ರಿಯಂಗು, ಲವಂಗ, ಕೋಷ್ಟ, ಲಾವಂಚ, ಮುಡಿವಾಳ, ರೇಣುಕಾ, ಶ್ರೀಗಂಧ, ಸ್ಥೌಣೇಯ, ಚಂಡ, ನಖ, ಜಾಯಿಪತ್ರಿ, ಕರ್ಕಾಟಕಶೃಂಗೀ, ಪದ್ಮಾಕ್ಷ, ಸ್ಪೃಕ್ಕಾ, ಪಾಲಿಕ, ಅರಗು, ಮಂಜಿಷ್ಟ ಲೋಧ್ರ ಇವುಗಳಲ್ಲಿ ಶಿಕ್ಕಿದವು ೪-೪ ತೂಲಾ, ಶೇರಿಸಿ ಕಲ್ಕಮಾಡಿ ಕಷಾಯ ಮಾಡುವದು. ಅಷ್ಟಾವಶೇಷವಿರುವಾಗ ಈ ಕಷಾಯವನ್ನು ಶೋಧಿಸಿಕೊಂಡು, ಇದರಲ್ಲಿ ೪೨೦ ತೊಲಾ ತಿಲತೈಲವನ್ನು ಬೆರಸಿ, ಮಂದಾಗ್ನಿಯಿಂದ ಪಕ್ವಮಾಡುವದು. ನೀರೆಲ್ಲ ಇಮರಿ ತೈಲಮಾತ್ರವಿದ್ದಮೇಲೆ ಇಳಿಸಿ ಶೋಧಿಸುವದು. ಈ ತೈಲವನ್ನು ಮರ್ದನ ಮಾಡುವದರಿಂದ ವೃದ್ಧನೂ ಯೌವನಸ್ಥನಂತೆ ಸ್ತ್ರೀಯರಿಗೆ ಸೌಖ್ಯದಾಯಕನಾಗುತ್ತಾನೆ. ಪುರುಷನು ಶುಕ್ರಯು

ಕ್ತನೂ, ಕಾಂತಿಸಂಪನ್ನನೂ, ಬಹು ಪುತ್ರವಂತನೂ ಆಗುತ್ತಾನೆ. ನಪುಂಸಕನೂ ಮೈಥುನಾಭಿಲಾಷಿಯಾಗುತ್ತಾನೆ. ಈ ತೈಲವನ್ನು ನಿತ್ಯವೂ ಸೇವಿಸುವದರಿಂದ ವಂಧ್ಯೆಯು ಗರ್ಭವತಿಯಾಗುತ್ತಾಳೆ. ವೃದ್ಧೆಯೂ ಪುತ್ರವತಿಯಾಗುವಳು. ದೇಹದಲ್ಲಿರುವ ವಣತುರಿ, ಬೆವರುಸಾಲೆ, ವಿಚರ್ಚಿಕಾ ಮೈಮಲ, ದುರ್ಗಂಧ, ಕುಷ್ಟ ಈ ಎಲ್ಲವೂ ನಿವೃತ್ತಿಯಾಗುವವು. ಇದು ಅಶ್ವಿನೀಕುಮಾರ ವಿನಿರ್ಮಿತವಾದದ್ದು."

## ಚಂದನಾದಿತೈಲ.

"ಚಂದನಾದೇರ್ವಿಧಿಂ ವಕ್ಷ್ಯೇ ಚಂದನಂ ರಕ್ತಚಂದನಮ್ ॥ ಪತಂಗಮಥ ಕಾಲೀಯಾಽಗರುಕೃಷ್ಣಾಗರೂಣಿ ಚ ॥ ದೇವದ್ರುಮಃ ಸಸರಲಃ ಪದ್ಮಕಂ ಕ್ರಮುಕೋಽಪಿ ಚ ॥ ಕರ್ಪೂರೋ ಮೃಗನಾಭಿಶ್ಚ ಲತಾ ಕಸ್ತೂರಿಕಾಪಿಚ ॥ ಸಿಲ್ಹಕಃ ಕುಂಕುಮಂ ಗವ್ಯಂ ಸಜಾತೀಫಲಮೇವಚ ॥ ಜಾತೀಪತ್ರಂ ಲವಂಗಂಚ ಸೂಕ್ಷ್ಮೈಲಾ ಮಹತೀ ತಥಾ ॥ ಕಂಕೋಲಂ ಫಲಕಂ ತ್ವಕ್ಚ ಪದ್ಮಕಂ ನಾಗಕೇಸರಮ್ ॥ ವಾಲಕಂ ಚ ತಥೋಶೀರಂ ಮಾಂಸೀ ದಾರು ಸಿತಾಪಿ ಚ ॥ ಮುರಾ ಕಚೋರಕಶ್ಚಾಽಪಿ ಶೈಲೇಯಂ ಭದ್ರಮುಸ್ತಕಮ್ ॥ ರೇಣುಕಶ್ಚ ಪ್ರಿಯಂಗುಶ್ಚ ಶ್ರೀವಾಸೋ ಗುಗ್ಗುಲಸ್ತಥಾ ॥ ಲಾಕ್ಷಾ ನಖಶ್ಚ ರಾಲಶ್ಚ ಧಾತಕೀಕುಸುಮಂ ತಥಾ ॥ ಗ್ರಂಥಿಪರ್ಣಂ ಚ ಮಂಜಿಷ್ಠಾ ತಗರಂ ಸಿಕ್ಥಕಸ್ತಥಾ ॥ ಏತಾನಿಶಾಣಮಾನಾನಿ ಕಲ್ಕೀಕೃತ್ಯ ಶನೈಃ ಪಚೇತ್॥ತೈಲಪ್ರಸ್ಥಮಿತಂ ಸಮ್ಯಗೇತತ್ಪಾತ್ರೇ ಶುಭೇಕ್ಷಿಪೇತ್ ॥ ಅನೇನಾಭ್ಯಕ್ತಗಾತ್ರಸ್ತು ವೃದ್ಧೋಽಶೀತಿ ಸಮೋಽಪಿಯಃ ॥ ಸುಖೀಭವತಿ ಶುಕ್ರಾಢ್ಯಃ ಸ್ತ್ರೀಣಾಮತ್ಯಂತವಲ್ಲಭಃ ॥ ವಂಧ್ಯಾಪಿ ಲಭತೇ ಗರ್ಭಂ ಷಂಡೋಽಪಿ ತರುಣಾಯತೇ ॥ ಅಪುತ್ರಃ ಪುತ್ರಮಾಪ್ನೋತಿ ಜೀವೇಚ್ಚ ಶರದಾಂ ಶತಮ್ ॥ ಚಂದನಾದಿ ಮಹಾತೈಲಂ ರಕ್ತಪಿತ್ತಂ ಕ್ಷಯಂ ಜ್ವರಮ್ ॥ ದಾಹಂ ಪ್ರಸ್ವೇದ ದೌರ್ಗಂಧ್ಯಂ ಕುಷ್ಠಂ ಕಂಡೂಂ ವಿನಾಶಯೇತ್ ॥"

"ಈಗ ಚಂದನಾದಿತೈಲ ವಿಧಾನವನ್ನೂ ಹೇಳುತ್ತೇನೆ. ಶ್ರೀಗಂಧ, ರಕ್ತಚಂದನ, ಪತಂಗಚಕ್ಕೆ, ಹರಿಚಂದನ, ಕೃಷ್ಣಾಗರು, ದೇವದಾರು, ಸರಲ, ಪದ್ಮಾಕ್ಷ, ಅಡಕೆ, ಕರ್ಪೂರ, ಕಸ್ತೂರಿ, ಲತಾಕಸ್ತೂರಿ, ಶಿಲಾರಸ, ಕೇಸರ, ಆಕಳತುಪ್ಪ, ಜಾಫಲ, ಜಾಪತ್ರಿ, ಲವಂಗ, ಯಾಲಕ್ಕಿ, ದೊಡ್ಡ ಯಾಲಕ್ಕಿ, ಕಂಕೋಲ, ಫಲಕ, ದಾಲ್ಚಿನ್ನಿ, ಕಮಲಗಜ್ಜೆ, ನಾಗಕೇಸರ, ಸೊಗದೆ,

ಟೂವಮಾಂಸಿ, ದೇವದಾರು, ದಾಲಚಿನ್ನಿ, ಮುರಾ, ಕಚೋರ, ಛಡ, ಶಿಲಾ ಜಿತು, ಭದ್ರಮುಸ್ತೆ, ರೇಣಿಕೆ, ಪ್ರಿಯಂಗುಪುಷ್ಪ, ಶ್ರೀವಾಸ, ಗುಗ್ಗುಲ, ರಗು, ನಖ, ರಾಲ, ಧಾತಕೀಕುಸುಮ, ಗ್ರಂಥಿಪರ್ಣೀ, ಮಂಜಿಷ್ಟೆ, ತಗರ, ಮೇಣ ಈ ಸಾಮಾನು ತಲಾ ೧-೧ ಶಾಣ (ಪಾವಲಿ) ತೂಕ ತೆಕ್ಕೊಂಡು ಕಲ್ಕ ಮಾಡಬೇಕು. ಒಳ್ಳೇ ಯಳ್ಳುಯಣ್ಣೆ ೪೦ ತೊಲಾ, ಅದರಲ್ಲಿ ಈ ಕಲ್ಕವನ್ನು ಹಾಕಿ ತೈಲವಿಧಿಯಿಂದ ತೈಲವನ್ನು ಮಾಡಿ ಶೀಸೆಯಲ್ಲಿ ತುಂಬಿಡಬೇಕು. ಇದರ ಮರ್ದನದಿಂದ ೪೦ ವರ್ಷದ ಮುದುಕನು ಅತ್ಯಂತ ವೀರ್ಯವಂತ ನಾಗಿ ಸ್ತ್ರೀಸುಖವನ್ನನುಭವಿಸುವನು. ಸುಖಿಯಾಗಿರುವನು. ವಂಧ್ಯೆಯೂ ಪುತ್ರವತಿಯಾಗುವಳು. ನಪುಂಸಕನಿಗೂ ತಾರುಣ್ಯ ಬರುವದು. ಅಪುತ್ರನಿಗೆ ಸಂತಾನಲಾಭವಾಗುವದು. ಪೂರ್ಣಾಯುವಾಗುವದು. ಈ ಚಂದನಾದಿ ತೈಲವು ರಕ್ತಪಿತ್ತ, ಕ್ಷಯ, ಜ್ವರ, ದಾಹ, ಬೆವರುಸೋಲು, ದುರ್ಗಂಧ ಇವನ್ನು ನಾಶ ಮಾಡುವದು. ಕುಷ್ಟವೂ, ವ್ಯೆನವೆಯೂ ಇದರಿಂದ ಶಮನವಾಗುವವು."

## ದ್ರಾಕ್ಷಾಸವ.

"ದ್ರಾಕ್ಷಾ ತುಲಾ ಮುಪಾದಾಯ ಜಲದ್ರೋಣೇ ಚತುಷ್ಟ ಯೇ ॥ ಪಕ್ತ್ವಾ ಚತುರ್ಥಶೇಷಂ ತು ತಂ ಕಷಾಯಮುಪಾಹ ರೇತ್ ॥ ದತ್ವಾ ಗುಡತುಲಾಂ ತತ್ರ ಧಾತಕೀ ಪ್ರಸ್ಥಮೇವ ಚ ॥ ನಿಖಾತ್ಯ ಸ್ಥಾಪಯೇದ್ಭೂಮೌ ಯಾವತ್ಮಾಽಸೌ ಪರೋ ಭವೇ ತ್ ॥ ತತಸ್ತತ್ಸಾರಮಾದದ್ಯಾದ್ವಾರುಣೀ ಯಂತ್ರತಃ ಶನೈಃ ॥ ಪುನಸ್ತಂ ವಾರುಣೀ ಯಂತ್ರೇ ಸಮಾರೋಪ್ಯ ತದಾಹರೇತ್ ॥ ಏವಂ ತು ದಶದಾ ಸಾರಂ ಪುನಶ್ಚ ವಿಧಿನಾ ಹರೇತ್ ॥ ತತಸ್ತ ಸ್ಮಿನ್ ಕ್ಷ ತುಜಾತಂ ಜಾತೀಕೋಶಂ ಲವಂಗಕಮ್ ॥ ಕರ್ಪೂ ರಂ ಕುಂಕುಮಂ ಚಾಪಿ ಯಥಾಲಾಭಂ ನಿಯೋಜಯೇತ್ ॥ ತಂ ಯಥಾಗ್ನಿಬಲಂ ಮರ್ತ್ಯಃ ಪಿಬೇತ್ಸರ್ವಕ್ಷಯಾಪಹಮ್ ॥ ಸ್ನಿ ಗ್ಧೇನ ಭೋಜನೇನೈವ ಆಸವಂ ವಿಧಿನಾ ಪಿಬೇತ್ ॥ ನರೋ ನವ ತಿ ವರ್ಷೋಽಪಿ ಪೌರುಷೇಣ ಮಹೀಯತೇ ॥"

"೪೦೦ ತೊಲಾ ದ್ರಾಕ್ಷಿ ೧೬೦೦ ತೊಲಾ ನೀರಿನಲ್ಲಿ ಪಾಕಮಾಡಬೇಕು. ಚತುರ್ಥಾಂಶ ೪೦೦ ತೊಲಾ ಬಾಕಿಯಾದಾಗ ಇಳಿಸಬೇಕು. ಇದರಲ್ಲಿ ೪೦೦ ತೊಲಾ ಬೆಲ್ಲವನ್ನೂ, ೪೦ ತೊಲಾ ಧಾತಕೀಕುಸುಮವನ್ನೂ ಹಾಕಿ ಬಂದು ಮಣ್ಣಿನ ಪಾತ್ರೇಲಿ ಸಂಧಿಬಂಧನಮಾಡಿ ಭೂಮಿಯಲ್ಲಿ ಹೂಳಬೇಕು. ಅಲ್ಲಿಂದ ತೆಗದು ನೋಡಲಾಗಿ ಅದು ಮೇಲಕ್ಕೆ ಬುರಗುಬಂದಿರುವದನ್ನು ನೋ ಡಿ ವಾರುಣೀಯಂತ್ರದದ್ವಾರಾ ಅದರ ಅರ್ಕ ತೆಗಿಯಬೇಕು. ಮತ್ತೆ ಯಂತ್ರ

ದಲ್ಲಿ ಆ ಅರ್ಕನ್ನೂ ಏರಿಸಿ, ಹೀಗೆ ೧೦ ಸಲ ತೆಗಿಯಬೇಕು. ಅನಂತರ ಅದರಲ್ಲಿ ಚತುರ್ಜಾತ, ಜಾವಿತ್ರೀ, ಲವಂಗ, ಪಚ್ಚಕರ್ಪೂರ, ಕೇಸರಿ ಇವನ್ನು ಪುಡಿಮಾಡಿ ಬೆರಸಿ ಅದನ್ನು ಜಠರಾಗ್ನಿ ಬಲವರಿತು ಸೇವಿಸುವದರಿಂದ— ಕ್ಷಯರೋಗಗಳನ್ನು ನಾಶಮಾಡುವದು. ಸುಂದರವಾದ ಸ್ನಿಗ್ಧಭೋಜನ ಮಾಡುತ್ತಾ ಇದನ್ನು ಸೇವಿಸುವದರಿಂದ ೯೦ ವರ್ಷದ ವೃದ್ಧನೂ ತರುಣನಾಗುತ್ತಾನೆ. ''

" ಯತ್ಕಿಂಚಿನ್ಮಧುರಂ ಸ್ನಿಗ್ಧಂ ಜೀವನಂ ತರ್ಪಣಂ ಗುರು ‖ ಹರ್ಷಣಂ ಮನಸಶ್ಚೈವ ಸರ್ವಂ ತದ್ವೃಷ್ಯಮುಚ್ಯತೇ ‖ "

"ಯಾವ ಪದಾರ್ಥವು ಮಧುರ, ಸ್ನಿಗ್ಧ, ಪ್ರಾಣರಕ್ಷಕ, ತೃಪ್ತಿಕಾರಕ, ಗುರು, ಮನಸ್ಸಿಗೆ ಆನಂದಪ್ರದವಾಗಿರುವದೋ ಅದೆಲ್ಲವೂ ವೀರ್ಯಲಾಭವನ್ನುಂಟು ಮಾಡುವ ಪದಾರ್ಥವೇ !! ''

" ತ್ರಿಕಂಟಕಾತ್ಮಗುಪ್ತಾನಾಂ ಬೀಜಚೂರ್ಣಂ ಸ ಶರ್ಕರಮ್ ‖ ಕ್ಷೀರೇಣ ಯಃ ಪಿಬೇದ್ಗಚ್ಛೇದ್ದಶವಾರಂ ನಿರಂತರಮ್ ‖ "

"ನೆಗ್ಗಿಲು, ನಸುಗುನ್ನೀಬೀಜ ಇವುಗಳ ಸಮಾಂಶ ಚೂರ್ಣವನ್ನು ಸಕ್ಕರೆವೆರಸಿಕೊಳ್ಳುತ್ತಾ (ನಿತ್ಯದಲ್ಲಿಯೂ) ಸೇವಿಸಲು, ಅವನು ನಿತ್ಯವೂ ಸ್ತ್ರೀಲೋಲನಾಗಿ ಮನ್ಮಥನಂತಿರುವನು. ''

## ನಾ ರ ಸಿಂ ಹ ಚೂ ರ್ಣ .

" ಶತಾವರೀ ರಜಃ ಪ್ರಸ್ಥಂ ಪ್ರಸ್ಥಂ ಗೋಕ್ಷುರಕಸ್ಯ ಚ ‖ ವರಾಹ್ಯಾ ವಿಂಶತಿ ಪಲಂಗುಡೂಚ್ಯಾ ಪಂಚವಿಂಶತಿಃ ‖ ಭಲ್ಲಾತಕಾಶಾಂ ದ್ವಾತ್ರಿಂಶಚ್ಚಿತ್ರಕಸ್ಯ ದಶೈವ ತು ‖ ತಿಲಾನಾಂ ಶೋಧಿತಾನಾಂ ಚ ಪ್ರಸ್ಥಂದದ್ಯಾತ್ಸುಚೂರ್ಣಿತಮ್ ‖ ತ್ರ್ಯೂಷಣಸ್ಯ ಪಲಾನ್ಯಷ್ಟೌ ಶರ್ಕರಾಯಾಸ್ತು ಸಪ್ತತಿಃ ‖ ಮಾಕ್ಷಿಕಂ ಶರ್ಕರಾರ್ಧೇನ ಮಾಕ್ಷಿಕಾರ್ಧೇನ ವೈ ಘೃತಮ್ ‖ ಶತಾವರೀ ಸಮಂ ದೇಯಂ ವಿದಾರೀ ಕಂದಜಂ ರಜಃ ‖ ಏತದೇಕೀಕೃತಂ ಚೂರ್ಣಂ ಸ್ನಿಗ್ಧೇ ಭಾಂಡೇ ನಿಧಾಪಯೇತ್ ‖ ಪಲಾರ್ಧ ಮುಪಭುಂಜೀತ ಯಥೇಷ್ಟಂ ಚಾಪಿಭೋಜನಮ್ ‖ ಮಾಸೈಕಮುಪಯೋಗೇನ ಜರಾಂ ಹಂತಿ ರುಜಾಮಪಿ‖ ವಲೀ ಪಲಿತಖಾಲಿತ್ಯಂ ಮೇಹಸಾಂಡ್ಯಾದಿ ಪಿನಸಾನ್ ‖ ಹಂತ್ಯಷ್ಟಾದಶ ಕುಷ್ಠಾನಿ ತಥಾಷ್ಟಾವುದರಾಣಿ ಚ ‖ ಭಗಂದರಂ ಮೂತ್ರಕೃಚ್ಛ್ರಂ ಗೃಧ್ರಸೀಂ ಸ ಹಲೀಮಕಾಮ್ ‖ ಕ್ಷಯಂ ಚೈವ ಮಹಾಶ್ವಾಸಾನ್ ಪಂಚಕಾಸಾನ್ ಸುದಾ

ರುಜಾಃ ॥ ಅಶೀತಿವಾತಜಾಃ ರೋಗಾಃ ಚತ್ವಾರಿಂಶಚ್ಚ ಪಿತ್ತಜಾಃ ॥ ವಿಂಶತಿಶ್ಲೇಷ್ಮಕಾಂ ಶ್ಚೈವ ಸಂಸೃಷ್ಟಾಃ ಸನ್ನಿಪಾತಕಾಃ॥ ಸರ್ವಾನರ್ಶೋಗದಾನ್ ಹಂತಿ ವೃಕ್ಷಮಿಂದ್ರಾಶನಿರ್ಯಥಾ॥ ವೀರ್ಯವಾನ್ ರಮತೇ ನಾರ್ಯಾಂ ದಶವಾರಂ ನಿರಂತರಮ್ ॥ ಪುತ್ರಾನ್ ಸಂಜನಯೇದ್ವೀರಾನ್ ನರಸಿಂಹನಿಭಾನ್ ಸ್ತಥಾ ॥ ನಾರಸಿಂಹಮಿದಂ ಚೂರ್ಣಂ ಸರ್ವರೋಗಹರಂ ಪರಮ್ ॥ "

"ಶತಾವರೀಚೂರ್ಣ ೮೦ ತೊಲಾ, ದಕ್ಷಿಣೀಗೋಖರೂ (ಸಣ್ಣನೆಗ್ಗಿಲು) ಚೂರ್ಣ ೮೦ ತೊಲಾ, ವಾರಾಹೀಕಂದ ೮೦ ತೊಲಾ, ಅಮೃತಬಳ್ಳಿಸತ್ವ ೧೦೦ ತೊಲಾ, ಶುದ್ಧಿಮಾಡಿದ ಭಲ್ಲಾತಕಿ ೧೬೦ ತೊಲಾ, ಚಿತ್ರಮೂಲದಬೇರು ೧೦ ತೊಲಾ, ಶುದ್ಧಯಳ್ಳು ೮೦ ತೊಲಾ, ತ್ರ್ಯೂಷಣ ತಲಾ ೪೦-೪೦ ತೊಲಾ, ಸಕ್ಕರೆ ೩೬೦ ತೊಲಾ, ಜೇನುತುಪ್ಪ ೧೮೦ ತೊಲಾ, ಗೋವಿನತುಪ್ಪ ೯೦ ತೊಲಾ, ಈ ಎಲ್ಲಾ ಪದಾರ್ಥಗಳನ್ನೂ ಕ್ರಮವಾಗಿ ಚೂರ್ಣಿಸಿ ಶೋಧಿಸಿ, ಸ್ನಿಗ್ಧವಾದ ಮೃಣ್ಮಯಪಾತ್ರೇಲಿ ಇಟ್ಟುಕೊಂಡು ನಿತ್ಯವೂ ೨ ತೊಲಾದಂತೆ ಈ ಚೂರ್ಣವನ್ನು ಬೆಳಗಿನಹೊತ್ತು ಸೇವಿಸುತ್ತಾ, ಯಥೇಚ್ಛಭೋಜನ ಮಾಡಬೇಕು. ಇದರ ಸೇವನೆಯನ್ನು ೧ ತಿಂಗಳು ಮಾಡಲು ವೃದ್ಧಾಪ್ಯದ ರೋಗಗಳು ದೂರವಾಗುವವು. ದೇಹದಲ್ಲಿ ತೆರೆಯುಂಟಾಗುವಿಕೆ, ಬಿಳೀಕೂದಲಾಗುವಿಕೆ, ಮೇಹ, ಪಾಂಡು, ಪೀನಸ, ೧೮ ಕುಷ್ಟ, ೮ ಉದರರೋಗ, ಭಗಂದರ, ಮೂತ್ರಕೃಚ್ಛ್ರ, ಗೃಧ್ರಸೀ, ಹಲೀಮಕ, ರಾಜಯಕ್ಷ್ಮ, ಮಹಾಶ್ವಾಸ, ೫ ಬಗೆ ಕಾಸಜಾಡ್ಯ, ೮೦ ವಾಯುವಿಕಾರ, ೪೧ ಬಗೆ ಪಿತ್ತರೋಗಗಳು, ೨೦ ಬಗೆ ಶ್ಲೇಷ್ಮಜಾಡ್ಯಗಳು, ಮಿಶ್ರಿತ ರೋಗಗಳು, ಸನ್ನಿಪಾತಗಳು, ಎಲ್ಲಾ ಅರ್ಶೋರೋಗಗಳು, ಈ ಎಲ್ಲಾ ರೋಗಗಳನ್ನೂ ನಷ್ಟಮಾಡುವದು. ಇದರ ಸೇವನೆಯಿಂದ ವೀರ್ಯವು ಅತ್ಯಂತ ವೃದ್ಧಿಯಾಗಿ ಮನುಷ್ಯನು ಸ್ತ್ರೀಯರಲ್ಲಿ ನಿತ್ಯವೂ ಯಥೇಚ್ಛ ರಮಣಮಾಡುವನು. ಇದರ ಪ್ರಭಾವದಿಂದ ಶೂರರಾದ ಮಕ್ಕಳನ್ನು ಪಡೆಯುತ್ತಾನೆ."

## ಮುಸಲೀಚೂರ್ಣ.

"ಮುಸಲೀ ಕಂದಚೂರ್ಣಂ ಚ ಗುಡೂಚೀ ಸತ್ವಸಂಯುತಮ್॥
ವಾನರೀ ಗೋಕ್ಷುರಾಭ್ಯಾಂ ಚ ಶಾಲ್ಮಲೀ ಶರ್ಕರಾಮಲ್ತೈಃ ॥ ಆ
ಲೋಡ್ಯ ಘೃತದುಗ್ಧಾಭ್ಯಾಂ ಭಕ್ಷಯೇತ್ಕಾಮವೃದ್ಧಯೇ ॥"

"ಸ್ಯಾಹಮುಸಲೀ, ಸಫೇದ್‌ಮುಸಲೀ, ನೆಲಗುಂಬಳ, ಅಮೃತಬಳ್ಳಿಸಾರ, ನಸುಗುನ್ನಬೀಜ, ನೆಗ್ಗಿಲು, ಬೂರುಗದಮೇಣ, ಈ ಎಲ್ಲಾ ಸಮತೂಕ ಚೂರ್ಣಿಸಿ, ಸಮಸಕ್ಕರೆ ಬೆರಸಿ ದಿನ ೧॥ ತೊಲೆಯನ್ನು ಸೇವಿಸುತ್ತಾ

ಮೇಲೆ ಯಮ್ಮೆ ಹಾಲು ಸಕ್ಕರೆ ಹಾಕಿ ಕಾಸಿದ್ದನ್ನು ಕುಡಿಯುತ್ತಾ ಬರುವದು. ವೀರ್ಯವೃದ್ಧಿ ಅಪರಿಮಿತವಾಗಿ ಆಗುತ್ತದೆ. ''

## ವಾರಾಹೀಕಂದಚೂರ್ಣ.

"ವಾರಾಹೀಕಂದಭೃಂಗಾಭ್ಯಾಂ ಪಲಂ ಶೋಡಷಚೂರ್ಣಿತಮ್॥
ಕಿಂಚಿದಾಜ್ಯೇನ ಭೃಷ್ಟಂ ಚ ಸಿತಾಯುಕ್ತಂ ಚ ಕಾರಯೇತ್ ॥
ತ್ವಕ್‌ಪತ್ರನಾಗಪುಷ್ಪಾಭ್ಯಾಂ ಕೇಸರಂ ಮಧುಯಷ್ಟಿಕಾ ॥ ಏತಾ
ನಿ ಪಲಮಾತ್ರಾಣಿ ಶರ್ಕರಾಸಮಮೇವಚ ॥ ಆಲೋಡ್ಯ ಘೃತ
ದುಗ್ಧಾಭ್ಯಾಂ ಪಿಬೇತ್ಕಾಮಂ ನಿಶಾಮುಖೇ ॥ ವೀರ್ಯವೃದ್ಧಿಕರಂ
ಪುಂಸಾಂ ಬಹು ರಾಮಾಸು ರಮ್ಯತೇ ॥ "

" ವಾರಾಹೀಕಂದ (ಹಂದಿಗೆಣಸು) ಮತ್ತು ಗರುಗದಚೂರ್ಣ ೬೪-೬೪ ತೊಲಾ ಚೂರ್ನಿಸಿ ಸ್ವಲ್ಪ ತುಪ್ಪದಲ್ಲಿ ಹುರಿಯುವದು. ಇದಕ್ಕೆ ಸಮ ತೂಕ ಸಕ್ಕರೆ ಬೆರಸಿ ಇದರಲ್ಲಿ ೧ ತೊಲಾ ತಿಂದು ಮೇಲೆ ಹಾಲು ಕುಡಿಯುತ್ತಾ ಬಂದರೆ ಕಾಮಶಕ್ತಿ ಬಲವಾಗಿರುತ್ತದೆ (ಅಥವಾ) ದಾಲ್ಚಿನ್ನಿ, ಲವಂಗ ಪತ್ರೆ, ನಾಗಕೇಸರ, ಜೇಷ್ಟಮಧು ಇವನ್ನು ೪-೪ ತೊಲಾದಂತೆ ಚೂರ್ನಿಸಿ ಶೋಧಿಸಿ ಸಮಸಕ್ಕರೆ ಬೆರಸಿ ಇದನ್ನು ಮೇಲಿನ ವಾರಾಹಿಕಂದ ಚೂರ್ಣಕ್ಕೂ ಕೇರಿಸಿ ಅದನ್ನು ಸೇವಿಸಿ ಹಾಲು ಕುಡಿಯುವದು. ಗುಣವು ಅಪರಿಮಿತ ವೀರ್ಯವೃದ್ಧಿ. ''

" ಉಚ್ಚಟಾ ಚೂರ್ಣಮಪ್ಯೇವಂ ಕ್ಷೀರೇಣೋತ್ತಮಮುಚ್ಯತೇ॥
ಶತಾವರ್ಯುಚ್ಚಟಾಚೂರ್ಣಂ ಪೇಯಂ ವೃಷ್ಯತ್ವಸಿದ್ಧಯೇ ॥ "

" ಇದರಂತೆಯೇ ಭದ್ರಮುಸ್ತೆಯ ಚೂರ್ಣವೂ ಸಕ್ಕರೆವೆರಸಿ ಸೇವಿಸುತ್ತಾ ಬಂದರೂ ಅಥವಾ ಶತಾವರೀ, ಭದ್ರಮುಸ್ತೆಗಳನ್ನು ಸಮವಾಗಿ ಕೇರಿಸಿ ಚೂರ್ನಿಸಿ ಇದನ್ನು ಸೇವಿಸುತ್ತಾ ಹಾಲೂ ಸಕ್ಕರೆ ಕುಡಿಯುತ್ತಾ ಬಂದರೂ ಕಾಮಪುರುಷಾರ್ಥ ಸಿದ್ಧಿಯಾಗುವದು. ''

" ಕರ್ಷಂ ಮಧೂಕಚೂರ್ಣಸ್ಯ ಘೃತೇಕ್ಷೌದ್ರಸಮನ್ವಿತೇ ॥ ಪ್ರ
ಯುಂಜ್ಯಾತ್ ಯಃ ಪಯಶ್ಚಾನು ನಿತ್ಯವೇಗಸ್ಸ ನಾ ಭವೇತ್ ॥ "

" ನಿತ್ಯವೂ ಜೇಷ್ಟಮಧು ಚೂರ್ನವನ್ನು ಅರ್ಧತೊಲಾ ತುಪ್ಪ ೧ ತೊಲಾ ಜೇನುತುಪ್ಪ ಕೇರಿಸಿ ಸೇವಿಸಿ ಯಮ್ಮೆ ಹಾಲು ಕಾದದ್ದು ಸಕ್ಕರೆವೆರಸಿ ಕುಡಿಯುತ್ತಾ ಬಂದವನಿಗೆ ಕಾಮವೇಗವು ಎಂದೆಂದಿಗು ಜಗ್ಗುವದಿಲ್ಲ. ''

" ಚೂರ್ಣಂ ವಿದಾರ್ಯಾಃ ಸುಕೃತಂ ಸ್ವರಸೇನೈವ ಭಾವಿತಮ್ ॥
ಸರ್ಪಿಃ ಕ್ಷೌದ್ರಯುತಂ ಲೀಢ್ವಾ ಉಷ್ಣದುಗ್ಧಂ ತತಃ ಪಿಬೇತ್॥"

"ನೆಲಕುಂಬಳಬೇರನ್ನು ಚೂರ್ಣಿಸಿದ ಚೂರ್ಣವನ್ನು ಅದರ ರಸದ ಲ್ಲಿಯೇ ೨೧ ಸಲ ಭಾವನೆಮಾಡಿ ಇಟ್ಟುಕೊಂಡು ದಿನ ೧ ತೊಲಾ ಚೂರ್ಣ ೧ ತೊಲಾ ತುಪ್ಪ ೨ ತೊಲಾ ಜೇನುತುಪ್ಪ ಹಾಕಿ ಕಲಿಸಿ ಸೇವಿಸಿ ಮೇಲೆ ಕಾದಹಾಲು ಸಕ್ಕರೆವೆರಸಿ ಕುಡಿಯುತ್ತಾ ಬಹುಕಾಲ ಸೇವಿಸಿದರೆ ಅನಂತ ವೀರ್ಯನಾಗುವನು."

"ಶಮಯತಿ ಗೋಕ್ಷುರಚೂರ್ಣಂ।
ಛಾಗೀಕ್ಷೀರೇಣ ಸಾಧಿತಂ ಸಮಧು॥
ಭುಕ್ತಂ ಕ್ಷಪಯತಿ ಷಾಂಡ್ಯಮ್।
ಯಜ್ಜನಿತಂ ಕುಪ್ರಯೋಗೇಣ॥"

"ಸಣ್ಣನೆಗ್ಗಿಲು ಚೂರ್ಣ ೧ ತೊಲಾ, ೧। ತೊಲಾ ಜೇನುತುಪ್ಪದಲ್ಲಿ ಕಲಿಸಿ ಸೇವಿಸಿ ಮೇಲೆ ಆಡಿನಹಾಲನ್ನು ಬಿಶಿಮಾಡಿ ಸಕ್ಕರೆವೆರಸಿ ಕುಡಿಯುತ್ತಾ ೧ ಮಂಡಲ ಸೇವಿಸಿದರೆ ಹಸ್ತರತಿಜನ್ಯವಾದ ನಪುಂಸಕತ್ವವು ನಿಜವಾಗಿಯೂ ನಿವೃತ್ತಿಯಾಗುವದು."

"ತ್ವಕ್ಪಿಪ್ಪಲೀ ಲವಂಗೇಲಾ ಚಂದನಂಚ ಶಿವಾಫಲಮ್॥ ಸಾರಮರ್ದಪಲಂ ಭಂಗಾ ಸಾರ್ಧದ್ವಿಪಲಸಮ್ಮಿತಾ॥ ಕರ್ಪೂರೋ ಮೃಗನಾಭಿಶ್ಚ ದಶಮಾಷಮಿತಃ ಪೃಥಕ್॥ ಸರ್ವಂ ತುಲ್ಯಸಿತಾಚೂರ್ಣಂ ಮಾನಸೋಲ್ಲಾಸಸಂಜ್ಞಿತಮ್॥ ವೃಷ್ಯಂ ವಹ್ನಿಪ್ರದಂ ಚೈ ತತ್ಕಾಮೋದ್ದೀಪನಕಾರಕಮ್॥

"ದಾಲ್ಚಿನ್ನಿ, ಹಿಪ್ಪಲಿ, ಯಾಲಕ್ಕಿ, ಶ್ರೀಗಂಧ, ನೆಲ್ಲಿಚಟ್ಟು ಪ್ರತಿಯೊಂದು ೪-೪ ತೊಲಾ, ಲೋಹಭಸ್ಮ ೧॥ ತೊಲಾ, ಶುದ್ಧಮಾಡಿದ ಭಂಗೀ ಸೊಪ್ಪು ೨ ಪಲ, ಪಚ್ಚಕರ್ಪೂರ, ಕಸ್ತೂರಿ ಯಥಾಸಾಧ್ಯ; ಎಲ್ಲಾ ಚೂರ್ಣಮಾಡಿ, ಎಲ್ಲದರಸಮ ಸಕ್ಕರೆವೆರಸಿ ದಿನವೂ ೧ ತೊಲಾದಂತೆ ಹಾಲಿನಲ್ಲಿ ಸೇವಿಸುತ್ತಾ ಬರುವದು. ಇದು ಮಾನಸೋಲ್ಲಾಸಿನೀ ಚೂರ್ಣವು, ಜಠರಾಗ್ನಿಯನ್ನೂ ಕಾಮಾಗ್ನಿಯನ್ನೂ ವೃದ್ಧಿಪಡಿಸುತ್ತದೆ."

## ಬೃಹದ್ವಾರಾಹೀಕಂದಚೂರ್ಣ.

"ವಾರಾಹೀಕಂದ ಶೃಂಗಾಟಂ ಕಂದಂಮಾರ್ಜಾರಮೇವಚ॥ ಚೂರ್ಣಂ ಸೂಕ್ಷ್ಮಂಕೃತಂ ಸರ್ವಂ ಪಲಮಾನಂ ಪೃಥಕ್ಪೃಥಕ್॥ಘೃತಭ್ರಷ್ಟಂ ತುತಚ್ಚೂರ್ಣಂ ಪಶ್ಚಾದೇತನ್ಮಹೌಷಧಮ್॥ ಚತುರ್ಜಾತಂ ಲವಂಗಂಚ ಪಿಪ್ಪಲೀ ನಾಗರಂತುಗಾ॥ ಏತಾ ದ್ವಿಕರ್ಷಕಾ ಭಾಗಾ ಸಿತಾ ಸರ್ವಸಮಾನಿಕಾ॥ ಪಲಾರ್ಧಂ

ಭಕ್ಷಯೇನ್ನಿತ್ಯಂ ಸ ಸಿತಂ ಮಹಿಷೀಪಯಃ ॥ ದಿನಾಂತೇ ತು ಪಿಬೇನ್ನಿತ್ಯಂ ಕ್ಲೈಬತ್ವಂ ನಾಶನಂ ಪರಮ್॥ ಪ್ರಮೇಹವ್ಯಾಧಿಶಮನಂ ವೀರ್ಯಸ್ತಂಭನ ಕಾರಕಮ್ ॥ "

"ವಾರಾಹೀ (ಹಂದಿಗೆಣಸಿನ) ಗೆಡ್ಡೆ, ಸಿಂಘಾಡೆ, ನೆಲಗುಂಬಳ, ಪ್ರತಿಯೊಂದೂ ೪-೪ ತೊಲಾ, ಚೂರ್ಣಿಸಿ ತುಪ್ಪದಲ್ಲಿ ಹುರಿಯುವದು. ಅದಕ್ಕೆ ದಾಲ್ಚಿನ್ನಿ, ಯಾಲಕ್ಕಿ, ಲವಂಗಪತ್ರಿ, ನಾಗಕೇಸರಿ, ಲವಂಗ, ಹಿಪ್ಪಲಿ, ಶುಂಠಿ ವಂಶಲೋಚನ ಇವು ತಲಾ ೨-೨ ತೊಲೆಯಂತೆ ಚೂರ್ಣಿಸಿ, ಶೋಧಿಸಿ ಬೆರಸುವದು. ಎಲ್ಲದರ ಸಮತೂಕ ಸಕ್ಕರೆ, ಇದನ್ನು ಮೃನ್ಮಯ ಸ್ನಿಗ್ಧಭಾಂಡದಲ್ಲಿಟ್ಟು ಪ್ರತಿದಿನ ಸಾಯಂಕಾಲ ಅಗ್ನಿಬಲ ನೋಡಿ ೨ ತೊಲಾದವರೆಗೂ ಸೇವಿಸುತ್ತಾ ಮೇಲೆ ಸಕ್ಕರೆ ಬೆರಸಿದ ಎಮ್ಮೆಹಾಲು ಕುಡಿಯುತ್ತಾ ಬಂದರೆ-ಪ್ರಮೇಹ, ನಪುಂಸಕತ್ವ ನಿವೃತ್ತಿಯಾಗಿ ಅಪರಿಮಿತ ವೀರ್ಯವುಂಟಾಗುವದು. ವೀರ್ಯಸ್ತಂಭನವೂ ಆಗುವದು. "

## ಮ ದ ನ ಪ್ರ ಕಾ ಶ ಚೂ ರ್ಣ .

"ಕೋಕಿಲಾಕ್ಷಸ್ಯ ಬೀಜಾನಿ ಮುಸಲೀ ಕಂದನಾಗರಮ್ ॥ ವಾಜಿಗಂಧಾ ಕಪಿಬೀಜಂ ಶಾಲ್ಮಲೀ ಪುಷ್ಪಮೇವಚ ॥ ಬಲಾ ಶತಾವರೀ ಮೂಲಂ ಮೋಚಾಹ್ವಂಚ ತ್ರಿಕಂಟಕಮ್ ॥ ಜಾತೀಫಲಂ ಚ ಮಾಷಾನ್ನಂ ಮಾತುಲಾನೀ ತುಗಾ ತಥಾ ॥ ಏತಾನಿ ಸಮಭಾಗಾನಿ ಸಿತಾ ಸರ್ವಸಮಾನಿಕಾ ॥ ಪಯಸಾ ಹಿ ಪಿಬೇದ್ರಾತ್ರೌ ಕರ್ಷಮೇಕಂ ಚ ನಿತ್ಯಶಃ ॥ ಬಲವೀರ್ಯಕರಂ ಪುಂಸಾಂ ಪ್ರಮೇಹವ್ಯಾಧಿನಾಶನಮ್ ॥ ಮದನಪ್ರಕಾಶಚೂರ್ಣಂಹಿ ಪ್ರೌಢಾನಾಂ ದ್ರಾವಣಂ ಪರಮ್ ॥ "

"ತಾಲಮಖಾನೆಬೀಜ, ನೆಲತಾಟಿಗಡ್ಡೆ, ನೆಲಗುಂಬಳಗೆಡ್ಡೆ, ಶುಂಠಿ, ಅಶ್ವಗಂಧಿ, ನಸುಗುನ್ನಿಬೀಜ, ಬೂರುಗದಹೂವು, ಕಳ್ಳಂಗಡಲೆ, ಶತಾವರಿ, ಮೋಚರಸ, ನೆಗ್ಗಿಲು, ಜಾಫಲ, ಹುರಿದ ಉದ್ದಿನಬೇಳೆ, ಭಾಂಗ, ವಂಶಲೋಚನ, ಇವೆಲ್ಲಾ ಸಮಭಾಗ ಚೂರ್ಣಿಸಿ, ಸಮಸಕ್ಕರೆ ಬೆರಸಿ, ಈ ಮದನಪ್ರಕಾಶ ಚೂರ್ಣವನ್ನು ದಿನ ೧ ತೊಲೆಯಂತೆ ಸಾಧಿಸುತ್ತಾ ಬರುವದು. ಮೇಲೆ ಕಾದ ಎಮ್ಮೆಹಾಲು ಕುಡಿಯುವದು; ವೀರ್ಯವೃದ್ಧಿ, ಪ್ರಮೇಹನಾಶನ. ಇದರಿಂದ ಪ್ರೌಢಾಸ್ತ್ರೀಗೂ ಸಹ ದ್ರಾವಣಯೋಗವು. "

## ಅ ಶ್ವ ಗಂ ಧಿ ಚೂ ರ್ಣ .

"ಅಶ್ವಗಂಧಾ ತಿಲಾಃ ಕೃಷ್ಣಾಃ ಸಮಾನಂ ಸೂಕ್ಷ್ಮ ಚೂರ್ಣಿತಮ್ ॥ ಪಲಾರ್ಧಂ ಮಧುಸರ್ಪಿಭ್ಯಾಂ ಭುಕ್ತ್ವಾ ಚಾನುಪಯಃ ಪಿಬೇತ್॥ ವೀರ್ಯವೃದ್ಧಿಕರಂ ಚೈವ ಕ್ಲೈಬತ್ವಂ ನಾಶನಂ ಪರಮ್ ॥"

" ಅಶ್ವಗಂಧಿ ಮತ್ತು ಕರೀಯುಳ್ಳು ಸಮವಾಗಿ ಚೂರ್ಣಿಸಿ, ಜೇನು ತುಪ್ಪ ತುಪ್ಪಗಳನ್ನು ವಿಷಮವಾಗಿ ಕೇರಿಸಿ ಅದರಲ್ಲಿ ಕಲಿಸಿಕೊಂಡು ನಿತ್ಯವೂ ೨ ತೊಲಾ ಸೇವಿಸುತ್ತಾ ಮೇಲೆ ಬಿಶೀಹಾಲು ಕುಡಿಯುತ್ತಾ ಬಂದರೆ ವೀರ್ಯ ವೃದ್ಧಿಯುಂಟಾಗಿ, ನಪುಂಸಕತನವು ದೂರವಾಗುತ್ತದೆ. "

" ಶತಾವರೀ ಗೋಕ್ಷುರಕಾಶ್ವಗಂಧಾ।
ಪುನರ್ನವಾ ನಾಗಬಲಾ ಮುಸಲ್ಯಃ ॥
ಘೃತೇನ ಖಂಡೇನ ತು ಭಕ್ಷಣೀಯಃ।
ಕ್ಷೀಣಾನರಾ ನಾಗಬಲಾ ಭವಂತಿ ॥ "

" ಶತಾವರಿ, ನೆಗ್ಗಿಲು, ಅಶ್ವಗಂಧಿ, ಪುನರ್ನವ, ಚಿಟ್ಟಾಮುಟ್ಟ್ಟ, ನೆಲ ತಾಟಿಗಡ್ಡೆ ಇವು ಸಮಭಾಗ ಚೂರ್ಣಿಸಿ, ಸಮಸಕ್ಕರೆ ಬೆರಸಿ ದಿನ ೧ ತೊಲಾ ಚೂರ್ಣಕ್ಕೆ ತುಪ್ಪ ಸಕ್ಕರೆ ಬೆರಸಿ ಸೇವಿಸುತ್ತಾ ಬಂದರೆ ಕ್ಷೀಣಪುರುಷನೂ ಆನೆಯಬಲವುಳ್ಳವನಾಗುತ್ತಾನೆ. "

" ಅಶ್ವಗಂಧಾ ದಶಪಲಾ ತನ್ಮಾತ್ರೋ ವೃದ್ಧದಾರುಕಃ ॥ ಕ
ರ್ಷೈಕಂ ಪಯಸಾ ಪೀತ್ವಾ ನಾರೀಭಿರ್ನೈವ ತುಷ್ಯತಿ ॥ "

" ಅಶ್ವಗಂಧಿ ೪೦ ತೊಲಾ, ನೆಲಗುಂಬಳಗಡ್ಡೆ ೪೦ ತೊಲಾ, ಎರಡನ್ನೂ ಚೂರ್ಣಿಸಿ ಸಮಸಕ್ಕರೆಬೆರಸಿ ದಿನ ೨ ತೊಲೆಯನ್ನು ಧಾರೋಷ್ಣ ಹಾಲಿನಲ್ಲಿ ಸೇವಿಸಲು ಧಾತುಪುಷ್ಟಿಯುಂಟಾಗಿ ಸ್ತ್ರೀಸುಖದಲ್ಲಿ ಸೋಲುವದಿಲ್ಲ. "

" ಕರವೀರ ಶಾಲ್ಮಲಿಜಟಾ, ಸ್ತಥಾ ವಾನರಿಕಂ ಸಮಮ್ ॥ ಸೂ
ಕ್ಷ್ಮಚೂರ್ಣಂ ಕೃತಂ ಸರ್ವಂ ಶಾಣಮಾತ್ರಂ ಪಿಬೇನ್ನಿಶಿ ॥ ಆ
ಲೋಡ್ಯ ಘೃತದುಗ್ಧೇನ ಮಾನಿನೀ ಮಾನಭೇದನಮ್ ॥ "

" ಕಣಗಲು ಬಿಳೀಹೂವಿನದು (ಇದು ಪಾಷಾಣಸದೃಶವಾದದ್ದು ಶುದ್ಧಿ ಮಾಡುವದೂ ಕಷ್ಟ ಬಿಟ್ಟುಬಿಡುವದು.) ಎಳೇ ಬೂರಗದಬೇರು ೫ ತೊಲಾ, ನಸುಗುನ್ನಿ ಬೀಜದಪೊಪ್ಪು ೩ ತೊಲಾ, ಇವನ್ನು ಸಮತೂಕವಾಗಿ ಅರದು ಚೂರ್ಣಿಸಿ, ಶೋಧಿಸಿ, ಸಮಸಕ್ಕರೆಬೆರಸಿ ತುಪ್ಪದಲ್ಲಿ ನಿತ್ಯವೂ ಅರ್ಧತೊಲೆ ಸೇವಿಸಿದರೆ ವೀರ್ಯಪುಷ್ಟಿಯಾಗುವದು. ಸ್ತ್ರೀಯರನ್ನು ಜೈಸುವನು. "

" ತ್ರಿಪಲಂ ಮಾಷಚೂರ್ಣಂ ತು ತತ್ಸಮಾ ಶ್ವೇತಶರ್ಕರಾ ॥ ಆ
ಲೋಡ್ಯ ಮಧುಸರ್ಪಿರ್ಭ್ಯಾಂ ಪಲಾರ್ಧಂ ಭಕ್ಷಯೇನ್ನರಃ ॥ ಬಲ
ವೀರ್ಯಕರಂ ಶಶ್ವದ್ವಲೀ ಪಲಿತನಾಶನಮ್ ॥ "

" ಶುದ್ಧವಾಗಿ ಆರಿಸಿದ ಉದ್ದಿನಚೂರ್ಣ ೧೨ ತೊಲಾ, ಇದನ್ನು ಸ್ವಲ್ಪ ತುಪ್ಪದಲ್ಲಿ ಹುರಿಯುವದು. ಆರಿದನಂತರ ಅದಕ್ಕೆ ಸಮಸಕ್ಕರೆ ಬೆರಸಿ ಮತ್ತೆ ಜೇನುತುಪ್ಪ ಮತ್ತು ತುಪ್ಪ ಕೇರಿಸಿ ೨ ತೊಲೆಯನ್ನು ನಿತ್ಯವೂ ಸೇವಿಸುತಾ,

ಬಿಸಿಬಿಸೀ ಹಾಲನ್ನು ಕುಡಿಯುತ್ತಾ ಬರುವದು. ಬಲ, ವೀರ್ಯವೃದ್ಧಿಯಾಗುವದು, ವಲೀಪಲಿತ ಶರೀರವೂ, ಕೂದಲು ನರತದ್ದೂ ತಪ್ಪಿ ಸುಂದರವಾಗವದು. ''

" ವೃದ್ಧದಾರಸ್ಯ ಮೂಲಾನಿ ಸೂಕ್ಷ್ಮಚೂರ್ಣೀಕೃತಾನಿಚ॥ ಶತಮೂಲೀ ರಸೇನೈವ ಸಪ್ತವಾರಂ ವಿಭಾವಯೇತ್ ॥ ತಚ್ಚೂರ್ಣಂ ಸರ್ಪಿಷಾ ಲಿಹ್ಯಾತ್ ಕರ್ಷಮಾತ್ರ ಪ್ರಮಾಣತಃ ॥ ತ್ರಿಂಶದ್ದಿನ ಪ್ರಯೋಗೇಣ ಜಾಯತೇ ಧಾತುವರ್ಧನಮ್ ॥ "

'' ನೆಲಗುಂಬಳಬೇರಿನ ಗಡ್ಡೆ ಚೂರ್ಣವನ್ನು ಶತಾವರೀರಸದಲ್ಲಿ ೭ ಸಲ ಭಾವನೆಮಾಡಿ, ಅನಂತರ ದಿನ ೧ ತೊಲೆಯಂತೆ ತುಪ್ಪದಲ್ಲಿ ಸೇವಿಸಿ, ಬಿಸೀಹಾಲು ಕುಡಿಯುತ್ತಾ ೩೦ ದಿನ ಸೇವಿಸಿದರೆ ವೀರ್ಯವೃದ್ಧಿ. ''

" ಆಕಾರಕರಭಶ್ಶುಂಠೀ ಲವಂಗಂ ಕುಂಕುಮಂ ಕಣಾ ॥ ಜಾತೀಫಲಂ ಜಾತಿಪುಷ್ಪಂ ಚಂದನಂ ಕಾರ್ಷಿಕಂ ಪೃಥಕ್ ॥ ಸರ್ವಮೇಕೀಕೃತಂ ಕರ್ಷಮಾತ್ರಂ ಕ್ಷೌದ್ರೇಣ ಭಕ್ಷಯೇತ್ ॥ ಶುಕ್ರವೃದ್ಧಿಕರಂ ಪುಂಸಾಂ ಇದಮಾನಂದದಂ ಪರಮ್ ॥ ನಾರೀಣಾಂ ಪ್ರೀತಿಜನಕಂ ಯಾವತ್ತ್ರಿಂಶದ್ದಿನಂ ಸದಾ ॥ "

'' ಆಕಳಕರೆ, ಶುಂಠಿ, ಲವಂಗ, ಕೇಸರಿ, ಹಿಪ್ಪಲಿ, ಜಾವಿತ್ರೀ, ಶ್ರೀಗಂಧ ಎಲ್ಲಾ ೧-೧ ತೊಲೆಯಂತೆ ಚೂರ್ಣಿಸಿ ದಿನ ೧ ತೊಲೆಯಂತೆ ೩೦ ದಿನ ಜೇನುತುಪ್ಪದಲ್ಲಿ ಸೇವಿಸಿ ಮೇಲೆ ಹಾಲುಕುಡಿಯುತ್ತಾ ಬಂದರೆ ವೀರ್ಯವೃದ್ಧಿ, ರತಿಯಲ್ಲಿ ಆನಂದ, ಸ್ತ್ರೀಯರಿಗೆ ಉಲ್ಲಾಸವುಂಟಾಗುವದು. ''

" ಗಂಧಕಾಮಲಕಂ ಚೂರ್ಣಂ ಧಾತ್ರೀರಸವಿಭಾವಿತಮ್ ॥ ಸಪ್ತಧಾ ಶಾಲ್ಮಲೀತೋಯೈಃ ಶರ್ಕರಾ ಮಧುಯೋಜಿತಮ್ ॥ ಲೀಢ್ವಾ ಚಾನುಪಯಃ ಪಾನಂ ಪ್ರತ್ಯಹಂ ಕುರುತೇ ತು ಯಃ ॥ ಏತೇ ನಾಶೀತಿ ವರ್ಷೋಽಪಿ ವೇಗೇನ ರಮತೇಸ್ತ್ರೀಯಮ್ ॥ "

''ಶುದ್ಧಿ ಹವಲಸರಗಂಧಕ ಮತ್ತು ನೆಲ್ಲೀಚಟ್ಟು ಸಮಭಾಗ ಕೇರಿಸಿ ನೆಲ್ಲೀಕಾಯಿರಸದಲ್ಲಿ ೭ ಭಾವನೆಯನ್ನು ಕೊಟ್ಟುಕೊಟ್ಟು ಬಿಸಿಲಲ್ಲಿ ಒಣಗಿಸುತ್ತಾ ಬಂದು, ಅನಂತರ ಬೂರಗದಚಕ್ಕೆ ಕಷಾಯದಲ್ಲಿ ೭ ಭಾವನೆ ಕೊಡುವದು. ಅನಂತರ ಇದರಲ್ಲಿ ಕಾಲುತೊಲಾ ಸಕ್ಕರೆ ತುಪ್ಪದೊಂದಿಗೆ ಸೇವಿಸಿ ಮೇಲೆ ಸಕ್ಕರೆ ಕೇರಿಸಿದ ಧಾರೋಷ್ಣ ಆಕಳಹಾಲು ಕುಡಿಯುತ್ತಾ ಬಂದರೆ ೮೦ ವರ್ಷದವನೂ ತರುಣನಂತೆ ಸ್ತ್ರೀಸುಖದಲ್ಲಿ ತೃಪ್ತಿಪಡಿಸುತ್ತಾನೆ. ''

" ಲಕ್ಷ್ಮಣಾ ಹಸ್ತಿಕರ್ಣಾಭ್ಯಾಂ ತ್ರಿಕತ್ರಯುಸಮನ್ವಿತಮ್ ॥ ಅಶ್ವಗಂಧಾ ಸಮಾಯೋಗಾ ಲ್ಲೌಹಂ ಪುಂಸವನಮ್ ಸ್ಮೃತಮ್ ॥

**ಪುತ್ರೋತ್ಪತ್ತಿಕರಂ ವೃಷ್ಯಂ ಕನ್ಯಾಸೂತಿ ನಿವರ್ತಕಮ್ ॥ ಕೃಶಸ್ಯ ಬಲದಂ ಶ್ರೇಷ್ಠಂ ಸರ್ವಾಮಯಹರಂ ಪರಮ್ ॥ "**

"ಲಕ್ಷ್ಮಣಾ (ಬಿಳೀಹೂವಿನ ನೆಲಗುಳ್ಳ) ಬಿಳೀ ಹರಳುಬೇರು, ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ದಾಲ್ಚಿನ್ನಿ, ಯಾಲಕ್ಕಿ, ಲವಂಗಪತ್ರಿ, ಅಶ್ವಗಂಧಿ, ಇವೆಲ್ಲವನ್ನೂ ಸಮತೂಕ ಚೂರ್ಣಿಸಿ ಇದರಲ್ಲಿ ಲೋಹಭಸ್ಮವನ್ನು ಸ್ವಲ್ಪ ಸೇರಿಸಿ ಸಮಸಕ್ಕರೆಬೆರಸಿ ಉಚಿತಮಾತ್ರದಿಂದ ಸೇವಿಸುತ್ತಾ ಮೇಲೆ ಹಾಲು ಸಕ್ಕರೆ ಕುಡಿಯುತ್ತಾ ಬರುವದು. ಪುತ್ರೋತ್ಪತ್ತಿಯಾಗುವದು, ವೀರ್ಯವೃದ್ಧಿ, ಕನ್ಯಾತಳೆಯಿದ್ದಲ್ಲಿ ಅದು ತಪ್ಪಿ ಪುತ್ರರಾಗುತ್ತಾರೆ, ಕೃಶನೂ ಬಲವುಳ್ಳವನಾಗುತ್ತಾನೆ."

**"ಮಧುಯಷ್ಟೀ ತುಗಾ ಕ್ಷೀರೀ, ಧಾತ್ರೀ ಗೋಕ್ಷುರಕಂ ತಥಾ॥ ವಂಗಮಭ್ರಂ ಕಪಿಬೀಜಂ ಧಾತ್ರೀರಸವಿಭಾವಿತಮ್ ॥ ಭಕ್ಷಯೇ ನ್ಮಧುಸರ್ಪಿರ್ಭ್ಯಾಂ ತತಶ್ಚಾನುಪಯಃ ಪಿಬೇತ್ ॥ ವೀರ್ಯವೃದ್ಧಿಕರಂ ಪುಂಸಾಂ, ಕ್ಲೀಬತ್ವನಾಶನಂ ಪರಮ್ ॥ "**

"ಜೇಷ್ಟಮಧು, ವಂಶಲೋಚನ, ನೆಲ್ಲಿಚಟ್ಟು, ನೆಗ್ಗಿಲು, ವಂಗಭಸ್ಮ (೧೦ ಪುಟದ್ದು), (೬೦ ಪುಟದ) ಅಭ್ರಕಭಸ್ಮ ಇವೆಲ್ಲವನ್ನೂ ನೆಲ್ಲೀಚಟ್ಟಿನರಸದಲ್ಲಿ ೭ ಭಾವನೆ ಕೊಟ್ಟು ಸೂಕ್ಷ್ಮ ಚೂರ್ಣಮಾಡಬೇಕು. ಉಚಿತಮಾತ್ರದಿಂದ ಈ ಚೂರ್ಣವನ್ನು ಘೃತ ಜೇನುತುಪ್ಪದಲ್ಲಿ ಕಲಿಸಿ ಸೇವಿಸಿ, ಮೇಲೆ ಸಕ್ಕರೆ ಹಾಕಿ ಕಾಸಿದ ಹಾಲು ಕುಡಿಯುವದು. ಇದರಿಂದ ವೃಷ್ಯವೂ, ವೀರ್ಯವೃದ್ಧಿಯೂ ಆಗುವದು."

**"ಶತಾವರೀ ಹ್ಯುಚ್ಚಟಾಚ, ಕಪಿಕಚ್ಛುರ್ವಿದಾರಿಕಾ ॥ ಮಧುಯಷ್ಟೀ ಚಮಾಷಾಸ್ನಂ ತಥೈವಾಮಲಕೀ ಸ್ಮೃತಾಃ ॥ ಏಷಾಂ ಪೃಥಕ್ ಪೃಥಕ್ಚೂರ್ಣಂ ಸಸಿತಂ ಭಕ್ಷಯೇತ್ಪುಮಾನ್॥ ತತಃಪಯೋನುಪಾನೇನ ವಾಜೀಕರಣಮುತ್ತಮಮ್ ॥ "**

"ಶತಾವರಿ, ಭದ್ರಮುಸ್ತೆ, ನಸೆಗುನ್ನಿಬೀಜ, ನೆಲಗುಂಬಳ, ಜೇಷ್ಟಮಧು, ಉದ್ದು, ನೆಲ್ಲೀಚಟ್ಟು ಇವನ್ನು ಪ್ರತ್ಯೇಕ ಪ್ರತ್ಯೇಕ ಚೂರ್ಣಿಸಿ ಸಮಸಕ್ಕರೆ ಬೆರಸಿ ಸೇವಿಸಿ ಮೇಲೆ ಕಾಶಿದಹಾಲು ಕುಡಿಯುವದು. ಇದರಲ್ಲಿ ಪ್ರತಿಯೊಂದು ಮೂಲಿಕೆಯೂ ವಾಜೀಕರಣವನ್ನುಂಟುಮಾಡುವದೇ ಆಗಿದೆ. ಒಂದೊಂದನ್ನೇ ಸೇವಿಸಿದರೂ ಆಗಬಹುದು. ೨-೩-೪-೫ ಹೇಗೆ ಬೇಕಾದರೂ ಬೇಕಾದ್ದನ್ನು ಕೇರಿಸಿ ಸೇವಿಸಬಹುದು. ಪರಮ ವೀರ್ಯವೃದ್ಧಿಯನ್ನುಂಟುಮಾಡುವವು."

## ಕೌಂಚಪಾಕ.

“ ನಿಸ್ತುಷಂ ವಾನರೀಬೀಜಂ ಕೃತ್ವಾ ವಿಂಶತ್ಪಲಾನಿ ಚ ॥ ತ್ರಿಂಶತ್ಪಲಾಂ ಸಿತಾಂ ದತ್ವಾಘೃತಮ್ ದತ್ವಾ ಪಲಾಷ್ಟಕಮ್ ॥ ದುಗ್ಧಾಢಕಂ ಸಮಾಯುಕ್ತಂ ಮೃದುನಾ ವಹ್ನಿನಾ ಪಚೇತ್॥ ಯಾವದ್ದಾರ್ವೀ ಪ್ರಲೇಪಃ ಸ್ಯಾತನ್ಮಧ್ಯೇ ಚೂರ್ಣಿತಂ ಕ್ಷಿಪೇತ್ ॥ ಜಾತೀಫಲಂ ತ್ರಿಕಟುಕಂ ತ್ರಿಗಂಧಂ ದೇವಪುಷ್ಪಕಮ್ ॥ ಆಕಲ್ಲಕಂ ಜಾತಿಪತ್ರೀ ಕೋಕಿಲಾ ಬೀಸಕೇಸರಮ್ ॥ ಪುನರ್ನವಾ ಬಲೇದ್ವೇ ಚ ಮುಸಲೀ ಸಾಹಿಫೇನಕಮ್ ॥ ಚಂದನಾಗರು ಕಸ್ತೂರೀ ಕರ್ಪೂರಂ ಶಾಣಮಾತ್ರಕಮ್ ॥ ಪಲಾರ್ಧಂ ಭಕ್ಷಯೇದೇತತ್ಕ್ರಮಾದ್ವೀರ್ಯಂ ಬಲಪ್ರದಮ್ ॥ ”

“ ಶಿಪ್ಪೆಬಿಡಿಸಿದ ನಸುಗುನ್ನೀಬೀಜ ೮೦ ತೊಲಾ, ಸಕ್ಕರೆ ೧೨೦ ತೊಲಾ, ಗೋಘೃತ ೩೨ ತೊಲಾ, ಹಾಲು ೩೨೦ ತೊಲಾ, ಇವೆಲ್ಲವನ್ನೂ ಏಕತ್ರಮಾಡಿ ಮಂದಮಂದ ಅಗ್ನಿಯಲ್ಲಿ ಪಾಕಮಾಡುವದು. ಪಾಕವಾಗುತ್ತಾ ಸಾಟಗೆ ಶಿಕ್ಕುವಂತೆ ಘಟ್ಟಿಯಾಗಲು—ಜಾಫಲ, ತ್ರಿಕಟು, ತ್ರಿಗಂಧ, ಲವಂಗ, ಆಕಳಕರೆ, ಜಾವಿತ್ರೀ, ತಾಲಮಖಾನೆಬೀಜ, ಕೇಸರಿ, ಪುನರ್ನವಾ, ಚಿಟ್ಟಾಮುಟ್ಟಿ, ಪೇರಾಮುಟ್ಟಿ, ನೆಲತಾಟಿಗಡ್ಡೆ, ಚಂದ್ರೋದಯರಸ ಇವೆಲ್ಲಾ ೨-೨ ತೊಲಾ. ಶ್ರೀಗಂಧ, ಅಗರು, ಕಸ್ತೂರಿ, ಪಚ್ಚಕರ್ಪೂರ ಶಿಕ್ಕಿದಷ್ಟು-ಇವನ್ನು ಶೇರಿಸಿ ಪಾಕವನ್ನು ಸ್ನಿಗ್ಧ ಮೃಣ್ಮಯಭಾಂಡದಲ್ಲಿಟ್ಟು ನಿತ್ಯವೂ ಅಗ್ನಿಬಲವರಿತು ೨ ತೊಲಾದವರಿಗೂ ತಿನ್ನಬಹುದು ಮೇಲೆ ಹಾಲುಕುಡಿಯುತ್ತಾ ಬರುವದು. ಮಹಾ ವೀರ್ಯಪ್ರವಾಹವನ್ನುಂಟು ಮಾಡುತ್ತದೆ. ”

## ಆಮ್ರಪಾಕ.

“ ಪಕ್ವಾಮ್ರಸ್ಯ ರಸೇ ದ್ರೋಣೇ ರಸಾಢಕ ಮಿತಾಂ ಸಿತಾಮ್ ॥ ಘೃತಪ್ರಸ್ಥಮಿತಂ ದದ್ಯಾನ್ನಾಗರಸ್ಯ ಪಲಾಷ್ಟಕಮ್ ॥ ಮರಿಚಂ ಕುಡವೋನ್ಮಾನಂ ಪಿಪ್ಪಲೀ ದ್ವಿಪಲೋನ್ಮಿತಾ ॥ ಸಲಿಲಸ್ಯಾಢಕಂ ದತ್ವಾ ಸರ್ವಮೇಕತ್ರ ಕಾರಯೇತ್ ॥ ಪಚೇತ್ತನ್ಮೃಣ್ಮಯೇ ಪಾತ್ರೇ ದಾರುದರ್ವ್ಯಾ ಪ್ರಚಾಲಯೇತ್ ॥ ಚೂರ್ಣಾನ್ಯೇಷಾಂ ಕ್ಷಿಪೇತ್ತತ್ರ ಘನೀಭೂತೇಽವ ತಾರಿತೇ ॥ ಧಾನ್ಯಕಂ ಜೀರಕಂ ಪತ್ರಂ ಚಿತ್ರಕಂ ಮುಸ್ತಕಂ ತ್ವಚಮ್ ॥ ಬೃಹಜ್ಜೀರಕ ಮುಷ್ಕಕ್ರ ಗ್ರಂಥಿಕಂ ನಾಗಕೇಸರಮ್ ॥ ಏಲಾಬೀಜಂ ಲವಂಗಂ ಚ ಪೃಥಗ್ಜಾತೀ ಫಲಂ ಪಲಮ್ ॥ ಸಿದ್ಧೇ ಶೀತೇ ಪ್ರದಾತವ್ಯಂ ಮ

ಧುನಃ ಕುಡವದ್ವಯಮ್ ॥ ಭಕ್ಷಯೇದ್ಭೋಜನಾದರ್ವಾಕ್ ಪಲಮಾತ್ರಮಿದಂ ನರಃ ॥ ಅಥವಾ ನಿಯಮೋ ನಾತ್ರ ಮಾತ್ರಾಂ ಖಾದೇದ್ಯಥಾ ಬಲಮ್ ॥ ಮಾನವ ಸ್ಸೇವನಾದಸ್ಯ ವಾಜೀವ ಸುರತೇ ಭವೇತ್॥ ಸಮರ್ಥೋ ಬಲವಾನ್ ಪುಷ್ಟೋ ಹೃಷ್ಟೋ ನಿತ್ಯಂ ನಿರಾಮಯಃ ॥ ”

“ ಪಕ್ವವಾದ ಶೀಮಾವಿನ ಹಣ್ಣುಗಳರಸ ೧೨೮೦ ತೊಲಾ, ಶುದ್ಧವಾದ ಸಕ್ಕರೆ ೬೪೦ ತೊಲಾ, ಗೋಘೃತ ೮೦ ತೊಲಾ, ಶುಂಠಿ ೬೪ ತೊಲಾ, ಮೆಣಸು ೬೪ ತೊಲಾ, ಹಿಪ್ಪಲಿ ೬೪ ತೊಲಾ, ಸ್ವಚ್ಛವಾದ ಜಲ ೬೪೦ ತೊಲಾ, ಕೇರಿಸಿ ಮೃನ್ಮಯಭಾಂಡದಲ್ಲಿ ಮರದ ಸಾಟಿನಿಂದ ಕೂಡಿಸುತ್ತಾ ಪಕ್ವಮಾಡಬೇಕು. ಮಂದಾಗ್ನಿಯಲ್ಲಿ ಪಕ್ವವಾಗುತ್ತಾ ಇರಬೇಕು, ತಳ ಹಿಡಿಯಬಾರದು. ಘಟ್ಟಿಯಾದಾಗ ತುಪ್ಪ ಕಂಡುಬರುತ್ತಿರುವಾಗ ಅದರಲ್ಲಿ—ಕೊತ್ತುಂಬರಿಬೀಜ, ಜೀರಿಗೆ, ಲವಂಗಪತ್ರೆ, ಚಿತ್ರಮೂಲ, ತುಂಗಮುಸ್ತೆ, ದಾಲ್ಚಿನ್ನಿ, ದೊಡ್ಡಜೀರಿಗೆ (ಕಲೌಂಜಿ), ಮೋಡಿ, ನಾಗಕೇಸರಿ, ಯಾಲಕ್ಕಿ, ಲವಂಗ, ಜಾಫಲ ಇವೆಲ್ಲಾ ೨-೨ ತೊಲಾದಂತೆ ಚೂರ್ಣಿಸಿ ಆ ಪಾಕದಲ್ಲಿ ಹಾಕಿ ಕೂಡಿಸಿ ಇಳಿಸುವದು. ಆರಿದನಂತರ ೪೦ ತೊಲಾ ಜೇನುತುಪ್ಪ ಬೆರಸಬೇಕು. ನಿತ್ಯವೂ ಭೋಜನಕ್ಕೆ ಮೊದಲು ಜಠರಾಗ್ನಿ ಬಲವನ್ನರಿತು ೪ ತೊಲಾದವರಿಗೂ ಯೋಗ್ಯತಾನುಸಾರ ಸೇವಿಸಬೇಕು. ಇದರ ಸೇವನೆಯಿಂದ ಕುದುರೆಯಂತೆ ರತಿಯಲ್ಲಿ ಉತ್ಸಾಹವಾಗುತ್ತದೆ. ಸಮರ್ಥನೂ, ಬಲಿಷ್ಠನೂ, ಹೃಷ್ಟಪುಷ್ಟನೂ ಆಗುತ್ತಾನೆ. ಈ ಆಮ್ರಪಾಕವು ಹೃದಯಕ್ಕೆ ಹಿತಕಾರಿಯು. ”

## ಕಾಮಸುಂದರಪಾಕ.

“ ಶತಾವರೀ ಚ ಮುಸಲೀ ಗೋಕ್ಷುರಸ್ತ್ವಗ್ಲವಂಗಕಮ್ ॥ ಖರ್ಜೂರಮೇಲಾ ಕೃಷ್ಣಾ ಚ ಶಿವಾ ಕಮಲಚಂದನಮ್ ॥ ಕಪಿಕಚ್ಛುಭವಂ ಬೀಜಂ ಪತ್ರಂ ಮುಸ್ತಾ ಚ ನಾಗರಮ್ ॥ ಕೋಕಿಲಾಕ್ಷಶ್ಚ ಧನಿಕಾ ಶುಕ್ತಿಪೂಗಂ ಪಲದ್ವಯಮ್ ॥ ವಿಂಶತ್ಪಲಸಿತಾದರ್ಪ ಕರ್ಪೂರಶ್ಚಾರ್ಧ ಕಾರ್ಷಿಕಃ ॥ ವಿಜಯಾ ಸಾರ್ಧಪಲಿಕಾ ಪ್ರಮೇಹಘ್ನೋ ರಸಾಯನಃ ॥ ಜ್ವರಘ್ನಃ ಪುಷ್ಟಿಜನನಃ ಪಾಕೋಽಯಂ ಕಾಮಸುಂದರಃ ॥ ”

“ ಶತಾವರಿ, ಮುಸಲೀ, ನೆಗ್ಗಿಲು, ದಾಲ್ಚಿನ್ನಿ, ಲವಂಗ, ಖರ್ಜೂರ, ಯಾಲಕ್ಕಿ, ಹಿಪ್ಪಲಿ, ನೆಲ್ಲಿಚಟ್ಟು, ಕಮಲಗಡ್ಡೆ, ಚಂದನ, ನಸುಗುನ್ನೀಬೀಜ, ಲವಂಗಪತ್ರೆ, ತುಂಗಮುಸ್ತೆ, ಶುಂಠಿ, ತಾಲಮಖಾನಬೀಜ, ಧನಿಯಾ ಎಲ್ಲಾ ೧-೧ ತೊಲಾ, ದಕ್ಷಿಣೀ ಚಿಕಿನೀ ಅಡಕೆ ೮ ತೊಲಾ, ಸಕ್ಕರೆ ೮೦ ತೊಲಾ,

ಕಸ್ತೂರಿ, ಪಚ್ಚ ಕರ್ಪೂರ ಇವು ೨-೨ ಮಾಸೆ, ಶುದ್ಧಿಮಾಡಿದ ಭಂಗಿಸೊಪ್ಪು ೬ ತೊಲಾ, ಇವೆಲ್ಲವನ್ನೂ ವಿಧಿಪೂರ್ವಕ ಪಾಕಮಾಡಿ, ಅಗ್ನಿಯ ಬಲವನ್ನು ನೋಡಿಕೊಂಡು ಉಚಿತಮಾತ್ರಾದಿಂದ ಸೇವನೆಮಾಡುವದು, ಈ ಕಾಮಸುಂದರ ಪಾಕವು ಆಯುವನ್ನು ಸ್ಥಿರಪಡಿಸುತ್ತದೆ. ಪ್ರಮೇಹ, ಜ್ವರ ಇವನ್ನು ನಾಶಮಾಡುತ್ತದೆ. ವೀರ್ಯವನ್ನು ಪುಷ್ಟಿಮಾಡುತ್ತದೆ. ''

## ರ ತಿ ವ ಲ್ಲ ಭ ಪೂ ಗ ಪಾ ಕ .

" ಪೂಗಂ ದಕ್ಷಿಣದೇಶಜಂ ದಶಪಲೋನ್ಮಾನಂ ಭೃಶಂ ಕರ್ತ್ತಯೇತ್ ।
ತಚ್ಛಿನ್ನಂ ಜಲಯೋಗತೋ ಮೃದುತರಂ ಸಂಕುಟ್ಯ ಚೂರ್ಣೀಕೃತಮ್ ॥
ತಚ್ಚೂರ್ಣಂ ಪಟಶೋಧಿತಂ ವಸುಗುಣೇ ಗೋಶುದ್ಧದುಗ್ಧೇಪಚೇತ್ ।
ಗವ್ಯಾಜ್ಯಾಂಜಲಿಸಂಯುತೋಽತಿನಿಬಿಡೇ ದದ್ಯಾತ್ತುಲಾರ್ಧಂ ಸಿತಾಮ್
ಪಕ್ವಂ ತಜ್ಜ್ವಲನಾತ್ಕ್ಷಿತಿಂ ಪ್ರತಿನಯೇತ್ತಸ್ಮಿನ್ಪುನಃ ಪ್ರಕ್ಷಿಪೇತ್ ।
ಯದ್ವೃತ್ತತ್ತದುದಾಹರಾಮಿ ಬಹುಲಾ ದೃಷ್ಟ್ವಾದರಾತ್ಸಂಹಿತಾಃ ॥
ಏಲಾ ನಾಗಬಲಾ ತಥಾ ಸಚಪಲಾ ಜಾತೀಫಲಾ ಲಿಂಗಿತಾ ।
ಜಾತೀಪತ್ರಕಮತ್ರ ಪತ್ರಕ ಯುತಂ ತಚ್ಚ ತ್ವಚಾ ಸಂಯುತಮ್ ॥
ವಿಶ್ವಾ ವೀರಣ ವಾರಿ ವಾರಿದ ವರಾ ಮಾಂಶೀ ಮರೀ ವಾನರೀ ।
ದ್ರಾಕ್ಷಾ ಸೇಕ್ಷುರ ಗೋಕ್ಷುರಾತಿ ಮಹತೀ ಖರ್ಜೂರಿಕಾ ಕ್ಷೀರಿಕಾ ॥
ಧಾನ್ಯಾಕಂ ಸಕಸೇರುಕಂ ಸಮಧುಕಂ ಶೃಂಗಾಟಕಂ ಜೀರಕಮ್ ।
ಪೃಥ್ವೀಕಾಽಥ ಯವಾನಿಕಾ ವರಟಿಕಾ ಮಾಂಸೀ ಮಿಸೀ ಮೇಥಿಕಾ ॥
ಕಂದೇಷ್ವತ್ರ ವಿದಾರಿಕಾಽಥ ಮುಸಲೀ ಗಂಧರ್ವಗಂಧಾ ತಥಾ ।
ಕಚ್ಚೂರಂ ಕರಿಕೇಸರಮ್ ಚ ಮರಿಚಂ ಚಾರಸ್ಯ ಬೀಜಂ ನವಮ್ ॥
ಬೀಜಂ ಶಾಲ್ಮಲಿಸಂಭವಂ ಕರಿಕಣಾಬೀಜಂ ಚ ರಾಜೀವಜಮ್ ।
ಶ್ವೇತಂ ಚಂದನಮತ್ರ ರಕ್ತಮಪಿ ಚ ಶ್ರೀಸಂಜ್ಞ ಪುಷ್ಪೈಃ ಸಮಮ್ ॥
ಸರ್ವಂ ಚೇತಿ ಪೃಥಕ್ ಪೃಥಕ್ ಪಲಮಿತಂ ಸಂಚೂರ್ಣ್ಯ ತತ್ರ ಕ್ಷಿಪೇತ್ ।
ಸೂತಂ ವಂಗ ಭುಜಂಗ ಲೋಹ ಗಗನಂ ಸನ್ಮಾರಿತಂ ಸ್ವೇಚ್ಛಯಾ ॥
ಕಸ್ತೂರೀ ಘನಸಾರ ಚೂರ್ಣಮಪಿ ಚ ಪ್ರಾಂತಂ ಯಥಾಪ್ರಕ್ಷಿಪೇತ್ ।
ಪಶ್ಚಾದಸ್ಯತು ಮೋದಕಾನ್ ವಿರಚಯೇ ದ್ಬಿಲ್ವಪ್ರಮಾಣಾನಥ ॥
ತಾನ್ ಭೋಕ್ತಾತಿಸದಾ ಯಥಾನಲಬಲಂ ಭುಂಜೀತನಾಮ್ಲಂರಸಮ್ ।
ಪೂರ್ವಸ್ಮಿನ್ನ ಸಿತೇ ಗತೇ ಪರಿಣತೇ ಪ್ರಾಗ್ಭೋಜನಾದ್ಭಕ್ಷಯೇತ್ ॥
ನಿತ್ಯಂ ಶ್ರೀರತಿವಲ್ಲಭಾಖ್ಯಕಮಿದಂ ಯಃ ಪೂಗಪಾಕಂಭಜೇತ್ ।
ಸಸ್ಯಾದ್ವೀರ್ಯವಿವೃದ್ಧವೃದ್ಧಮದನೋ ವಾಜೀವ ಸಕ್ತೋ ರತೌ ॥

ಶೀಘ್ರಾಗ್ನಿ ರ್ಬಲವಾನ್ ಬಲೀ ವಿರಹಿತೋ ಹೃಷ್ಟಃ ಸಪುಷ್ಟಸ್ಸದಾ|
ವೃದ್ಧೋಽಯೋಽಪಿ ಮುನೇರ್ವಸೋಽಪಿ ರುಚಿರಃ ಪೂರ್ಣೇಂದುವ
ತ್ಸುಂದರಃ ||"

"ದಕ್ಷಿಣದೇಶದ ಅಡಕೆ ೪೦ ತೊಲಾ ತೆಗೆದುಕೊಂಡು ಕತ್ತರಿಸಬೇಕು. ಅನಂತರ ಜಲದಲ್ಲಿ ನೆನೆಹಾಕಿ, ಮೆಲ್ಲಮೆಲ್ಲಗೆ ಕುಟ್ಟಿ ಬಹು ನಯವಾದ ಚೂರ್ಣವನ್ನಾಗಿ ಮಾಡಬೇಕು. ಆ ಚೂರ್ಣವನ್ನು ಒಣಗಿಸಿ ವಸ್ತ್ರದಲ್ಲಿ ಶೋಧಿಸಬೇಕು. ಅನಂತರ ೩೨೦ ತೊಲಾ ಗೋವಿನ ಹಾಲಿನಲ್ಲಿ ಪಕ್ವಮಾಡಬೇಕು. ಮತ್ತೆ ಅದರಲ್ಲಿ ೧೬ ತೊಲಾ ಗೋವಿನತುಪ್ಪವನ್ನು ಹಾಕಬೇಕು; ೪೦೦ ತೊಲಾ ಸಕ್ಕರೆ ಹಾಕಬೇಕು. ಮಂದಾಗ್ನಿಯಲ್ಲಿ ಪಕ್ವವಾಗುತ್ತಾ ಆಗುತ್ತಾ ಬರುವಾಗ ಅದನ್ನು ಕೆಳಕ್ಕಿಳಿಸಿ--ಯಾಲಕ್ಕಿ, ನಾಗಬಲಾ, ಚಿಟ್ಟಾಮುಟ್ಟಿ, ಹಿಪ್ಪಲಿ, ಜಾಯಫಲ, ಜಾಪತ್ರಿ, ಲವಂಗಪತ್ರಿ, ದಾಲಚಿನ್ನಿ, ಶುಂಠಿ, ಲಾಮಂಚ, ಮುಡಿವಾಳ, ತುಂಗಮುಸ್ತೆ, ತ್ರಿಫಲಾ, ವಂಶಲೋಚನ, ಶತಾವರಿ, ನಸುಗುನ್ನಿಬೀಜ, ದ್ರಾಕ್ಷೆ, ತಾಲಮಖಾನೆ, ನೆಗ್ಗಿಲು, ಖರ್ಜೂರ, ಸಣ್ಣಖರ್ಜೂರ, ಕೊತ್ತುಂಬರಿ, ಕ್ಷೀರಕಾಕೋಳೀ, ಕಸೇರು, ಇಪ್ಪೆಹೂವು, ಸಿಂಘಾಡೆ, ಜೀರಿಗೆ, ಕಲೌಂಜಿ, ಅಜವಾನ, ವಟದಬೀಜ, ಜಟಾಮಾಂಸಿ, ಸೋಪು, ಮೆಂತಿಯ, ವಿದಾರೀಕಂದ (ನೆಲಕುಂಬಳಗೆಡ್ಡೆ), ನೆಲತಾಟಿಗಡ್ಡೆ, ಅಶ್ವಗಂಧಿ, ಕಚೋರ, ನಾಗಕೇಸರ, ಮೆಣಸು, ಚಿರೌಂಜಿ, ಬೂರುಗದ ಬೀಜ, ಗಜಹಿಪ್ಪಲಿ, ಕಮಲಕಂದ, ಶ್ರೀಗಂಧ, ಕೆಂಪುಚಂದನ, ಲವಂಗ ಪ್ರತ್ಯೇಕ ೨-೨ ತೊಲಾ ತೆಕ್ಕೊಂಡು ಎಲ್ಲವನ್ನೂ ಚೂರ್ಣಮಾಡಿ ಶೋಧಿಸಿ, ಪಾಕಕ್ಕೆ ಹಾಕಬೇಕು. ಚಂದ್ರೋದಯ, ವಂಗಭಸ್ಮ, ನಾಗಭಸ್ಮ, ಲೋಹಭಸ್ಮ, ಅಭ್ರಕಭಸ್ಮ, ಕಸ್ತೂರಿ, ಪಚ್ಚಕರ್ಪೂರ ಇವೆಲ್ಲಾ ಅವರ ಇಷ್ಟಾನುಸಾರ ಹಾಕಬೇಕು. ಎಲ್ಲಾ ಒಂದೇಸಮನಾಗಿ ಕೂಡಿಸಿ ೪-೪ ತೊಲೆಯ ಮಾತ್ರೆಯ ಮಾಡಿಟ್ಟು, ತನ್ನ ಅಗ್ನಿಬಲವನ್ನು ನೋಡಿಕ್ಕೊಂಡು ಸೇವಿಸಬೇಕು. ಹುಳಿಯನ್ನು ತಿನ್ನಬಾರದು. ಮೊದಲುದಿನ ತಿಂದ ಅನ್ನ ಅರಗಿದನಂತರ ಬೆಳಗ್ಗೆ ಊಟಕ್ಕೆ ಮೊದಲು ಈ ಪಾಕವನ್ನು ಸೇವಿಸಬೇಕು. ಈ ರತಿವಲ್ಲಭ ಪೂಗಪಾಕವನ್ನು ಯಾವನು ಸೇವಿಸುತ್ತಾನೋ ಅವನು ಅಪಾರ ವೀರ್ಯನೂ, ಕಾಮಶಕ್ತಿಯ ವೇಗವುಳ್ಳವನೂ, ಕುದುರೆಯಂತೆ ಮೈಥುನಮಾಡುವವನೂ ಆಗುತ್ತಾನೆ. ಇದರ ಸೇವನೆಯಿಂದ—ನಿರ್ಬಲನೂ ಬಲಿಷ್ಠನಾಗುತ್ತಾನೆ. ಅಗ್ನಿದೀಪ್ತಿಯುಂಟಾಗುತ್ತದೆ. ವೃದ್ಧನೂ ಸಹ ಸುಂದರನಾಗುತ್ತಾನೆ. ಕಾಂತಿವಿಶಿಷ್ಟನಾಗುತ್ತಾನೆ."

## ರತಿವಲ್ಲಭವಿಜಯಪಾಕ.

" ಸಮೂಲ ಪತ್ರಶಾಖಾಯಾಸ್ತುಲಾಂ ಶಕ್ರಾಶನಸ್ಯಚ ॥ ಸಂಕು ದ್ಯೋಲೂಖಲೇಭಿಶ್ಚಾ ಽಷಾಂ ದ್ರೋಣೇಂ ಹಿತಥಾ ಚವ್ಯೆ ॥ ಕ್ವಾಥಂ ಪಾದಾವಶಿಷ್ಟಂತು ವಸ್ತ್ರಪೂತಂ ಚ ಕಾರಯೇತ್ ॥ ಕ್ಷೀ ರಪ್ರಸ್ಥಂ ಸಮಾದಾಯ ಖಂಡಸ್ಯಾರ್ಧ್ಧಂ ಶತಂ ನ್ಯಸೇತ್ ॥ ಶ ತಾವರೀ ರಸಸ್ಯಾಷ್ಟಾ ಪಿಪ್ಪಲ್ಯಾಃ ಕುಡವಸ್ತಥಾ ॥ ಸರ್ವಮೇ ತತ್ಸಮಾಲೋಡ್ಯ ಘೃತಪ್ರಸ್ಥೇನ ಮೇಲಯೇತ್ ॥ ಓಷಧೀನಾಂ ತತಶ್ಚೂರ್ಣಂ ದಾಪಯೇತ್ಕಲಿಕಂ ಪೃಥಕ್ ॥ ತ್ರಿಕಟು ತ್ರಿಫಲಾಂ ಚವ್ಯ ಮೇಲಾತ್ವಕ್ಪತ್ರಕೇಸರಮ್ ॥ ಚಿತ್ರಕಂ ಪಿಪ್ಪಲೀಮೂಲಂ ಧಾನ್ಯಕಾಜಾಜಿ ಮೇಥಿಕಾ ॥ ಕುಷ್ಠಾಬ್ದ ರೇಣುಕಾ ವ್ಯೋಷಂ ಭಾರ್ಙ್ಗೀ ತಾಲೀಸಕೇಶರಾ ॥ ತಾಲಮೂಲೀ ತ್ರಿವೃದ್ದಂತೀ ಶ್ರೇ ಯಸೀ ಹಿಂಗು ಪೌಷ್ಕರಮ್ ॥ ಲವಂಗಂ ಜಾತಿಕೋಶಂಚ ಯ ವಾನೀ ಕಾರವೀ ತಥಾ ॥ ಶುಭಾ ಜಾತಿಫಲಂ ಚಂದ್ರಂ ಶೃಂಗೀ ಚೈವ ವಿದಾರಿಕಾ ॥ ಅಷ್ಟವರ್ಗಂ ಚ ಕಂಕೋಲಂ ಶ್ಲಕ್ಷ್ಣ ಚೂ ರ್ಣಂ ಚ ಕಾರಯೇತ್ ॥ ಗುಡವದ್ವಿಪಚೇದ್ವೈದ್ಯೋ ಮೋದ ಕಾರಯೇತ್ತತಃ ॥ ಅಕ್ಷಮಾತ್ರಂ ಚ ಜಗ್ಧ್ವೈಷಾಂ ಶೀತಲಂ ಪಾಯಯೇಜ್ಜಲಮ್ ॥ ನಾಶಯೇಚ್ಛುಕ್ರದೋಷಾ ಚ ಷಂಡ್ಯಂ ಚೈವಾತಿತಾರುಣಮ್॥ ಶ್ರೀಕರಂ ಲಾಘವಕರಂ ಮೇಧಾ ಬುದ್ಧಿ ಪ್ರವರ್ಧನಮ್ ॥ "

" ಭಾಂಗಗಿಡದ ಸಮೂಲಪತ್ರಶಾಖಾ ಎಲ್ಲವನ್ನೂ ಶೋಧಿಸಿ ಚನ್ನಾಗಿ ತೊಳೆದು ಒಣಗಿಸಿ ಕುಟ್ಟುವದು. ಇದು ೫೦೦ ತೊಲಾ, ಇದನ್ನು ೩೨ ಪಕ್ಕಾ ಶೇರು ನೀರಿನಲ್ಲಿ ಪಕ್ವಮಾಡುವದು. ಯಾವಾಗ ೮ ಶೇರು ಕಷಾಯ ಉಳಿದಾಗ ಅದನ್ನು ಇಳಿಸಿ ಶುದ್ಧವಸ್ತ್ರದಲ್ಲಿ ಶೋಧಿಸುವದು. ಅದಕ್ಕೆ ಗೋ ದುಗ್ಧ ೨ ಪಕ್ಕಾ ಶೇರನ್ನೂ ಸಕ್ಕರೆ ೫೦೦ ತೊಲಾ, ಶತಾವರೀರಸ ೮೦ ತೊ ಲಾ, ತುಪ್ಪ ೧೬೦ ತೊಲಾ, ಎಲ್ಲವನ್ನೂ ಶೇರಿಸಿ ಪಾಕಮಾಡಬೇಕು. ಮಂದಾ ಗ್ನಿಯಲ್ಲಿ ತಳಹಿಡಿಯದಂತೆ ಪಕ್ವವಾಗುತ್ತಾ ಬರುವಾಗ ಘಟ್ಟಿಯಾಗಲು, ಇದ ರಲ್ಲಿ—ತ್ರಿಕಟು, ತ್ರಿಫಲೆ, ಚವ್ಯ, ಯಾಲಕ್ಕಿ, ದಾಲ್ಚಿನ್ನಿ, ಲವಂಗಪತ್ರೆ, ನಾಗ ಕೇಸರ, ಚಿತ್ರಮೂಲ, ಮೋಡಿ, ಧನಿಯ, ಜೀರಿಗೆ, ಮೆಂತ್ಯ, ಕೋಷ್ಟ, ತುಂಗಮುಸ್ತೆ, ರೇಣುಕಾ, ಗಂಟುಭಾರಂಗಿ, ತಾಲೀಸಪತ್ರ, ನಾಗಕೇಸರಿ, ನೆಲತಾಟಿಗಡ್ಡೆ, ನಿಶೋತ್ತ, ದಂತೀ, ಗಜಪಿಪ್ಪಲಿ, ಇಂಗು, ಪುಷ್ಕರ ಮೂಲ, ಲವಂಗ, ಜಾವಿತ್ರೀ, ಅಜವಾನ, ಸೋಪು, ಹಿಪ್ಪಲಿ, ಜಾಫಲ, ಪಚ್ಚ

ಕರ್ಪೂರ, ಕರ್ಕಾಟಕಶೃಂಗಿ, ನೆಲಗುಂಬಳಗೆಡ್ಡೆ, ಅಷ್ಟಕವರ್ಗ (ಜೀವಕ, ಋಷಭಕ, ಮೇದಾ, ಮಹಾಮೇದಾ, ಕಾಕೋಲೀ, ಕ್ಷೀರಕಾಕೋಳೀ, ಋದ್ಧೀ, ವೃದ್ಧೀ) ಶೀತಲಚೀನಿ, ಪ್ರತಿಯೊಂದೂ ೨-೨ ತೊಲೆಯಂತೆ ನುಣ್ಣಗೆ ಚೂರ್ಣಮಾಡಿ ಗುಡಪಾಕವಿಧಿಯಂತೆ ಎಲ್ಲವನ್ನೂ ಪಾಕಮಾಡಿ ೨-೨ ತೊಲೆಯಂತೆ ಸೇವಿಸುತ್ತಾ ಬರುವದು. ಅದನ್ನು ಸೇವಿಸಿದನಂತರ ಸ್ವಲ್ಪ ಥಣ್ಣೀರನ್ನು ಕುಡಿಯುವದು. ಇದರಿಂದ—ಅತಿದಾರುಣವಾದ ನಪುಂಸಕತ್ವವನ್ನು ನಿರ್ಮೂಲಮಾಡುವದು. ವೀರ್ಯದೋಷವನ್ನು ನಾಶಮಾಡುವದು. ಅಸ್ಖಲಿತವಾದ ಅನಂತ ವೀರ್ಯವನ್ನುಂಟು ಮಾಡುವದು.''

## ಖಂಡಕೂಷ್ಮಾಂಡಪಾಕ.

"ಪುರಾಣಂ ಪೀನಮಾದಾಯ ಕೂಷ್ಮಾಂಡಸ್ಯ ಫಲಂ ಮಹತ್॥ ತದ್ಬೀಜಾಧಾರ ಬೀಜತ್ವಕ್ ಶಿರಾಶೂನ್ಯಂ ಸಮಾಚರೇತ್ ॥ ತತಸ್ತಸ್ಯ ತುಲಾಂ ನೀತ್ವಾ ಪಚೇಜ್ಜಲತುಲಾದ್ವಯೇ॥ ತಸ್ಮಿನ್ನೀರೇಽರ್ಧಶಿಷ್ಟೇ ತು ಯತ್ನತಃ ಶೀತಲೀಕೃತೇ ॥ ತಾನಿ ಕೂಷ್ಮಾಂಡಖಂಡಾನಿ ಪೀಡಯೇದ್ದೃಢವಾಸಸಾ ॥ ಯತ್ನತಸ್ತಜ್ಜಲಂ ಸೀತ್ವಾ ಪುನಃ ಪಾಕಾಯ ಧಾರಯೇತ್ ॥ ಕೂಷ್ಮಾಂಡಂ ಶೋಷಯೇದ್ಘರ್ಮೇ ತಾಮ್ರಪಾತ್ರೇ ತತಃ ಕ್ಷಿಪೇತ್ ॥ ಕ್ಷಿಪ್ತ್ವಾತತ್ರ ಘೃತಂ ಪ್ರಸ್ಥಂ ಕೂಷ್ಮಾಂಡಂ ತೇನ ಭರ್ಜಯೇತ್ ॥ ಮಧುವರ್ಣಂ ತದಾಲೋಕ್ಯ ತಜ್ಜಲಂ ತತ್ರ ನಿಕ್ಷಿಪೇತ್ ॥ ಸಿತಾಯಾಶ್ಚ ತುಲಾಂ ತತ್ರ ಕ್ಷಿಪ್ತ್ವಾ ತಲ್ಲೇಹವತ್ಪಚೇತ್ ॥ ಸುಪಕ್ವೇ ಪಿಪ್ಪಲೀ ಶುಂಠೀ, ಜೀರಾಣಾಂ ದ್ವಿಪಲೇ ಪೃಥಕ್ ॥ ಪೃಥಕ್ ಶಲಾರ್ಧಂ ಧಾನ್ಯಾಕಂ ಪತ್ರೈಲಾಮರಿಚಂ ತ್ವಚಮ್ ॥ ಚೂರ್ಣಮೇಷಾಂ ಕ್ಷಿಪೇತ್ತತ್ರ ಘೃತಾರ್ಧಂ ಕ್ಷೌದ್ರಮಾಪಪೇತ್ ॥ ಏತತ್ಪಲಾರ್ಧಂ ಖಾದೇಚ್ಚ ತಥೈವಾಗ್ನಿಬಲಂ ಯಥಾ ॥ ಖಂಡಕೂಷ್ಮಾಂಡ ಲೇಹೋಽಯಂ ರಕ್ತಪಿತ್ತಂ ಚ ನಾಶಯೇತ್ ॥ ಹಂತಿ ಕಾಸಕ್ಷಯಾದೀಂಶ್ಚ ಬಲವೀರ್ಯವಿವರ್ಧನಃ ॥"

"ದೊಡ್ಡ ಮತ್ತು ಚನ್ನಾಗಿ ಪಕ್ವವಾಗಿರುವ ಬೂದಗುಂಬಳಕಾಯಿಯನ್ನು ತಂದು ಅದರ ತಿರಳು, ಬೀಜ, ಶಿಪ್ಪೆ ಎಲ್ಲಾ ತೆಗದುಳಿದ ತುಂಡುಗಳು ೪೦೦ ತೊಲಾ, ಇದನ್ನು ೮೦೦ ತೊಲಾ ನೀರಿನಲ್ಲಿ ಪಕ್ವಮಾಡಬೇಕು. ಪಕ್ವವಾಗಿ ಅರ್ಧಕಷಾಯವಿಳಿದಾಗ ಇಳಿಸಿ ತಣ್ಣಗೆಮಾಡಿ ಬಳ್ಳೇ ಶುಭ್ರವಸ್ತ್ರದಲ್ಲಿ ಚೆನ್ನಾಗಿ ಮರ್ದನಮಾಡಿ ರಸವನ್ನೆಲ್ಲಾ ಹಿಂಡಿಕೊಳ್ಳಬೇಕು. ಆ ಕಷಾಯ, ರಸ ಎಲ್ಲವನ್ನೂ ಬೇರೇ ಪಾತ್ರೇಲಿ ಪ್ರತ್ಯೇಕವಾಗಿಟ್ಟು, ಆ ಕುಂಬಳಹೋ

ಳುಗಳ ಚರಟವನ್ನು ಸ್ವಲ್ಪಹೊತ್ತು ಬಿಸಲಿನಲ್ಲಿ ಆರಹಾಕುವದು. ಒಂದು ತಾಂಬ್ರಿಯ ಪಾತ್ರೇಲಿ ೮೦ ತೊಲಾ ಆಕಳತುಪ್ಪವನ್ನು ಹಾಕಿ ಮಂದಾಗ್ನಿಯಲ್ಲಿ ಪಾಕಮಾಡುತ್ತಾ ಆ ಕುಂಬಳಹೋಳಿನ ಚರಟ ವಣಗಿದ್ದನ್ನು ಹು ಹುರಿಯಬೇಕು. ಕೆಂಪಾಗಿ ಸುವಾಸನೆಯುಕ್ತವಾದಾಗ (ಶೀಬಾರದು. ಅದಕ್ಕೆ ಈ ಬೇರೆ ಪಾತ್ರೇಲಿರುವ ಕಷಾಯ ಮತ್ತು ಹಿಂಡಿದರಸ ಎಲ್ಲವನ್ನೂ ಹಾಕಿ ಪಕ್ವಮಾಡುತ್ತಾ ೪೦೦ ತೊಲಾ ಸಕ್ಕರೆಯನ್ನು ಶೇರಿಸಿ ಪಾಕಕ್ರಮದಿಂದ ಪಾಕಮಾಡುವದು. ಸಿದ್ಧವಾಗುವಾಗ—ಹಿಪ್ಪಲಿ, ಶುಂಠಿ, ಜೀರಿಗೆ ಪ್ರತಿಯೊಂದೂ ೮-೮ ತೊಲಾ, ಧನಿಯ, ಲವಂಗಪತ್ರಿ, ಯಾಲಕ್ಕಿ, ಮೆಣಸು, ದಾಲ್ಚಿನ್ನಿ ಇವು ೨-೨ ತೊಲೆ ಇವೆಲ್ಲವನ್ನೂ ಬಾರೀಕ್ ಚೂರ್ಣಮಾಡಿ ಶೋಧಿಸಿ ಆ ಪಾಕದಲ್ಲಿ ಹಾಕುವದು. ಚೆನ್ನಾಗಿ ಪಕ್ವಮಾಡಿ ಕೂಡಿಸಿ ಆರಿಸಿದ ನಂತರ ೪೦ ತೊಲಾ ಜೇನುತುಪ್ಪವನ್ನೂ ಬೆರಸಿಡುವದು. ಇದರಲ್ಲಿ ದಿನವೂ ೨ ತೊಲಾದಂತೆ ಶರೀರದ ಅಗ್ನಿಪುಟವನ್ನು ನೋಡಿಕೊಂಡು ಪ್ರಾತಃಕಾಲ ಸೇವಿಸುತ್ತಾ ಬರಲು—ರಕ್ತಪಿತ್ತ, ಕಾಸ, ಕ್ಷಯ ಮುಂತಾದ ರೋಗಗಳು ನಾಶವಾಗುವವು. ಬಲ ವೀರ್ಯ ವೃದ್ಧಿಯಾಗುವವು. ''

## ಕೇಶರಪಾಕ.

" ವ್ಯೋಷಂ ಚತುರ್ಜಾತ ಫಲತ್ರಿಕಂಚ ।  
ಲವಂಗ ಕೃಷ್ಣಾಗರು ಚಂದನಂ ಚ ॥  
ಕಾಂಡೇಕ್ಷುಬೀಜಂ ಕರಹಾಟಕಂ ಚ ।  
ಜಾತೀಫಲಂ ಮರ್ಕಟಿಕಾಫಲಂ ಚ ॥  
ಶಾಲ್ಮಲ್ಯನಿರ್ಯಾಸ ಬಲಾಶ್ವಗಂಧಾ ।  
ಗೋಕ್ಷೂರ ಬೀಜಂ ಮುಸಲೀ ಕ್ರಿಮಿಘ್ನಮ್ ॥  
ಸಮುದ್ರಶೋಷಂ ವಿಷಪಂಜರಂ ಚ ।  
ಪುಷ್ಪಂ ಸಜಾತ್ಯುದ್ಭವ ಕಂಕಬೀಜಮ್ ॥  
ಸರ್ವೈಸ್ಸಮಂ ಯೋಜ್ಯ ಸಕುಂಕುಮಂ ಚ ।  
ಸಚೂರ್ಣಿತಂ ವಿಂಶತಿಭಾಗಯುಕ್ತಮ್ ॥  
ಕಸ್ತೂರಿಕಾ ಷೋಡಶ ಭಾಗಚೂರ್ಣಮ್ ।  
ಖಂಡಂ ಚತುರ್ಭಾಗಯುತಂ ವಿಪಕ್ವಮ್ ॥  
ಪಲಾನಿಹೇಮ್ನೋ ದ್ವಿಶತಾನಿ ದತ್ವಾ ।  
ತಥೈವ ದೇಯಾನಿ ಚ ರಾಜತಾನಿ ॥  
ಏಕತ್ರ ಸರ್ವಂ ವಿನಿಧಾಯ ವೈದ್ಯೋ ।  
ಜಯಾಷ್ಟಭಾಗಂ ವಿದಧೀತ ಲೇಹಮ್ ॥

ಜಾತೀಫಲ ಪ್ರಮಾಣೇನ ಭಕ್ಷಯೇತ್ಪ್ರಾತರುತ್ಥಿತಃ||
ವೀರ್ಯವೃದ್ಧಿಂ ಕರೋತ್ಯೇಷ ಸರ್ವವ್ಯಾಧಿ ವಿನಾಶನಃ ||
ದಶಕಂ ರಮತೇ ಸ್ತ್ರೀಣಾಂ ವೃದ್ಧೋಽಪಿ ತರುಣಾಯತೇ||
ಸರ್ವಾನ್ ವಾತಾನುಯಾನ್ ಹಂತಿ ಪ್ರವೃದ್ಧಂ ವಾತಶೋಣಿತಮ್||
ಕಾಶ್ಮೀರಕಾವಲೇಹೋಽ ಯಂ ಬಲಕಾಂತಿ ವಿವರ್ಧನಃ || ”

“ ತ್ರಿಕುಟ, ಚತುರ್ಜಾತ, ತ್ರಿಫಲ, ಲವಂಗ, ಶ್ರೀಗಂಧ, ಕೃಷ್ಣಾಗರು, ತಾಲಮಖಾನೆ, ಆಕಳಕರಾ, ಜಾಫಲ, ನಸುಗುನ್ನಿಬೀಜ, ಬೂರಗದಮೇಣ, ಅಮೃತಸಾರ, ಅಶ್ವಗಂಧಿ, ನೆಗ್ಗಿಲು, ನೆಲತಾಟಗಡ್ಡೆ, ವಾಯುವಿಳಂಗ, ಸಮುದ್ರಶೋಷ, ವಿಷಪಂಜರ, ಜಾಪತ್ರಿ, ಚಿಟ್ಟಾಮುಟ್ಟಿ, ಇವೆಲ್ಲವನ್ನೂ ಸಮತೂಕ, ಇವೆಲ್ಲದರ ಸಮತೂಕದ ೨೦ನೇ ೧ ಭಾಗ ಕೇಸರಿ, ಕಸ್ತೂರಿಯೂ ಸಹ, ಈ ಎಲ್ಲಾದರ ೪ ರಷ್ಟು ಸಕ್ಕರೆಯ ಪಾಕವಿಟ್ಟು ಈ ಎಲ್ಲದರ ಬಾರೀಕ್ ಚೂರ್ನಮಾಡಿ, ಶೋಧಿಸಿ ಶೇರಿಸಿ ವಿಧಿಪೂರ್ವ್ಯಕ ಪಾಕಮಾಡಿ, ಇದರಲ್ಲಿ ೨೦೦ ಚಿನ್ನದ ವರಕು ಹಾಳೆ, ೨೦೦ ಬೆಳ್ಳಿವರಕು ಆಳೆ ಹಾಕಿ ಕೇಸರಿಯ ೮ ರಲ್ಲಿ ೧ ಭಾಗ * ಭಂಗೀಸೊಪ್ಪನ್ನು ನುಣ್ಣಗೆ ಚೂರ್ಣಮಾಡಿ ಶೇರಿಸಿ ಎಲ್ಲವನ್ನೂ ಒಂದೇ ಆಗುವಂತೆ ಕೂಡಿಸುವದು. ಈ “ ಕೇಸರ ಪಾಕ ” ದಲ್ಲಿ ಜಾಕಾಯಿಯಷ್ಟನ್ನು ನಿತ್ಯವೂ ಪ್ರಾತಃಕಾಲ ಸೇವಿಸುತ್ತಾ ಬಂದರೆ—ಇದು ವೀರ್ಯವನ್ನು ವೃದ್ಧಿಮಾಡುವದು. ಅನೇಕಾನೇಕ ರೋಗಗಳನ್ನು ನಾಶಮಾಡುವದು. ಅನೇಕ ಸ್ತ್ರೀಯರಲ್ಲಿ ಭೋಗಿಸುವ ಶಕ್ತಿಯನ್ನು ಕೊಡುವದು. ಇದನ್ನು ಸೇವಿಸಿದ ವೃದ್ಧನೂ ಯೌವನಸ್ಥರಂತೆ ರತಿಯಲ್ಲಿ ಸಮರ್ಥನಾಗುವನು. ಎಲ್ಲಾ ವಿಧವಾದ ವಾತವಿಕಾರ, ವಾತರಕ್ತ, ಇವುಗಳನ್ನು ನಾಶಮಾಡುವದು. ಇದು ಬಲ ವೀರ್ಯ, ತೇಜಸ್ಸುಗಳನ್ನು ಕೊಡುವದು. ”

---

* ಔತ್ತರೀಯರು ಪ್ರಾಯಶಃ ಭಂಗಿಯ ಉಪಯೋಗವನ್ನು ಹೆಚ್ಚಾಗಿ ಮಾಡುತ್ತಾ ಔಷಧಗಳಿಗೂ ಹಾಕುತ್ತಾರೆ. ಅವರು ಬರದಿರುವ ಪ್ರಯೋಗಗಳೇ ಈ ವೈದ್ಯಶಾಸ್ತ್ರದ ಪಾಕ, ಲೇಹಾದಿಗಳಾಗಿವೆ. ಇವುಗಳಲ್ಲಿಯೂ “ ವಿಜಯಾ ” ಎಂಬದಾಗಿಯೂ, “ಶಕ್ರಾಶನ ” ಎಂಬದಾಗಿಯೂ ಪ್ರಯೋಗಿಸುತ್ತಾರೆ. ಆ ಉತ್ತರದೇಶದಲ್ಲಿ ದೊರಿಯುವದು ಸರ್ವೋತ್ತಮವಾದದ್ದು. ಗಾಂಜಾ ಅದರಲ್ಲಿ ಯಾವ ದೋಷವೂ ಇಲ್ಲ, ನಮ್ಮ ದೇಶದಲ್ಲಿರುವ ಭಂಗಿಯು ಗುಣದಲ್ಲಿ ಅದಕ್ಕೆ ಹೋಲುವದಿಲ್ಲ. ಇದನ್ನು ಅದಕ್ಕೆ ಬದಲಾಗಿ ಉಪಯೋಗಿಸುವದರಲ್ಲಿ ಮಹಾ ದೋಷವುಂಟಾಗುತ್ತದೆ. ಅದಕ್ಕಾಗಿ ಭಂಗಿಯ ಪ್ರಯೋಗವು ನಮ್ಮ ದಕ್ಷಿಣಾತ್ಯರಿಗೆ ತ್ಯಜಿಸತಕ್ಕದ್ದಾಗಿದೆ. ಆ ಪದಾರ್ಥವನ್ನು ಎಲ್ಲಾ ಕಡೆಯಲ್ಲಿಯೂ ಬಿಟ್ಟೇಬಿಡಬೇಕು. ಹಾಗಲ್ಲದೆ ನಮ್ಮ ದೇಶದ್ದನ್ನು ಶೇರಿಸಿದರೆ ಒಂದಕ್ಕೊಂದು ಆಗಿ ವಿಪರೀತ ಗುಣವುಂಟಾಗುತ್ತದೆ. ಎಚ್ಚರ !!!

## ಅಮೃತಭಲ್ಲಾತಕಪಾಕ.

“ಭಲ್ಲಾತಕಾನಾಂ ಪವನೋತ್ಥಿತಾನಾಮ್ ।
ತರುಚ್ಯುತಾನಾಂ ಚ ಯದಾಢಕಂ ಸ್ಯಾತ್ ।
ಘೃಷ್ಟೈಷ್ಟಿಕಾ ಚೂರ್ಣಕಣೈ ರ್ಜಲೈ ಶ್ಚ ।
ಪ್ರಕ್ಷಾಲ್ಯ ಸಂಶೋಷ್ಯ ಚ ಮಾರುತೇನ ॥
ಶುಷ್ಕಾನಿ ತಾನಿ ದ್ವಿದಲೀಕೃತಾನಿ ।
ವಿಪಾಚಯೇದಪ್ಸು ಚ ತುರ್ಗುಣಾಸು ॥
ತತ್ಪಾದಶೇಷಂ ಪುನರೇವ ಶೀತಮ್ ।
ಕ್ಷೀರೇಣತುಲ್ಯೇನ ವಿಪಾಚಯೇತ್ತತ್ ॥
ತದರ್ಧಯಾ ಶರ್ಕರಯಾ ವಿಮಿಶ್ರ್ಯ ।
ಪಶ್ಚಾತ್ಯಜೇಸೋನ್ಮಥನಂ ವಿಧಾಯೈ ॥
ಸತ್ರ್ಯೂಷಣಂ ತ್ರೈಫಲ ಚಂದ್ರ ಮಾಂಸೀ ।
ವಿವೃಚ್ಚ ನಾಸೀ ಖದಿರಾ ಮೃತಂಚ ॥
ಸಚಂದನಾ ಕಲ್ಲ ಕಣಾ ಕಬಾಬಮ್ ।
ಸದೇವಪುಷ್ಪಮ್ ಮುಸಲೀದ್ವಯಂಚ ॥
ಕಂಕೋಲ ಮೋಚಾಹ್ವಯ ದೀಪ್ಯಯುಗ್ಮಮ್ ।
ನತಂ ಸಮಾತಂಕ ಕಣಾ ವಿದಾರೀ ॥
ಜಾತೀಫಲಂ ಮಸ್ತಕ ಜಾತಿಪತ್ರೀ ।
ಕುಬೇರಜೀರಾಗರು ಸಾಬ್ಧಿಶೋಷಮ್ ॥
ಮೋದಾದ್ವಯಂ ಲೋಹರಸೇಂದ್ರ ವಂಗ ।
ಮಭ್ರಂ ತಥಾ ಕುಂಕುಮಕಂ ಚಕರ್ಷಕಮ್ ॥
ತತ್ಸಪ್ತರಾತ್ರಾದತಿಜಾತ ವೀರ್ಯಮ್ ।
ಸುಧಾರಸಾದಪ್ಯಧಿಕಂ ವದಂತಿ ॥
ಪ್ರಾತಃ ಪ್ರಬುದ್ಧಃ ಕೃತದೇವಕಾರ್ಯೋ ।
ಮಾತ್ರಾಂ ಭಜೇತ್ಸಾತ್ಮ್ಯ ಶರೀರಯೋಗ್ಯಾಮ್ ॥
ನಚಾನುಪಾನೇ ಪರಿಹಾರ್ಯಮಸ್ತಿ ।
ನಚಾತಪೇ ನಾಧ್ವನಿ ಮೈಥುನೇ ಚ ॥
ಯಥೇಷ್ಟ ಚೇಷ್ಟೋ ವಿಚರೇತ್ಪ್ರಯೋಗಾ ।
ನ್ನರೋ ಭವೇತ್ಕಾಂಚನರಾಶಿಗೌರಃ ॥
ಅನೇನ ಮೇಧಾ ನರಸಿಂಹ ವೀರ್ಯೋ ।
ದೃಢೇಂದ್ರಿಯೋ ವ್ಯಾಧಿಗತ ಸ್ಸುಬುದ್ಧಿಃ ॥

ದಂತಾವಿಶೀರ್ಣಾಃ ಪುನರೇವದಿವ್ಯಾಃ ।
ಕೇಶಾಶ್ಚ ಶುಭ್ರಾಃ ಪುನರೇವಕೃಷ್ಣಾಃ ॥
ನೀಲಾಂಜನಾಳಿಪ್ರತಿಮಾ ಭವಂತಿ ।
ತ್ವಚೋವಿಶೀರ್ಣಾಃ ಪುನರೇವಭವ್ಯಾಃ ॥
ವಿಶೀರ್ಣಕರ್ಣಾಂಗುಲಿನಾಸಿಕೋಽಪಿ ।
ಕೃಮ್ಯರ್ದಿತೋ ಭಿನ್ನಗಲೋಽಪಿ ಕುಷ್ಠೀ ॥
ಶುಷ್ಕಃ ಪುನಃ ಸ್ಯಾದ್ಗತ ಮೂಲಶಾಖ ।
ಸ್ತರುರ್ಯಥಾ ಭಾತಿ ನವಾಂಬುಸಿಕ್ತಃ ॥
ಬೃಹಸ್ಪತೇ ರಪ್ಯಧಿಕೋಹಿ ಬುದ್ಧ್ಯಾ ।
ಗ್ರಂಥಂ ವಿಶಾಲಂಚ ನವಂ ಕರೋತಿ ॥
ಗೃಹ್ಣಾತಿ ಸದ್ಯೋ ನ ಚ ವಿಸ್ಮೃತಿಂಚ ।
ಕರೋತಿ ಕಲ್ಪಾಯು ರನಲ್ಪವೀರ್ಯವತ್ ॥
ಕುರ್ವನ್ನಿಮಂ ಕಲ್ಪಮನಲ್ಪಬುದ್ಧಿ ।
ಜೀವನ್ನರೋ ವರ್ಷಶತಂ ಸುಖೀಸ್ಯಾತ್ ॥ "

" ಗಾಳಿಯು ಹೊಡತಕ್ಕೆ ಮರದಿಂದ ಉದರಿರುವ ಒಳ್ಳೇ ಪಕ್ವವಾಗಿರುವ ಭಲ್ಲಾತಕೀ (ಗೇರು) ಬೀಜ ೩೨೦ ತೊಲಾ, ತಂದು ಅದನ್ನು ಇಟ್ಟಿಗೆಯಪುಡಿಯಲ್ಲಿ ಚನ್ನಾಗಿ ನೀರುಹಾಕಿ ಉಜ್ಜುವದು. (ಇದೇ ಇದರ ಶುದ್ಧಿ ಕ್ರಿಯಾ) ಅನಂತರ ಅದನ್ನು ತೊಳೆದುಕೊಂಡು ಒಣಗಿಸಿ ಪ್ರತಿಯೊಂದು ಬೀಜವನ್ನೂ ೨-೨ ತುಂಡುಗಳಾಗಿ ಮಾಡುವದು. ಸಾಧ್ಯವಾದರೆ ೪-೪ ಸಹ ಮಾಡಬಹುದು. ಅನಂತರ ೧೬ ಪಕ್ಕಾಶೇರು ನೀರಿನಲ್ಲಿ ಮಣ್ಣಿನಪಾತ್ರೆಯಲ್ಲಿ ಪ್ರತಿಯೊಂದೂ ಮೃದುವಾಗುವಂತೆ ಪಕ್ವಮಾಡಿದಾಗ ಅಷ್ಟಮಾಂಶವೆಂದರೆ ೨ ಶೇರು ನೀರು ಬಾಕೀಲಿರಬೇಕು. ಆಗ ಅದನ್ನು ಒಲೆಯಮೇಲಿನಿಂದ ಕೆಳಕ್ಕೆ ಇಳಿಸಿ ಥಣ್ಣಗಾಗುವಂತೆ ಇಡಬೇಕು. ಆಗ ಅದಕ್ಕೆ ೪ ಪಕ್ಕಾಶೇರು ಆಕಳ ಹಾಲನ್ನು ಹಾಕಿ ಪಕ್ವಮಾಡಬೇಕು. ಪಕ್ವವಾಗುತ್ತಾ ಇರುವಾಗ ೧೬೦ ತೊಲಾ ಸಕ್ಕರೆಯನ್ನು ಅದನ್ನು ಕಡಗೋಲಿನಿಂದ ಚೆನ್ನಾಗಿ ಮಥನಮಾಡಬೇಕು. ಇದರಲ್ಲಿ—ತ್ರಿಕಟುಕ, ತ್ರಿಫಲೆ, ಪಚ್ಚಕರ್ಪೂರ, ಜಟಾಮಾಂಸಿ, ಶಿಗಡೆ, ಬಿದರುಪ್ಪು, ಕಾಚು, ಅಮೃತಸಾರ, ಶ್ರೀಗಂಧ, ಆಕಳಕರೆ, ಹಿಪ್ಪಲಿ, ಕಬಾಬಚೀನಿ, ಲವಂಗ, ಸಫೇದಮುಸಲೀ, ಸ್ಯಾಹಮುಸಲೀ, ಕಂಕೋಲ, ಮೋಚರಸ, ಅಜವಾನ, ಅಜಮೋದಾ, ತಗರ, ಗಜಹಿಪ್ಪಲಿ, ನೆಲಗುಂಬಳ, ಜಾಫಲ, ತುಂಗಮುಸ್ತೆ, ಜಾಪತ್ರಿ, ಗಜ್ಜುಗ, ಅಗರು, ಜೀರಿಗೆ, ಸಮುದ್ರಶೋಷ, ಮೇದಾ, ಮಹಾಮೇದಾ, ಲೋಹಭಸ್ಮ, ಚಂದ್ರೋದಯ,

ಅಭ್ರಕಭಸ್ಮ, ಕೇಸರಿ ಇವೆಲ್ಲಾ ೨-೨ ತೊಲೆ, ಇವೆಲ್ಲದರ ಚೂರ್ಣವನ್ನು ಆ ಪಾಕದಲ್ಲಿ ಸೇರಿಸಬೇಕು. ಚೆನ್ನಾಗಿ ಕೂಡಿಸಿ ಮೃಣ್ಮಯದ ಸ್ನಿಗ್ಧ ಪಾತ್ರೆಯಲ್ಲಿಟ್ಟುಕೊಂಡು ೭ ದಿನ ಧಾನ್ಯಪುಟದಲ್ಲಿಡಬೇಕು. ಅನಂತರ ಅಮೃತಕ್ಕಿಂತಲೂ ಗುಣಸಂಪನ್ನವಾದ ಈ "ಅಮೃತಭಲ್ಲಾತಕೀಪಾಕ" ವನ್ನು ದಿನವೂ ಪ್ರಾತಃಕಾಲ ಶೌಚಾದಿಗಳನ್ನು ನಿವೃತ್ತಿಮಾಡಿದನಂತರ ದೇಹಬಲಾನುಸಾರ ರಿತು ಎಷ್ಟು ಪಚನವಾಗಬಹುದೋ ಅಷ್ಟನ್ನು ಅಂದರೆ ೧ ತೊಲಾ ಅಥವಾ ೧।-೨ ತೊಲಾದವರಿಗೆ ಸೇವಿಸಬಹುದು. ಮೇಲೆ ಸ್ವಲ್ಪ ಒಂದೇ ಗುಟುಕು ಬಿಸಿನೀರನ್ನು ಕುಡಿಯಬೇಕು. ಈ ಅಮೃತಭಲ್ಲಾತಕ ಪಾಕಕ್ಕೆ ಬೇರೇ ವಿಧವಾದ ಅನುಪಾನವಿಲ್ಲ; ಹಾಗೆಯೇ—ಬಿಸಲಲ್ಲಿ ತಿರಗಬಾರದು, ಮೈಥುನ ಮಾಡಬಾರದು, ಇಂತಿಂತಹ ಆಹಾರವನ್ನು ತಿನ್ನಬಾರದು" ಎಂದು ಮುಂತಾದ ನಿರ್ಬಂಧವೇನೂ ಇಲ್ಲ; ಬೇಕಾದಕಡೆ ತಿರುಗಿ, ಬೇಕಾದಹಾಗೆ ಸ್ತ್ರೀಸುಖವನ್ನೂ ಅನುಭವಿಸುತ್ತಾ, ಇಷ್ಟವಿರುವ ಆಹಾರವನ್ನು ಸೇವಿಸುತ್ತಾ ಇರಬಹುದು. ಇದರ ಪ್ರಭಾವದಿಂದ ಮನುಷ್ಯನು ಸುವರ್ಣಸದೃಶಕಾಂತಿಯುಕ್ತನೂ, ರೂಪವಂತನೂ ಆಗುತ್ತಾನೆ. ಬುದ್ಧಿ ವೃದ್ಧಿಯಾಗುವದು. ಶೌರ್ಯದಲ್ಲಿ ನೃಸಿಂಹಸಮಾನನಾಗುವನು. ಇಂದ್ರಿಯ ದೃಢವಾಗುವದು. ಎಲ್ಲಾ ರೋಗಗಳೂ ದೂರವಾಗುವವು. ಬಿದ್ದ ಹಲ್ಲುಗಳು ಮತ್ತೆ ಹುಟ್ಟುವವು. ಬಿಳೀ ಕೂದಲು ಕಪ್ಪಾಗುತ್ತದೆ. ಭ್ರಮರದಂತೆ ಕೃಷ್ಣವರ್ಣವಾಗುವವು. ವಳೀಪಲಿತತ್ವವು ನಿವೃತ್ತಿಯಾಗುವದು. ಚರ್ಮವು ಮಜಬೂತಾಗುವದು. ಯಾವನಿಗೆ ರೋಗದಿಂದ ಕಿವಿ, ಮೂಗು, ಬೆರಳುಗಳು ಬಿದ್ದುಹೋಗಿ, ಕ್ರಿಮಿ ವ್ಯಾಪಿಸಿದೆಯೋ ಕತ್ತು ಬಿದ್ದುಹೋಗಿದ್ದರೂ ಈ ಲೇಹ್ಯ ಸೇವನೆಯಿಂದ ಅಂತವನು ನೀರುಹೊಯಿದು ಬೆಳೆಸಿದ ಮರದಲ್ಲಿ ಹೇಗೆ ಚಿಗರು, ಕೊಂಬೆ ಪಲ್ಲವಿಸುತ್ತಾ ಹೂವು ಹಿಡಿದು ಕಾಯಾಗುವದೋ ಹಾಗೆ ಪ್ರವೃದ್ಧನಾಗುತ್ತಾನೆ. ರೋಗರಹಿತನಾಗುತ್ತಾನೆ. ಬೃಹಸ್ಪತಿಗೆ ಸಮಾನವಾದ ಬುದ್ಧಿಯುಂಟಾಗಿ ಹೊಸ ಶ್ಲೋಕಗಳನ್ನೂ ಕವಿತ್ವಮಾಡುವ ಶಕ್ತಿಯುಂಟಾಗುತ್ತದೆ. ಯಾವದನ್ನೂ ಕೇಳಿದೊಡನೆಯೇ, ಓದಿದೊಡನೆಯೇ ಗ್ರಹಿಸಿ ಜ್ಞಪ್ತಿಯಲ್ಲಿಡುತ್ತಾನೆ. ಮರೆಯುವದಿಲ್ಲ. ಅಧಿಕ ವೀರ್ಯವಂತನಾಗಿ ೧೦೦ ವರ್ಷ ಬದುಕುತ್ತಾನೆ.

## ಭೋಲಷ್ಯಾಪಾಕ.

"ಗೋಲಕಂ ನಾರಿಕೇಳಸ್ಯ ಪಾಟಯೇಚ್ಚ ವಿಧಾನತಃ ॥ ಪಲಾರ್ಧಕಮಿಕ್ಷುರಂ ಬೀಜಾಂಸ್ತತ್ರ ದತ್ವಾ ವಿಭಾವಯೇತ್ ॥ ವಟದುಗ್ಧೇನ ಸಂಪೂರ್ಯ ದುಗ್ಧೇ ವಸುಗುಣೇ ಪಚೇತ್॥ ಚತುಷ್ಪಲೀ

ಘೃತೇ ಭೃಷ್ಟ್ವಾ ಸಿತೇ ಪ್ರಸ್ಥೇಚ ಮೇಲಯೇತ್ ॥ ಸಂಸ್ಕೃತ್ಯ ವಿಧಿವತ್ಪಾಕಂ ಚೂರ್ಣಾನೇತಾನ್ ಕ್ಷಿಪೇತ್ತತಃ ॥ ಜಾತಿಪತ್ರಂ ಲವಂಗಂಚ ವಂಗಂ ಜಾತೀಫಲಂ ತಥಾ ॥ ಗೋಕ್ಷುರಾ ಕರಭೌ ಶುಂಠೀ ಕಪಿಕಚ್ಛುಂಬಲಾಂ ತ್ವಚಮ್ ॥ ಮಧುಯಷ್ಟೀಂ ಚೋಚ್ಚಟಾಂಚ, ಚೂರ್ಣಂ ಕೃತ್ವಾ ಚ ಪ್ರಕ್ಷಿಪೇತ್ ॥ ಶೀತೇ ಮಧು ಪ್ರದಾತವ್ಯಂ ಕುಡವೈಕಪ್ರಮಾಣತಃ ॥ ಸ್ನಿಗ್ಧೇಭಾಂಡೇ ನಿಧಾಯಾಥಮಾತ್ರಾಪಲಮಿತಾ ಭವೇತ್ ॥ ಅಥವಾಗ್ನಿಬಲಂ ದೃಷ್ಟ್ವಾಽನುಪಾನಂ ಪಯಸಶ್ಚರೇತ್॥ ವೀರ್ಯವೃದ್ಧಿಂ ಕರಂಚೈವ ಷಂಡಾದಿ ದೋಷನಾಶನಮ್॥ ನಾರಿಕೇಳಸ್ಯ ಪಾಕೋಽಯಂ ವಾಜೀಕರಣಮುತ್ತಮಮ್ ॥ ”

“ ಒಂದು ಉತ್ತಮ ಮತ್ತು ಹೊಸದಾದ ಕೊಬ್ಬರೀ ಗಿಟಗನ್ನು ತಂದು ಅದಕ್ಕೆ ಯುಕ್ತಿಯಿಂದ ಒಂದು ರಂಧ್ರಮಾಡಬೇಕು. ಆ ರಂಧ್ರಕ್ಕಾಗಿ ತೆಗದಿರುವ ತುಂಡನ್ನು ಪುನಃ ಅದರಲ್ಲಿಟ್ಟು ಅಮಿಕಿದರೆ ಮೊದಲಿನಂತೆಯೇ ಗಿಟಕು ಐಬಿಲ್ಲದಂತಾಗಬೇಕು. ಈ ರಂಧ್ರದಿಂದ ಗಿಟಗಿನೊಳಕ್ಕೆ ೨ ತೊಲಾ ಕೊಳವಳಿಕೆಯ ಶುದ್ಧವಾದ ಬೀಜದ ಚೂರ್ಣವನ್ನು ಹಾಕಿ ಅದರ ತುಂಬಾ ಆಲದ ಹಾಲನ್ನು ತುಂಬಬೇಕು. ಅನಂತರ ಆ ಕೊಬರಿಯ ತುಂಡನ್ನು ಮೊದಲಿನಂತೆ ಮುಚ್ಚಿಬಿಟ್ಟು, ಈವಿಧವಾಗಿ ಔಷಧ ತುಂಬಿದ ಗಿಟಗು ಮುಳುಗುವಂತೆ ಅದರ ತೂಕದ ೪ ಪಾಲು ಆಕಳಹಾಲನ್ನು ಒಂದು ಕಬ್ಬಿಣದ ಪಾತ್ರೆಯಲ್ಲಿ ಒಲೆಮೇಲಿಟ್ಟು ಈ ಗಿಟಗನ್ನು ಹಾಕಿ ಖೋವಾ ಆಗುವಂತೆ ಕೂಡಿಸುತ್ತಾ ಬರಬೇಕು. ಇವೆಲ್ಲವೂ ಖೋವಾ ಆಗಬೇಕು. ಸ್ವಲ್ಪ ಬಾಕಿ ಇದ್ದಲ್ಲಿ ಅದನ್ನು ಕಲ್ಲಿನಲ್ಲಿ ಅರದು ಅದಕ್ಕೆ ಬೆರಸಬೇಕು. ಆಮೇಲೆ ೧ ಬಾಣಲಿಯಲ್ಲಿ ೧೬ ತೊಲಾ ಆಕಳತುಪ್ಪವನ್ನು ಹಾಕಿ, ಮಂದಾಗ್ನಿಯಿಂದ ಆ ಖೋವಾ ಹಾಕಿ ತಳ ಹತ್ತದಂತೆ, ಸುವಾಸನೆ ಬರುವಂತೆ ಹುರಿಯಬೇಕು. ಅನಂತರ ೪೦ ತೊಲೆ ಸಕ್ಕರೆಯ ಪಾಕವಿಟ್ಟು ಇದೆಲ್ಲವನ್ನೂ ಅದಕ್ಕೆ ಹಾಕಿ ಮಂದಾಗ್ನಿಯಲ್ಲಿ ಉಪಾಯವಾಗಿ ಮೃದುಪಾಕವಾಗಿ ಪಾಕಮಾಡುತ್ತಾ—ಜಾಪತ್ರಿ, ಲವಂಗ, ವಂಗಭಸ್ಮ, ಜಾಕಾಯಿ, ನೆಗ್ಗಿಲು, ಆಕಳಕರೆ, ಶೊಂಠಿ, ನಸುಗುನ್ನೀಬೀಜ, ಪೇರಾಮುಟ್ಟಿ, ಜೇಷ್ಟಮಧು, ಭದ್ರಮುಸ್ತೆ ತಲಾ ೧॥—೧॥ ತೊಲೆಯಂತೆ ಶುದ್ಧವಾದ ಚೂರ್ನಮಾಡಿ, ಶೋಧಿಸಿ, ಆ ಪಾಕದಲ್ಲಿ ಬೆರಸಿ ಒಂದೇ ಜೀವವಾಗುವಂತೆ ಚೆನ್ನಾಗಿ ಕಲಕಿ ಕೆಳಕ್ಕಿಳಿಸುವದು. ಆರಿದನಂತರ ೧೬ ತೊಲಾ ಜೇನುತುಪ್ಪವನ್ನು ಹಾಕಿ ಮೃಣ್ಮಯ ಸ್ನಿಗ್ಧಪಾತ್ರೇಲಿಟ್ಟು, ಇದನ್ನು ದಿನವೂ ೨ ಹೊತ್ತು ೨-೨ ತೊಲದಂತೆ ಸೇವಿಸುತ್ತಾ, ಮೇಲೆ ಸಕ್ಕರೆ ಹಾಕಿದ ಯಮ್ಮೆ

ಹಾಲು ಕುಡಿಯುತ್ತಾ ಬಂದಲ್ಲಿ, ಇದರಿಂದ—ವೀರ್ಯವು ಅತುಲಿತವಾಗಿ ವೃದ್ಧಿಯಾಗುವದು ; ನಪುಂಸಕತ್ವ ನಿವೃತ್ತಿಯಾಗುವದು. ಎಲ್ಲಾ ವೀರ್ಯದೋಷಗಳೂ ನಾಶವಾಗುವವು. ಇದು ಪರಮ ವಾಜೀಕರಣೌಷಧವು. ”

## ಮೇಥಿಪಾಕ.

“ ಮೇಥೀಪ್ರಸ್ಥಮಿತಾ ಪಲದ್ವಯಮಿತಂ ಚೂರ್ಣಂ ವರೀ ಸಂಭವಮ್।
ತ್ವಕ್ಪತ್ರಾನಲ ವಿಶ್ವಜೀರಮಗಧಾ ದ್ರಾಕ್ಷಾ ಶಿವಾ ಗೋಕ್ಷುರಮ್ ॥
ಧಾತ್ರೀ ನಾಗಕಣಾ ಪ್ರಿಯಂಗು ಮುಸಲೀ ಕೀನಾಶಬೀಜೈಃ ಸಮೈಃ।
ಪಿಷ್ಟೈಃ ಸೂಕ್ಷ್ಮತರಂ ಪಲೈಕತುಲಿತೈಃ ಸರ್ವೈಃ ಪೃಥಕ್ಪಾಚಯೇತ್॥
ಗೋದುಗ್ಧೇನ ಚತುರ್ಗುಣೇನ ವಿಧಿನಾ ಮಂದಾಗ್ನಿನಾ ವೈದ್ಯರಾಟ್।
ಯಾವತ್ತದ್ಘನತಾಮಿಯಾದಥ ತತಃ ಸರ್ಪಿದ್ವಿಭಾಗಾ ಸಿತಾ ॥
ಪಾಚ್ಯಾ ಪಾಚ್ಯ ಸುಶೀತ ಮೇತದಖಿಲಂ ದೃಷ್ಟ್ವಾ ತದೇಲಾದ್ವಯಮ್।
ಮುಜ್ಯಾ ಚಾರುಭವಾಥ ದೇವಕುಸುಮಂ ಖಾಜೂರ ಬಾದಾಮಕಮ್॥
ಜಾತೀಪತ್ರ ಸಮಂ ವಿದಲ್ಯದಲಿತಂ ಪ್ರಾಗ್ಗೋ ಘೃತೈರ್ಭರ್ಜಿತೇ ।
ಯುಕ್ತಾಂಶೈರವ ದೂಲ್ಯಮೇವಸಕಲಂ ತನ್ಮೋದಕಾನ್ ಕಲ್ಪಯೇತ್ ॥
ವಂಗಾಭ್ರೇಣ ಪಲಾರ್ಧಕೇನ ಸಹಿತಾನ್ ಸಂಭಕ್ಷ್ಯ ಯಾವದ್ಬಲಮ್ ।
ಕಾಂತಾಸಂಗ ವಿಲಾಸ ಭೋಗಚಪಲೋ ವೃದ್ಧೋಯುವಾವೈ ಭವೇತ್ ॥
ವಾತವ್ಯಾಧಿ ವಿನಾಶಾರ್ಥಮೇತ ತ್ಸರ್ವೋತ್ತಮಂ ಪರಮ್ ॥ ”

“ ಮೆಂತ್ತಿಯದಚೂರ್ಣ ೮೦ ತೊಲಾ, ಶತಾವರಿ ೧೦ ತೊಲಾ, ದೇವಪತ್ರ, ಚಿತ್ರಮೂಲ, ಶುಂಠಿ, ಬಿಳೀಜೀರಿಗೆ, ಹಿಪ್ಪಲಿ, ದ್ರಾಕ್ಷಿ, ಅಳಲೇಕಾಯಿ, ನೆಗ್ಗಿಲು, ನೆಲ್ಲಿಚಟ್ಟು, ಗಜಹಿಪ್ಪಲಿ, ಪ್ರಿಯಂಗು, ನೆಲತಾಟಿಗಡ್ಡೆ, ಪಸುಗುನ್ನಿಬೀಜ, ಪ್ರತಿಯೊಂದು ೨-೨ ತೊಲಾದಂತೆ ಚೂರ್ನಿಸಿ, ಶೋಧಿಸಿ, ಇವೆಲ್ಲದರ ನಾಲ್ಕು ಪಾಲು ಆಕಳಹಾಲಿನಲ್ಲಿ ಹಾಕಿ ಖೋವಾ ಮಾಡಬೇಕು. ಅನಂತರ ೪೦ ತೊಲಾ ಆಕಳ ತುಪ್ಪದಲ್ಲಿ ಆ ಔಷಧಿಯುಕ್ತ ಖೋವಾ ಹುರಿಯುವದು. ಅನಂತರ ಇದರ ಎರಡುಪಾಲು ಸಕ್ಕರೆಯು ಪಾಕವಿಟ್ಟು, ಅದರಲ್ಲಿ ಇವೆಲ್ಲವನ್ನೂ ಮಂದಮಂದ ಅಗ್ನಿಯಲ್ಲಿ ಪಾಕಮಾಡಿ ಕೆಳಗಿಳಿಸಿ, ಆದನಂತರ ಅದಕ್ಕೆ ಯಾಲಕ್ಕಿ, ದೊಡ್ಡ ಯಾಲಕ್ಕಿ, ಪಿಸ್ತಾ, ಲವಂಗ, ಖರ್ಜೂರ, ಬಾದಾಮಿ, ಚಿರೌಂಜಿ, ಜಾಪತ್ರಿ ಇವೆಲ್ಲಾ ೧-೧ ತೊಲಾದಂತೆ ಚೂರ್ನಿಸಿ ಕೂಡಿಸುವದು. ವಂಗಭಸ್ಮ, ಅಭ್ರಕಭಸ್ಮ, ಇವೆರಡನ್ನೂ ೨-೨ ತೊಲಾ ಹಾಕುವದು. ಇದನ್ನು ಜಠರಾಗ್ನಿ ಬಲವರಿತು ಸೇವಿಸುತ್ತಾ ಬಂದರೆ ವೃದ್ಧನೂ ಯೌವನಸ್ಥನಂತಾಗುತ್ತಾನೆ. ಸ್ತ್ರೀಸಂಗದಲ್ಲಿ ಬಹು ಶಕ್ತಿಯನ್ನೀಯುವದು. ಸಕಲ ವಾತವ್ಯಾಧಿಹರವಾದ ಔಷಧದಲ್ಲಿ ಇದು ಶ್ರೇಷ್ಠವಾದದ್ದು. ”

## ಧಾತ್ರೀಪಾಕ.

“ ಸುಪಕ್ವ ಧಾತ್ರೀಫಲ ಶುಷ್ಕಚೂರ್ಣಮ್ ।
ಪುನಃ ಪುನಸ್ತದ್ರಸಭಾವಿತಂ ಚ ॥
ಶತೈಕವಾರಾ ಪರಿಶೋಷ್ಯ ಪಶ್ಚಾತ್ ।
ಘೃತೇನ ತುಲ್ಯೇನ ಸಿತಾದ್ವಯೇನ ॥
ಘೃತಾರ್ಧ ಭಾಗೇನ ಚ ಮಾಕ್ಷಿಕೇಣ ।
ವಿಧಾಯ ಪಾಕಂ ಸಹ ದುಗ್ಧಪಾನೈಃ ॥
ಭುಂಜೀತ ಯಸ್ತ್ವಾಶು ಚ ಕಾಮಿನೀನಾಮ್ ।
ದಶಂ ತು ವಿದ್ರಾವಯತೇ ಪುರಸ್ತಾತ್ ॥ ”

“ ಚೆನ್ನಾಗಿ ಬಲಿತು ಒಣಗಿರುವ ನೆಲ್ಲೀಕಾಯಿಗಳ ೮೦ ತೊಲೆ ಚೂರ್ಣವನ್ನು ಹಸೀ ನೆಲ್ಲೀಕಾಯಿಗಳ ರಸದಲ್ಲಿ ಅರದರದು ಒಣಗಿಸುತ್ತಾ, ಹೀಗೆ ೧೦೦ ಸಲ ಭಾವನೆ ಮಾಡಬೇಕು. ಅನಂತರ ೮೦ ತೊಲಾ ಒಳ್ಳೇ ಆಕಳ ತುಪ್ಪ, ೧೬೦ ತೊಲಾ ಸಕ್ಕರೆ, ೪೦ ತೊಲಾ ಜೇನುತುಪ್ಪ ಕೇರಿಸಿ ಮಾಡಿದ ಆವುಲಕಪಾಕವನ್ನು ದೇಹದ ಅಗ್ನಿಬಲವರಿತು ಸೇವಿಸುತ್ತಾ ಮೇಲೆ ಹಾಲು ಕುಡಿಯುತ್ತಾ ಬರುವದು. ಇದರ ಸೇವನೆಯಿಂದ ೧೦ ಜನ ಸ್ತ್ರೀಯರನ್ನಾದರೂ ಭೋಗಿಸುವಷ್ಟು ವೀರ್ಯವೃದ್ಧಿಯೂ, ರತ್ಯಾಸಕ್ತಿಯೂ ಉಂಟಾಗುವದು. ”

## ಖರ್ಜೂರಪಾಕ.

“ ಖರ್ಜೂರಪ್ರಸ್ಥಂ ಮಗಧಾಪಲೈಕಮ್ ।
ದುಗ್ಧೇನ ಸಂಪಾಚ್ಯ ಚತುರ್ಗುಣೇನ ॥
ಘೃತೇನ ಸಂಭರ್ಜ್ಯ ಪಲಾಷ್ಟಕೇನ ।
ದ್ರಾಕ್ಷಾಶ್ವಗಂಧಾ ಮುಸಲೀ ದ್ವಯೇನ ॥
ಲವಂಗ ಜಾತೀಫಲ ಜಾತಿಪತ್ರೀ ।
ಪತ್ರಾಬಲಾ ಕೇಶರಕೈಃ ಸಮಾಂಶೈಃ ॥
ಸರ್ವದ್ವಿಭಾಗಾ ಸುಸಿತಾ ಸಮೇತಮ್ ।
ವಂಗಾಭ್ರಲೋಹೈಸ್ತು ಪಲಾರ್ಧಮಾನೈಃ ॥
ಮಜ್ಜಾತ್ರಯಾ ಕೋಟಿಕಕಾಶ್ಮರೀಭಿಃ ।
ಪಾಕಂ ವಿಧಾಯಾಸ್ಯಚ ಮೋದಕಾನ್ಯಃ ॥
ಪುಷ್ಟಸ್ತು ಹೃಷ್ಟೈಃ ಪ್ರಮದಾ ಮದಘ್ನೋ ।
ಭುಂಜೀತ ವೈ ರೋಗಗಣ ಪ್ರಮುಕ್ತಃ ॥ ”

"ಖರ್ಜೂರ (ಬೀಜವಿಲ್ಲದ್ದು) ೮೦ ತೊಲಾ, ಹಿಪ್ಪಲಿಯಚೂರ್ಣ ೪ ತೊಲೆ, ಇವೆರಡನ್ನೂ ಪಕ್ಕಾ ೪ ಶೇರು ಆಕಳಹಾಲಿನಲ್ಲಿ ಪಕ್ವಮಾಡುವದು. ಘಟ್ಟಿಯಾಗುತ್ತಾ ಬರುವಾಗ ೪೦ ತೊಲಾ ಆಕಳತುಪ್ಪದಲ್ಲಿ ಮಂದಮಂದ ಅಗ್ನಿಯಲ್ಲಿ ಚೆನ್ನಾಗಿ ಹುರಿಯಬೇಕು. ಅನಂತರ ಇದರಲ್ಲಿ—ದ್ರಾಕ್ಷಿ, ಅಶ ಗಂಧಿ, ಶತಾವರಿ, ನೆಲತಾಟಗಡ್ಡಿ, ಲವಂಗ, ಜಾಫಲ, ಜಾಪತ್ರಿ, ಲವಂಗಪತ್ರಿ, ಚಿಟ್ಟಾಮುಟ್ಟಿ, ಕೇಸರಿ ಪ್ರತಿಯೊಂದೂ ೨-೨ ತೊಲೆಯಂತೆ ಚೂರ್ಣಿಸಿ, ಇವೆಲ್ಲಾದರ ಎರಡರಷ್ಟು ಸಕ್ಕರೆಯ ಪಾಕವಿಟ್ಟು, ಆ ಪಾಕದಲ್ಲಿ ಎಲ್ಲವನ್ನೂ ಕೂಡಿಸಿ ಕಲಕುವದು. ವಂಗಭಸ್ಮ, ಅಭ್ರಕಭಸ್ಮ, ಲೋಹಭಸ್ಮ ಇವು ೨-೨ ತೊಲೆಯಂತೆ ಶೇರಿಸಿ—ಬಾದಾಮಿ, ಪಿಸ್ತಾ, ಚಿರೌಂಜಿ, ಅಖರೋಟ್‌ನ ಪೊಪ್ಪು, ಕಿಸಮಿಸ್ ಇವೆಲ್ಲವನ್ನೂ ಶೇರಿಸಿ ಇಟ್ಟುಕೊಂಡು, ದಿನವೂ ಇದನ್ನು ಸೇವಿಸುವದು. ದೇಹಬಲವರಿತು ಸೇವಿಸುವದು. ಇದರಿಂದ ಹೃಷ್ಟ, ಪುಷ್ಟನಾಗುತ್ತಾನೆ. ಸರ್ವರೋಗರಹಿತನಾಗುವನು. ಸ್ತ್ರೀಯರನ್ನು ರತಿಯಲ್ಲಿ ಜೈಸುವನು."

## ಮುಸಲೀಪಾಕ.

"ಸುತಾಲಮೂಲೀ ದ್ವಯ ಚೂರ್ಣಮೇವ ।
ಸುವಸ್ತ್ರಪೂತಂ ವಿನಿಗೃಹ್ಯ ಪ್ರಸ್ಥಮ್ ॥
ಗೋದುಗ್ಧ ಪ್ರಸ್ಥೈರ್ವಸುಭಿಶ್ಚ ಪಾಚ್ಯಮ್ ।
ಯಾವದ್ಘನಂ ತತ್ಪುನರಾಕ್ಷ್ಯ ಸರ್ವಮ್ ॥
ಪಲಾಷ್ಟಕೇನಾಥ ಘೃತೇನ ಭೃಷ್ಟ್ವಾ ।
ಫಲೈಕಮಾನಾನಿ ತಥೌಷಧಾನಿ ॥
ಸಂವಕ್ಷ್ಯಮಾಣಾನಿ ಗುರೂಕ್ತಯುಕ್ತ್ಯಾ ।
ಖಂಡಂ ದ್ವಿಮಾನಂ ಸಕಲೌಷಧೀಭ್ಯಃ ॥
ಗೋಕಂಟಕಂ ಚೇಕ್ಷುಂ ಶತಾವರೀಭ್ಯಾಮ್ ।
ಶಿವಾ ಕಣಾ ವಾನರಬೀಜ ಪತ್ರ್ಯೈಃ ॥
ಲವಂಗ ಖರ್ಜೂರ ಸುಜಾತಪತ್ರೀ ।
ಮಜ್ಜಾತ್ರಯೈಶ್ಚಂದನ ಗೋಸ್ತನೀಭ್ಯಾಮ್ ॥
ಜಾತೀಫಲೈಲಾ ನತ ವಂಗಯುಕ್ತಮ್ ।
ಗ್ರಾಹ್ಯಂ ಯಥೋಕ್ತಂ ಸಕಲಂ ಫಲೈಕಮ್ ॥
ಪಲದ್ವಯಂ ಮೋದಕ ಮಸ್ಯಪ್ರಾತಃ ।
ಸಾಯಂ ಸಮಶ್ನಾತಿ ಸಮಾಕ್ಷಿಕಾಜ್ಯಮ್ ॥
ವೃದ್ಧೋಪಿ ತಾರುಣ್ಯಯುತಸ್ತರುಣ್ಯಾ ।

ಯುಕ್ತೋಽಪಿ ಖಾನ್ಯಾಸ್ತರುಣೀರಿರಿಂಸುಃ ||
ವೀರ್ಯಪ್ರವೃದ್ಧ್ಯೈ ಬಲಪೌರುಷಾಭ್ಯಾಮ್ |
ಯುಕ್ತಃ ಸುದೃಗ್ರೋಗ ಗಣೈರ್ವಿಮುಕ್ತಃ || "

" ಎರಡು ಮುಸಲಿ (ಶತಾವರಿ ಮತ್ತು ನೆಲತಾಟಿಗಡ್ಡೆ) ಗಳ ಚೂರ್ಣ ೪೦ ತೊಲಾ ವಸ್ತ್ರಗಾಳಿತಮಾಡಿ, ೪ ಪಕ್ಕಾಶೇರು ಆಕಳಹಾಲಿನಲ್ಲಿ ಖೋವಾ ಮಾಡಬೇಕು. ಈ ಖೋವಾವನ್ನು ೪೦ ತೊಲಾ ಆಕಳತುಪ್ಪದಲ್ಲಿ ಮಂದಾಗ್ನಿಯಲ್ಲಿ ಹುರಿಯಬೇಕು. ಅದರಲ್ಲಿ—ನೆಗ್ಗಿಲು, ಕೊಳವಳಿಕೆಬೀಜ, ಶತಾವರಿ, ಅಳಲೆಕಾಯಿ, ಹಿಪ್ಪಲಿ, ನಸುಗುನ್ನಿಬೀಜ, ಜಾಪತ್ರಿ, ಲವಂಗ, ಖರ್ಜೂರ, ಲವಂಗಪತ್ರೆ, ಬಾದಾಮಿ, ಪಿಸ್ತಾ, ಚಿರೌಂಜಿ, ಶ್ರೀಗಂಧ, ದ್ರಾಕ್ಷಿ, ಜಾಫಲ, ಯಾಲಕ್ಕಿ, ವಂಗಭಸ್ಮ ಎಲ್ಲಾ ೪-೪ ತೊಲೆಯಂತೆ ಶೇರಿಸುವದು. ಇವೆಲ್ಲದರ ೨ ಪಾಲು ಸಕ್ಕರೆ ಪಾಕವಿಟ್ಟು ಇವೆಲ್ಲಾ ಹಾಕಿ ತಯಾರಾದ ಪಾಕವನ್ನು ದಿನವೂ ೨ ಹೊತ್ತು ದೇಹಬಲಾನುಗುಣ್ಯವಾಗಿ ೨ ತೊಲೆಯಿಂದ ೪ ತೊಲೆಯವರಿಗೂ ತುಪ್ಪ, ಜೇನುತುಪ್ಪ ಕಲಿಸಿ ಸೇವಿಸುತ್ತಾ ಬಂದರೆ ವೃದ್ಧನೂ ಸಹ ಮೈಥುನದಲ್ಲಿ ತರುಣನಾಗುತ್ತಾನೆ. ಯೌವನಸ್ಥರನ್ನು ಕೇಳಬೇಕಾದ್ದೇನಿದೆ. ಬಲ ವೀರ್ಯವೃದ್ಧಿಯಾಗಿ ಆನಂದವುಂಟಾಗುವದು. ಇದು ಸಕಲ ನೇತ್ರರೋಗಗಳಿಗೂ ಹಿತವಾದದ್ದು. "

ಬಾದಾಮಿ ಪಾಕ.

" ಮಜ್ಜಾಂ ಬಾತಾಮುಜಂ ಪಿಷ್ಟ್ವಾ ಪ್ರಸ್ಥಾರ್ಧಂ ಮಾನತೋ ಬುಧಃ |
ಪ್ರಸ್ಥೈಕಂ ಚ ಸಿತಾಂ ಪಕ್ತ್ವಾ ವಿಧಿನಾ ಮೇಲಯೇತ್ತತಃ ||
ಪಲದ್ವಯಂ ಘೃತಂ ದತ್ವಾ ಚೂರ್ಣಾನೇತಾಂಶ್ಚ ಸಂಕ್ಷಿಪೇತ್ ||
ಏಲಾದ್ವಯಂಜಾತಿಫಲಂ, ಲವಂಗಂ ಕೇಸರಂ ತ್ವಚಮ್ ||
ಕರ್ಷಕರ್ಷಪ್ರಮಾಣೇನ, ಚೂರ್ಣಯಿತ್ವಾ ವಿ ಮೇಲಯೇತ್ ||
ಮಜ್ಜಾದ್ವಯಂ ಪಲೈಕೈಕಂ ದಲಾಶ್ಚಾಥ ಸುವರ್ಣಜಾ ||
ರಾಜತಾಂ ಚೈತಮಾನೇನ ಸಂಮೇಲ್ಯ ವಿಧಿನಾ ತತಃ ||
ದ್ವಿಕರ್ಷಕ ಪ್ರಮಾಣೇನ ಮೋದಕಾ ಕಾರಯೇದ್ಬುಧಃ ||
ಧನಿನಾಂ ಪುರವಾಸಾನಾಂ ಭಕ್ಷಣಾರ್ಥಂ ಹಿ ಭೋಜನಮ್ ||
ಬಲವೃದ್ಧಿಕರಂ ಶಶ್ವತ್ ವಾಜೀಕರಣ ಮುತ್ತಮಮ್ || "

" ಸಿಪ್ಪೆಬಿಡಿಸಿದ ಬಾದಾಮಿಯ ಪ್ರೊಪ್ಪಿನಚೂರ್ಣ ೪೦ ತೊಲಾ, ಶುದ್ಧ ಸಕ್ಕರೆ ೪೦ ತೊಲಾ, ಈ ಸಕ್ಕರೆಯ ಪಾಕವನ್ನು ಮಾಡಿ, ಈ ಪಾಕದಲ್ಲಿ ೧೦ ತೊಲಾ ಶುದ್ಧ ಆಕಳತುಪ್ಪ ಬೆರಸಬೇಕು. ಅದರಲ್ಲಿ ಬಾದಾಮಿಯ ಹಿಟ್ಟನ್ನೂ ಹಾಕಬೇಕು. ಯಾಲಕ್ಕಿ, ದೊಡ್ಡ ಯಾಲಕ್ಕಿ, ಜಾಫಲ, ಲವಂಗ,

ಕೇಸರಿ, ದಾಲ್ಚಿನ್ನಿ ೧-೧ ತೊಲಾ ಚೂರ್ಣಿಸಿ ಹಾಕುವದು. ಚಿರೌಂಜಿ ೪ ತೊಲಾ, ಪಿಸ್ತಾ ೪ ತೊಲಾ ಶೇರಿಸಬೇಕು. ಸುವರ್ಣದ ೧೦೦ ವರಕಿನ ಹಾಳೆಗಳು, ಬೆಳ್ಳಿಯ ೧೦೦ ವರಕಿನ ಹಾಳೆಗಳೂ ಹಾಕಿ, ಮಾಡಿದ ಈ ಬಾದಾಮಿ ಪಾಕವನ್ನು ದೇಹಬಲವರಿತು ೧ ತೊಲೆಯಿಂದ ೨ ತೊಲೆಯುವರಿಗೂ ಸೇವಿಸುವದು. ಧನಿಕರಿಗೂ, ಷಹರ್‌ಗಳಲ್ಲಿರುವವರಿಗೂ ಕಾಮಸುಖಾರ್ಥಸಿದ್ಧಿಗೆ ಇದು ಪರಮೋತ್ತಮವಾದದ್ದು. ಬಲ, ವೀರ್ಯ ವೃದ್ಧಿಮಾಡುತ್ತದೆ. ಕಾಮಶಕ್ತಿಯನ್ನು ವೃದ್ಧಿಮಾಡುವದು. ''

## ಸಂತಾನಿಕಾಪಾಕ.

" ಸಂತಾನಿಕಾ ಹ್ಯರ್ಧಪ್ರಸ್ಥಂ ಸಿತಾಂ ಪ್ರಸ್ಥಾಂ ಚ ಸಂಪಚೇತ್॥ ಚತುಷ್ಪಲಂ ಘೃತಂದತ್ವಾ ಕುರ್ಯಾತ್ಪಾಕಂ ವಿಧಾನತಃ ॥ ಏಲಾದ್ವಯಂ ಜಾತಿಪತ್ರೀಂ ಕಾಶ್ಮೀರಂ ಚ ಲವಂಗಕಮ್ ॥ ಪ್ರತ್ಯೇಕಕರ್ಷಮಾಚೂರ್ಣ್ಯ, ದಲಾಂಶ್ಚೈವ ಸುವರ್ಣಜಾ ॥ ರಾಜತಾ ಮೇಲಯಿತ್ವಾ ಚ ಮೋದಕಾ ಪಲಸಮ್ಮಿತಾ ॥ ಕಾರಯಿತ್ವಾ ವಿಧಾನೇನ ಭಕ್ಷಯೇದ್ಧನವಾಂ ಸ್ತತಃ ॥ ವೀರ್ಯವೃದ್ಧಿಕರಂ ಶಶ್ವದ್ವಾಜೀಕರಣಮುತ್ತಮಮ್ ॥ "

" ಉತ್ತಮವಾದ ಹಾಲಿನಕೆನೆ ೪೦ ತೊಲೆ, ಆಕಳತುಪ್ಪ ೨೦ ತೊಲೆ, ಸಕ್ಕರೆ ೪೦ ತೊಲೆ, ಎಲ್ಲವನ್ನೂ ಶೇರಿಸಿ, ಮಂದಾಗ್ನಿಯಿಂದ ಪಾಕಮಾಡಬೇಕು. ಇದರಲ್ಲಿ—ಸಣ್ಣಯಾಲಕ್ಕಿ, ದೊಡ್ಡಯಾಲಕ್ಕಿ, ಜಾಪತ್ರಿ, ಕೇಸರಿ, ಲವಂಗ ಪ್ರತಿಯೊಂದೂ ೧-೧ ತೊಲಾ ಚೂರ್ಣಿಸಿ ಪಾಕದಲ್ಲಿ ಹಾಕುವದು. ಶಿಕ್ಕಿದಷ್ಟು ಸುವರ್ಣದವರಕಿನ ಹಾಳೆಗಳೂ, ಬೆಳ್ಳಿವರಕಿನ ಹಾಳೆಗಳೂ ಶೇರಿಸಿ, ೨ ತೊಲಾದಂತೆ ದಿನವೂ ೨ ಹೊತ್ತು ಇಚ್ಛಾಪೂರ್ವಕ ಧನಿಕರಾದವರು ಸೇವಿಸುವದರಿಂದ ವೀರ್ಯವೃದ್ಧಿಯಾಗಿ, ಕಾಮಶಕ್ತಿಯು ಮಿತಿಮೀರುವದು. ''

## ಮಾಷಪಾಕ.

"ಪ್ರಸ್ಥೈಕಂ ಮಾಷಜಾಂ ಪಿಷ್ಟಿಂ ಪ್ರಸ್ಥಾರ್ಧಂ ಮುದ್ಗಜಂ ತಥಾ॥ ಗೋಧೂಮಾನಾಂ ಚ ವೈ ಚೂರ್ಣಮರ್ಧಪ್ರಸ್ಥಪ್ರಮಾಣತಃ॥ ಘೃತೇಸಮೇವಿಭಜ್ಯಾಥ ಸರ್ವಾಂಶ್ಚೈವ ಪೃಥಕ್ ಪೃಥಕ್ ॥ ಪಾಕಂಚೈವ ವಿಧಾಯಾಥ ಶರ್ಕರಾ ಪ್ರಸ್ಥಕ ತ್ರಯಮ್ ॥ ಪಾಕಂ ಕೃತ್ವಾ ವಿಧಾನೇನ ಪಶ್ಚಾಚ್ಚೂರ್ಣಾಂಶ್ಚ ಮೇಲಯೇತ್ ॥ ಮುಸಲೀ ದ್ವಯ ಮಿಕ್ಷುಂಚ ಅಶ್ವಗಂಧಾಂ ಶತಾವರೀ ಮ್ ॥ ವೃದ್ಧದಾರುಂ ಕಪೀಕಚ್ಛುಂ ಪತ್ರಿಕಾಶ್ಚೂರ್ಣಯೇ ಪೃಥಕ್ ॥ ಜಾತೀ

ಫಲಂ ಜಾತಿಕೋಶಂ ಆಕಾರಕರಭಂ ತ್ವಚವತ್ ॥ ಲವಂಗಂಚೈವಕಾಶ್ಮೀರಂ, ತಥಾನ್ಯೈನಾಗಕೇಸರವತ್ ॥ ವಂಗಮಭ್ರಂ ಚ ಸರ್ವ್ಮೇಲ್ಯ ಕರ್ಷಕರ್ಷಪ್ರಮಾಣತಃ॥ ಶಾರಯಿತ್ವಾ ವಿಧಾನೇನ ದ್ವಿಪಲಾನಥವೋದಕರ್ಕಾ ॥ ಪ್ರಾತರ್ನಿತ್ಯಂ ಭಕ್ಷಣೀಯಂ ಪಾಕೋಽಯಂ ಪಿಷ್ಟಿಸಂಭವಃ ॥ ಕಟಿಶೂಲಂ ಚ ಕಾರ್ಶ್ಯಂ ಚ ನಾಶಯೇನ್ನಾತ್ರಸಂಶಯಃ ॥ ಬಲವೃದ್ಧಿಕರಂ ಶಶ್ವದ್ವಾಜೀಕರಣಮುತ್ತಮಮ್ ॥ ”

“ಉತ್ತಮ ಉದ್ದಿನಹಿಟ್ಟು ೮೦ ತೊಲಾ, ಹೆಸರುಹಿಟ್ಟು ೪೦ ತೊಲಾ, ಗೋದುವೆಯರವೆ ೪೦ ತೊಲಾ, ಇವನ್ನು ಬೇರೆಬೇರೆ ತುಪ್ಪದಲ್ಲಿ ಹುರಿಯಬೇಕು. ಅನಂತರ ಸಕ್ಕರೆ ೨೪೦ ತೊಲಾದ್ದರ ಪಾಕವನ್ನು ಮಾಡಿ ಅದರಲ್ಲಿ ಈ ಮೇಲಿನ ಹುರಿದ ಮೂರು ಹಿಟ್ಟುಗಳನ್ನು ಹಾಕುವದು. ಅದರಲ್ಲಿ ಶತಾವರಿ, ನೆಲತಾಟಿಗಡ್ಡೆ, ತಾಲಮಖಾನೆ, ಅಶ್ವಗಂಧಿ, ಮುಜ್ಜಿಗೆಗಡ್ಡೆ, ನೆಲಗುಂಬಳಗಡ್ಡೆ,ನಸುಗುನ್ನಿಬೀಜ, ಪ್ರತಿಯೊಂದೂ ೪-೪ ತೊಲೆ ಚೂರ್ಣಿಸಿ, ಶೋಧಿಸಿಹಾಕುವದು. ಜಾಪತ್ರಿ, ಜಾಫಲ, ಆಕಳಕರೆ, ದಾಲಚಿನ್ನಿ, ಲವಂಗ, ಕೇಸರಿ, ನಾಗಕೇಸರಿ, ವಂಗಭಸ್ಮ, ಅಭ್ರಕಭಸ್ಮ ಪ್ರತಿಯೊಂದೂ ೧-೧ ತೊಲೆಯಂತೆ ಚೂರ್ಣಿಸಿ ಶೇರಿಸುವದು. ಈ ಪಿಷ್ಟೀಪಾಕವನ್ನು ದಿನವೂ ಸೇವಿಸುವದರಿಂದ ಸೊಂಟನೋತವೂ, ಕೃಶತಾ ನಾಶವಾಗುವದು. ಬಲ, ಪುಷ್ಟಿಯುಂಟಾಗಿ ಕಾಮಶಕ್ತಿಯುಂಟಾಗುವದು. ವೀರ್ಯವೃದ್ಧಿಯು ಅಮಿತವಾಗುವದು.”

## ವಲ್ಲಭಾಗುಟಿಕಾ.

“ಬಹುಪಲೀ ಮೋಚರಸಂ ಮುಸಲ್ಯಾ ಕರಹಾಟಕಮ್॥ ತುಗಾ ಚ ಮರ್ಕಟೀ ಬೀಜಂ ಕೋಕಿಲಾಕ್ಷಮುಟಂಗಣಮ್ ॥ ಗೋಕ್ಷುರಂ ಹ್ಯಮೃತಾ ಸತ್ವಂ ಜಪಾಪುಷ್ಪಂ ಲಿಸೋಽರಕಮ್ ॥ ಮಸ್ತಗೀ ಜಾತಿಕೋಶಂ ಚ ಲವಂಗಂ ವಂಶಜಾತಕಮ್ ॥ ಏತಾನಿ ಸಮಭಾಗಾನಿ ಸಿತಾ ಚ ದ್ವಿಗುಣಾ ಭವೇತ್ ॥ ಪಾಕಂ ಕೃತ್ವಾ ಗುಟೀರ್ಬದ್ಧ್ವಾಂ ಕೋಲಮಾತ್ರಪ್ರಮಾಣತಃ ॥ ಸಾಯಂಕಾಲೇ ಭಕ್ಷಯಿತ್ವಾ ಪಿಬೇದ್ದುಗ್ಧಂ ತದೋಪರಿ ॥ ನಪುಂಸಕತ್ವರೋಗಘ್ನಂ ವಾಜೀಕರಣ ಮುತ್ತಮಮ್ ॥ ”

“ಜಾಲಿಯಬೀಜ, ಬೂರಗದಅಂಟು, ಶತಾವರಿ, ನೆಲತಾಟಿಗಡ್ಡೆ, ಆಕಳಕರೆ, ವಂಶಲೋಚನ, ನಸುಗುನ್ನಿಬೀಜ, ಕೊಳವಳಿಕೆಬೀಜ, ಭದ್ರಮುಸ್ತೆ, ನೆಗ್ಗಿಲು, ಅಮರಸಾರ, ದಾಶಿವಾಳದಹೂವು, ಚಳ್ಳೇಬೀಜ, ಮಸ್ತಕಿ, ಜಾಪತ್ರಿ, ಲವಂಗ, ವಂಶಲೋಚನ ಇವೆಲ್ಲಾ ಸಮಭಾಗವಾಗಿ ಚೂರ್ಣಮಾಡಿ

ಮೇಲಿನ ಎಲ್ಲದರ ಎರಡರಷ್ಟು ಸಕ್ಕರೆಯನ್ನು ಪಾಕವಿಟ್ಟು ಎಲ್ಲವನ್ನೂ ರಿಸಿ ಕೂಡಿಸಿಟ್ಟು ಅರ್ಧತೊಲಾದಂತೆ ದಿನವೂ ಸಾಯಿಂಕಾಲದಹೊತ್ತು ಸುತ್ತಾ ಬರುವದು. ಸೇವಿಸಿದಕೂಡ್ಲೆ ಹಾಲು ಕುಡಿಯುವದು. ನಪುಂಸಕತಾ ನಾಶವಾಗಿ, ಬಹು ವೀರ್ಯವೃದ್ಧಿಯಾಗುತ್ತದೆ. ''

## ಚಂದ್ರೋದಯರಸ.

" ಪಲಂ ಮೃದುಸ್ವರ್ಣದಲಂ ರಸೇಂದ್ರಾತ್ ।
ಪಲಾಷ್ಟಕಂ ಷೋಡಶ ಗಂಧಕಂ ಚ ॥
ಶೋಣೈಸ್ತು ಕಾರ್ಪಾಸಭವೈಃ ಪ್ರಸೂನೈಃ ।
ಸರ್ವಂ ವಿಮರ್ಧ್ಯಾಥ ಕುಮಾರಿಕಾದ್ಭಿಃ ॥
ತತ್ಕಾಚಕುಂಭೇ ನಿಹಿತಂ ಸುಗಾಢೇ ।
ಮೃತ್ಕರ್ಪಟೈ ಸ್ತದ್ದಿವಸತ್ರಯಂ ಚ ॥
ಪಚೇತ್ಕ್ರಮಾಗ್ನೌ ಸಿಕತಾಖ್ಯಯಂತ್ರೇ ।
ತತೋರಸಃ ಪಲ್ಲವರಾಗರಮ್ಯಃ ॥
ಸೌವರ್ಣಮೇತತ್ಸಕಲಾಮಯಘ್ನಮ್ ।
ಸರ್ವೇಷು ಯೋಗೇಷು ಚಯೋಜನೀಯಮ್ ॥
ಸಿಗೃಹ್ಯಚೈತಸ್ಯ ಪಲಂ ಪಲಾನಿ ।
ಚತ್ವಾರಿ ಕರ್ಪೂರ ರಜಸ್ತಥೈವ ॥
ಜಾತೀಫಲಂ ಚೋಷಣ ಮಿಂದ್ರಪುಷ್ಪಮ್ ।
ಕಸ್ತೂರಿಕಾಯಾಮಿಹ ಶಾಣವಿಕಃ ॥
ಚಂದ್ರೋದಯೋಯಂ ಕಥಿತೋಽಸ್ಯಮಾಷೋ ।
ಭುಕ್ತೋಹಿ ವಲ್ಲೀ ದಲ ಮಧ್ಯವರ್ತೀ ॥
ಮದೋದ್ಧತಾನಾಂ ಪ್ರಮದಾಗಣಾನಾಮ್ ।
ಗರ್ವಾಧಿಕತ್ವಂ ಶ್ಲಥಯತ್ಯವಶ್ಯಮ್ ॥
ಶೃತಂ ಘನೀಭೂತ ಮತೀವದುಗ್ಧ ।
ಮಾನಂದದಾಯೀ ಸ್ವಪರಾಣಿಪಥ್ಯಮ್ ॥

" ಉತ್ತಮವಾದ ಕುಂದನ ಸುವರ್ಣದವರ್ಕ್ ೪ ತೊಲೆ, ಶುದ್ಧರಸ ೩೨ ತೊಲೆ, ಶುದ್ಧಗಂಧಕ ೬೪ ತೊಲೆ, ಇವನ್ನು ಕಜ್ಜಲಿಮಾಡಿ ಕೆಂಪು ಹತ್ತಿಯಹೂವಿನ ರಸದಲ್ಲಿ ಅರಿಯಬೇಕು. ಮತ್ತೆ ಲೋಳಿಸರದರಸದಲ್ಲಿ ೪ ಪ್ರಹರ ಅರಿಯಬೇಕು. ಅನಂತರ ಆತಶೀ ಶೀಸೆಯಲ್ಲಿ ತುಂಬಿ ಆ ಶೀಸೆಗೆ ೭ ಕಪಡಮಟ್ಟಿ ವಜ್ರಕವಚಮಾಡಿ ವಾಲುಕಾಯಂತ್ರದಲ್ಲಿಟ್ಟು ಕೆಳಗಡೆ ಉರಿ

ಹಾಕಬೇಕು. ಯಾವಾಗ ಶೀಸೆಯುಮುಖದಿಂದ ಹೊಗೆಯು ಹೊರಗೆಬರಲಾರಂಭಿಸುವದೋ ಆಗ ಇಟ್ಟಿಗೆಯತುಂಡಿನಿಂದ ಶೀಸೆಯ ಮುಖವನ್ನು ಬಂದ್ ಮಾಡಬೇಕು. ಕ್ರಮದಿಂದ ಮಂದಾಗ್ನಿ, ಮಧ್ಯಾಗ್ನಿ, ತೀಕ್ಷ್ಣಾಗ್ನಿಯಿಂದ ೩ ದಿನ ರಾತ್ರಿ ಸಹ ಉರಿಹಾಕಬೇಕು. ಯಾವಾಗ ಶೀಸೆಯ ನಲ್ಲಿಯು ಕಪ್ಪಾಗುವದನ್ನು ನೋಡಿ ಆಗ ಕೆಳಗಿನ ಉರಿಯನ್ನು ತೆಗದುಬಿಡಬೇಕು. ಸಾಂಗಶೀತಲವಾದಾಗ ಸಿದ್ಧ ಚಂದ್ರೋದಯದ ಕೆಂಪುಬಣ್ಣದ ಸಿಂಧೂರವನ್ನು ಶೀಸೆ ಒಡದು ತೆಗಿಯಬೇಕು. ಇದನ್ನು ಸರ್ವರೋಗಗಳಲ್ಲಿಯೂ ಅನುಪಾನಭೇದದಿಂದ ಕೊಡುವದು. ಈ ಚಂದ್ರೋದಯ ೪ ತೊಲಾ, ಪಚ್ಚಕರ್ಪೂರ ೧ ತೊಲಾ, ಜಾಫಲ, ಲವಂಗ, ಮೆಣಸು ೧೬ ತೊಲಾ, ಕಸ್ತೂರಿ ೪ ಮಾಷ, ಇವನ್ನೆಲ್ಲಾ ಅರದು ಶೀಸೆಯಲ್ಲಿ ತುಂಬಿಡಬೇಕು. ಇದರಲ್ಲಿ ಸ್ವಲ್ಪ ಅಂದರೆ ೧ ಮಾಷ ಮಾತ್ರ (೨೪ ಗೋಧಿಕಾಳುತೂಕ) ವಿಳ್ಯಯದೆಲೆಯಲ್ಲಿಟ್ಟು ಸೇವಿಸಿ ಮೇಲೆ ಘಟ್ಟಿಯಾದ ಬಿಶೀಹಾಲು ಕುಡಿದು, ಘೃತ, ಅನ್ನ, ಉದ್ದು, ಆದಿ ಆನಂದದಾಯಕ ಪಥ್ಯಮಾಡಿದರೆ ಅವನೇ ಮನ್ಮಥಸದೃಶನಾಗುವನು. ''

## ಲಘುಚಂದ್ರೋದಯ.

" ಜಾತೀಫಲಂ ಲವಂಗಂ ಚ ಕರ್ಪೂರಂ ಮರಿಚಂ ತಥಾ ॥ ಪ್ರತ್ಯೇಕಂ ತೋಲಕಂ ದತ್ವಾ ಸುವರ್ಣಸ್ಯ ಚ ಮಾಷಕಮ್ ॥ ಅಂಡಜಂ ಮಾಷಮಾನಂ ಚ, ಸರ್ವತುಲ್ಯ ಮಹೇಶ್ವರಮ್ ॥ ಯತ್ನತೋ ಮರ್ದಯೇತ್ಸ್ವಲ್ಪೇ ಚತುರ್ಗುಂಜಾ ವಟೀ ಚರೇತ್ ॥ ವಿಷಚಂದ್ರೋದಯೋ ನಾಮ ರಸೋ ವಾಜೀಕರಃ ಪರಃ ॥ ಹಂತಿ ರೋಗಾನಶೇಷಾಂಶ್ಚ ಬಲವೀರ್ಯಾಗ್ನಿವರ್ಧನಃ ॥ "

'' ಜಾಫಲ, ಲವಂಗ, ಪಚ್ಚಕರ್ಪೂರ, ಮೆಣಸು ಪ್ರತಿಯೊಂದೂ ೧-೧ ತೊಲಾ, ಸುವರ್ಣದವರ್ಕ್ ೧ ಮಾಷತೂಕ, ಕಸ್ತೂರಿ ೧ ಮಾಷ, ಸ್ವಂತ ತಯಾರ್ಮಾಡಿದ ಶುದ್ಧರಸಸಿಂಧೂರ ೪॥ ತೊಲಾ, ಎಲ್ಲವನ್ನೂ ಅರದು ವಿಳ್ಯದೆಲೆಯರಸದಲ್ಲಿ ೨ ರತ್ತೀತೂಕದ ಮಾತ್ರೆಮಾಡಬೇಕು. ಹಾಲಿನ ಮಲಾಯಿ (ಮೇಲಿನ ಕೆನೆ) ಯ ಸಂಗಡ ೧ ಮಾತ್ರೆ ಸೇವಿಸಿ ಮೇಲೆ ಹಾಲುಕುಡಿದರೆ ಈ ಚಂದ್ರೋದಯರಸವು ವಾಜೀಕರಣವಾದದ್ದು. ಸರ್ವರೋಗನಾಶಕವಾದದ್ದು. ಬಲ, ಕಾಂತಿ, ವೀರ್ಯ, ಜಠರಾಗ್ನಿದೀಪನ ಇವನ್ನುಂಟುಮಾಡುತ್ತದೆ. ''

## ಸಿದ್ಧಸೂತರಸವು.

" ಮುಕ್ತಾಫಲಂ ಶುದ್ಧಸೂತಂ ಸುವರ್ಣಂ ರೌಪ್ಯಮೇವ ಚ ॥
ಯವಕ್ಷಾರಂ ಚ ತತ್ಸರ್ವಂ ತೋಲೈಕೈಕಂ ಪ್ರಕಲ್ಪಯೇತ್ ॥

ರಕ್ತೋತ್ಪಲಪತ್ರತೋಯೈಃ ಮರ್ದಯೇತ್ಪತ್ರಲೀ ಕೃತಮ್ ||
ಮರ್ದಯೇಚ್ಚ ಪುನರ್ದತ್ವಾ ಗಂಧಕಂ ತದನಂತರಮ್ || ಕ್ಷಿ
ಪ್ತ್ವಾ ಕಾಚ ಘಟೀ ಮಧ್ಯೇ ಸನ್ನಿರುಧ್ಯ ತ್ರಿಯಾಮಕಮ್ || ಸಿ
ಕತಾಖ್ಯೇ ಪಚೇಚ್ಛೀತೇ ಸಿದ್ಧಂ ಸೂತಂ ತು ಭಕ್ಷಯೇತ್ || ಸಂ
ಚರಕ್ತಿ ಪ್ರಮಾಣೇನ ಮುಸಲೀ ಶರ್ಕರಾನ್ವಿತಮ್ || ಶುಕ್ರವೃ
ದ್ಧಿಂ ಕರೋತ್ಯೇಷ ಧ್ವಜಭಂಗಂ ಚ ನಾಶಯೇತ್ || ದುರ್ಬಲಂ
ವಪುರತ್ಯರ್ಥಂ ಬಲಯುಕ್ತಂ ಕರೋತ್ಯಸೌ || ಮುದ್ಗಗರ್ಭಂ
ಘೃತಂಕ್ಷೀರಂ ಶಾಲಯೋ ಮಾಹಿಷಂ ಹಿತಮ್ || "

"ಕೆಂಪುಕಮಲದಪತ್ರದರಸದಲ್ಲಿ" — "ಕೊರಿಯದಿರತಕ್ಕ ಮುತ್ತು, ಶುದ್ಧ ಪಾರದ, ಸುವರ್ಣಭಸ್ಮ, ರಜತಭಸ್ಮ, ಯವಕ್ಷಾರ ತಲಾ ೧-೧ ತೊಲಾ, ಕೇರಿಸಿ ಕೆಂಪು ಕಮಲದಪತ್ರದರಸದಲ್ಲಿ ಅರಿಯುವದು. ಅದರ ಸಮತೂಕ ಶುದ್ಧಗಂಧಕವನ್ನು ಕೇರಿಸಿ ೩ ಪ್ರಹರದವರಿಗೆ ಅರಿಯಬೇಕು. ಆತರು ಶೀಸೆಯಲ್ಲಿ ತುಂಬಿ ವಾಲುಕಾಯಂತ್ರದ್ವಾರಾ ೩ ಪ್ರಹರ ಉರಿಯನ್ನು ಹಾಕುವದು. ಸಾಂಗಶೀತಲವಾದನಂತರ ಈ ಶುದ್ಧರಸವನ್ನು ತೆಗದುಕೊಂಡು ಶೀಸೆಯಲ್ಲಿಟ್ಟುಕೊಳ್ಳುವದು. ಇದರಲ್ಲಿ ೪ ರತ್ತಿಯಷ್ಟನ್ನು ನೆಲತಾಟಿಗಡ್ಡೆ ಚೂರ್ಣ ಮತ್ತು ಸಕ್ಕರೆಯೊಡನೆ ಸೇವಿಸಿದರೆ ವೀರ್ಯವೃದ್ಧಿಯಾಗುವದು. ಇಂದ್ರಿಯದ ಶಿಥಿಲತಾ ಮತ್ತು ಅನ್ಯವಿಕಾರಗಳೂ ದೂರವಾಗುವವು. ದುರ್ಬಲ ಶರೀರಿಯೂ ಈ ರಸದ ಪ್ರಭಾವದಿಂದ ಬಲಿಷ್ಠನಾಗುತ್ತಾನೆ. ಇದರ ಸೇವನೆಯ ಸಮಯದಲ್ಲಿ—ಹೆಸರು, ತುಪ್ಪ, ಷಷ್ಠಿಕಾಅಕ್ಕಿ, ಎಮ್ಮೆಯಹಾಲು, ಬೆಣ್ಣೆ ಇವು ಹಿತವಾದದ್ದು. ಹುಳಿ, ಕೆಂಪುಮೆಣಸಿನಕಾಯಿ, ಎಣ್ಣೆ ಮುಂತಾದವು ಪಥ್ಯಕಾರಿಗಳಲ್ಲ; ಇವುಗಳನ್ನು ಬಿಟ್ಟುಬಿಡಬೇಕು."

## ವ ಸಂ ತ ಕು ಸು ಮಾ ಕ ರ ರ ಸ ವು.

"ದ್ವಿಭಾಗಂ ಹಾಟಕಂ ಚಂದ್ರಂ, ತ್ರಯೋ ವಂಗಂಹಿ ಕಾಂತಕಾಃ||
ಚತುರ್ಭಾಗಂ ಶುದ್ಧಮಭ್ರಂ ಪ್ರವಾಲಂ ಮೌಕ್ತಿಕಂ ತಥಾ ||
ಭಾವಯೇದ್ಗವ್ಯದುಗ್ಧೇನ ತಥಾ ಚೇಕ್ಷುರಸೇ ನ ಚ || ವಾಸಾಲಾ
ಕ್ಷಾರಸೋ ದೀಚ್ಯರಂಭಾ ಕಂದಪ್ರಸೂನಕೈಃ || ಶತಪತ್ರರಸೇನೈ
ವ ಮಾಲತ್ಯಾ ಕುಂಕುಮೋದಕೈಃ || ಪಶ್ಚಾನ್ಮೃಗಮದೈರ್ಭಾ
ವ್ಯಂ ಸುಗಂಧಿರಸ ಸಂಭವಮ್ || ಸುಕುಮಾಕರ ಆಖ್ಯಾತೋ ವ
ಸಂತಪದಪೂರ್ವಕಃ || ಗುಂಜಾದ್ವಯೇನ ಸಂಸೇವ್ಯಃ ಸಿತಾಮಧ್ವಾ
ಜ್ಯ ಸಂಯುತಃ || ಮೇಹಘ್ನಃ ಕಾಂತಿದಶ್ಚೈವ ಕಾಮದಃ ಪುಷ್ಟಿ
ದಸ್ತಥಾ || ವಲೀಪಲಿತನಾಶಶ್ಚ ಶ್ರುತಿಭ್ರಂಶಂ ವಿನಾಶಯೇತ್ ||

ಪುಷ್ಟಿರ್ದೋsಯಂ ಬಲಾಯುಷ್ಯ ಪುತ್ರಪ್ರಸವಕಾರಕಃ || ತಥಾ
ಸೋಮರುಜಂ ಹಂತಿ ಸಾಧ್ಯಾಸಾಧ್ಯ ಮಥಾಪಿ ವಾ || "

" ಸುವರ್ಣದವರ್ಕ್ ೨ ತೊಲಾ, ವಂಗಭಸ್ಮ, ಶೀಸದಭಸ್ಮ, ಕಾಂತ ಭಸ್ಮ, ಪ್ರತಿಯೊಂದೂ ೨-೨ ತೊಲಾ, ಧಾನ್ಯಾಭ್ರಕಭಸ್ಮ, ಮುತ್ತು, ಹವ ಳದಭಸ್ಮ ಇವು ೪-೪ ತೊಲಾ, ಎಲ್ಲವನ್ನೂ ಕೇರಿಸಿ ಆಕಳಹಾಲು, ಕಬ್ಬಿನ ರಸ, ಆಡಸೋಗೆರಸ, ಅರಗಿನ ಕಷಾಯ, ಬಾಳೆಯಗಡ್ಡೆರಸ, ಬಾಳೇಹುವ್ವಿನ ರಸ, ಕಮಲದರಸ, ಮಾಲತೀಹೂವಿನರಸ, ಕೇಸರಿಯ ಕಷಾಯ ಇವುಗಳಿಂದ ಅರಿಯುವದು ಒಣಗಿಸುವದು ಹೀಗೆ ಭಾವನೆಯನ್ನು ಕೊಡುತ್ತಾ ಅನಂತರ ಕಸ್ತೂರೀ ಮತ್ತು ಬೇರೆ ಸುಗಂಧಿತವಸ್ತುಗಳ ರಸದಿಂದ ಭಾವನೆಯನ್ನು ಕೊಡುವದು. ಹೀಗೆ ತಯಾರಾದ ವಸಂತಕುಸುಮಾಕರರಸದ ೨ ರತ್ತಿಯ ಷ್ಟು ಗೋಲಿಗಳಮಾಡಿ—ಸಕ್ಕರೆ, ಜೇನುತುಪ್ಪ, ತುಪ್ಪಗಳ ಸಂಯೋಜನ ದಿಂದ ಸೇವಿಸಿದರೆ ಎಲ್ಲಾ ವಿಧವಾದ ಪ್ರಮೇಹಗಳೂ ನಾಶವಾಗುವವು. ಕಾಂತಿ ಮತ್ತು ಕಾಮಶಕ್ತಿಯನ್ನು ವೃದ್ಧಿಮಾಡುವದು. ಶರೀರಕ್ಕೆ ಪುಷ್ಟಿಯನ್ನು ಕೊಡುವದು. ವಲೀಪಲಿತತ್ವದ ನಾಶನವನ್ನುಂಟು ಮಾಡುವದು. ಕಿವಿಹುತ ನವನ್ನು ಹೋಗಲಾಡಿಸುವದು. ವೀರ್ಯವೃದ್ಧಿ ಮಾಡುತ್ತದೆ. ಬಲ ಮತ್ತು ಆಯುವಿನವೃದ್ಧಿ ಮಾಡುತ್ತದೆ. ಪುತ್ರರನ್ನು ಕೊಡತಕ್ಕದ್ದು. ಸಾಧ್ಯ, ಅಸಾ ಧ್ಯವಾದ ಸೋಮರೋಗವನ್ನು ಧ್ವಂಸಮಾಡುವದು. "

## ಪೂರ್ಣಚಂದ್ರರಸವು.

" ಮೃತಾಭ್ರಲೋಹೇ ಸಶಿಲಂ ಚತುಸ್ಯಾತ್ |
ವಿಡಂಗ ತಾಪೇ ಮಧುನಾ ಘೃತೇನ ||
ಪಿಷ್ಟ್ವಪ್ರಶಸ್ತಂ ಖಲುಪೂರ್ಣಚಂದ್ರೋ |
ಮಾಷೋsಸ್ಯ ಪುಷ್ಟ್ಯೈ ಭವತಿ ಪ್ರಶಸ್ತಃ || "

" ರಸಸಿಂಧೂರ, ಅಭ್ರಕಭಸ್ಮ, ಶಿಲಾಜತು, ವಾಯುವಿಳಂಗ, ಸುವ ರ್ಣಮಾಕ್ಷಿಕಭಸ್ಮ, ಇವೆಲ್ಲವನ್ನೂ ಸಮಾನಭಾಗ ತೆಗೆದುಕೊಂಡು ಖಲ್ವದಲ್ಲಿ ಮರ್ದಿಸುವದು. ಇದನ್ನು ಜೇನುತುಪ್ಪ, ತುಪ್ಪದ ಅನುಪಾನದಿಂದ ಒಂದು ಮಾಷ ಪ್ರಮಾಣವನ್ನು ಸೇವಿಸುತ್ತಾ ಬರುವದು. ಈ ಪೂರ್ಣಚಂದ್ರರಸವು ಅತ್ಯಂತ ಪುಷ್ಟಿಕಾರಕವಾದದ್ದು. "

## ಕಾಮದೇವರಸ.

" ತಾಪಂ ವಜ್ರಂ ಸುವರ್ಣಂ ಚ ತಾಮ್ರಂ ಸೂತಕಗಂಧಕಮ್ ||
ಲೋಹಂಕ್ರಮವಿವೃದ್ಧಾನಿ ಕುರ್ಯಾದೇತಾನಿ ಮಾತ್ರಯಾ || ವಿಮ

ರ್ದ್ಧ ಕನ್ಯಕಾದ್ರಾವೈ ರ್ನ್ಯಸೇತ್ಕಾಚಮಯೀಘಟೀ ‖ ವಿಮುದ್ರ್ಯ ಪಿಠರೀ ಮಧ್ಯೇ ಧಾರಯೇತ್ಸೈಂಧವೈರ್ಭೃತೆ ‖ ವಹ್ನಿಂ ಶನೈಶ್ಶನೈಃ ಕುರ್ಯಾದ್ದಿನೈಕಂ ತು ತದುದ್ಧರೇತ್ ‖ ಸ್ವಾಂಗಶೀತಂ ಚ ಸಂಚೂರ್ಣ್ಯ ಭಾವಯೇದರ್ಕದುಗ್ಧಕೈಃ ‖ ಅಶ್ವಗಂಧಾ ಚ ಕಾಕೋಲೀ ವಾನರೀ ಮುಸಲೀ ಕ್ಷುರಾ ‖ ತ್ರಿವಾರಂ ಚ ರಸೈರ್ಭಾವ್ಯಂ ಶತಾವರ್ಯಾಶ್ಚ ಭಾವಯೇತ್ ‖ ಕಸ್ತೂರೀ ವ್ಯೋಷ ಕರ್ಪೂರಂ ಕಂಕೋಲೈಲಾ ಲವಂಗಕಮ್ ‖ ಪೂರ್ವ ಚೂರ್ಣಾದಷ್ಟಮಾಂಶಮೇತಚ್ಚೂರ್ಣಂ ವಿಮಿಶ್ರಯೇತ್ ‖ ಸರ್ವೈಸ್ಸಮಾಂ ಶರ್ಕರಾಂ ಚ ದತ್ವಾ ಶಾಣೋನ್ಮಿತಂ ಪಿಬೇತ್‖ ಗೋದುಗ್ಧ ದ್ವಿಪಲೇನೈವ ಮಧುರಾಹಾರಸೇವಕಃ ‖ ಅಸ್ಯ ಪ್ರಭಾವಾತ್ಸೌಂದರ್ಯಂ ಬಲಂ ತೇಜೋ ವಿವರ್ಧತೇ ‖ ತರುಣೀ ರಮಯೇ ದ್ದ್ವಾದಶ ದ್ಯೋ ನ ಚ ಹಾನಿಃ ಪ್ರಜಾಯತೇ ‖ "

" ರೌಪ್ಯಭಸ್ಮ, ಮಾಕ್ಷಿಕಭಸ್ಮ, ಸುವರ್ಣಭಸ್ಮ, ತಾಮ್ರಭಸ್ಮ, ಶುದ್ಧ ಪಾದರಸ, ಶುದ್ಧಗಂಧಕ, ಲೋಹಭಸ್ಮ, ಇವು ಕ್ರಮವಾಗಿ ಒಂದಕ್ಕೆರಡರಂತೆ ಅಂದರೆ ರೌಪ್ಯರಸ ೧ ತೊಲೆ, ಮಾಕ್ಷಿಕಭಸ್ಮ ೨ ತೊಲೆ, ಸುವರ್ಣಭಸ್ಮ ೪ ತೊಲೆ, ತಾಮ್ರಭಸ್ಮ ೮ ತೊಲೆ, ಶುದ್ಧ ಪಾದರಸ ೧೬ ತೊಲೆ, ಶುದ್ಧ ಗಂಧಕ ೩೨ ತೊಲೆ, ಲೋಹಭಸ್ಮ ೬೪ ತೊಲೆ, ಈರೀತಿ ಕೂಡಿಸಿ, ಎಲ್ಲವನ್ನೂ ಕಜ್ಜಲಿಮಾಡಿ, ಲೋಳಸರದರಸದಲ್ಲಿ ಖಲ್ವದಲ್ಲಿ ಅರಿಯುವದು. ಆತಸೀ ಶೀಸೆಯಲ್ಲಿ ತುಂಬಿ ವಜ್ರಬಂಧನಮಾಡಿ ಒಂದು ಘಡದಲ್ಲಿ ಸೈಂಧವಲವಣ ತುಂಬಿ ಮಧ್ಯದಲ್ಲಿಡುವದು. ಹಗಲು ರಾತ್ರಿ ಮಂದಮಂದ ಅಗ್ನಿಯಲ್ಲಿ ಪಕ್ವಮಾಡಿ ಸ್ವಾಂಗಶೀತಲವಾದ ಮೇಲೆ ತೆಗಿಯುವದು. (ಈ ವಿಧವಾದ ಪುಟವಿಡುವದು. ಗುರುವಿಲ್ಲದೆ ಸ್ವತಂತ್ರವಾಗಿ ಮಾಡುವದರಿಂದ ಮಹಾಜ್ವಾಲಾರೂಪಗಳಾದ ಪದಾರ್ಥಗಳು ಮನುಷ್ಯನನ್ನೇ ತೆಗದುಬಿಡುತ್ತವೆ. ತಿಳುವಳಿಕೆ ಇಲ್ಲದೆ ಇಂತಹ ಪ್ರಯೋಗಗಳನ್ನು ಪುಸ್ತಕದ ಬರವಣಿಗೆಯನ್ನು ನಂಬಿ ಮಾಡಬಾರದು !!!) ಅದನ್ನು ಪುನಃ ಖಲ್ವದಲ್ಲಿ ಹಾಕಿ, ಅರ್ಕಕ್ಷೀರದ ಒಂದು ಭಾವನೆಯನ್ನು ಕೊಡುವದು. ಆ ಮುಂದೆ ಅಶ್ವಗಂಧಿ, ಕಾಕೋಲೀ, ನಸುಗುನ್ನಿ, ನೆಲತಾಟಿಗಡ್ಡೆ, ಕೊಳವಳಿಕೆ ಇವುಗಳ ೩-೩ ಭಾವನೆ ಕೊಡಬೇಕು. ಶತಾವರಿಯರಸದ ಮೂರು ಭಾವನೆ ಕೊಡಬೇಕು. ಅನಂತರ ಕಸ್ತೂರಿ, ತ್ರಿಕಟುಕ, ಪಚ್ಚಕರ್ಪೂರ, ಕಂಕೋಲ, ಯಾಲಕ್ಕಿ, ಲವಂಗ ಇವುಗಳ ಚೂರ್ಣವನ್ನು ಈ ರಸದ ಅಷ್ಟಮಾಂಶ ಕೂಡಿಸಬೇಕು. ಸಕ್ಕರೆಯು ಎಲ್ಲದರ ಸಮವಾಗಿ ಹಾಕಬೇಕು. ಇದರಲ್ಲಿ ೪-೪ ಮಾಷೆ ಔಷಧಿಯನ್ನು ಭಕ್ಷಿಸುತ್ತಾ

ಅರ್ಧಪಾವು ಆಕಳಹಾಲನ್ನು ಕುಡಿಯುವದು. ಈ ಔಷಧಿಯನ್ನು ಸೇವಿಸುವ ಕಾಲದಲ್ಲಿ ಪುಷ್ಟಿಯಾದ, ಸ್ನಿಗ್ಧವಾದ ಪದಾರ್ಥಗಳನ್ನು ಸೇವಿಸಬೇಕು. ಹುಳಿ, ಕೆಂಪುಮೆಣಸಿನಕಾಯಿ, ವಾಯುಕಾರಕ ಪದಾರ್ಥಗಳು ಕುಪಥ್ಯಗಳು. ಈ ರಸದ ಪ್ರಭಾವದಿಂದ ಸುಂದರತ್ವವೂ, ಬಲವೂ, ತೇಜಸ್ಸೂ, ವೀರ್ಯವೂ ವೃದ್ಧಿಯಾಗುವವು. ವೃದ್ಧನೂ ಸ್ತ್ರೀರಮಣ ಮಾಡುವದರಲ್ಲಿ ಸ್ವಲ್ಪವೂ ಜಗ್ಗುವದಿಲ್ಲ."

## ಬೃಹತ್ಪೂರ್ಣಚಂದ್ರರಸ.

"ದ್ವಿಕರ್ಷಂ ಶುದ್ಧಸೂತಸ್ಯ ಗಂಧಕಂ ಚ ದ್ವಿಕಾರ್ಷಿಕಮ್ ॥ ಲೋಹಭಸ್ಮ ಪರಂ ಚಾಭ್ರಂ ಜಾರಿತಂ ಚ ಪಲಾಂಶಕಮ್ ॥ ದ್ವಿತೋಲಂ ರಜತಂ ಚೈವ ವಂಗಭಸ್ಮದ್ವಿಕಾರ್ಷಿಕಮ್ ॥ ಸುವರ್ಣಂ ತೋಲಕಂ ಚೈವ ತಾಮ್ರಂ ಕಾಂಸ್ಯಂ ಚ ತತ್ಸಮಮ್ ॥ ಜಾತೀಫಲಂ ಚೇಂದ್ರಪುಷ್ಪ ಮೇಲಾಭೃಂಗಂ ಚ ಜೀರಕಮ್ ॥ ಕರ್ಪೂರಂ ವನಿತಾ ಮುಸ್ತಂ ಕರ್ಷಂ ಕರ್ಷಂ ಪೃಥಕ್ ಪೃಥಕ್ ॥ ಸರ್ವಂ ಖಲ್ವತಲೇ ಕ್ಷಿಪ್ತ್ವಾ ಕನ್ಯಾರಸ ವಿಮರ್ದಿತಮ್ ॥ ಭಾವಯಿತ್ವಾ ವರಾ ತೋಯೈಃ ಕೇಂಬುಕಾನಾಂ ರಸೇನ ಚ ॥ ಏರಂಡಪತ್ರೈರಾವೇಷ್ಟ್ಯ ಧಾನ್ಯೇ ರಾತ್ರಿ ದಿನೋಷಿತಮ್ ॥ ಉದ್ಧೃತ್ಯ ಮರ್ದಯಿತ್ವಾ ಚ ವಟಿಕಾಂ ಚಣಸಮ್ಮಿತಾಮ್ ॥ ಖಾದೇಚ್ಚ ಪರ್ಣಖಂಡೇನ ಸಂಯುಕ್ತಾಂ ವ್ಯಾಧಿ ನಾಶಿನೀಮ್ ॥ ಸರ್ವವ್ಯಾಧಿವಿನಾಶಾಯ ಕಾಶೀನಾಥೇನ ಭಾಷಿತಃ ॥ ಪೂರ್ಣಚಂದ್ರರಸೋನಾಮ ಸರ್ವರೋಗೇಷು ಯೋಜಯೇತ್ ॥ ಬಲ್ಯೋ ರಸಾಯನೋ ವೃಷ್ಯೋ ವಾಜೀಕರಣ ಉತ್ತಮಃ ॥ ಅಯಮಷ್ಠೀಲಕಾಂ ಹಂತಿ ಕಾಸಶ್ವಾಸಮರೋಚಕಮ್ ॥ ಆಮಶೂಲಂ ಕಟೀಶೂಲಂ ಹೃಚ್ಛೂಲಂ ಪಿತ್ತಶೂಲಕಮ್ ॥ ಅಗ್ನಿಮಾಂದ್ಯ ಮಜೀರ್ಣಂ ಚ ಗೃಹಿಣೀಂ ಚಿರಜಾಮಪಿ ॥ ಅಮ್ಲವಾತಾಮ್ಲಪಿತ್ತಂ ಚ ಭಗಂದರ ಮಪಿದ್ರುತಮ್ ॥ ಕಾಮಲಾಂ ಪಾಂಡುರೋಗಂಚ ಪ್ರಮೇಹಂ ವಾತಶೋಣಿತಮ್ ॥ ನಾತಃಪರತರಃ ಶ್ರೇಷ್ಠೋ ವಿದ್ಯತೇ ವಾಜಿಕರ್ಮಣಿ ॥ ರಸಸ್ಯಾಸ್ಯ ಪ್ರಸಾದೇನ ನರೋ ಭವತಿ ನಿರ್ಗದಃ ॥ ಮೇಧಾಂ ಚ ಲಭತೇ ವಾಗ್ಮೀ ಸರ್ವಶಾಸ್ತ್ರ ಸಮನ್ವಿತಃ ॥ ಮದನಸ್ಯ ಸಮಾಕಾಂತಿ ರ್ಮದನಸ್ಯ ಸಮಂಬಲಮ್ ॥ ಗೀಯತೇ ಮದನೇನೈವ ಮದನಸ್ಯ ಸಮಂ ವಪುಃ ॥ ಸ್ತ್ರೀಣಾಂ ತಥಾನಪತ್ಯಾನಾಂ ದುರ್ಬಲಾನಾಂ ಚ ದೇಹಿನಾಮ್ ॥ ಕ್ಷೀಣಾ

ನಾಮಲ್ಪಶುಕ್ರಾಣಾಂ, ವೃದ್ಧಾನಾಂ ನಾತರೇತಸಾಮ್ || ಓಜ
ಸ್ತೇಜಃ ಕರಶ್ಚಾಯಂ ಸ್ತ್ರೀಷು ಕಾಮ ವಿವರ್ಧನಮ್ || "
ಅಭ್ಯಾಸೇನ ನಿಹಂತಿ ಮೃತ್ಯು ಪಲಿತಂ ಸರ್ವಾಮಯಧ್ವಂಸನೋ |
ವೃದ್ಧಾನಾಂ ಮದನೋದಯೋದಯಕರಃ ಪ್ರೌಢಾಂಗನಾಸಂಗಮೇ ||
ನಿತ್ಯಾನಂದಕರಃ ಸುಖಾತಿಸುಖದೋ ಭೂಪೈಸ್ಸದಾಸೇವ್ಯತೇ |
ದೃಷ್ಟಃ ಸಿದ್ಧಫಲೋ ರಸಾಯನವರಃ ಶ್ರೀಪೂರ್ಣಚಂದ್ರೋರಸಃ || "

"ಶುದ್ಧಪಾರದ ೨ ತೊಲಾ, ಶುದ್ಧಗಂಧಕ ೨ ತೊಲಾ, ಲೋಹಭಸ್ಮ ೪ ತೊಲಾ, ರೌಪ್ಯಭಸ್ಮ ೨ ತೊಲಾ, ಸುವರ್ಣಭಸ್ಮ ೧ ತೊಲಾ, ತಾಮ್ರಭಸ್ಮ ೧ ತೊಲಾ, ಕಾಂಸ್ಯಭಸ್ಮ ೧ ತೊಲಾ; ಜಾಫಲ, ಲವಂಗ, ಯಾಲಕ್ಕಿ ಭಾಂಗ್, ಜೀರಿಗೆ, ಪಚ್ಚಕರ್ಪೂರ, ಪ್ರಿಯಂಗುಪುಷ್ಪ, ತುಂಗಮುಸ್ತೆ ೧-೧ ತೊಲೆ, ಇವೆಲ್ಲವನ್ನೂ ಖಲ್ವದಲ್ಲಿ ಹಾಕಿ ಲೋಳಿಸರದಪಟ್ಟೆರಸದಲ್ಲಿ ಮರ್ದನ ಮಾಡಿ, ಅನಂತರ ತ್ರಿಫಲಾ ಕಷಾಯದಲ್ಲಿ ಅರಿದು ಒಣಗಿಸುವದು. ಅನಂತರ ಅಡಕೆಯ ಕಷಾಯದ ಭಾವನೆಯನ್ನು ಕೊಟ್ಟು ಉಂಡೆಮಾಡುವದು. ಈ ಉಂಡೆಯನ್ನು ಹರಳಿನ ಎಲೆಯಲ್ಲಿ ಸುತ್ತಿ ೩ ದಿನ ರಾತ್ರಿ ಧಾನ್ಯದರಾಶಿಯು ಹೂಳಿಡುವದು. ನಾಲ್ಕನೇದಿನ ತೆಗೆದು, ನೀರಿನಲ್ಲಿ ಕಡಲೆಯಪ್ರಮಾಣದ ಗುಳಿಗೆಗಳನ್ನು ಮಾಡುವದು. ಇದರಲ್ಲಿ ಒಂದನ್ನು ವಿಳ್ಳೇದೆಲೆಯ ಅನುಪಾನದಲ್ಲಿ ಸೇವಿಸಿದರೆ ಸರ್ವವ್ಯಾಧಿಗಳೂ ನಾಶವಾಗುವವು. ಇದನ್ನು ಕಾಶೀನಾಥನು ನಿರ್ಮಿಸಿದನು. ಇದು ಬಲಕಾರಿ, ರಸಾಯನ, ವೃಷ್ಯ, ಉತ್ತಮ ವಾಜೀಕರಣ ಕಾರಕವು. ಇದರಿಂದ ಅಷ್ಟೀಲಿಕಾ, ಕಾಸಶ್ವಾಸ, ಅರುಚಿ, ಆಮಶೂಲೆ, ಕಟಿಶೂಲೆ, ಹೃಚ್ಛೂಲೆ, ಪಿತ್ತಶೂಲೆ, ಮಂದಾಗ್ನಿ, ಅಜೀರ್ಣ, ಹಳೇಸಂಗ್ರಹಣೀ, ಆಮವಾತ, ಆಮ್ಲಪಿತ್ತ, ಭಗಂದರ, ಕಾಮಲಾ, ಪಾಂಡು, ಪ್ರಮೇಹ, ವಾತರಕ್ತ ಈ ರೋಗಗಳೆಲ್ಲವೂ ನಾಶನವಹುದು. ಈ ಔಷಧಕ್ಕೆ ಹೆಚ್ಚಾದ ವಾಜೀಕರಣಕರ್ತಾ ಔಷಧವೇ ಇಲ್ಲ; ಇದರ ಪ್ರಭಾವದಿಂದ ಮನುಷ್ಯನು ರೋಗರಹಿತನಾಗುತ್ತಾನೆ. ಎಲ್ಲಾ ಶಾಸ್ತ್ರಗಳನ್ನೂ ತಿಳಿಯುವಷ್ಟು ಬುದ್ಧಿ ತೀವ್ರವಾಗುತ್ತದೆ. ಕಾಮನಂತಹ ಕಾಂತಿ, ಬಲ, ರೂಪು, ದೇಹ ಉಂಟಾಗುತ್ತದೆ. ವಂಧ್ಯಾಸ್ತ್ರೀಯರಿಗೂ, ದುರ್ಬಲರಿಗೂ, ಕ್ಷೀಣರಿಗೂ, ಅಲ್ಪಶುಕ್ರವುಳ್ಳವರಿಗೂ, ವೃದ್ಧರಿಗೂ, ವಾತರೇತಸರಿಗೂ ಈ ಔಷಧವು ಓಜಸ್ಸನ್ನೂ, ತೇಜಸ್ಸನ್ನೂ ಕೊಟ್ಟು ಸ್ತ್ರೀಯರಲ್ಲಿ ಕಾಮವೃದ್ಧಿಯನ್ನುಂಟು ಮಾಡುವದು. ಅಭ್ಯಾಸದಿಂದ ಸೇವಿಸುವವರ ಅಕಾಲಮೃತ್ಯುವನ್ನೂ, ವಾರ್ಧಕ್ಯವನ್ನೂ ತಡಿಯುತ್ತದೆ. ಎಲ್ಲಾ ರೋಗಗಳನ್ನೂ ನಾಶಮಾಡುತ್ತದೆ. ವೃದ್ಧರಿಗೂ ಸ್ತ್ರೀಸಂಗದಲ್ಲಿ ಕಾಮೋತ್ತೇಜನವನ್ನುಂಟು ಮಾಡುತ್ತದೆ. ನಿತ್ಯವೂ ಆನಂದಕಾ

ರಿಯೂ ಅತ್ಯಂತ ಸುಖವನ್ನುಂಟುಮಾಡುವದೂ, ಅನುಭೂತವಾದದ್ದೂ ಆ ಗಿದೆ. ರಾಜರುಗಳಿಗೆ ಸೇವಿಸಲು ಯೋಗ್ಯವಾದದ್ದು. ರಸಾಯನಗಳೆಲ್ಲ ಶ್ರೇಷ್ಠವಾದದ್ದು.''

## ಮ ಕ ರ ಧ್ವ ಜ ರ ಸ .

"ಸ್ವರ್ಣದ್ವಿಭಾಗಂ ವಂಗಂ ಚ ಮೌಕ್ತಿಕಂ ಕಾಂತಲೋಹಕಮ್‌॥ ಜಾತೀಕೋಶಫಲೇ ರೂಪ್ಯಂ ಕಾಂಸ್ಯಕಂ ರಸಸಿಂಧುರಮ್‌ ॥ ಪ್ರವಾಲ ಚಂದ್ರಂ ಕಸ್ತೂರೀ ಅಭ್ರಕಂ ಚೈಕಭಾಗಿಕಮ್‌ ॥ ಸ್ವರ್ಣಸಿಂಧೂರತೋ ಭಾಗಾಶ್ಚತ್ವಾರಃ ಕಲ್ಪಯೇದ್ಭಿಷಕ್‌ ॥ ನಾತಃ ಪರತರಂ ಶ್ರೇಷ್ಠಃ ಸರ್ವರೋಗನಿಷೂದನಃ ॥ ವೀರ್ಯವೃದ್ಧಿ ಕರಶ್ಚೈವ ವಾಜೀಕರಣ ಉತ್ತಮಃ ॥"

"ಸ್ವರ್ಣಭಸ್ಮ ೨ ತೊಲಾ, ವಂಗಭಸ್ಮ, ಮೌಕ್ತಿಕಭಸ್ಮ, ಕಾಂತಭಸ್ಮ, ಜಾಫಲ, ಜಾವಿತ್ರೀ, ರೌಪ್ಯಭಸ್ಮ, ಕಾಂಸ್ಯಭಸ್ಮ, ರಸಸಿಂಧೂರ, ೧-೧ ತೊಲಾ, ಸ್ವರ್ಣಸಿಂಧೂರ ೪ ತೊಲೆ, ಎಲ್ಲವನ್ನೂ ವಿಳ್ಯದೆಲೆಯರಸದಿಂದ ಮರ್ದಿಸಿ ಸೇವನೆಮಾಡಿದರೆ ಸರ್ವರೋಗ ನಾಶನವಹುದು. ವೀರ್ಯವೃದ್ಧಿ, ವಾಜೀಕರಣವು.''

## ಶ್ರೀ ಮ ನ್ಮ ಥ ರ ಸ .

"ರಸಗಂಧಕಯೋರ್ಗ್ರಾಹ್ಯಂ ಕರ್ಷಮೇಕಂ ತು ಶೋಧಿತಮ್‌ ॥ ಅಭ್ರಂ ನಿಶ್ಚಂದ್ರಕಮ್‌ ದದ್ಯಾತ್ಪಲಾರ್ಧಂ ತು ವಿಚಕ್ಷಣಃ ॥ ಕರ್ಪೂರಂ ಶೋಧಿತಂ ದದ್ಯಾದ್ವಂಗಂ ಚ ಕೋಲಸಮ್ಮಿತಮ್‌॥ ತಾಮ್ರಂ ಕೋಲಾರ್ಧಕಂ ತತ್ರ ನಿಃಶೇಷಂ ಮರಿಚಂ ಕ್ಷಿಪೇತ್‌॥ಲೋಹಂ ಕರ್ಷಂ ಸುಜೀರ್ಣಂ ಚ ವೃದ್ಧದಾರುಕಬೀಜಕಮ್‌॥ ವಿದಾರೀ ಶತಮೂಲೀ ಚ ಕ್ಷುರಬೀಜಂ ಬಲಾ ತಥಾ ॥ ಮರ್ಕಟ್ಯ ತಿಬಲಾಚೈವ ಜಾತೀಕೋಷ ಫಲೇತಥಾ ॥ ಲವಂಗಂವಿಜಯಾಬೀಜಂ ಶ್ವೇತಸರ್ಜ ಯಮಾನಿಕಾ ॥ ಏತೇಷಾಂ ಚೂರ್ಣಮಾದಾಯ ಪ್ರಕ್ಷಿಪೇಚ್ಛಾಣಸಮ್ಮಿತಮ್‌ ॥ ಗುಂಜಾದ್ವಯಂ ಚ ಭೋಕ್ತವ್ಯಂ ಕೋಷ್ಣಂ ಕ್ಷೀರಂ ಪಿಬೇದನು ॥ ಪ್ರಮದಾಯುಸ್ಯ ವಿದ್ಯಂತೇ ಗೃಹೇಚ ವ್ಯವಸಾಯಿನಃ ॥ ನ ತಸ್ಯ ಶಿಶ್ನಶೈಥಿಲ್ಯಮೌಷಧಸ್ಯಾಸ್ಯ ಸೇವನಾತ್‌ ॥ ನ ಚ ಶುಕ್ರಕ್ಷಯಂ ಯಾತಿ ನಬಲಂ ಹ್ರಾಸತಾಂ ವ್ರಜೇತ್‌ ॥ ಕಾಮರೂಪೀ ಭವೇದ್ವಿಪ್ರೋ ವೃದ್ಧಃ ಷೋಡಶ ವಾರ್ಷಿಕಃ ॥ ರಸಾಯನವರೋ ಬಲ್ಯೋ ವಾಜೀಕರಣ ಉತ್ತಮಃ॥ ರಸಶ್ರೀಮನ್ಮಥೋನಾಮ ರಸೇಷುಹ್ಯುತ್ತಮಃ ಸ್ಮೃತಃ ॥"

“ಶುದ್ಧ ಪಾರದ ೧ ತೊಲಾ, ಶುದ್ಧ ಗಂಧಕ ೧ ತೊಲಾ, ಉತ್ತಮ ಅಭ್ರಕಭಸ್ಮ ೨ ತೊಲಾ, ಪಚ್ಚ ಕರ್ಪೂರ, ವಂಗಭಸ್ಮ ಇವೆರಡೂ ೮ ಮಾಶೆತೂಕ, ತಾಮ್ರಭಸ್ಮ ೪ ಮಾಶೆ, ಲೋಹಭಸ್ಮ ೧ ತೊಲಾ, ನೆಲಗುಂಬಳ, ಶತಾವರಿ, ಕೊಳವಳಿಕೆಬೀಜ, ಚಿಟ್ಟಾಮುಟ್ಟ, ನಸುಗುನ್ನಿಬೀಜ, ಪೇರಾಮುಟ್ಟಿ (ಬಟ್ಟಗಡಲೆ), ಜಾಫಲ, ಜಾವಿತ್ರಿ, ಲವಂಗ, ಭಂಗಿಯಬೀಜ, ಬಿಳೇರಾಳ ಅಜವಾನ ಪ್ರತ್ಯೇಕ ೪-೪ ಮಾಸೆತೂಕ—ಮೊದಲು ರಸ ಮತ್ತು ಗಂಧಕಗಳನ್ನು ಕಜ್ಜಲಿಮಾಡಿಕೊಂಡು ಆಮೇಲೆ ಎಲ್ಲವುಗಳನ್ನೂ ಕೇರಿಸಿ ವಿಳ್ಳೆಯದೆಲೆಯರಸದಲ್ಲಿ ಅರೆಕೊಂಡು ೨ ರತ್ತಿ ಮಾತ್ರೆಗಳನ್ನುಮಾಡಿ ಒಂದನ್ನು ತಿಂದು ಬಿಸಿಹಾಲನ್ನು ಕುಡಿಯುವದು. ಇದರ ಪ್ರಭಾವದಿಂದ—ಯಾವನ ಮನೇಲಿ ಬಹುಜನ ಹೆಂಡರಿರುವರೋ ಅಂತವನಿಗೆ ಇಂದ್ರಿಯ ಶಿಥಿಲವಾಗುವದಿಲ್ಲ. ವೀರ್ಯ ಕ್ಷೀಣವಾಗುವದಿಲ್ಲ. ಬಲದಹಾನಿಯೂ ಆಗುವದಿಲ್ಲ. ವೃದ್ಧನೂ ೧೬ ವರ್ಷದ ಯುವಕನಂತೆ ರತಿಯಲ್ಲಿ ಉತ್ಸಾಹಿಯೂ, ರೂಪವಂತನೂ ಆಗುತ್ತಾನೆ. ಇದು ಬಲಕಾರೀ, ರಸಾಯನ, ವೃಷ್ಯವು.”

## ಬೃಹಚ್ಛೃಂಗಾರಾಭ್ರಕರಸ.

“ಪಾರದಂ ಗಂಧಕಂ ಚೈವ ಟಂಕಣಂ ನಾಗಕೇಸರಮ್ ॥ ಕರ್ಪೂರಂ ಜಾತಿಕೋಶಂ ಚ ಲವಂಗಂ ತೇಜಪತ್ರಕಮ್ ॥ ಏತೇಷಾಂ ಕರ್ಷಭಾಗಾಣಿ, ಸುವರ್ಣಂ ತತ್ಸಮಂ ಭವೇತ್॥ ಶುದ್ಧ ಕೃಷ್ಣಾಭ್ರಭಸ್ಮಾಪಿ ಚತುಷ್ಕಂ ಪಿಚುಭಾಗಿಕಮ್ ॥ ತಾಲೀಶಂ ಘನಕುಷ್ಟಂ ಚ ಮಾಂಸೀ ಪುಷ್ಪ ವರಾಗಕಮ್॥ ಏಲಾಬೀಜಂ ತ್ರಿಕಟುಕಂ ತ್ರಿಫಲಾ ಗಜಪಿಪ್ಪಲೀ ಏಷಾಂ ಕರ್ಷದ್ವಯಂ ಚೈವ ಪಿಪ್ಪಲೀರಸಭಾವಿತಮ್ ॥ ಅನುಪಾನಂ ಪ್ರಯೋಕ್ತವ್ಯಂ ಚೋಚಂ ಕ್ಷೌದ್ರಸಮಾಯುತಮ್ ॥ ನಾನಾರೋಗಪ್ರಶಮನಂ ವಿಶೇಷಾತ್ಕಾಸ ರೋಗಜಿತ್ ॥ ವಾತಿಕಂ ಪೈತ್ತಿಕಂ ಚೈವ ಶ್ಲೈಷ್ಮಿಕಂ ಸನ್ನಿಪಾತಿಕಮ್ ॥ ಹೃಚ್ಛೂಲಂ ಪಾರ್ಶ್ವಶೂಲಂ ಚ ಶಿರಃ ಶೂಲಂ ವಿಶೇಷತಃ ॥ ಸ್ವರಾಮಯಂ ತಥಾ ಕುಷ್ಟಂ ಶ್ಲೇಷ್ಮಾಣಂ ವಾತಶೋಣಿತಮ್ ॥ ರಕ್ತಪಿತ್ತಂ ಚ ಕಾಸಂ ಚ ನಾಶಯೇನ್ನಾತ್ರ ಸಂಶಯಃ ॥ ಮುಸಲೀ ಘೃತಕ್ಷೌದ್ರೈಶ್ಚ ವಾಜೀಕರಣಮುತ್ತಮಮ್ ॥”

“ಶುದ್ಧ ಪಾರದ, ಶುದ್ಧ ಗಂಧಕ, ಬೆಳಿಗಾರ, ನಾಗಕೇಸರ, ಪಚ್ಚಕರ್ಪೂರ, ಜಾಫಲ, ಲವಂಗ, ಲವಂಗಪತ್ರೆ, ಇವು ೧-೧ ತೊಲಾ, ಸುವರ್ಣದ ವರ್ಕ್ ೧ ತೊಲಾ, ಶುದ್ಧ ಅಭ್ರಕಭಸ್ಮ ೪ ತೊಲಾ, ತಾಲೀಸಪತ್ರೆ, ತುಂಗ

ಮುಸ್ತೆ, ಕೋಷ್ಟ, ಜಟಾಮಾಂಸಿ, ಜಾಪತ್ರೆ, ದಾಲ್ಚಿನ್ನಿ, ಯಾಲಕ್ಕಿ, ತ್ರ್ಯೂಷಣ, ತ್ರಿಫಲೆ, ಗಜಹಿಪ್ಪಲಿ, ಇವು ೨-೨ ತೊಲಾ, ಇವೆಲ್ಲವನ್ನೂ ಚೂರ್ಣಿಸಿ ಹಿಪ್ಪಲಿಯ ಕಷಾಯದಲ್ಲಿ ಭಾವನೆಮಾಡಿದರೆ ಈ ರಸ ಸಿದ್ಧವಾಗುತ್ತದೆ. ದನ್ನು ದಾಲಚಿನ್ನಿ ಜೇನುತುಪ್ಪದ ಅನುಪಾನದಲ್ಲಿ ಸೇವಿಸಿದರೆ ಅನೇಕ ರೋಗಳು ನಷ್ಟವಾಗುವವು. ವಿಶೇಷವಾಗಿ ಕಾಸರೋಗಗಳು ನಾಶವಾಗುವವು. ವಾತಪಿತ್ತ, ಶ್ಲೇಷ್ಮ, ಸನ್ನಿಪಾತ ರೋಗಗಳು ನಷ್ಟವಾಗುವವು. ಹೃದಯಶೂಲೆ, ಪಾರ್ಶ್ವಶೂಲೆ, ಮಸ್ತಕಶೂಲೆ, ಸ್ವರಭಂಗ, ಕುಷ್ಠ, ಕಫರೋಗ, ವಾತರಕ್ತ, ರಕ್ತಪಿತ್ತ ಇವು ನಾಶವಾಗುವವು. ನೆಲತಾಟಿಗಡ್ಡೆ, ತುಪ್ಪ, ಜೇನುತುಪ್ಪ ಇದರ ಅನುಪಾನದಿಂದ ಸೇವಿಸುತ್ತಾ ಬಂದರೆ ಅತಿವೀರ್ಯಪ್ರದವಾಗಿ ವಾಜೀಕರಣವನ್ನುಂಟುಮಾಡುವದು."

## ಪುಷ್ಪಧನ್ವಾರಸ.

"ಹರಜ ಭುಜಗಲೋಹಾನ್ಯಭ್ರಕಂ ಚ ತ್ರಿಭಾಗವ್ |
ಕನಕವಿಜಯಯುಕ್ತೈಃ ಶಾಲ್ಮಲೀ ನಾಗವಲ್ಯಾಃ ||
ಸಿತಮಧು ಘೃತದುಗ್ಧೈಃ ಸೇವಿತೋ ವೀರ್ಯವೃದ್ಧೈ |
ರಮಯತಿ ಬಹುಕಾಂತಾಃ ಪುಷ್ಪಧನ್ವಾ ರಸಃಸ್ಯಾತ್ ||"

"ಶುದ್ಧಪಾರದ ೧ ಭಾಗ, ಶೀಸದಭಸ್ಮ ೧ ಭಾಗ, ಲೋಹಭಸ್ಮ ೧ ಭಾಗ, ಅಭ್ರಕಭಸ್ಮ ೩ ಭಾಗ, ಇವೆಲ್ಲಾ ಖಲ್ವದಲ್ಲಿ ಹಾಕಿ, ಉಮ್ಮತ್ತಿರಸದಲ್ಲಿ ಅರದು ಒಣಗಿಸುವದು, ಭಂಗಿಸೊಪ್ಪಿನ ಕಷಾಯದಲ್ಲಿ ೧ ಭಾವನಾ, ಜೇಷ್ಟಮಧು ಕಷಾಯದಲ್ಲಿ ೧ ಭಾವನಾ, ಬೂರಗದಚಕ್ಕೇರಸದಲ್ಲಿ ೧ ಭಾವನಾ, ನಾಗವಲ್ಲೀರಸದಲ್ಲಿ ೧ ಭಾವನಾ ಹೀಗೆ ತಯಾರ್ಮಾಡಿದ "ಪುಷ್ಪಧನ್ವಾ ರಸ"ವು ಸಕ್ಕರೆ, ಜೇನುತುಪ್ಪ, ತುಪ್ಪ ಇವುಗಳೊಡನೆ ಸೇವಿಸುತ್ತಾ ಮೇಲೆ ಹಾಲು ಕುಡಿಯುವದು. ಇದರ ಪ್ರಭಾವದಿಂದ ವೀರ್ಯವೃದ್ಧಿಯುಂಟಾಗಿ, ಅನೇಕ ಸ್ತ್ರೀಯರಲ್ಲಿ ರಮಿಸುವ ಶಕ್ತಿಯುಂಟಾಗುವದು."

## ಕಂದರ್ಪಸುಂದರರಸ.

"ಸೂತೋ ವಜ್ರಮಹಿಯುಕ್ತಾ ತಾರಂ ಹೇಮ ಸಿತಾಭ್ರಕಂ ||
ರಸ್ಯೈಃ ಕಾರ್ಪಾಸಕಾನೇತ್ರಾ ಮರ್ದಯೇದರಿಮೇದಜೈಃ || ಪ್ರ
ವಾಲಂ ಚೂರ್ಣ ಗಂಧಂಚ ದ್ವಿದ್ವಿಕರ್ಷಂ ವಿಮಿಶ್ರಯೇತ್ || ಸ್ವ
ರಸೇ ವಾಜಿಗಂಧಾಯಾ ವಿಮರ್ದ್ಯ ಮೃಗಶೃಂಗಕೇ || ಕ್ಷಿಪ್ತ್ವಾ
ಮೃದುಪುಟೇ ಪಕ್ತ್ವಾ ಭಾವಯೇದ್ಧಾತಕೀ ರಸ್ಯೈಃ || ಕಾಕೋಲೀ
ಮಧುಕಂ ಮಾಂಸೀ ಬಲಾತ್ರಯವಿಷೇಂ ಗುದಮ್ || ದ್ರಾಕ್ಷಾ

ಪಿಪ್ಪಲಿ ವಂಡಾಕ ವರೀಪರ್ಣೀ ಚತುಷ್ಟಯಮ್ ॥ ಪರೂಷಕಂ ಕಸೇರುಶ್ಚ ಮಧುಕಂ ವಾನರೀ ತಥಾ ॥ ಭಾವಯಿತ್ವಾ ರಸೈರೇಷಾಂ ಶೋಷಯಿತ್ವಾ ವಿಚೂರ್ಣಯೇತ್ ॥ ಏಲಾತ್ವಕ್ಪತ್ರಕಂ ಮಾಂಸೀ ಲವಂಗಾಗರು ಕೇಸರಮ್ ॥ ಮುಸ್ತಂ ಮೃಗಮದಂ ಕೃಷ್ಣಾ ಜಲಂ ಚಂದ್ರಶ್ಚ ಮಿಶ್ರಯೇತ್॥ ಏತಚ್ಚೂರ್ಣೈಃ ಶಾಣಮಿತೈಃ ರಸಂ ಕಂದರ್ಪಸುಂದರಮ್ ॥ ಖಾದೇಚ್ಛಾಣಮಿತಂ ರಾತ್ರೌ ಸಿತಾಧಾತ್ರೀ ವಿದಾರಿಕಾ ॥ ಏತೇಷಾಂ ಕರ್ಷ ಚೂರ್ಣೇನ ಸರ್ಪಿಷ್ಕರ್ಷೇಣ ಸಮ್ಮಿತಮ್ ॥ ತಸ್ಯಾನುದ್ವಿಪಲಂ ಕ್ಷೀರಂ ಪಿಬೇತ್ಸುಖಿತ ಮಾನಸಃ ॥ ರಮಣೀ ರಮಯೇದ್ವಹ್ವೀರ್ನ ಹಾನಿಂ ಕ್ವಾಪಿ ಗಚ್ಛತಿ ॥ ”

“ಶುದ್ಧ ಪಾರದ, ವಜ್ರದಭಸ್ಮ, ಶೀಸಭಸ್ಮ, ಮುತ್ತಿನಭಸ್ಮ, ಬೆಳ್ಳಿಯ ಭಸ್ಮ, ಬಿಳೀ ಅಭ್ರಕಭಸ್ಮ ಎಲ್ಲವೂ ೪-೪ ತೊಲಾ, ಇವನ್ನು ಹತ್ತಿಯಹೂವಿನರಸದಲ್ಲಿ ಒಂದು ಭಾವನೆಯೂ, ಕಾಚಿನ ಕಷಾಯದಲ್ಲಿ ಒಂದು ಭಾವನೆಯೂ ಕೊಟ್ಟು ಅನಂತರ ಪ್ರವಾಳದಭಸ್ಮ ೨ ತೊಲೆಯನ್ನೂ, ಶುದ್ಧಗಂಧಕ ೧ ತೊಲೆಯನ್ನೂ ಸಹ ಅಶ್ವಗಂಧಿಯರಸದಲ್ಲಿ ಅರದು ಕೃಷ್ಣಮೃಗದ ಶೃಂಗದಲ್ಲಿ ತುಂಬಿಡುವದು. ಆ ಶೃಂಗಕ್ಕೇನೆ ಕಪಡಮಟ್ಟಿ ಮಾಡಿ ಲಘುಪುಟದಲ್ಲಿ ಪುಟವಿಟ್ಟು, ಅನಂತರ ಧಾತಕೀಕುಸುಮ, ಕಾಕೋಲೀ, ಜೇಷ್ಟಮಧು, ಜಟಾಮಾಂಸಿ, ಚಿಟ್ಟಾಮುಟ್ಟಿ, ಪೇರಾಮುಟ್ಟಿ, (ನಾಗಬಲಾ,) ಅತಿವಿಷ, ಇಂಗುದ, ದ್ರಾಕ್ಷಿ, ಹಿಪ್ಪಲಿ, ವಂದಾಕ, ಶತಾವರೀ, ಶಾಲಪರ್ಣೀ, ಕೃಶ್ನಪರ್ಣೀ, ಮಾಷಪರ್ಣೀ, ಮುದ್ಗಪರ್ಣೀ, ಪರೂಷಕ, ಕಸೇರುಕ, ನಸುಗುನ್ನಿಬೀಜ, ಇಪ್ಪೆಹೂವು, ಇವುಗಳಲ್ಲಿ ಯಾವವುಗಳ ರಸ ಶಿಗುತ್ತೋ ಅವುಗಳಲ್ಲಿಯೂ ಉಳಿದವುಗಳಲ್ಲಿ ಕಷಾಯದಿಂದಲೂ ಭಾವನೆಮಾಡುತ್ತಾ ಪ್ರತಿಯೊಂದರಲ್ಲಿಯೂ ಬೇರೆಬೇರೆ ಭಾವನೆಮಾಡಿ ಒಣಗಿಸುತ್ತಾ ಬರಬೇಕು. ಅನಂತರ ಯಾಲಕ್ಕಿ, ದಾಲ್ಚಿನ್ನಿ, ಜಾಪತ್ರೆ, ಜಟಾಮಾಂಸಿ, ಲವಂಗ, ಅಗರು, ಕೇಸರಿ, ತುಂಗಮುಸ್ತೆ, ಕಸ್ತೂರಿ, ಹಿಪ್ಪಲಿ, ಸೊಗದೇಬೇರು, ಪಚ್ಚಕರ್ಪೂರ ಇವುಗಳೆಲ್ಲರ ಚೂರ್ಣವನ್ನೂ ಶೇರಿಸಿದರೆ ಈ ಕಂದರ್ಪಸುಂದರರಸವು ತಯಾರಾಯಿತು. ಇದರಲ್ಲಿ ೪ ಮಾಷ ತೂಕವನ್ನು ನೆಲ್ಲಿಚಟ್ಟು, ನೆಲಕುಂಬಳಗೆಡ್ಡೆ, ಸಕ್ಕರೆಯೊಡನೆ ರಾತ್ರಿಸಮಯದಲ್ಲಿ ಸೇವಿಸಿ ಮೇಲೆ ಅರ್ಧಪಾವು ಹಾಲು ಕುಡಿಯುವದು. ಪ್ರಸನ್ನಚಿತ್ತನಾಗಿರಬೇಕು. ಇದರ ಪ್ರಭಾವದಿಂದ ಅನೇಕ ಸ್ತ್ರೀಯರೊಂದಿಗೆ ಕ್ರೀಡಿಸುವಷ್ಟು ವೀರ್ಯ ಪ್ರಬಲವಾಗುತ್ತದೆ. ”

## ಲಕ್ಷ್ಮೀವಿಲಾಸರಸ.

"ಪಲಂ ಕೃಷ್ಣಾಭ್ರಚೂರ್ಣಸ್ಯ ಕದರ್ಧೌ ರಸಗಂಧಕೌ ॥ ಕರ್ಪೂರಂ ವೈತದರ್ಧಂ ಚ ಜಾತೀಕೋಶಫಲೇ ತಥಾ ॥ ವೃದ್ಧದಾರುಕ ಬೀಜಂ ಚ ಬೀಜಮುನ್ಮತ್ತಕಸ್ಯ ಚ ॥ ತ್ರೈಲೋಕ್ಯ ವಿಜಯಾ ಬೀಜಂ ವಿದಾರೀ ಕಂದಮೇವ ಚ ॥ ನಾರಾಯಣೀ ತಥಾನಾಗಬಲಾ ಚಾತಿಬಲಾ ತಥಾ ॥ ಬೀಜಂ ಗೋಕ್ಷುರಕಸ್ಯಾಪಿ ನೈಚುಲಂ ಬೀಜ ಮೇವಚ ॥ ಏತೇಷಾಂ ಕಾರ್ಷಿಕಂ ಚೂರ್ಣಂ, ಪರ್ಣಪತ್ರರಸೇನ ಚ ॥ ನಿಷ್ಪಿಷ್ಯವಟಿಕಾಕಾರ್ಯಾ ತ್ರಿಗುಂಜಾ ಫಲ ಮಾನತಃ ॥ ನಿಹಂತಿ ಸನ್ನಿಪಾತೊತ್ಥಾ ಗದಾ ಘೋರಾ ಸುದಾರುಣಾ ॥ ವಾತೋತ್ಥಾನಪಿ ಪಿತ್ತೋತ್ಥಾ ನಾನ್ಯತ್ರನಿಯಮಃಕ್ವಚಿತ್ ॥ ಕುಷ್ಠಮಷ್ಟಾದಶವಿಧಂ ಪ್ರಮೇಹಾನ್ವಿಂಶತಿಂ ತಥಾ ॥ ನಾಡೀವ್ರಣಂ ವ್ರಣಂ ಘೋರಂ ಗುದಾಮಯ ಭಗಂದರಮ್ ॥ ಶ್ಲೀಪದಂ ಕಫವಾತೋತ್ಥಂ ಚಿರಜಂ ಕುಲಸಂಭವಮ್ ॥ ಗಲಶೋಥ ಮಂತ್ರವೃದ್ಧಿ ಮತೀ ಸಾರಂ ಸುದಾರುಣಮ್ ॥ ಕಾಸ ಪೀನಸ ಯಕ್ಷ್ಮಾರ್ಶಃ ಸ್ಥೌಲ್ಯ ದೌರ್ಗಂಧ್ಯ ಮೇವಚ ॥ ಸರ್ವಶೂಲಂ ಶಿರಶ್ಶೂಲಂ ಸ್ತ್ರೀಣಾಂ ಗದನಿಷೂದನಮ್ ॥ ವಟಿಕಾಂಪ್ರಾತರೈಕೈಕಾಂ, ಖಾದೇನ್ನಿತ್ಯಂ ಯಥಾಬಲಮ್ ॥ ಅನುಪಾನಮಿದಂಪ್ರೋಕ್ತಂ ಮಾಂಸಂಪಿಷ್ಟಂ ಪಯೋದಧಿ॥ ವಾರಿಭಕ್ತ ಸುರಾಸೀಧು ಸೇವನಾತ್ಕಾಮರೂಪದೃಕ್ ॥ ವೃದ್ಧೋಪಿ ತರುಣಸ್ಪರ್ಧೀ ನಚ ಶುಕ್ರಸ್ಯ ಸಂಕ್ಷಯಃ ॥"

"ಉತ್ತಮ ಶುದ್ಧ ಸಹಸ್ರಪುಟೀ ಕೃಷ್ಣಾಭ್ರಕಭಸ್ಮ ೪ ತೊಲಾ, ಪಾರದ, ಗಂಧಕ ೨-೨ ತೊಲಾ, ಪಚ್ಚ ಕರ್ಪೂರ ೧ ತೊಲಾ, ಜಾಫಲ, ಜಾಪತ್ರೆ, ನೆಲಗುಂಬಳಬೀಜ, ಉನ್ಮತ್ತದಬೀಜ, ಭಂಗಿಯಬೀಜ, ನೆಲಗುಂಬಳಗೆಡ್ಡೆ, ಶತಾವರಿ, ಚಿಟ್ಟಾಮುಟ್ಟಿ, ಪೇರಾಮುಟ್ಟಿ, ನೆಗ್ಗಿಲು, ಸಮುದ್ರಫಲ ಇವು ೧-೧ ತೊಲಾ, ಇವೆಲ್ಲಾ ಬಾರೀಕ್ ಚೂರ್ಣಮಾಡಿ, ವಿಳ್ಯದೆಲೆಯರಸದಲ್ಲಿ ಖಲ್ವದಲ್ಲಿ ಅರಿಯಬೇಕು. ೪ ರತ್ತಿ ತೂಕದ ಗೋಲಿಗಳ ಮಾಡಬೇಕು. ಈ ಗೋಲಿಗಳು ಸನ್ನಿಪಾತದಿಂದಾದ ದಾರುಣರೋಗಗಳನ್ನು ನಾಶಮಾಡುತ್ತವೆ. ವಾತಜನ್ಯ ರೋಗಗಳೂ, ಪಿತ್ತಜನ್ಯ ರೋಗಗಳೂ ಎಲ್ಲಾ ರೋಗಗಳೂ, ೧೮ ಬಗೆ ಕುಷ್ಟಗಳೂ, ೨೦ ಬಗೆ ಪ್ರಮೇಹಗಳೂ, ನಾಡೀವ್ರಣ, ವ್ರಣ, ಭಗಂದರ, ಕಫವಾತದಿಂದುಂಟಾದ ಶ್ಲೀಪದರೋಗ, ಗಳದಬಾವು, ಅಂತ್ರವೃದ್ಧಿ, ಅತಿಸಾರ, ಕಾಸ, ಪೀನಸ, ಕ್ಷಯ, ಮೊಳೇಜಾಡ್ಯ, ಮೇದೋ

ರೋಗ, ದೇಹದ ದುರ್ಗಂಧ, ಎಲ್ಲಾ ಶೂಲರೋಗಗಳೂ, ಶಿರಶ್ಶೂಲೆ, ಯರ ಪ್ರದರಾದಿ ರೋಗಗಳು, ಈ ಎಲ್ಲಾ ರೋಗಗಳನ್ನೂ ಈ ಲಕ್ಷ್ಮೀವಿಲಾಸರಸವು ನಾಶಮಾಡುವದು. ಇದನ್ನು ಜಠರಾಗ್ನಿಯನ್ನರಿತು ಪ್ರಾತಃ ಸೇವಿಸಿ—ಮಾಂಸದಸೂಪು ಅಥವಾ ಹಾಲು ಕುಡಿಯುವದು. ಮಧುರಾ ಹಾಲು, ಮೊಸರು, ಘೃತ ಜಲದಿಂದ ಪಕ್ವವಾದ ಅನ್ನ, ಸೀಧು, ಆಸವ ಇವುಗಳನ್ನು ಸೇವಿಸುತ್ತಾ ಪಥ್ಯದಿಂದಿರಬೇಕು. ಇದರ ಸೇವನೆಯಿಂದ ವ ನೂ ಕಾಮದೇವನಂತೆ ರೂಪವಂತನೂ, ಯೌವನನಂತೆ ಸ್ತ್ರೀಸಂಗನಿಪುಣ ಆಗುತ್ತಾನೆ. ಯಥೇಚ್ಛ ಸ್ತ್ರೀಯರಲ್ಲಿ ಗಮನಮಾಡಿದರೂ ವೀರ್ಯದಹಾನಿ ಯುಂಟಾಗುವದಿಲ್ಲ. ''

## ಕಾ ಮ ದೇ ವ ರ ಸ .

" ಕಾಮದೇವ ಮಥೋಸೂತಂ ಕಾಮಿನಾಂ ಕಾಮವೃದ್ಧಯೇ॥ ಯಸ್ಯಪ್ರಸಾದತೋ ಬಲ್ಯೋ ರಮ್ಯಶ್ಚ ರಮತೇ ಸ್ತ್ರಿಯಮ್ ॥ ಪಾರದಂ ಪಲಮೇಕಂ ಸ್ಯಾದ್ದ್ವಿಪಲಂ ಶುದ್ಧಗಂಧಕಮ್ ॥ ರಕ್ತ ಕಾರ್ಪಾಸ ತೋಯೇನ ಘೃಷ್ಟ್ವಾ ಕಾಚಸ್ಯ ಕುಪ್ಯತಃ ॥ ನಿಕ್ಷಿಪ್ಯ ಟಂಕಣೇನೈವ ಮುಖಂ ತಸ್ಯ ನಿರೋಧಯೇತ್ ॥ ವಾಲುಕಾ ಯಂತ್ರಮಧ್ಯಸ್ಥಂ ಕುಪ್ಯಂ ಚ ಕುರುತೇ ದೃಢಮ್ ॥ ಅಹೋ ರಾತ್ರಂ ಪಚೇದಗ್ನೌ ಶಾಸ್ತ್ರ ವಿತ್ಕುಶಲೋಭಿಷಕ್ ॥ ಶೀತೇಜಾ ದಾಯ ಪಾತ್ರಸ್ಥಂ ಕೂಪಿಕಾಂತರಲಂಬಿತಮ್ ॥ ದರದೇನ ಸ ಮಂ ರಕ್ತಮುಜ್ವಲಂ ಭಸ್ಮಯದ್ಭವೇತ್ ॥ ಭಕ್ಷಯೇನ್ಮಾಷ ಮೇಕಂ ಚ ಘೃತೇನ ಮಧುನಾ ಸಹ ॥ ಪಶ್ಚಾದ್ದುಗ್ಧಂ ಗುಡಂ ಚಾಜ್ಯಂ ಕೃಷ್ಣೇಕ್ಷುಮಪಿ ಶರ್ಕರಾಮ್ ॥ ದ್ರಾಕ್ಷಾ ಖರ್ಜೂರ ಮಧುಕ ಪ್ರಭೃತೀನಥ ಭಕ್ಷಯೇತ್॥ ತ್ರಿಫಲಾ ಮಧುನಾ ಯಾತಿ ಶಾಂತಿಂ ಪಿತ್ತಂ ಚಿರೋದ್ಭವಮ್ ॥ ನಿ ರ್ಗುಂಡಿಕಾ ರಸೇನಾತ್ರ ದುರ್ವಾರಾ ವಾತವೇದನಾ ॥ ಪ್ರಶಮಂ ಯಾತಿ ವೇಗೇನ ನೂತನಂ ಚ ವಪುರ್ಭವೇತ್॥ ವೀರ್ಯವೃದ್ಧಿ ಪ್ರಭಾವೇಣ ವೃದ್ಧೋಽಪಿ ರಮತೇ ಸ್ತ್ರಿಯಮ್ ॥ "

" ಕಾಮದೇವ ಮತ್ತು ಪಾದರಸ ಇವೆರಡೂ ಕಾಮಿಪುರುಷನಿಗೆ ಕಾಮವೃದ್ಧಿಕಾರಕವಾದವು. ಅವುಗಳ ಪ್ರಸನ್ನತೆಯಿಂದ ನಿರ್ಬಲ ಪುರುಷನೂ ಸಹ ಬಲವಾನ್ ಪುರುಷನೂ, ಸುಂದರನೂ ಆಗಿ ಸ್ತ್ರೀಯರಲ್ಲಿ ರಮಣಮಾಡುವನು. ಶುದ್ಧ ಪಾದರಸ ೪ ತೊಲಾ, ಶುದ್ಧಗಂಧಕ ೮ ತೊಲಾ, ಇವೆರಡನ್ನೂ ಕಜ್ಜಲಿಮಾಡಿ ಕೆಂಪು ಹತ್ತೀಹೂವಿನರಸದಿಂದ ೨ ಝಾವ ಮರ್ದಿಸಿ, ಆತಶೀ

ಶೀಸೆಯಲ್ಲಿ ತುಂಬಿ, ಆ ಶೀಸೆಯ ಮುಖಕ್ಕೆ ಬೆಳಗಾರದಿಂದ ಮುಖಬಂಧನ ಮಾಡಿ, ವಾಲುಕಾಯಂತ್ರದ ಮುಖಾಂತರ ಶಾಸ್ತ್ರಜ್ಞನಾದ ವೈದ್ಯನು ಒಂದು ದಿನ ರಾತ್ರಿ ಅಗ್ನಿಯಲ್ಲಿ ಉರಿಯನ್ನು ಹಾಕಬೇಕು. ಆಗ ಸಾಂಗಶೀತಲವಾದಮೇಲೆ ಆ ರಸವನ್ನು ಶೀಸೆಯಲ್ಲಿ ತೆಗದಿಟ್ಟುಕೊಳ್ಳುವದು. ಅದು ಇಂಗಲೀಕದಂತೆ ಕೆಂಪುವರ್ಣವಿರುತ್ತದೆ. ಈ ರಸದ ೧ ಮಾಷತೂಕವನ್ನು ತುಪ್ಪ ಮತ್ತು ಜೇನುತುಪ್ಪದಲ್ಲಿ ಸೇವಿಸುವದು. ತುಪ್ಪ, ಸಕ್ಕರೆ, ಹಾಲು, ಮೆಣಸು, ಖರ್ಜೂರ ಇಪ್ಪೇಹೂವು ಮೊದಲಾದ ಮಧುರ ಮತ್ತು ಸ್ನಿಗ್ಧಪದಾರ್ಥಗಳ ಸೇವಿಸುವದು ಪಥ್ಯದಲ್ಲಿರಬೇಕು. ತ್ರಿಫಲಾ ಮತ್ತು ಜೇನುತುಪ್ಪದ ಜತೇಲಿ ಈ ರಸವನ್ನು ಸೇವಿಸಿದರೆ ಪಿತ್ತರೋಗ ಶಾಂತವಾಗುವದು. ನಿರ್ಗುಂಡೀರಸದೊಂದಿಗೆ ಸೇವಿಸಿದರೆ ದುರ್ನಿವಾರವಾದ ವಾತರೋಗಗಳನ್ನು ನಿರ್ಮೂಲಮಾಡುವದು; ಹೊಸ ದೇಹವೇ ಉಂಟಾಗುವದು. ಈ ರಸವನ್ನು ವಾಜೀಕರ್ತಾ ಪದಾರ್ಥಗಳೊಡನೆ ಸೇವಿಸಿದರೆ ವೀರ್ಯವೃದ್ಧಿಯನ್ನುಂಟುಮಾಡುವದು, ವೃದ್ಧನೂ ಸ್ತ್ರೀರಮಣಮಾಡಶಕ್ತನಾಗುವನು.''

“ರಸಸೇವೀ ನರಃ ಪಥ್ಯಂ ಸೇವಿತವ್ಯಮತಂದ್ರಿತಃ ॥ ತೈಲಮಮ್ಲಂ ಚ ತೀಕ್ಷ್ಣಂ ಚ ಕುಪಥ್ಯಂ ಪರಿವರ್ಜಯೇತ್ ॥”

“ರಸಪದಾರ್ಥ ಔಷಧಿಯನ್ನು ಸೇವಿಸುವವನು ಬಹು ಸಾವಧಾನಿಯಾಗಿ ಪಥ್ಯದಿಂದಲೇ ಇರಬೇಕು. ತೈಲ, ಹುಳಿ, ಕೆಂಪುಮೆಣಶಿನಕಾಯಿ ಮುಂತಾದ ದ್ರವ್ಯಗಳನ್ನೂ, ಸ್ತ್ರೀಸಂಗವನ್ನೂ ವರ್ಜಿಸಿರಬೇಕು. ಈ ಕುಪಥ್ಯ ಸೇವನೆಯಿಂದ ಮಹಾ ವಿಪತ್ತಾಗುವದು.''

## ಧಾತು ಸಂಜೀವನೀ ಗುಟಿಕಾ.

“ಸುವರ್ಣಂ ಮೃಗನಾಭಿಂ ಚ ರೌಪ್ಯ ಕಾಶ್ಮೀರಕಾ ತಥಾ ॥ ಲಘು ಏಲಾ ಜಾತಿಫಲಂ ತುಗಾಕ್ಷೀರೀ ತಥೈವಚ ॥ ಜಾತಿಪತ್ರೀಂ ಚ ಸಂಪೇಷ್ಯ ನಾಗವಲ್ಲೀ ರಸೇ ತಥಾ ॥ ದಿನತ್ರಯಂ ವಿಮರ್ದ್ಯಾಥ ಯುಗ್ಮಗುಂಜ ಸಮಾವಟೀ ॥ ಸಂತಾನಿಕಾ ಯುತಂ ಭುಕ್ತಂ ರೇತಃ ಕ್ಷಯನಿವಾರಣಮ್ ॥ ಮಧುನಾ ಮೇಹನಾಶಾಯ ಶೈಥಿಲ್ಯೇಪಾನಸಂಯುತಮ್ ॥ ಗುಟಿಕಾಭಕ್ಷಯೇದ್ವಿರ್ಮಾ ಧಾತುಸಂಜೀವನೀಂ ಶುಭಾಮ್ ॥”

“ಸುವರ್ಣದವರ್ಕ ೧ ಭಾಗ, ಕಸ್ತೂರಿ ೨ ಭಾಗ, ರೌಪ್ಯದವರ್ಕ ೩ ಭಾಗ, ಕೇಸರಿ ೪ ಭಾಗ, ಸಣ್ಣ ಯಾಲಕ್ಕಿಬೀಜ ೫ ಭಾಗ, ಜಾಫಲ ೬ ಭಾಗ, ವಂಶಲೋಚನ ೭ ಭಾಗ, ಜಾಪತ್ರೀ ೮ ಭಾಗ, ಈ ಪದಾರ್ಥಗಳನ್ನು ಚೂರ್ಣಿಸಿ ಆಡಿನಹಾಲಿನಲ್ಲಿ ಮತ್ತು ವಿಳ್ಳೇದೆಲೆಯರಸದಲ್ಲಿ ೩ ದಿನ ಅರಿಯು

ಬೇಕು. ೨-೨ ರತ್ತಿ ತೂಕದ ಮಾತ್ರೆಗಳನ್ನು ಮಾಡಿಡಬೇಕು. ಧಾತುಕ್ಷೀಣದಲ್ಲಿ ಹಾಲಿನಕೆನೆ ಅಥವಾ ಹಾಲಿನಕೆನೆಯ ಪಾಕದ ಅನುಪಾನ, ಪ್ರಮೇಹದಲ್ಲಿ ಜೇನಿನೊಂದಿಗೆ, ಇಂದ್ರಿಯಶೈಥಿಲ್ಯಕ್ಕೆ ವಿಳ್ಯದೆಲೆಯರಸದಲ್ಲಿ, ಹೀಗೆ ಈ ಶುಭವಾದ ಧಾತುಸಂಜೀವನೀ ಗೋಲಿಗಳನ್ನು ಬುದ್ಧಿವಾನ್ ವೈದ್ಯನು ಉಪಯೋಗದಲ್ಲಿಡತಕ್ಕದ್ದು. ''

## ವೀರ್ಯಸ್ತಂಭನವಟೀ.

" ಜಾತೀಫಲಂ ಲವಂಗಂ ಚ ಜಾತೀಪತ್ರಂ ಸುಕುಂಕುಮಮ್ ॥ ಸೂಕ್ಷ್ಮೈಲಾ ಚಾಹಿಫೇನಂ ಚ ಆಕಾರಕರಭಸ್ತಥಾ ॥ ಪ್ರತ್ಯೇಕಂ ಕರ್ಷಮಾತ್ರಾಣಿ ಕರ್ಪೂರಂ ಶಾಣಮಾತ್ರಕಮ್ ॥ ನಾಗವಲ್ಲೀದಲರಸೈ ರ್ವಟೀ ಚಣಕಸನ್ನಿಭಾ ॥ ವೀರ್ಯಸಂಸ್ತಂಭನೀ ಹ್ಯೇಷಾ ಬಲವರ್ಣಾಗ್ನಿದೀಪಿನೀ ॥ ಭುಕ್ತ್ವಾ ಸ್ತ್ರೀಸಂಗಸಮಯೇ ಪಿಬೇದ್ದುಗ್ಧಂ ಸಿತಾಯುತಮ್ ॥ "

" ಜಾಫಲ, ಲವಂಗ, ಜಾವಿತ್ರೀ, ಕೇಸರಿ, ಸಣ್ಣಯಾಲಕ್ಕಿ, ಅಫೀಮ್, ಎಲ್ಲಾ ೧-೧ ತೊಲಾ, ಪಚ್ಚಕರ್ಪೂರ ೪ ಮಾಷತೂಕ, (ಪಾವಲಿತೂಕ) ಇವೆಲ್ಲವನ್ನೂ ವಿಳ್ಯದೆಲೆಯರಸದಲ್ಲಿ ಮರ್ದಿಸಿ ಮೆಣಸಿನಕಾಳಿನಷ್ಟು ದಪ್ಪನಾದ ಗೋಲಿಗಳನ್ನು ಮಾಡಬೇಕು. ಈ ಗೋಲಿಯು ವೀರ್ಯಸ್ತಂಭನಕಾರಿಯು, ಬಲ, ವೀರ್ಯ ಮತ್ತು ಜಠರಾಗ್ನಿ ಇವುಗಳನ್ನು ವೃದ್ಧಿಪಡಿಸುತ್ತದೆ. ಇದರಲ್ಲಿ ಒಂದನ್ನು ರಾತ್ರಿ ಮಲಗುವಾಗ ಸೇವಿಸಿ ಸಕ್ಕರೆ ಸೇರಿರುವ ಬಿಸಿಹಾಲನ್ನು ಕುಡಿಯುವದು. ವೀರ್ಯಸ್ತಂಭನವನ್ನುಂಟು ಮಾಡುತ್ತದೆ. ''

" ಭಾಗೈಕಂ ಮೃಗನಾಭಿಂ ಚ ತಥಾ ಕಾಶ್ಮೀರಸಂಭವಮ್ ॥ ಜಾತೀಫಲಂ ಲವಂಗಂ ಚ ಪ್ರತ್ಯೇಕಂ ಭಾಗಯುಗ್ಮಕಮ್ ॥ ಚತುರ್ಭಾಗಾಹಿಫೇನಂ ಚ ವಿಜಯಾಭಾಗಯುಗ್ಮಕಮ್ ॥ ಚಟಕಾಭಾ ವಟೀ ಕಾರ್ಯಾ ವೀರ್ಯಸ್ತಂಭಕರೀ ಮತಾ ॥ ಭಕ್ಷಯೇನ್ಮಧುನಾ ಸಾರ್ಧಂ ಕಾಮೀ ನಿತ್ಯಂ ನಿಶಾಮುಖೇ ॥ ಸಸಿತಂ ಸರ್ಪಿಷಾ ಯುಕ್ತಂ ದುಗ್ಧಂ ಚೈವ ಪಿಬೇದನು ॥ "

" ಕಸ್ತೂರಿ ೧ ತೊಲಾ, ಕೇಸರಿ, ಜಾಫಲ, ಲವಂಗ ಇವು ೨-೨ ತೊಲಾ, ಅಫೀಮು ೪ ತೊಲಾ, ಶುದ್ಧಬಾಂಗ್ ೨ ತೊಲಾ, ಇವೆಲ್ಲವನ್ನೂ ಕುಟ್ಟಿ ವಸ್ತ್ರಗಾಳಿತಮಾಡಿ ನೀರಿನಲ್ಲಿ ಅರೆದು ಕಡ್ಲೆ ಪ್ರಮಾಣ ಮಾತ್ರೆ ಮಾಡುವದು. ಕಾಮಿಪುರುಷನು ರಾತ್ರಿ ಮಲಗುವಾಗ ಒಂದು ಗೋಲಿಯನ್ನು ಜೇನುತುಪ್ಪದಲ್ಲಿ ಸೇವಿಸಿ, ಅದರಮೇಲೆ ತುಪ್ಪ ಸಕ್ಕರೆ ಸೇರಿರುವ ಕಾದಹಾಲನ್ನು ಕುಡಿಯುವದು. ಪರಮೋತ್ತಮ ವೀರ್ಯಸ್ತಂಭನವಾಗುವದು. ''

"ಕಾಶ್ಮೀರಂ ದೇವಕುಸುಮಂ ಜಾತೀಪತ್ರಫಲೇ ತಥಾ ॥ ಶರ್ಕರಾ ಶಾಲ್ಮಲೀ ಮಾಜೂ ಕಾರವೀ ಜಾಬ್ಧಿಕೋಷಕಮ್ ॥ ಕಾಲಮೂಲೀ ಚ ಮಾಕಲ್ಲ ಶಿಫಾ ಬರ್ಬುರ ಸರ್ಜಕಮ್ ॥ ದರದಂ ಮಸ್ತಕೀ ಪಾಠಾ ಜಾಹಿ ಫೇನಂ ಚವತ್ಸಕಮ್ ॥ ಏತಾನಿ ಶಾಣಮಾನಾನಿ ಚೂರ್ಣಯೇಚ್ಚ ಪೃಥಕ್ ಪೃಥಕ್ ॥ ಕಸ್ತೂರಿಕಾ ಚ ಕರ್ಪೂರಂ ಶಾಣಾರ್ಧಂ ದೀಯತೇ ಬುಧೈಃ ॥ ಸಮಂ ಚ ಮಧುನಾ ಯೋಜ್ಯಾಃ ಮಾಷದ್ವಯವಟೀ ಕೃತಾ॥ಸಸಿತಾದುಗ್ಧಪಾನೇನ ಭಕ್ಷಯೇತ್ತಾಂ ನಿಶಾಮುಖೇ ॥ ರತೌ ಸಾ ವೀರ್ಯವೃದ್ಧಿಂ ಚ ದ್ಯೋತಯೇದ್ವಂಧಯೇ ತ್ತಥಾ॥ ದಿವ್ಯಾಂಗನಾ ಕೇಳಿಯುಕ್ತೋ ರಮತೇ ಸ್ಮರವದ್ವರಮ್ ॥"

"ಕೇಸರಿ, ಲವಂಗ, ಜಾಫಲ, ಜಾವಿತ್ರಿ, ಸಕ್ಕರೆ, ಬೂರಗದಅಂಟು, ಮಾಜೂಫಲ, ಕರೀಜೀರಿಗೆ, ಸಮುದ್ರಶೋಷ, ನೆಲತಾಟಿಗಡ್ಡೆ, ಆಕಳಕರೆ, ಮಾಕಲ್ಲಕ, ಜಾಲಿಯ ಹಶೀಕಾಯಿ, ರಾಳ, ಶುದ್ಧ ಇಂಗಲೀಕ, ರುಮ್ಮಿಮಸ್ತಕಿ, ಅಗಳುಶುಂಠಿ, ಅಫೀಮು, ಇಂದ್ರಜವೆ, ಇವೆಲ್ಲಾ ನಾಲ್ಕಾಣೆ ತೂಕವಂತೆ, ಕಸ್ತೂರಿ, ಪಚ್ಚಕರ್ಪೂರ ೨-೨ ಆಣೆತೂಕ ಎಲ್ಲವನ್ನೂ ಚೂರ್ಣಿಸಿ—ಜೇನುತುಪ್ಪದಲ್ಲಿ ೨-೨ ಮಾಷತೂಕ ಗೋಲೀಮಾಡಿ ಸಾಯಿಂಕಾಲ ಸೇವಿಸಿ ಸಕ್ಕರೆ ಶೇರಿಸಿರುವ ಬಿಶೀಹಾಲು ಕುಡಿಯುವದು. ವೀರ್ಯಸ್ತಂಭನೆಮಾಡಿ ಅಮಿತಾನಂದವನ್ನುಂಟು ಮಾಡುವದು."

"ವೀರ್ಯಸ್ತಂಭಕರೀ ಹ್ಯೇಷಾ ಬಲಕಾಮ ವಿವರ್ಧಿನೀ ॥ ಜಾತೀಫಲಂ ಚ ಸೌರಾಷ್ಟ್ರೀ, ಕೃಷ್ಣಧತ್ತೂರಬೀಜಕಮ್ ॥ ಜಾತೀಪುಷ್ಪಂ ಮಹೇಃಫೇನಂ ನಾಗಂ ಹಿಂಗುಲಮೇವಚ ॥ ಏತಾನಿ ಸಮಭಾಗಾನಿ ಖಸಕ್ವಾಥೇನ ಮರ್ದಯೇತ್ ॥ ಗುಂಜಾಮಾತ್ರಾಂ ಚ ವಟಿಕಾಂ ಸಿತಯಾ ಸಹ ಭಕ್ಷಯೇತ್ ॥ ನಾಮ್ನಾ ಕಾಮೇಶ್ವರಃ ಪ್ರೋಕ್ತಃ ಪರಮಾನಂದ ಕಾರಕಃ ॥"

"ಈ ಗೋಲಿಯು ವೀರ್ಯಬಂಧನೆಯನ್ನು ಮಾಡುತ್ತದೆ. ಬಲವನ್ನೂ, ಕಾಮವನ್ನೂ ವೃದ್ಧಿಮಾಡುವದು. ಜಾಫಲ, ಆಕಳಕರ, ಕರೀಉಮ್ಮತ್ತದ ಬೀಜ (ಶುದ್ಧಿಮಾಡಬೇಕು), ಜಾವಿತ್ರೀ, ಅಫೀಮು, ಶೀಸದಭಸ್ಮ, ಶುದ್ಧ ಇಂಗಲೀಕ, ಇವೆಲ್ಲಾ ಸಮಭಾಗ ಚೂರ್ಣಿಸಿ ಕಸಕಸೆಯ ಕಷಾಯದಲ್ಲಿ ಅರದು ೨-೨ ರತ್ತೀತೂಕ ಮಾತ್ರೆಮಾಡುವದು. ಇವುಗಳಲ್ಲಿ ೧ ಗೋಲಿಯನ್ನು ಸಕ್ಕರೆಯೊಡನೆ ಸೇವಿಸಿದರೆ ಈ ಕಾಮೇಶ್ವರವು ಪರಮಾನಂದವನ್ನುಂಟುಮಾಡುವದು."

" ಪಂಚಾಂಗಂಯದ್ಪ್ರಹತ್ಯಾಶ್ಚ ಅಜಾದುಗ್ಧೇ ವಿಭಾವಯೇತ್ ||
ಯಂತ್ರೇ ಪಾತಾಲಕೇ ತೈಲಂ ವಿಧಿನಾ ಸಂಹರೇತ್ಪುನರ್ಾ || ಏ
ಕವಿಂಶತಿ ಲೇಪೇನ ಮುಚ್ಯತೇ ಸ್ವಕೃತಾರ್ದನಾತ್ || ಸ್ಥೂಲೀಕ
ರೋತಿ ಲಿಂಗಂ ತತ್ಕ್ಲೈಬ್ಯಂ ಚಾಪಿ ನಿವಾರಯೇತ್ || "

" ದೊಡ್ಡ ಗುಳ್ಳದಬೇರು, ಹೂವು, ಎಲೆ, ಫಲ, ಚಕ್ಕೆ ಎಲ್ಲವನ್ನೂ ಸಣ್ಣಗೆ ಆಡಿನಮೂತ್ರದಲ್ಲಿ ಮರ್ದಿಸಿ ನೆರಳಿನಲ್ಲಿ ಒಣಗಿಸುವದು ಹೀಗೆ ೩ ಸಾ ಮಾಡಿ ಅನಂತರ ಅದರ ಗೋಲಿಗಳನ್ನು ಮಾಡಿ ಪಾತಾಳಯಂತ್ರದ ಮೂಲಕ ತೈಲವನ್ನು ವಿಧಿಯಂತೆ ತೆಗಿಯುವದು. ಈ ತೈಲವನ್ನು ೨೧ ದಿನ ಲಿಂಗಲೇ ಪನ ಮಾಡುತ್ತಾ ಬಂದರೆ ಹಸ್ತಮೈಥುನದಿಂದುಂಟಾದ ನಪುಂಸಕತ್ವವು ನಾಶ ವಾಗಿ, ಲಿಂಗವೂ ಶೈಥಿಲ್ಯವಿಲ್ಲದಂತಾಗುವದು. "

## ಪಾತಾಳಯಂತ್ರಕ್ರಮ.

" ಹಸ್ತ ಪ್ರಮಾಣಂ ನಿಮ್ನಂ ಚ ಗರ್ತ್ತಂ ಕೃತ್ವಾ ಪ್ರಮಾಣತಃ||
ತಸ್ಮಿನ್ ಭಾಂಡಂ ಚ ಸಂಸ್ಥಾಪ್ಯ ತಥಾಸ್ಯತ್ಪಾತ್ರಮಾಹರೇತ್ || ತ
ಸ್ಮಿನ್ನೋಷಧವರ್ಗಂ ಚ ದತ್ವಾನ್ಯಚ್ಚ ಶರಾವಕಮ್ || ಮುಖೇ
ಛಿದ್ರಾಣಿಸಂಸ್ಥಾಪ್ಯ ಕೃತ್ವಾ ಚೈವ ಶರಾವಕೇ || ಶರಾವ ಸಹಿತಂ
ಪಾತ್ರಂ ಗರ್ತಸ್ಥಂ ಭಾಜನಂ ನ್ಯಸೇತ್ || ಸಂಧಿಲೇಪಂ ತತಃ ಕೃ
ತ್ವಾ ಗರ್ತಮಾಪೂರ್ಯ ಮೃತ್ಸ್ನಯಾ || ಪಶ್ಚಾದಗ್ನಿಂ ಚ ಪ್ರಜ್ವಾ
ಲ್ಯ ಸ್ವಾಂಗಶೀತಂ ಸಮುದ್ಧರೇತ್ || ತದಂತಃಸ್ಥಂ ಚ ತತ್ತೈಲಂ
ಗೃಹ್ಣೀಯಾದ್ವಿಧಿ ಪೂರ್ವಕಮ್ || ಪಾತಾ ಲಾಖ್ಯಮಿದಂ ಯಂ
ತ್ರಂ ಜಾನೀಯಾದ್ಭಿಷಜಾಂ ವರಃ || "

" ಒಂದು ಕೈಯುದ್ದ ಗುಂಡೀ ತೆಗಿದು ಅದರಲ್ಲಿ ದೊಡ್ಡ ಬಾಯಿಯ ಪಾತ್ರೆಯೊಂದನ್ನು ಕೆಳಗಿಡಬೇಕು. ಅದರಮೇಲೆ ಇಡುವ ಪಾತ್ರೆಯಲ್ಲಿ ಔಷಧಿಗಳನ್ನಿಟ್ಟು ಅದರ ಬಾಯಿಗೆ ರಂಧ್ರಯುಕ್ತವಾದ ಒಂದು ಶರಾವ (ಮುಚ್ಚಳ) ವನ್ನು ಸರಿಯಾಗಿ ಹೊಂದಿಸಿ ಈ ಶರಾವಕ್ಕೂ ಔಷಧಿ ಇರುವ ಪಾತ್ರಕ್ಕೂ ಸಂಧಿಬಂಧನ ಮಾಡಿಬಿಡಬೇಕು. ಈಗ ಈ ಛಿದ್ರಯುಕ್ತ ಶರಾವವು ಗುಂಡಿಯ ತಳದಲ್ಲಿರುವ ಪಾತ್ರೆಯ ಬಾಯಿಗೆ ಸರಿಯಾಗಿ ಕೂಡುವಂತೆ ಮೊದಲೇ ಸರಿಯಾಗಿ ನೋಡಿರಬೇಕು. ಹೀಗೆ ಔಷಧ ತುಂಬಿರುವ ಪಾತ್ರೆ ಮತ್ತು ಅದರ ಬಾಯಿಗೆ ಸಂಧಿಲೇಪಮಾಡಿ ಮುಚ್ಚಿರುವ ರಂಧ್ರಗಳಿರುವ ಶರಾವಸಮೇತ ತಲೆಕೆಳಗಾಗಿ ಶರಾವವು ಗುಂಡಿಯಲ್ಲಿರುವ ಪಾತ್ರೆಯಬಾಯಿಗೆ ಸರಿಯಾಗಿ ಕೂರುವಂತೆಯೂ, ಈ ಶರಾವದ ರಂಧ್ರದಲ್ಲಿ ಬರುವ ತೈಲವು ತಳದ ಗಾಜಿನಪಾತ್ರೆಗೆ ಬರುವಂತೆ ಯುಕ್ತಿಯಿಂದ ಉಸರುಹೋಗದಂತೆ

ಜೋಡಿಸಿಡಬೇಕು. ಈಗ ಛಿದ್ರವಿರುವ ಶರಾವವು ಔಷಧವಿರುವ ಪಾತ್ರೆಗೂ, ತಳದಲ್ಲಿರುವ ಗಾಜಿನಪಾತ್ರೆಗೂ ಮಧ್ಯದಲ್ಲಿರುತ್ತದೆ. ಈಗ ಆ ಗುಂಡಿಯನ್ನು ಮಣ್ಣಿನಿಂದ ತುಂಬಿಬಿಡುವದು. ಮೇಲ್ಗಡೆ ಅಂದರೆ ಔಷಧವಿರುವ ಮಣ್ಣಿನಪಾತ್ರೆಯ ಬುಡಭಾಗವು ನೆಲಸಮಕ್ಕಿರುತ್ತದಷ್ಟೆ. ಅದರಮೇಲೆ ಅಗ್ನಿಯನ್ನು ಹಾಕಬೇಕು. ಬೆರಣಿಯನ್ನು ಒಟ್ಟಿ, ಪುಟ ಮಾಫಕ್ ಹಾಕಬೇಕು. (ಪುಟ ಹೆಚ್ಚಾದರೆ ವನೌಷಧಿಗಳೆಲ್ಲಾ ಸುಟ್ಟುಹೋಗುತ್ತವೆ.) ಈ ಬೆಂಕಿಯ ತಾಪದಿಂದ ಮಣ್ಣಿನಪಾತ್ರೇಲಿರುವ ಔಷಧಿಗಳ ತೈಲವು ಶರಾವದ ರಂಧ್ರಗಳ ಮೂಲಕವಾಗಿ ಕೆಳಗಿರುವ ಗಾಜಿನಪಾತ್ರೆಲಿಳಿಯುತ್ತದೆ. ಇಲ್ಲಿ ಗಾಜಿನಪಾತ್ರೆ ಇರದಿದ್ದರೆ ಅದೇ ಮಣ್ಣಿನಪಾತ್ರೆಯು ತೈಲವನ್ನು ಕುಡಿದುಬಿಡುತ್ತದೆ. ಇದಕ್ಕಾಗಿ ಕೆಳಗಿನಪಾತ್ರೆ ಯಾವಾಗಲೂ ಗಾಜಿನದೇ ಆಗಿರಬೇಕು. ಈ ಪಾತ್ರೇಲಿ ತೈಲಬಂದು ನಿಂತಿರುತ್ತದೆ. ಅದನ್ನು ಯುಕ್ತಿಯಿಂದ ಶೇಖರಿಸಬೇಕು. ಇದೇ ಪಾತಾಳಯಂತ್ರವು.''

## (ಬೇ ರೆ ಪ್ರ ಕಾ ರ .)

"ಕಾಂಸ್ಯಪಾತ್ರಮಥಾದಾಯ ಛಾದಯೇತ್ಸೂಕ್ಷ್ಮವಸ್ತ್ರತಃ ॥ ತತೋರ್ಧ್ವಂ ತು ನ್ಯಸೇ ಚೂರ್ಣಂ, ಪತ್ರೀಣಾಚ್ಛಾದ್ಯತೇ ತತಃ ॥ ಅಗ್ನಿಯುಕ್ತಂ ತತಃ ಪಾತ್ರಂ ಯುಕ್ತ್ಯಾ ತದುಪರಿನ್ಯಸೇತ್॥ ಊಷ್ಮಣಾ ಚೂರ್ಣತಸ್ತೈಲಂ ಕಾಂಸ್ಯಪಾತ್ರೇ ಹಿ ಗಚ್ಛತಿ ॥ ಅಲ್ಪದ್ರವ್ಯಸ್ಯ ತೈಲಸ್ಯ ಚಾದಾನೇsಸ್ಯ ಪ್ರಯೋಜನಮ್॥ ಬಹುದ್ರವ್ಯಸ್ಯ ನಸ್ಯಾಚ್ಚ ಜಾನೀಯಾದ್ಭಿಷಗೀದೃಶಮ್ ॥"

''ಬೇರೇಪ್ರಕಾರದ ಪಾತಾಲಯಂತ್ರಕ್ರಮವೇನೆಂದರೆ—ಒಂದು ಕಂಚಿನಪಾತ್ರೆಯ ಅಥವಾ ಚೀನೀಬಟ್ಟಲಿನ ಬಾಯಿಗೆ ಬಾರೀಕ್ ಮಲ್‌ಮಲ್ ಬಟ್ಟೆಕಟ್ಟುವದು. ಆ ಬಟ್ಟೆಯಮೇಲೆ ತೈಲವನ್ನು ತೆಗಿಯುವ ಪದಾರ್ಥಗಳನ್ನರದು ಹರಡುವದು. ಇದು ವಸ್ತ್ರದ ಮೇಲ್ಗಡೆ ಸರಿಯಾಗಿರಬೇಕು. ಇದರ ಮೇಲೆ ಯಾವದಾದರೂ ಹಶೀಯಲೆ ಅಥವಾ ರೊಟ್ಟಿನ ಕಾಗದವನ್ನು ಆ ಔಷಧಿಯಮೇಲೆ ಮುಚ್ಚಿ ಅದರಮೇಲ್ಗಡೆ ಬೆಂಕಿಕೆಂಡವು ತುಂಬಿರುವ ಕಬ್ಬಿಣದ ತಸಲಾ(ತವಾ)ಉಸರು ಹೋಗದಂತೆಯೂ, ಔಷಧದಮೇಲೆ ಮುಚ್ಚಿರುವ ಕಾಗದ ಮುಂತಾದ್ದನ್ನು ಸುಡದಂತೆಯೂ, ಯುಕ್ತಿಯಾಗಿ ಇಟ್ಟು ಸಂದಿಗೆ ಒಂದು ಒದ್ದೇ ಅರುವೆಯನ್ನು ಸುತ್ತುವದು. ಆದರೆ ಈ ತಸಲಾದಲ್ಲಿರುವ ಅಗ್ನಿಯ ಜ್ವಾಲೆಗೆ ಒಳಗಿರುವ ಔಷಧವಾಗಲೀ, ಕಂಚಿನಪಾತ್ರೆಯ ಬಾಯಿಗೆ ಕಟ್ಟಿರುವ ಬಟ್ಟೆಯಾಗಲೀ ಸುಡದಹಾಗೆ ಉಪಾಯವಾಗಿ ಬೆಂಕಿಯನ್ನಿಡಬೇಕು. ಈ ಮಂದವಾದ ಅಗ್ನಿಯಶಿಖೆಯಿಂದ ಚೂರ್ಣದಿಂದ ತೈಲಹೊರಟು ಅದರ ಕೆಳ

ಗಿರುವ ಕಂಚಿನ (ಅಥವಾ) ಗಾಜಿನ ಪಾತ್ರೆಯೊಳಕ್ಕೆ ಬಂದು ಬಿದ್ದಿರುತ್ತದೆ. ಆ ಹದವನ್ನು ನೋಡಿಕೊಂಡು ಬೆಂಕಿಯಿರುವ ತಸಲಾವನ್ನು ಬೇಗ ತೆಗದು ಬಿಡುವದು. ಕಟೋರಾದಲ್ಲಿರುವ ತೈಲವನ್ನು ಶೀಸೆಯಲ್ಲಿ ತುಂಬಿಟ್ಟುಕೊಳ್ಳುವದು. ಈ ಯಂತ್ರವು ಸ್ವಲ್ಪಮಾತ್ರ ಔಷಧಿಯಿಂದ ತೈಲವನ್ನು ತೆಯಲು ಉಪಯೋಗವಾಗುವದು. ಇದನ್ನೇ ಆಧುನಿಕ ಜನರು ರೂಢಿಯಲ್ಲಿಟ್ಟುಕೊಂಡಿದ್ದಾರೆ. ''

## ಅರ್ಕತೈಲ.

" ವಸ್ತ್ರಂ ವಾ ಅರ್ಕದುಗ್ಧೇನ ಸಪ್ತವಾರಂ ವಿಭಾವಯೇತ್ ॥ ನಿರಾತಪೇ ವಿಶೋಷ್ಯಾಥ ನವನೀತೇನ ಲೇಪಯೇತ್ ॥ ವರ್ತಿಕಾಂ ಕಾರಯಿತ್ವಾ ತು ವಹ್ನಿನಾ ಯೋಜಯೇತ್ತತಃ ॥ ವರ್ತಿತಃ ಪತಿತಂ ತೈಲಂ ಕಾಚಪಾತ್ರೇ ವಿನಿಕ್ಷಿಪೇತ್ ॥ ತತ್ತೈಲಂ ಲೇಪಯೇಚ್ಛಿಶ್ನೇ ಪತ್ರೈರಂಡೇನ ವೇಷ್ಟಯೇತ್ ॥ ನಾಶಯೇದ್ಧಸ್ತಜಂ ದುಃಖಂ ತಥಾ ವೈಗುದಸಂಭವಮ್॥ "

" ಯಕ್ಕೆಯ ಹಾಲಿನಲ್ಲಿ ಒಂದು ಬಟ್ಟೆಯ ಉದ್ದನೇ ತುಂಡನ್ನು ನೆನೆಸಿಟ್ಟು ನೆರಳಿನಲ್ಲಿ ಆರಿಸುತ್ತಾ ಹೀಗೆ ೭ ಭಾವನೆ ಮಾಡಬೇಕು. ಆಮೇಲೆ ಆ ಬಟ್ಟೆಯ ತುಂಡಿಗೆ ಎರಡುಕಡೆಗೂ ಬೆಣ್ಣೆಯನ್ನು ಸವರಿ ಸುರಳಿಸುತ್ತಿ ಬತ್ತಿಯಂತೆ ಮಾಡುವದು. ಅದು ಬಿಚ್ಚಿಕೊಳ್ಳದಂತೆ ಒಂದೆರಡು ಕಟ್ಟುಗಳನ್ನೂ ಕಟ್ಟುವದು. ಈ ಸುರಳಿಯ ತುದಿಯನ್ನು ಬಲವಾದ ಕಬ್ಬಿಣದ ಚಿಮುಟಾದಿಂದ ಹಿಡಿದುಕೊಂಡು ಅದರ ಕೆಳಭಾಗದ ತುದಿಗೆ ಬೆಂಕೀತೋರಿಸಿ ಅದರಡಿಯಲ್ಲಿ ಒಂದು ಗಾಜಿನಪಾತ್ರೇಲಿ ಅದರ ತೈಲ ಬೀಳುವಂತೆ ಅದರಮೇಲೆಯೇ ಹಿಡಿಯುವದು. ಇದರಲ್ಲಿ ಸುರಿಯುವ ತೈಲವನ್ನು ಒಂದು ಶೀಸೆಯಲ್ಲಿಟ್ಟುಕೊಂಡು ಅದನ್ನು ಲಿಂಗಕ್ಕೆ ಉಜ್ಜುತ್ತಾ ಬರುವದು. ಅದರಮೇಲೆ ಹರಳು ಯಲೆಯನ್ನು ಸುತ್ತಿ ಕಟ್ಟುವದು. ಹೀಗೆ ೨೧ ದಿನ ಮಾಡುವದರಿಂದ ಅಯೋನಿ ಮೈಥುನಜನ್ಯಷಾಂಡ್ಯ ನಿವೃತ್ತಿಯಾಗುವದು. ಲಿಂಗದ ಶಿಥಿಲತಾ ನಾಶವಾಗಿ ದೃಢವಾಗುವದು. ''

" ಶ್ವೇತಚಂದನಚೂರ್ಣಂ ಚ ಚತುಃ ಪಲಪ್ರಮಾಣತಃ ॥ ದ್ವಿಗುಣಂ ಸಾಲನಿರ್ಯಾಸಂ ಲೋಬಾನಂ ದ್ವಿಪಲಂ ತಥಾ ॥ ಲವಂಗಂ ವೈ ದ್ವಿಕರ್ಷಂ ಚ ಸರ್ವಾಂಗಸಂಚೂರ್ಣ್ಯ ಭಾವಯೇತ್ ॥ ಸಂಕಶ್ಯ ವಿಧಿನಾ ತೈಲಂ ವ್ಯಕಶಿಶ್ನಂಚ ಲೇಪಯೇತ್ ॥ ಷಂಡತ್ವನಾಶನಂ ಜ್ಞೇಯಂ ಪರಂ ಶಿಶ್ನಬಲ ಪ್ರದಮ್ ॥ "

“ಶ್ರೀಗಂಧದ ಬುರಾದಾ ೨೦ ತೊಲಾ, ಸಫೇದ್‌ರಾಲ ೪೦ ತೊಲಾ, ಲೋಬಾನ ೧೦ ತೊಲಾ, ಲವಂಗ ೨ ತೊಲಾ, ಎಲ್ಲವನ್ನೂ ಆಡಿನಹಾಲಿನಲ್ಲಿ ಅರದು ನೆರಳಿನಲ್ಲಿ ಒಣಗಿಸುತ್ತಾ ಬರುವದು. ೭ ಸಲ ಭಾವನೆಮಾಡಿ ಪೂರ್ವೋಕ್ತವಿಧಾನದಿಂದ ಪಾತಾಳಯಂತ್ರದಲ್ಲಿ ತೈಲವನ್ನು ತೆಗದು ಇದನ್ನು ಮಾಲೀಸ್ ಮಾಡುವದರಿಂದ ಶಿಶ್ನಕ್ಕೂ, ಆ ವೀರ್ಯವಾಹಿನೀ ನರಗಳಿಗೂ ಬಲ ವುಂಟಾಗುವದು.”

## ಕಾಮದೇವತೈಲ.

“ಕಾಮದೇವಸ್ಯ ತೈಲಸ್ಯ ವಿಧಾನಂ ಚಾಧುನಾ ಶೃಣು ॥ ಜಾತೀ ಫಲಂ ಲವಂಗಂ ಚ ಸುಗುಂಜಾಂ ಜಾತಿಪತ್ರಕಮ್ ॥ ಆಕಾರಕರ ಭಂ ಚಾಲಂ ಮೂಲಂ ಕರವೀರಜಂ ಸಿತಮ್ ॥ ಜ್ಯೋತಿಷ್ಮತೀಂ ಸಮಾದಾಯ ತ್ರಿ ತ್ರಿ ಕರ್ಷಂ ಪೃಥಕ್ ಪೃಥಕ್ ॥ ಇಂದ್ರಗೋ ಪಂ ಚ ಗಂಡೂಷಂ ಷಟ್ ಷಟ್ ಕರ್ಷ ಪ್ರಮಾಣತಃ ॥ ಕಾರಸ್ಕರ ಮಿತಂ ಕರ್ಷಂ ರಜಶ್ಚ ಗಜದಂತಜಮ್ ॥ ಅಜಾದುಗ್ಧೇ ಭಾವ ಯಿತ್ವಾ ಛಾಯಾಯಾಂ ಪರಿಶೋಷಯೇತ್॥ಪಾತಾಲಸಂಜ್ಞಕೇ ಯಂತ್ರೇ ತೈಲಂನ್ಯೆ ಪಾತಯೇದ್ಭಿಷಕ್ ॥ ನಿತ್ಯಂ ಚ ಮರ್ದಯೇ ಚ್ಛಿಶ್ನೇ ಹ್ಯಗ್ರಭಾಗಂವಿ ಹಾಯ ಚ ॥ ಏಕವಿಂಶದ್ದಿನಂ ಯಾವತ್ ತಾಂಬೂಲೇನ ಚವೇಷ್ಟಯೇತ್ ॥ ದೋಷಂ ನಾಶಯತೇ ಶೀ ಘ್ರಂ ಮಯೋನೇರ್ಮೈಥುನೋದ್ಭವಮ್॥ಉದ್ದಂಡೋ ಜಾಯ ತೇ ಶಿಶ್ನಃ ದಶಸ್ತ್ರೀದ್ರಾವಕಃಸ್ಥಿರಃ ॥ ರೋಗಾರ್ತಾಯ ಹಿ ದಾ ತವ್ಯಂ ನತ್ವನ್ಯಸ್ಮೈ ಪ್ರಮಾದತಃ ॥”

“ಈಗ ಕಾಮದೇವ ತೈಲವಿಧಾನವನ್ನು ಕೇಳು—ಜಾಫಲ, ಲವಂಗ, ಬಿಳೀಗುಲಗಂಜಿ, ಜಾಪತ್ರಿ, ಆಕಲಕರೆ, ದಾಲಚಿನ್ನಿ, ಬಿಳೀಕಣಗಲಬೇರಿನ ತೊಪ್ಪಟೆ, ಜ್ಯೋತಿಷ್ಮತೀ ಇವು ೩-೩ ತೊಲಾ, ಮರೇಹುಳು, ಬೀರಬ ಹೂಟ ಇವೆರಡೂ ೬-೬ ತೊಲಾ, ವಿಷಮುಷ್ಟಿ, ಆನೆದಂತದ ಬುರಾದಾ ೧-೧ ತೊಲೆ ಇವೆಲ್ಲವನ್ನೂ ಸಣ್ಣಗರದು ಆಡಿನ ಹಾಲಿನಲ್ಲಿ ಅರದು ನೆರಳಿನಲ್ಲಿ ಒಣ ಗಿಸುವದು. ಪಾತಾಳಯಂತ್ರದಲ್ಲಿ ಇದರ ತೈಲವನ್ನು ತೆಗದು—ಹೊಲಿಗೆ ಮತ್ತು ಚಂಡು ಇವನ್ನು ಬಿಟ್ಟು ಶಿಶ್ನಕ್ಕೆ ಈ ತೈಲವನ್ನು ೨೧ ದಿನ ಸವರು ವದು. ಅದರಮೇಲ್ಗಡೆ ವಿಳ್ಯದೆಲೆಯನ್ನು ಕಟ್ಟುವದು. ಹಸ್ತಮೈಥುನ, ಗುದ ಮೈಥುನದಿಂದುಂಟಾದ ಲಿಂಗದ ಸುಸ್ತಿಯೂ, ನಪುಂಸಕತ್ವವೂ ನಿರ್ನಾಮ ವಾಗಿ, ಲಿಂಗವು ಉದ್ದಂಡವಾಗುವದು. ಸ್ತ್ರೀಗಮನದಲ್ಲಿ ತುಂಬಾ ಶಕ್ತಿ ಯುಂಟಾಗುವದು. ಯಾರಿಗೆ ಈ ಅಯೋನಿ ಮೈಥುನದಿಂದ ಲಿಂಗ ಶಿಥಿಲ

ವಾಗಿದೆಯೋ ಅವರೇ ಈ ವಿಧವಾದ ಯಾವ ತೈಲವನ್ನಾದರೂ ಉಪಯೋಗಿಸ ಬೇಕಲ್ಲದೆ, ಅನ್ಯಪುರುಷರಿಗೆ ಪ್ರಮಾದದಿಂದ ಈ ತೈಲವನ್ನು ಎಂದೆಂದಿಗೂ ಕೊಡಬಾರದು. ''

" ಪಲಾಶಸಂಭವಾ ಬೀಜಾ ಕಿಂಪಾಕಂ ಕನಕಪ್ರಭಾನ್ ॥ ಕಪೋತಾರಣ್ಯಜಂ ವಿಷ್ಟಂ ಪ್ರತ್ಯೇಕಂ ಷಟ್ಕರ್ಷಕಮ್ ॥ ಲ ವಂಗಾಕಾರಕರಭೌ ಚೋಲಂ ಚ ಕರ್ಷ ಸಮ್ಮಿತಮ್ ॥ ಅಜಾ ದುಗ್ಧೇ ಪೇಶಯಿತ್ವಾ ಶೋಷ್ಯ ತೈಲಂ ಚ ಪಾತಯೇತ್ ॥ ಪ್ರೋಕ್ತೇನ ವಿಧಾನೇನ ಶಿಶ್ನಪೃಷ್ಠೇ ವಿಲೇಪಯೇತ್ ॥ ನಿತ್ಯಂ ಚ ಮರ್ದಯೇಚ್ಛಿಶ್ನೇ ಹ್ಯಗ್ರಭಾಗಂ ವಿಹಾಯ ಚ ॥ ವಿಂಶೈಕದಿವಸೇ ರೋಗಾನ್ಮುಚ್ಯತೇ ಹಸ್ತಸಂಭವಾತ್ ॥ "

" ಮುತ್ತಗದಬೀಜ, ವಿಷಮುಷ್ಟಿ, ಜ್ಯೋತಿಷ್ಮತೀ, ಕಾಡುಪಾರಿವಾಳದವಿಷ್ಟಾ, ಎಲ್ಲವೂ ೬-೬ ತೊಲಾ, ಲವಂಗ, ವಿಷಮುಷ್ಟಿ, ದಾಲ್ಚಿನ್ನಿ ೧-೧ ತೊಲಾ, ಇವೆಲ್ಲವನ್ನೂ ಆಡಿನಹಾಲಿನಲ್ಲಿ ಅರದು ನೆರಳಿನಲ್ಲಿ ಒಣಗಿಸುತ್ತಾ ೩ ಭಾವನೆ ಕೊಡಬೇಕು. ಆಮೇಲೆ ಪಾತಾಳಯಂತ್ರದಲ್ಲಿ ತೈಲ ತೆಗೆದು ಮೇಲಿನವಿಧಿಯಂತೆ ಲಿಂಗಲೇಪನ ಮಾಡುತ್ತಾ ಬಂದರೆ ಹಸ್ತಮೈಥುನದವಿಕಾರ ದೂರವಾಗಿ ಲಿಂಗಶಿಥಿಲತೆಯು ನಾಶವಾಗುವದು. ''

## ಕ್ಲೈಬ್ಯಹರಂ ತೈಲಂ.

" ಚುಕ್ರಂ ಕಾರಸ್ಕರಂ ಚೈವ ಹ್ಯಶ್ವಗಂಧಾ ಚ ಕಂಗುನೀ ॥ ತ್ವಚಂ ಲವಂಗಂ ಸುಮನಂ ಜಾತಿಕೋಶಂ ಸುರಕ್ತಿಕಾ ॥ ಬೀಜಂ ಪಲಾಶಜಂ ಚೈವ ವಿಷ್ಟಾ ವಾರಾಹಸಂಭವಮ್ ॥ ವಿಷಂ ಚಾಥ ಸಮಾಕುಟ್ಯ ಪ್ರತ್ಯೇಕಂ ವೈ ತ್ರಿಕಾರ್ಷಿಕಮ್ ॥ ಗಂಡೂಷಂ ಇಂದ್ರಗೋಪಂ ಚ ಪಲ್ಲಿಂವೈ ಭೂಮಿ ಸಂಭವಾ ॥ ಮೇದಂ ಚ ವ್ಯಾಘ್ರಜಂ ಶುದ್ಧಂ ಪ್ರತ್ಯೇಕಂ ಷಟ್ಕಾರ್ಷಿಕಮ್ ॥ ಕಾಶ್ಮೀರಂ ಚ ಮದಂ ಚೈವ ಮಲಂ ಮಾನುಷ ಕರ್ಣಜಮ್ ॥ ಟಂಕಂ ಟಂಕಂ ಪ್ರಗೃಹ್ಯಾಥ ಸರ್ವಾ ಸೂಕ್ಷ್ಮಂ ವಿಚೂರ್ಣಯೇತ್ ॥ ಮೇಷೀ ದುಗ್ಧೇ ಭಾವಯಿತ್ವಾ ವಿಧಿಂ ತೈಲಂ ಚ ಕರ್ಷಯೇತ್ ॥ ತಾಂಬೂಲಂ ವೇಷ್ಟಯೇತ್ಪಶ್ಚಾತ್ ತ್ರಿಸಪ್ತಾಹಂ ವಿಧಾನತಃ ॥ ಯದಿ ಕಿಂಚಿದ್ಭವೇತ್ಪೀಡಾ ತೈಲಂ ತತ್ರ ನಲೇಪಯೇತ್ ॥ ತೈಲಂ ಕ್ಲೈಬ್ಯಹರಂ ನಾಮ ಲಿಂಗೋದ್ದಂಡತ್ವ ಕಾರಕಮ್ ॥ ಶೈಥಿಲ್ಯಂ ನ ಭವೇತ್ತಸ್ಯ ದಶವಾರಾನಿ ಯಾದ್ಯದಿ ॥ ಗುದಹಸ್ತಜ ಕ್ಲೈಬ್ಯಾನಾಂ ನಾಶನಂ ಪರಮಂ ಮತಮ್ ॥ "

" ಪುಷ್ಕಂಪುರಚಿ ಅಥವಾ ಹುಣಿಸೆಹಣ್ಣು, ವಿಷಮುಷ್ಟಿ, ಅಶ್ವಗಂಧಿ, ಜ್ಯೋತಿಷ್ಮತಿ, ದಾಲ್ಚಿನ್ನಿ, ಲವಂಗ, ಜಾಪತ್ರಿ, ಜಾಫಲ, ಬಿಳೀಗುಲಗಂಜಿ, ಮತ್ತಗದಬೀಜ, ಕಾಡುಹಂದಿಯವಿಷ್ಟ, ವತ್ಸನಾಭಿ (ಶುದ್ಧವಾದದ್ದು) ಇವೆಲ್ಲಾ ೪-೪ ತೊಲಾ, ಬೀರ್‌ಬಹೂಟಿ, ಯರೇಹುಳು, ಹುಲಿಯಚರಬಿ ಇವು ೬-೬ ತೊಲಾ; ಕೇಸರಿ, ಕಸ್ತೂರಿ, ಮನುಷ್ಯರ ಕಿವಿಯಮಲ ಇವು ೨-೨ ಆಣೆಯತೂಕ, ಇವೆಲ್ಲವನ್ನೂ ಕುರಿಯಹಾಲಿನಲ್ಲಿ ಅರದು ನೆರಳಿನಲ್ಲಿ ಒಣಗಿಸಬೇಕು. ಇದನ್ನು ಪಾತಾಳಯಂತ್ರದಲ್ಲಿಟ್ಟು ತೈಲತೆಗಿದು—ಈ ತೈಲವನ್ನು ಲಿಂಗದ ಹೊಲಿಗೆ ಗಿಣಚುಬಿಟ್ಟು ಉಳಿದ ಭಾಗಕ್ಕೆ ೨೧ ದಿನ ಮರ್ದಿಸುವದು. ವಿಳ್ಳೇದೆಲೆಯನ್ನು ಮೇಲೆ ಕಟ್ಟುತ್ತಾ ಬರುವದು. ಇದರಿಂದ ಸಣ್ಣಸಣ್ಣ ತುರಿ ಎದ್ದು ತೊಂದರೆಯಾದರೆ ಹಚ್ಚುವದನ್ನು ಬಿಡುವದು. ಹುಷಾರಾದಕೂಡಲೆ ಮತ್ತೆ ಲೇಪಿಸುವದು. ಇದು ಹಸ್ತಕ್ರಿಯೆ, ಗುದರತಿ ಮುಂತಾದ್ದರಿಂದಾದ ವೀರ್ಯವಾಹಿನೀ ನಾಡಿಗಳ ದೌರ್ಬಲ್ಯದ ನಪುಂಸಕತೆಯನ್ನು ದೂರಮಾಡಿ, ಲಿಂಗವನ್ನು ದೃಢಪಡಿಸುವದು. ಸ್ತ್ರೀಯರಲ್ಲಿ ೧೦ ಸಲ ಗಮನಮಾಡುವ ಶಕ್ತಿಯುಂಟಾಗುವದು. ಈ ತೈಲವನ್ನು ನಪುಂಸಕರುಮಾತ್ರ ಉಪಯೋಗಿಸಬೇಕು. ಘಟ್ಟಿಯಾಗಿರುವವರು ಉಪಯೋಗಿಸಿದರೆ ಅಪಾಯವಾಗುವದು. "

" ಇಂದ್ರಗೋಪಶ್ಚ ಗಂಡೂಷೋ ಹ್ಯಶ್ವಗಂಧಾ ತಥೈವಚ ॥ ಚುಕ್ರಂ ಹರಿಲಾ ಚಣಕಂ ಭರ್ಜಿತಂ ಚ ವಿನಿಕ್ಷಿಪೇತ್ ॥ ಚೂರ್ಣಂ ವೈ ದಂತಜಂ ತತ್ರ ಮೋಲ್ಯಂ ಪೋಟಲಿಯುಗ್ಮಕಮ್ ॥ ಕೃತ್ಯ ಸತ್ಯ ತ್ರಿಕೇ ತೈಲೇ ಹ್ಯುಷ್ಣೇ ಪೊಟಲೀಕಾಂಕ್ಷಿಪೇತ್ ॥ ಮುಹೂರ್ತ ಸೇಕಯೇತ್ತಾಭ್ಯಾಂ ತಾಂಬೂಲಂ ವೇಷ್ಟಯೇತ್ತತಃ ॥ ಅನೇನ ವಿಧಿನಾ ಸೇಕಂ ಸಪ್ತರಾತ್ರಂ ಚ ಕಾಶಯೇತ್ ॥ "

" ಬೀರಬಹೂಟಿ, ಯರೇಹುಳು, ಅಶ್ವಗಂಧಿ, ಪುಷ್ಕಂಪುರಚಿ, ಅಂಬಾಹಲದಿ, ಹುರಗಡ್ಲೆ, ಆನೆದಂತದ ಬುರಾದಾ, ಇವೆಲ್ಲಾ ೬-೬ ಆಣೆತೂಕ ಕೇರಿಸಿ ಕುಟ್ಟಿ ವಸ್ತ್ರಗಾಳಿತಮಾಡಿ ೨ ಪೊಟ್ಲ ಮಾಡಬೇಕು. ಅವನ್ನು ಗುಲ್‌ರೋಗನ್ ತೈಲದಲ್ಲಿ ಕಲಿಸಿ, ಇದ್ದಲಿಯ ಬೆಂಕಿಯಲ್ಲಿ ಸ್ವಲ್ಪ ಬೆಚ್ಚಗೆಮಾಡಿ ಹವಣಾಗಿ ಲಿಂಗಕ್ಕೂ, ವೀರ್ಯವಾಹಿನೀನರಮಂಡಲಕ್ಕೂ ಶಾಖಕೊಡುತ್ತಾ ೨ ಘಳಿಗೆ ದಿನಂಪ್ರತಿ ಕೊಟ್ಟು ಮೇಲೆ ವಿಳ್ಳೆದೆಲೆ ಕಟ್ಟುವದು ೭ ದಿನ ಮಾಡುವದು. ಇದರಿಂದ ಉತ್ಥಾಪನೆಯೇ ಇಲ್ಲದೆಯಿದ್ದ ಲಿಂಗಕ್ಕೆ ತಾಕತ್ ಬರುವದಲ್ಲದೆ, ಹಸ್ತ ಗುದರತಿಗಳಿಂದುಂಟಾದ ನಪುಂಸಕತ್ವವನ್ನು ನಾಶಮಾಡಿ, ಲಿಂಗವನ್ನು ದೃಢಪಡಿಸುವದು. "

ಬಿಟ್ಟು) ಲಿಂಗಕ್ಕೆ ಲೇಪಿಸುತ್ತಾ ಮೇಲೆ ವಿಳ್ಯದೆಲೆ ಕಟ್ಟುತ್ತಾ ಬಂದರೆ ೧೪ ದಿನದಲ್ಲಿ ಹಸ್ತಕ್ರಿಯಾಜನ್ಯ ಕ್ಲೈಬ್ಯ ನಿವಾರಣೆಯಾಗಿ, ಲಿಂಗದ ಶೈಥಿಲ್ಯವು ಗುಣವಾಗುವದು. ದೃಢವಾಗುವದು."

"ಆಖುವಿಷ್ಠಾಂ ಸಮಾನೀಯ ಮಧುನಾ ಪೇಷಯೇದ್ಭೃಶಮ್॥
ವಿಧಿನಾ ಲೇಪಯೇಚ್ಛಿಶ್ನೇ ಧ್ವಜಸ್ಯೋಚ್ಛ್ರಾಯ ಕಾರಕಮ್॥"

"ಇಲಿಯವಿಷ್ಟ (ಇಕ್ಕೆ) ಯನ್ನು ಜೇನಿನಲ್ಲಿ ಅರದು ಮೇಲಿನಂತೆ ಲೇಪಿಸಿ, ವಿಳ್ಳೇದೆಲೆ ಕಟ್ಟುತ್ತಾ ಬಂದರೂ, ಲಿಂಗದ ಶಿಥಿಲತೆಯು ನಾಶವಾಗಿ, ದೃಢವಾಗುವದು."

"ಕರವೀರಮೂಲತ್ವಚಂ ಸಮ್ಮರ್ದ್ಯ ಬೃಹತೀರಸೇ ॥ ವಿಧಿನಾ
ಲೇಪಯೇಚ್ಛಿಶ್ನೇ ಧ್ವಜಸ್ಯೋತ್ತೇಜನಾಯ ಚ ॥"

"ಬಿಳೀಕಣಗಿಲುಬೇರಿನ ಬೊಬ್ಬಡೆಯನ್ನು ದೊಡ್ಡಗುಳ್ಳದ ಸಮೂಲದರಸದಲ್ಲಿ ಚೆನ್ನಾಗರದು ಮೇಲಿನಂತೆ ಉಪಯೋಗಿಸಿದರೆ ಕಾಮಶಕ್ತಿ ಬಲವಾಗುವದು."

"ಕಾರ್ಪಾಸಬೀಜಮಾದಾಯ ನಿಸ್ತುಷಂ ಕಾರಯೇದ್ಬುಧಃ ॥
ತಥೈವ ಮೂಲಿಕಾ ಬೀಜಾನ್ ಕರ್ಷದ್ವಯಮಿತಾನ್ ಪೃಥಕ್॥
ಆಕಾರಕರಭಂ ಕುಷ್ಟಂ ಪ್ರತ್ಯೇಕಂ ಷಟ್ಕಮಾಷಕಮ್ ॥ ಮ
ಧ್ಯೇ ತು ಮರ್ದಯಿತ್ವಾ ವೈ ಶಿಶ್ನೇ ನಿತ್ಯಂ ಪ್ರಲೇಪಯೇತ್॥ ತೇ
ನ ಶೈಥಿಲ್ಯತಾ ನಾಶಂ ಭವೇದ್ದೃಢತರಂ ತಥಾ ॥"

"ಹತ್ತಿಯಬೀಜದಪೊಪ್ಪು, ಮೂಲಂಗಿಯಬೀಜ ತಲಾ ೨-೨ ಭಾಗ, ಆಕಳಕರೆ, ಕಹಿಚಂಗಲಕೋಷ್ಟ, ಇವು ೧-೧ ಭಾಗ, ಇವೆಲ್ಲವನ್ನೂ ಮಧ್ಯದಲ್ಲಿ ಖಲ್ವದಲ್ಲರದು ಮೇಲಿನಂತೆ ಲೇಪಿಸುವದು. ಶಿಥಿಲತಾ ದೂರವಾಗುವದು."

"ಗೋಘೃತಂ ಚಾರ್ಕದುಗ್ಧಂ ಚ, ಮಾಕ್ಷಿಕಂ ಸಮಭಾಗತಃ ॥
ಕಾಂಸ್ಯ ಪಾತ್ರೇ ಮರ್ದಯಿತ್ವಾ ಶಿಶ್ನೇ ನಿತ್ಯಂ ವಿಮರ್ದಯೇತ್॥
ಮಾಸೈಕಮರ್ದನೇನೈವ ಶೈಥಿಲ್ಯಂ ಚ ವಿನಾಶಯೇತ್ ॥ ಹಸ್ತ
ಮೈಥುನಜಂ ದುಃಖಂ ಪ್ರಣಶ್ಯತಿ ನ ಸಂಶಯಃ ॥"

"ಆಕಳತುಪ್ಪ, ಎಕ್ಕದಹಾಲು, ಜೇನುತುಪ್ಪ ಈ ಮೂರನ್ನೂ ಕಂಚಿನತಟ್ಟೆಯಲ್ಲಿ ಕಂಚಿನ ಪಾತ್ರೆಯಿಂದ ಚನ್ನಾಗಿ ಮರ್ದಿಸುವದು. ಇದರಲ್ಲಿ ನಿತ್ಯವೂ ಇಂದ್ರಿಯದಮೇಲೆ ಹಚ್ಚುತ್ತಾ ಬಂದರೆ ಹಸ್ತಮೈಥುನದಿಂದುಂಟಾದ ಲಿಂಗಶೈಥಿಲ್ಯವು ದೂರವಾಗುವದು."

"ಚೇಲೋದ್ಭವಂ ತಥಾತೈಲಂ ಲವಂಗಾನಾಂ ಚ ಮರ್ದಯೇತ್॥
ಸಕೃತೋತ್ಥಂ ಶಿಶ್ನಶೋಷಂ ಮಾಸಮೇಕಂ ಚ ನಶ್ಯತಿ ॥"

"ದಾಲ್ಚಿನ್ನಿ, ಲವಂಗ, ಇವುಗಳಲ್ಲಿ ಯಾವದಾದರೊಂದರ ಅಥವಾ ಎರಡೂ ಸೇರಿದ್ದರ ತೈಲವನ್ನು ಪಾತಾಳಯಂತ್ರದಲ್ಲಿ ತೆಗದು, ಲಿಂಗದಮೇಲೆ ಸವರುವದರಿಂದ ತನ್ನ ಕುಕರ್ಮದಿಂದುಂಟಾದ ಲಿಂಗದ ಬಣಗುವಿಕೆಯು ಒಂದು ತಿಂಗಳೊಳಗಾಗಿ ದೂರವಾಗುವದು."

"ಯಸ್ಯ ಶೂಕಪ್ರಯೋಗೇಣ ಹಸ್ತೈಸ್ಸಮ್ಮರ್ದನೇನ ಚ ॥ ಮ
ಹತಾ ಶಿಶ್ನಯೋಗೇನ ಸ್ಪರ್ಶಜ್ಞಾನಂ ವಿನಶ್ಯತಿ ॥ ಲೋಬಾ
ನೋದ್ಭವಂ ತೈಲಂ ತತ್ರಯೋಜ್ಯಂ ಸದಾಬುಧೈಃ ॥"

"ಲಿಂಗವೃದ್ಧಿಯ ಔಷಧವೆಂದು ಶಿಕ್ಕಿದವರು ಹೇಳಿದ್ದನ್ನೆಲ್ಲಾ ಮಾಡುವ ಶೂಕಪ್ರಯೋಗದಿಂದಲೂ, ಹಸ್ತಮರ್ದನದಿಂದಲೂ ಇಂದ್ರಿಯ ದೊಡ್ಡದಾಗಿ ಅದರಲ್ಲಿ ಸ್ಪರ್ಶಜ್ಞಾನವೇ ನಾಶವಾಗುತ್ತದೆ. ಇಂತಹ ಸಂದರ್ಭದಲ್ಲಿ ವೈದ್ಯನಾದವನು ಲೋಬಾನದ ತೈಲವನ್ನು ಲಿಂಗಕ್ಕೆ ಮರ್ದನಮಾಡುತ್ತಾ ಬಂದರೆ ಸುಖವಾಗುವದು."

"ಮನಶ್ಶಿಲಾ ಟಂಕಣಂ ಚ ಕುಷ್ಟಂ ಕರ್ಷಪ್ರಮಾಣತಃ ॥ ಜಾ
ತೀಪತ್ರರಸಂ ಚೈವ ಕರ್ಷಂ ವೈ ತ್ರಯಮೇವಚ ॥ ತಿಲತೈಲೇ
ಪಾಚಯಿತ್ವಾ ಲಿಂಪೇದೇಕಾಂತರೇದಿನೇ ॥ ಏಕಂ ದಿನಂ ವಿಹಾ
ಯಾಥ ಚತ್ವಾರಿಂಶದ್ದಿನೇಷು ಚ ॥ ವಿಕೃತಿಶ್ಯೋಫಸೋನಶ್ಯೇ
ತ್ಕಾಮೋತ್ತೇಜಕರಂ ಪರಮ್ ॥"

"ಮಣಿಶಿಲೆ, ಬೆಳಿಗಾರ, ಚಂಗಲಕೋಷ್ಟ ಇವು ೧-೧ ತೊಲಾ, ಜಾಜೀಯಲೆಯರಸ ೪ ತೊಲಾ, ತಿಲತೈಲಾ ೬ ತೊಲಾ, ಇವೆಲ್ಲವನ್ನೂ ಈ ಎಣ್ಣೆಯಲ್ಲಿ ಹಾಕಿ ಮೃದ್ವಗ್ನಿಯಲ್ಲಿ ಪಕ್ವಮಾಡಿ, ತೈಲಮಾತ್ರ ವುಳಿದ್ದನ್ನು ಇಂದ್ರಿಯದಮೇಲೆ ಮರ್ದಿಸುತ್ತಾ ಬರಲು, ೪೦ ದಿನದಲ್ಲಿ ದಿನಬಿಟ್ಟು ದಿನ ಮರ್ದಿಸುತ್ತಾ ಬರುವದು. ಇದರಿಂದ ಇಂದ್ರಿಯವು ಸೊಟ್ಟಾಗಿದ್ದದ್ದು ಸರಿಯಾಗುತ್ತದೆ; ಕಾಮಶಕ್ತಿಯೂ ಉಂಟಾಗುತ್ತದೆ."

### ಈ ಕಾಲದಲ್ಲಿ ಪಥ್ಯಾಪಥ್ಯ.

"ಉಷ್ಣಂ ಚ ಶೀತಮುಷ್ಣಂ ಚ ತೈಲಂ ಯದ್ವಾತಕಾರಕಮ್॥
ತ್ಯಾಜ್ಯಂ ಶಿಶ್ನಗದೇ ನಿತ್ಯಂ ವ್ರಣವತ್ಸೇವನಂ ಹಿತಮ್ ॥ ಮು
ದ್ಗಂ ಘೃತಂ ಶುಭಾನ್ನಂ ಚ ದುಗ್ಧಂ ವಾ ತಂದುಲಂ ತಥಾ ॥"

"ಕೆಂಪುಮೆಣಸಿನಕಾಯಿ ಮುಂತಾದ ತೀಕ್ಷ್ಣಪದಾರ್ಥಗಳೂ, ಅತ್ಯಂತ ಉಷ್ಣಪದಾರ್ಥ, ಅತ್ಯಂತ ಶೀತಪದಾರ್ಥ, ಹುಳಿ, ತೈಲ, ವಾತಕಾರಿಪದಾರ್ಥ

ಇವೆಲ್ಲವನ್ನೂ ಶಿಶ್ನಜಾಡ್ಯದಲ್ಲಿ ವರ್ಜಿಸತಕ್ಕದ್ದು. ವ್ರಣರೋಗದಂತೆ ಆಚರಿಸತಕ್ಕದ್ದು. ಹೆಸರು, ತುಪ್ಪ, ಶುಭ್ರವಾದ ಹಲಕಾಲನ್ನ, ಹಾಲು, ಅಕ್ಕಿಯ ಅನ್ನ ಇವು ಸೇವಿಸಲರ್ಹವಾದವುಗಳು."

## ದಶಮೂಲಾರಿಷ್ಟ.

"ಪರ್ಣ್ಯೌ ಬೃಹತ್ಯೌ ಗೋಕಂಟೆ ಬಿಲ್ವಾಗ್ನಿ ಮಂಥನೋ ರಲೂಃ ॥ ಪಾಟಲಾ ಕಾಶ್ಮರೀ ಚೇತಿ ದಶಮೂಲ ಮಿಹೋಚ್ಯತೇ ॥ ದಶಮೂಲಾನಿ ಕುರ್ವೀತ ಭಾಗೈಃ ಪಂಚಪಲೈಃ ಪೃಥಕ್ ॥ ಪಂಚವಿಂಶತ್ಪಲಂ ಕುರ್ಯಾಚ್ಚಿತ್ರಕಂ ಪೌಷ್ಕರಂ ತಥಾ ॥ ಕುರ್ಯಾದ್ವಿಂಶತ್ಪಲಂ ಲೋಧ್ರಂ ಗುಡೂಚೀ ತತ್ಸಮಾಭವೇತ್ ॥ ಪಲೈಃ ಷೋಡಶ ಭಿರ್ಧಾತ್ರೀ ರವಿಸಂಖ್ಯೈರ್ದುರಾಲಭಾಃ ॥ ಖದಿರೋ ಬೀಜಸಾರಶ್ಚ ಪಥ್ಯಾಚೇತಿ ಪೃಥಕ್ಪಲೈಃ ॥ ಅಷ್ಟಾಭಿರ್ಗುಣಿತೈಃ ಕುಷ್ಠಂ ಮಂಜಿಷ್ಠಾ ದೇವದಾರು ಚ॥ ವಿಡಂಗಂ ಮಧುಕಂ ಭಾರ್ಙ್ಗೀಪಿತ್ಥೋಕ್ಷಃ ಪುನರ್ನವಾ ॥ ಚವ್ಯ ಮಾಂಸೀ ಪ್ರಿಯಂಗುಶ್ಚ ಸಾರಿಬಾ ಕೃಷ್ಣಜೀರಕಮ್ ॥ ತ್ರಿವೃತಾ ರೇಣುಕಾ ರಾಸ್ನಾ ಪಿಪ್ಪಲೀ ಕ್ರಮುಕಃ ಸಟೀ ॥ ಹರಿದ್ರಾ ಶತಪುಷ್ಪಾ ಚ ಪದ್ಮಕಂ ನಾಗಕೇಸರಮ್ ॥ ಮುಸ್ತಮಿಂದ್ರಯವಾ ಶೃಂಗೀ ಜೀವಕರ್ಷಭಕೌ ತಥಾ ॥ ಮೇದಾಶ್ಚಾನ್ಯಾ ಮಹಾಮೇದಾ ಕಾಕೋಲ್ಯೌ ಋದ್ಧಿವೃದ್ಧಿಚ ॥ ಕುರ್ಯಾತ್ಪೃಥಕ್ ದ್ವಿಪಲಿಕಾಃ ಪಚೇದಷ್ಟಗುಣೇ ಜಲೇ ॥ ಚತುರ್ಥಾಂಶ ಶೃತಂ ನೀತ್ವಾ ಮೃದ್ಭಾಂಡೇ ಸನ್ನಿಧಾಪಯೇತ್ ॥ ತತಷ್ಷಷ್ಟಿಪಲಾಂ ದ್ರಾಕ್ಷಾಂ ಪಚೇ ನ್ನೀರೇ ಚತುರ್ಗುಣೇ ॥ ತ್ರಿಪಾದಶೇಷಂ ಶೀತಂ ಚ ಪೂರ್ವಕ್ವಾಥೇ ಶೃತಂ ಕ್ಷಿಪೇತ್ ॥ ದ್ವಾತ್ರಿಂಶತ್ಪಲಕಂ ಕ್ಷಾದ್ರಂ ಗುಡಂ ದದ್ಯಾಚ್ಚತುಶ್ಶತಮ್॥ ತ್ರಿಂಶತ್ಪಲಾನಿ ಧಾತಕ್ಯಾಃ ಕಂಕೋಲಂ ಜಲಚಂದನಮ್॥ ಜಾತೀಫಲಂ ಲವಂಗಂ ಚ ತ್ವಗೇಲಾ ಪತ್ರಕೇಸರಮ್ ॥ ಪಿಪ್ಪಲೀ ಚೇತಿ ಸಂಪೂರ್ಣಭಾಗೈರ್ದ್ವಿಪಲಿಕೈಃ ಪೃಥಕ್ ॥ ಶಾಣಮಾತ್ರಾಂ ಚ ಕಸ್ತೂರೀಂ ಸರ್ವಮೇಕತ್ರ ನಿಕ್ಷಿಪೇತ್ ॥ ಭೂಮೌ ನಿಖನಯೇದ್ಭಾಂಡಂ ತತೋ ಜಾತೇ ರಸೇ ಪಿಬೇತ್ ॥ ಕತಕಸ್ಯ ಫಲಂ ಕ್ಷಿಪ್ತ್ವಾ ರಸಂ ನಿರ್ಮಲತಾಂ ನಯೇತ್ ॥ ಗ್ರಹಣೀ ಮರುಚಿಂ ಶೂಲಂ ಶ್ವಾಸಕಾಸ ಭಗಂದರಾ ॥ ವಾತ ವ್ಯಾಧಿಂ ಕ್ಷಯಂ ಛರ್ದಿಂ ಪಾಂಡುರೋಗಂ ಸಕಾಮಲಮ್ ॥ ಕುಷ್ಠಾನ್ಯ

ಶಾಂಸಿ ಮೇಹಾಂಶ್ಚ ಮಂದಾಗ್ನಿ ಮುದರಾಣಿಚ ॥ ಶರ್ಕರಾ ಮಶ್ಮರೀಂ ಚೈವ ಮೂತ್ರಕೃಚ್ಛ್ರಂ ಕ್ಷಯಂ ನಯೇತ್ ॥ ಕೃಶಾನಾಂ ಪುಷ್ಟಿಜನನೋ ವಂಧ್ಯಾನಾಂ ಪುತ್ರದಃ ಪರಃ ॥ ಅರಿಷ್ಟೋ ದಶಮೂಲಾಖ್ಯ ಸ್ತೇಜಶ್ಶುಕ್ರ ಬಲಪ್ರದಃ ॥ ”

“ ಶಾಲಪರ್ಣೀ, ಪ್ರಶ್ನಪರ್ಣೀ, ೨ ಗುಳ್ಳ, ನೆಗ್ಗಿಲು, ಬಿಲ್ವ, ಅರಣೀ (ಮಂಥನ) ಅರಲು, ಪಾಟಲಾ, ಕಾಶ್ಮೀರೀ, ಇವೇ ದಶಮೂಲಗಳು, ಇವು ಪ್ರತ್ಯೇಕ ೫-೫ ಪಲ, ಚಿತ್ರಮೂಲ ೨೫ ಪಲ, ಪುಷ್ಕರಮೂಲ ೨೫ ಪಲ, ಲೋಧ್ರ ೨೦ ಪಲ, ಅಮೃತಬಳ್ಳಿ ೨೦ ಪಲ, ನೆಲ್ಲಿಚಟ್ಟು ೧೬ ಪಲ, ತುರಚಿ ೧೨ ಪಲ, ಕಾಚು ೮ ಪಲ, ಭಂಗೀ ೮ ಪಲ, ಅಳಲೆಕಾಯಿ ೮ ಪಲ, ಚಂಗಲಕೋಷ್ಟ, ಮಂಜಿಷ್ಟೆ, ದೇವದಾರು, ವಾಯುವಿಳಂಗ, ಜೇಷ್ಟಮಧು, ಭಾರಂಗಿ, ಬ್ಯಾಲ, ತಾರೇಕಾಯಿ, ಪುನರ್ನವಾ, ಚವ್ಯ, ಜಟಾಮಾಂಸಿ, ಪ್ರಿಯಂಗು, ಅನಂತಮೂಲೀ, ಕರೀಜೀರಿಗೆ, ಲಾಲ್ತಿಗಡೆ, ರೇಣುಕಾ, ರಾಸ್ನೆ, ಹಿಪ್ಪಲಿ, ಅಡಕೆ, ಕಚೋರ, ಸೋಪು, ಪದ್ಮಾಕ್ಷ, ನಾಗಕೇಸರಿ, ತುಂಗಮುಸ್ತೆ, ಇಂದ್ರಜವೆ, ಕರ್ಕಾಟಕಶೃಂಗಿ, ಜೀವಕ, ಋಷಭಕ, ಮೇದಾ, ಮಹಾಮೇದಾ, ಕಾಕೋಲೀ, ಕ್ಷೀರಕಾಕೋಲೀ, ಋದ್ಧಿ, ವೃದ್ಧಿ ಇವು ೨-೨ ಪಲ, ಇವೆಲ್ಲಾ ಕೇರಿಸಿ ಇವುಗಳ ೮ ರಷ್ಟು ತೂಕದ ನೀರಿನಲ್ಲಿ ಕಷಾಯುವಿಡಬೇಕು. ಚತುರ್ಥಾಂಶ ವುಳಯುವದನ್ನು ನೋಡಿಕೊಂಡು ಇಳಿಸಬೇಕು. ದ್ರಾಕ್ಷಿ ೬೦ ಪಲವನ್ನು ಅದರ ೪ ರಷ್ಟು ಜಲದಲ್ಲಿ ಬೇರೆ ಮೃದ್ಭಾಂಡದಲ್ಲಿ ಕಷಾಯಮಾಡಿ ೧ನೇ ಹಿಸ್ಸಾ ಇಂಗಿ ೩ ಹಿಸ್ಸೆ ಇರುವಾಗ ಇಳಿಸಿ ಈ ಎರಡು ಕಷಾಯುಗಳನ್ನೂ ಒಂದೇ ಮೃದ್ಭಾಂಡದಲ್ಲಿ ಹಾಕಿ ಇದರಲ್ಲಿ ಜೇನುತುಪ್ಪ ೩೨ ಪಲ, ಬೆಲ್ಲ ೧೦೪ ಪಲ, ಧಾತಕೀಕುಸುಮ ೩೦ ಪಲ; ಕಂಕೋಲ, ಸೊಗದೆಬೇರು, ಕೆಂಪುಚಂದನ, ಜಾಫಲ, ಲವಂಗ, ದಾಲಚಿನ್ನಿ, ಯಾಲಕ್ಕಿ, ಲವಂಗಪತ್ರೆ, ನಾಗಕೇಸರಿ, ಹಿಪ್ಪಲಿ ಇವು ೨-೨ ಪಲ, ಕಸ್ತೂರಿ ೪ ಮಾಷ, ಇವನ್ನು ಬಾರೀಕ್ ಚೂರ್ಣಮಾಡಿ ಆ ಪಾತ್ರೇಲಿ ಹಾಕಿ, ಆ ಮೃದ್ಭಾಂಡದ ಮುಖಬಂಧನೆಯನ್ನು ಮಾಡಿ ಒಳ್ಳೇ ಉಷ್ಣವಿರುವ, ಶೀತವಿಲ್ಲದಿರುವ ಭೂಮಿಯಲ್ಲಿ ಹೊಗದುಬಿಡುವದು. ಅದನ್ನು ಸರಿಯಾಗಿ ಒಂದು ಮಾಸಕ್ಕೆ ತೆಗಿದು ಚಿಲ್ಲಬೀಜದಪುಡಿಯನ್ನು ಹಾಕಿದರೆ ಅದು ನಿರ್ಮಲವಾಗುತ್ತದೆ. ಅದನ್ನು ಬೇರೆ ತೆಗದುಕೊಂಡು ಅದನ್ನು ಅಗ್ನಿಬಲವರಿತು ೨-೨ ತೊಲಾ ನಿತ್ಯವೂ ಸೇವಿಸುತ್ತಾ ಬರುವದು. ಈ ದಶಮೂಲಾರಿಷ್ಟವು—ಸಂಗ್ರಹಣಿ, ಅರುಚಿ, ಶೂಲೆ, ಶ್ವಾಸಕಾಸ, ಭಗಂದರ, ವಾತವ್ಯಾಧಿಗಳು, ಕ್ಷಯು, ವಮನ, ಪಾಂಡುರೋಗ, ಕಾಮಲಾ, ಕುಷ್ಟ, ಮೊಳೇಜಾಡ್ಯ, ಪ್ರಮೇಹ, ಮಂದಾಗ್ನಿ,

ಉದರವಿಕಾರ, ಶರ್ಕರಾಮೇಹ, ಮೂತ್ರಕೃಛ್ರ, ಧಾತುಕ್ಷಯ, ಇವೇ ವನ್ನೂ ನಿರ್ಮೂಲನಮಾಡುತ್ತದೆ. ಕೃಶವಮನುಷ್ಯನನ್ನು ಪುಷ್ಟಿಪಡಿಸುವದು ವಂಧ್ಯೆಯು ಸೇವಿಸಿದರೆ ಸಂತಾನಪ್ರದವು. ಈ ದಶಮೂಲಾರಿಷ್ಟವು ತೇ ಜಸ್ಸು, ಬಲ, ವೀರ್ಯಗಳನ್ನು ದಯಪಾಲಿಸುವದು. ''

## ಮೃ ತ ಸ ಂ ಜೀ ವ ನೀ ಸು ರಾ .

" ನವಂ ಗುಡಂ ಚ ಸಂಗೃಹ್ಯ ಶತಮೇಕಪಲಂ ತಥಾ || ಬರ್ಬರೀ ತ್ವಕ್ ತಥಾಸಮ್ಯಗ್ಬದರೀ ತ್ವಚ ಮೇವಚ || ಪ್ರಸ್ಥಂ ಪ್ರಸ್ಥಂ ಪ್ರ ದಾತವ್ಯಂ ಪೂಗಂ ದೇಯಂ ಯಥೋಚಿತಮ್ || ದತ್ವಾ ಲೋ ಧ್ರಂ ಚ ಕುಡವಮಾರ್ದ್ರಕಂ ಚ ಪಲದ್ವಯಮ್ || ತೋಯ ಮಷ್ಟಗುಣಂ ದತ್ವಾ ಗುಡಂ ಸಂಘೋಲಯೇತ್ಸುಧೀಃ || ಪ್ರಥ ಮೇಚಾರ್ದ್ರಕಂ ದದ್ಯಾದ್ದ್ವಿತೀಯೇ ಬರ್ಬರೀತ್ವಚಮ್ || ತೃ ತೀಯೇ ಬದರೀಂ ದತ್ವಾ ಗೋಲಯಿತ್ವಾ ಭಿಷಗ್ವರಃ || ಮುಖೇ ಶರಾವಕಂ ದತ್ವಾ ಯತ್ನಾತ್ಕೃತ್ವಾ ಚ ಬಂಧನಮ್ || ಮು ಖಂ ಸಂಬಂಧನಂ ಕೃತ್ವಾ ಸ್ಥಾಪಯೇದ್ದಿನವಿಂಶತಿಮ್ || ಮೃ ಣ್ಮಯೇ ಮೋಚಿಕಾಯಂತ್ರೇ ಮಯೂರಾಖ್ಯೇಽಪಿ ಯಂತ್ರ ಕೇ|| ಯಥಾವಿಧಿ ಪ್ರಕಾರೇಣ ಮಂದಮಂದೇನ ವಹ್ನಿನಾ || ಚು ಲ್ಲೀಮಧ್ಯೆ ನಿಧಾತವ್ಯಂ ಮೃತ್ತಿಕಾ ದೃಢಭಾಜನೇ || ತದೌಷಧಂ ಚ ತನ್ಮಧ್ಯೇ ಸಮುದ್ಧೃತ್ಯ ವಿನಿಕ್ಷಿಪೇತ್ || ನಲೀಚ ಯುಗಲಂ ದತ್ವಾ ಕುಂಭೌ ಚ ಗಜಕುಂಭವತ್ || ಕುಂಭಮಧ್ಯೆ ನಿಧಾತ ವ್ಯಂ ಪೂಗಂ ಚ ತೈಲವಾಲುಕಮ್ || ದೇವದಾರು ಲವಂಗಂ ಚ ಪದ್ಮಕೋಶೀರ ಚಂದನಮ್ || ಶತಪುಷ್ಪಾ ಯಮಾನೀಕಾ ಮರಿ ಚಂ ಜೀರಕದ್ವಯಮ್ || ಶಟೀ ಮಾಂಸೀ ತ್ವಗೇಲಾ ಚ ಜಾತೀ ಫಲ ಸಮುಸ್ತಕಮ್ || ಗ್ರಂಥಿಪರ್ಣೀ ತಥಾ ಶುಂಠೀ ಮೇಥೀ ಮೇಷೀ ಚ ಚಂದನಮ್ || ವಿಷಾಂಚಾರ್ದ್ಧ ಪಲಾ ಭಾಗಾ ಕುಟ್ಟಯಿತ್ವಾ ವಿನಿಕ್ಷಿಪೇತ್ || ಯಥಾವಿಧಿ ಪ್ರಕಾರೇಣ ಚಾಲನಂ ದಾಪಯೇತ್ಸುಧೀಃ || ಬುದ್ಧಿಮಾ ಸೋಂಜನಂ ಕೃತ್ವಾ ಉದ್ಧ ರೇದ್ವಿಧಿವತ್ಸುರಾಮ್ || ಏತನ್ಮದ್ಯಂ ಪಿಬೇನ್ನಿತ್ಯಂ ಯಥಾಧಾತು ವಯಃ ಕ್ರಮಮ್ || ಆರೋಗ್ಯ ಜನನಂ ದೇಹದಾರ್ಢ್ಯ ಕೃದ್ಬಲ ವರ್ಧನಮ್ || ಮೇಧಾಗ್ನಿ ಸ್ಮೃತಿ ಕೃದ್ವೀರ್ಯ ಶುಕ್ರಕೃ ದ್ವಾತ ನಾಶನಮ್ || ಬಲಪುಷ್ಟಿಕರಂ ಚೈವ ಕಾಮದಂ ದೀಪನಂ ಪರ ಮ್ || ದಶಸ್ತ್ರೀ ರಮಯೇನ್ನಿತ್ಯಮಾನಂದ ಉಪಜಾಯತೇ || ರಣೇ ತೇಜೋ ಮಯಃ ಸದ್ಯೋ ಯಥಾ ಭೀಮಃ ಪರಾಕ್ರಮೇ||"

"ನವೀನ ಬೆಲ್ಲ ೪೦೦ ತೊಲೆ, ಜಾಲಿಯುಚಕ್ಕೆ, ಬದರೀಚಕ್ಕೆ, ಅಡಕೆ ಪ್ರತ್ಯೇಕ ೪೦-೪೦ ತೊಲೆ, ಲೋಧ್ರ ೨೦ ತೊಲೆ, ಹಸೀಶುಂಠಿ ೮ ತೊಲೆ, ಇವೆಲ್ಲವನ್ನೂ ೮ ರಷ್ಟು ನೀರಿನಲ್ಲಿ—ಅಂದರೆ ಮೊದಲು ಬೆಲ್ಲವನ್ನು ಹಾಕಿ ಕರಗಿಸುವದು, ಅನಂತರ ಮೊದಲು ಹಸೀಶುಂಠಿ, ಜಾಲೀಚಕ್ಕೆ ಅನಂತರ ಬದರೀಚಕ್ಕೆ ಹಾಕಿ ಉತ್ತಮವಾಗಿ ಕೂಡಿಸಬೇಕು. ಅನಂತರ ಅಡಕೆಯು ಮತ್ತು ಲೋಧ್ರದ ಚೂರ್ಣವನ್ನು ಹಾಕಿ ಆ ಪಾತ್ರೆಯ ಮುಖಬಂಧನಮಾಡಿ ೨೦ ದಿನದವರಿಗೆ ಇಟ್ಟುಬಿಡಬೇಕು. ಅನಂತರ ಇದನ್ನು ಮಣ್ಣಿನ ವಾರುಣೀಯಂತ್ರ ಅಥವಾ ಮಯೂರಯಂತ್ರದಲ್ಲಿ ಹಾಕಿ ಮಂದಮಂದ ಅಗ್ನಿಯಲ್ಲಿ ಬಿಸಿಮಾಡಬೇಕು. ಅನಂತರ ಇದರಲ್ಲಿ—ಅಡಕೆ, ಚಿಟ್ಟಾಮುಟ್ಟ, ದೇವದಾರು, ಲವಂಗ, ಪದ್ಮಾಕ್ಷ, ಮುಡಿವಾಳ, ಕೆಂಪುಚಂದನ, ಸೋಪು, ಅಜವಾನ, ಮೆಣಸು, ೨ ಜೀರಿಗೆ, ಕಚೋರ, ಜಟಾಮಾಂಸಿ, ದಾಲಚಿನ್ನಿ, ಯಾಲಕ್ಕಿ, ಜಾಫಲ, ತುಂಗಮುಸ್ತೆ, ಗ್ರಂಥಿಪರ್ಣೀ, ಶುಂಠಿ, ಮೆಂತಿಯು, ಮೇಷಶೃಂಗಿ, ಶ್ರೀಗಂಧ ಇವು ೨-೨ ತೊಲಾ ಕುಟ್ಟಿ ವಸ್ತ್ರಗಾಳಿತಮಾಡಿ ಹಾಕುವದು. ಚನ್ನಾಗಿ ಕಲಕುವದು. ಅನಂತರ ಮುಖಬಂಧನೆಮಾಡಿ ನಲ್ಲಿಯನ್ನು ತಗಲಿಸಿ ವಿಧಿಪೂರ್ವಕವಾಗಿ ಅರ್ಕ ಇಳಿಸುವದು. ಇದನ್ನು ವಯೋನುಗುಣ್ಯವಾಗಿ ೨ ತೊಲೆಗಿಂತಲೂ ಕಡಿಮೆಯಾಗಿ ಸೇವಿಸುವದು.. ಇದರ ಸೇವನೆಯಿಂದ ಮನುಷ್ಯನು ಅರೋಗಿಯಾಗಿರುತ್ತಾನೆ. ದೇಹ ದೃಢವಾಗುತ್ತದೆ. ಬಲ, ಮೇಧಾ, ಅಗ್ನಿಸ್ಮೃತಿ, ವೀರ್ಯ, ಪುಷ್ಟಿ, ಕಾಮಾಗ್ನಿ ಇವು ಲಭಿಸುವವು. ದಶಸ್ತ್ರೀಯರಲ್ಲಿಯೂ ರತಿಮಾಡುವಷ್ಟು ಶಕ್ತಿಯುಂಟಾಗುವದು. ರಣದಲ್ಲಿ ಭೀಮಪರಾಕ್ರಮ ವುಂಟಾಗುವದು. ಇದು ಮೃತಸಂಜೀವನೀಸುರಾ."

## ಭಲ್ಲಾತಕಯೋಗ.

"ಅನುಭೂತಂ ಶುಭಂ ಯೋಗಂ ಪ್ರಾಪ್ತಮಾಪ್ತಸಕಾಶತಃ ॥ ತದಹಂ ಸಂಪ್ರವಕ್ಷ್ಯಾಮಿ ಶೃಣು ತಾತ ವಿಧಾನತಃ॥ ಪಕ್ವಾನ್ ಭಲ್ಲಾತಕಾಂಶ್ಚೈವ ಮೃದುನಾತೇನ ಪಾತಿತಾನ್ ॥ ಆನೀಯ ವಿಧಿನಾ ಕುಟ್ಯ ತದೂರ್ಧ್ವೀಕೃತ ಮೂರ್ಧಜಾನ್ ॥ ಘೃತೇನ ಪಾಣಿಂ ಸಂಲಿಪ್ಯ ಸಗುಡಂ ಮೃದು ಪೇಷಯೇತ್ ॥ ಮಾಷ ಮಾತ್ರ ಪ್ರಮಾಣೇನ ವಟೀ ಕಾರ್ಯಾ ಪ್ರಯತ್ನತಃ ॥ ಶುದ್ಧಂ ಘೃತಂ ಸಮಾನೀಯ ಮುಖೇ ಸಂಲಿಪ್ಯ ಪಾಯಯೇತ್ ॥ ವಟಿಕಾಂ ಭಕ್ಷಯಿತ್ವಾಥ ಘೃತಾನುಪಾನ ಮಾಚರೇತ್ ॥ ದಿನೇದಿನೇಚ ಸಂಭುಜ್ಯ ಲವಣಾದೀಂಶ್ಚ ವರ್ಜಯೇತ್ ॥ ನೀರೋಗೋ ಬಲವಾನ್ ಧೀಮಾನ್ ಮಾಸೈಕೇ ನ ಭವಿಷ್ಯತಿ ॥ ಘೃತೇನ ಭಕ್ಷಯೇ

ದನ್ನಂ ವಾತಪಂ ಚಾಶ್ರಯೇತ್ಪಲು ॥ ಉಪದಂಶ ಪ್ರಮೇಹಾರ್ತ್ಯಃ ಫಿರಂಗಾಖ್ಯೈವದಾರುಣಾಃ ॥ ವಾತವ್ಯಾಧಿ ಸ್ತಥಾ ಚೈವಂ ನಶ್ಯಂತ್ಯೇವ ನ ಸಂಶಯಃ ॥ ವಿರೇಚನಂ ಪುರಾ ಕೃತ್ವಾ ಪಶ್ಚಾದೇನಂ ಪ್ರಭಕ್ಷಯೇತ್ ॥ ”

“ ಒಬ್ಬ ಮಹಾತ್ಮರಿಂದ ಉಪದೇಶಿಸಲ್ಪಟ್ಟ ಮತ್ತು ಅನುಭವಸಿದ್ಧ ಮಾಡಿದ ಸಿದ್ಧಕ್ರಿಯೆಯನ್ನು ಹೇಳುತ್ತೇವೆ—ಮಂದವಾದ ಗಾಳಿಯಿಂದ ತಾನಾಗಿಯೇ (ಪಕ್ವವಾಗಿ) ಉದುರಿದ ಗೇರುಬೀಜಗಳನ್ನು ತಂದು ತಲೆಮೇಲಿರುವ ತೊಟ್ಟನ್ನು ತೆಗದು, ಇಟ್ಟಿಗೇಪುಡಿಯಲ್ಲಿ ನೀರುಹಾಕಿ ಕಲಿಸಿ ಶುದ್ಧಿಮಾಡುವದು. ಅನಂತರ ಕೈಗೆ ತುಪ್ಪವನ್ನು ಹಚ್ಚಿಕೊಂಡು ಆ ಬೀಜಗಳನ್ನು ಚನ್ನಾಗಿ ಕುಟ್ಟುತ್ತಾ ಬರುವದು. (ಆ ಬೀಜದ ರಸವು ಮೈಮೇಲೆ ಎಲ್ಲಿ ಬೀಳುವದೋ ಅಲ್ಲಿ ವ್ರಣವಾಗುವದಾದ್ದರಿಂದ ಯಾವಕಡೆಗೂ ಆ ಗೇರುಬೀಜದ ಎಣ್ಣೆ ಬೀಳದಂತೆ ನೋಡಿಕೊಳ್ಳುವದಲ್ಲದೆ, ಇದಕ್ಕಾಗಿಯೇ ಕೈಗೂ ಸಹ ತುಪ್ಪವನ್ನು ಹಚ್ಚಿಕೊಳ್ಳುವದು.) ಆ ಗೇರುಬೀಜ ಮುದ್ದೆಯಾದನಂತರ ಅದರ ಸಮತೂಕದ ಹಳೇಬೆಲ್ಲವನ್ನೂ ಹಾಕಿಕೊಂಡು, ಇವೆರಡೂ ಒಂದೇ ಜೀವವಾಗುವಂತೆ ಚನ್ನಾಗಿ ಕುಟ್ಟುವದು. ಅನಂತರ ೧-೧ ಮಾಷತೂಕದ ಗೋಲಿಗಳನ್ನು ಮಾಡಿಕೊಳ್ಳುವದು. ರೋಗಿಗೆ ಮೊದಲು ವಮನ ವಿರೇಚನಗಳನ್ನು ಮಾಡಿಸಿ, ಔಷಧಸೇವನೆಗೆ ಮೊದಲೇ ಒಳ್ಳೇ ಆಕಳತುಪ್ಪದ ಒಂದು ಗುಟುಕನ್ನು ಬಾಯಿಯಲ್ಲಿ ಎಲ್ಲಾ ಕಡೆಗೂ ಹರಡುವಂತೆ ಮಾಡಿಕೊಂಡು, ಆ ತುಪ್ಪದ ಮಧ್ಯೆ ಮೇಲಿನ ಒಂದು ಮಾತ್ರೆಯನ್ನು ನುಂಗಿಬಿಟ್ಟು, ಪುನಃ ಮತ್ತೊಂದು ಗುಟುಕು ತುಪ್ಪವನ್ನೂ ಕುಡಿಯುವದು. ಹೀಗೆ ನುಂಗುವಾಗ ಬಾಯಿಯ ಯಾವ ಭಾಗಕ್ಕೂ ಮಾತ್ರೆಯು ತಗಲದಂತೆ ನೋಡಿಕೊಳ್ಳುವದು. ಹೀಗೆ ೧ ತಿಂಗಳು, ದಿನ ೧ ಹೊತ್ತಿನಂತೆ ಸೇವಿಸುತ್ತಾ ಬಂದರೆ—ಉಪದಂಶ, ಪ್ರಮೇಹ, ಮೊಳೇಜಾಡ್ಯ, ದಾರುಣವಾದ ಫಿರಂಗಿಜಾಡ್ಯ ಇವು ನಾಶವಾಗುವವು. ವಾತವ್ಯಾಧಿಗಳು ಇದರಿಂದ ನಿಶ್ಶೇಷವಾಗುವವು. ಇದರ ಪಥ್ಯಕ್ರಮವಾಗಿ ನಡಿಸಬೇಕು. ಹುಳಿ, ಮೆಣಸಿನಕಾಯಿ, ಶಲದೀಪದಾರ್ಥ ಕೂಡದು. ಬಿಸಲು, ಗಾಳಿಯನ್ನೂ ಸೇವಿಸಬಾರದು. ”

## ಮಹಾಕಲ್ಕ.

“ ಮಹಾಕಲ್ಕಂ ಪ್ರವಕ್ಷ್ಯಾಮಿ ಶ್ರೂಯತಾಂ ಶಿಷ್ಯಸತ್ತಮ ॥ ಧಾನ್ಯಾಭ್ರಕಂ ವಿನಿಕ್ಷಿಪ್ಯ ಮುಸಲೀಂ ರಸಮರ್ದಿತಮ್ ॥ ಸ್ಥಾಲ್ಯಾಂ ಕ್ಷಿಪ್ತ್ವಾ ನಿರುಧ್ಯಾಥ ಪಿಧಾನ್ಯಾ ಮಧ್ಯರಂಧ್ರಯಾ ॥ ಸ್ಥಾಲ್ಯಧೋಜ್ವಾಲಯೇದ್ವಹ್ನಿಂ ಯಾಮಪರ್ಯಂತಮುದ್ಧೃತಮ್ ॥ ತ

ತತಃ ಕ್ಷಿಪೇತ್ಪಿಧಾನಾಭ್ಯಾಂ ಹಿ ವ್ಯೋಮ್ನಸ್ತ್ವಷ್ಟಗುಣಂ ಪಯಃ ॥ ಜೀರ್ಣೇ ಪಯಸಿ ಪಿಷ್ಟ್ವಾತತ್ತಾಲಮೂಲೀರಸೈಃ ಪುನಃ ॥ ಇತ್ಥಂ ಹಿ ಸಾಧಯೇದ್ವ್ಯೋಮ ತ್ರಿವಾರಮತಿಯತ್ನತಃ ॥ ಅಜಾದುಗ್ಧ ಪುಟೈಃ ಪಶ್ಚಾದ್ವಾರಿಣಾ ವಿಂಶತಿಃ ಖಲೇ ॥ ಕಂಪಿಲ್ಲೀನ ರಸೇನಾಪಿ ವಿಷ್ಣುಕ್ರಾಂತಾ ರಸೇನ ಚ ॥ ಕದಲೀ ಕಂದತೋಯೇನ ತಾಲಮೂಲೀ ರಸೇನಚ ॥ ಶತವಾರಂ ಪುಟಂ ದೇಯಂ ಭವೇದ್ವ್ಯೋಮರಸಾಯನಮ್ ॥ ತದ್ವ್ಯೋಮಭಸ್ಮಿತಂ ತಾಪ್ಯ ಭಸ್ಮ ತಾಮ್ರಸ್ಯ ಭಸ್ಮ ಚ ॥ ಶುಲ್ಬಭಸ್ಮ ಚ ತತ್ಸರ್ವಂ ಸಮಾಂಶಂ ಪರಿಕಲ್ಪಯೇತ್ ॥ ಭಾವಯೇತ್ಸಪ್ತಧಾ ನಿಂಬರಸೈರ್ಲೋಧ್ರರಸೇನ ಚ॥ ತ್ರಿಫಲಾಯಾಃ ಕದಲ್ಯಾಶ್ಚ ಕೇತಕ್ಯಾಮಾರ್ಕವಸ್ಯ ಚ ॥ ಕೋರಕಸ್ಯಾಪಿ ಸಾರೇಣ ತಾವದ್ವಾರಾಣಿಯತ್ನತಃ ॥ ಇತಿ ನಿಷ್ಪನ್ನಕಲ್ಕೇಽಸ್ಮಿನ್ ತತ್ಸಮಾಂ ತ್ರಿಫಲಾಂ ಕ್ಷಿಪೇತ್ ॥ ಭಸ್ಮಸೂತಂ ಸಿತಾವ್ಯೋಷಂ ಚಿತ್ರಕಂ ಚ ಪೃಥಕ್ ಪೃಥಕ್ ॥ ಮಧುನಾ ಗುಟಿಕಾಃ ಕಾರ್ಯಾಃ ಶಾಣೇನ ಸಮಿತಾಃ ಖಲು ॥ ಮಹಾಕಲ್ಪ ಇತಿಖ್ಯಾತೋ ಹ್ಯಶ್ವಿಭ್ಯಾಂ ಪರಿಕೀರ್ತಿತಃ ॥ ವಿಧಿನಾ ವರ್ಷ ಪರ್ಯಂತಂ ಭಕ್ಷಯೇನ್ಮತಿಮಾನ್ನರಃ ॥ ಬಲವೃದ್ಧಿಕರಃ ಶಶ್ವತ್ಸರ್ವರೋಗ ನಿವಾರಕಃ ॥ ಮೇಹಾನರ್ಶಾಂಸ್ತಥಾ ಪಾಂಡು ಕಾಸ ಶ್ವಾಸ ಹಲೀಮಕಾನ್॥ ಉಪದಂಶಂ ಫಿರಂಗಂ ಚ ಕುಷ್ಟಂವಾಪಿ ನಿಹಂತ್ಯಸೌ ॥ ತಥಾಧಾತುಕ್ಷಯಂ ಹಂತಿ ಬಲವೀರ್ಯಪ್ರದಂ ಭುವಿ ॥ ”

“ಈಗ ಮಹಾಕಲ್ಪನಾಮಕ ಉತ್ತಮ ರಸಾಯನವನ್ನು ಹೇಳುತ್ತೇವೆ—ಉತ್ತಮವಾದ ಕೃಷ್ಣಾಭ್ರಕವನ್ನು ತಂದು ಮುಸಲೀ (ನೆಲತಾಟಗಡ್ಡೆ) ರಸದಲ್ಲಿ ಖಲ್ವದಲ್ಲಿ ಅರಿಯುವದು. ಅನಂತರ ಒಂದು ಹಂಡಿಯಲ್ಲಿ ತುಂಬುವದು. ಆ ಹಂಡಿಯ ಮೇಲಕ್ಕೆ ಮಧ್ಯದಲ್ಲಿ ಮಧ್ಯೆ ತೂತುಗಳಿರುವ ಶರಾವ (ಮುಚ್ಚಳ) ವನ್ನು ಮುಚ್ಚಬೇಕು. ಅಂಚುಸಂದಿಗಳನ್ನು ವಜ್ರಸರಿಯಿಂದ ಮುಚ್ಚಬೇಕು. ಆ ಹಂಡಿಯನ್ನು ಒಲೇಮೇಲಿಟ್ಟು ತೀಕ್ಷ್ಣವಾದ ಅಗ್ನಿಯ ಉರಿಹಾಕಬೇಕು. ಆ ಹಂಡಿಯ ಮೇಲಿರುವ ಶರಾವದ ರಂಧ್ರದ ಮೂಲಕ ಸ್ವಲ್ಪಸ್ವಲ್ಪವಾಗಿ ಅಭ್ರಕದ ೮ ಪಾಲು ಆಕಳಹಾಲನ್ನು ಹಾಕುತ್ತಾ ಬರಬೇಕು. ಆ ಹಾಲೆಲ್ಲಾ ಆ ಅಭ್ರಕವು ಕುಡಿದುಬಿಡಬೇಕು. ಅನಂತರ ಈ ಅಭ್ರಕವನ್ನು ತೆಗೆದು ಮುಸಲೀ (ನೆಲತಾಟಗಡ್ಡೆ) ಯ ರಸದಲ್ಲಿ ಮತ್ತೆ ಖಲ್ವದಲ್ಲಿ ಅರಿಯುವದು. ಮತ್ತೆ ಆ ಹಂಡಿಯಲ್ಲಿಟ್ಟು ಮೊದಲಿನಂತೆ ಆ ಅಭ್ರಕದ ೮ ಪಾಲು ಹಾಲು ಕುಡಿಸುವದು. ಹೀಗೆ ೩ ಸಲ ಮಾಡುವದು.

ಆಮೇಲೆ ಮತ್ತೆ ಮುಸಲೀರಸದಲ್ಲಿ ಅರಿಯುವದು. ಅನಂತರ ೨೦ ಪುಟ ಆಡಿ ಹಾಲಿನಲ್ಲಿ ಕೊಡುವದು. ಹಾಗೆಯೇ ಕಂಪಿಲ್ಲಕರಸದಲ್ಲಿ, ವಿಷ್ಣುಕ್ರಾಂತಾರಸದಲ್ಲಿ, ಬಾಳೇಗಡ್ಡೆರಸದಲ್ಲಿ, ಮತ್ತೆ ಮುಸಲೀರಸದಲ್ಲಿ ಹೀಗೆ ೧೦೦ ಪುಟ ಕೊಡುವದು. ಪುಟ ಪ್ರತಿಪುಟಕ್ಕೂ ಬೆಂಕಿಯಲ್ಲಿ ಪುಟಹಾಕುತ್ತಾ ಬರುವದು ಹೀಗೆ ೧೦೦ ಪುಟಹಾಕಿದರೆ ಉತ್ತಮವಾದ ಅಭ್ರಕಭಸ್ಮವಾಗುವದು. ಇದರಲ್ಲಿ ಸ್ವರ್ಣಮಾಕ್ಷಿಕಭಸ್ಮ, ತಾಮ್ರಭಸ್ಮ, ಕಾಂತ ಲೋಹಭಸ್ಮ ಇವುಗಳನ್ನು ಸೇರಿಸಿ—ಬೇವು, ಲೋಧ್ರ, ಬಾಳೇಗಡ್ಡೆ, ತ್ರಿಫಲಾಕಷಾಯ, ಕೇಕೀರಸ, ಗರಗ, ಬೂರಗದಹೂವು ಇವುಗಳಿಂದ ಒಂದೊಂದು ಭಾವನೆಮಾಡುತ್ತಾ ಒಣಗಿಸುತ್ತಾ ಅರಿಯುವದು. ಅನಂತರ ಇದರ ಸಮತೂಕ ತ್ರಿಫಲೆಯಚೂರ್ಣ ತಥಾ ರಸಸಿಂಧೂರ, ತ್ರಿಕಟುಕ, ಚಿತ್ರಮೂಲ ಇವುಗಳನು ಸೇರಿಸಿ ಜೇನುತುಪ್ಪದಲ್ಲಿ ಅರದು ೪-೪ ಮಾಷೆಯತೂಕದ ಗೋಲಿಗಳನ್ನು ಮಾಡುವದು. ಒಂದೊಂದು ಗೋಲಿಯನ್ನು ದಿನಕ್ಕೆ ಒಂದರಂತೆ ೧ ವರ್ಷದವರಿಗೂ ಸೇವಿಸುತ್ತಾ ಬಂದರೆ (ಪಥ್ಯದಲ್ಲಿರಬೇಕು.) ಸರ್ವರೋಗಹರ, ಬಲವೃದ್ಧಿ, ಎಲ್ಲಾ ಮೇಹರೋಗಗಳೂ, ಮೊಳೇಜಾಡ್ಯ, ಪಾಂಡು, ಕಾಸಶ್ವಾಸ, ಹಲೀಮಕ, ಕಾಮಲಾ, ಉಪದಂಶ, ಫಿರಂಗಜಾಡ್ಯ, ಕುಷ್ಟ ಸಹ ನಾಶವಾಗುವವು. ವೀರ್ಯವೃದ್ಧಿಯನ್ನು ಮಾಡಿ ತೇಜೋಬಲಗಳನ್ನು ಕೊಡುತ್ತದೆ.''

## ದಿವಾಲಮುಶ್ಕ್ (ಯುನಾನಿ.)

" ನವಮಾಷಕ ಚೋಲಂ ಚ ಮಾಷಕಂ ದಲ ತೌಪ್ಯಜಮ್ || ಪ್ರವಾಲಂ ಮೌಕ್ತಿಕಂ ಚೈವ ಭೇದ ಖರ್ಪರಮುತ್ತಮಮ್ || ಮಣಿಂ ಯಾಕೂತನಾಭ್ರಂ ಚ ಮೃಗನಾಭಿ ಸ್ತಥಾಂಬರಮ್ || ಉತ್ತಮಸ್ವರ್ಣಪತ್ರಾಣಿ, ಸಾರ್ಧಮಾಷ ಪ್ರಮಾಣತಃ || ಕಾಶ್ಮೀರಕಂ ಲಘುಶ್ಚೈಲಾ ದ್ವಿಮಾಷಂ ಚ ಪೃಥಕ್ ಪೃಥಕ್ || ಆಮಪಟ್ಟಸ್ಯ ಚೂರ್ಣಂ ತು ಟಂಕ ಮಾತ್ರ ಪ್ರಮಾಣತಃ|| ಚಂದನಂ ಶತಪತ್ರೀ ಚ ಗೋಜಿಹ್ವಾ ಪತ್ರ ಪುಷ್ಪಕಮ್ || ಜಾತಿಪತ್ರೀ ತಥಾ ಸೈವ ಶಾಣಮಾತ್ರ ಪ್ರಮಾಣತಃ || ನಿಸ್ತುಷಂ ಧಾನ್ಯಕಂ ಚೈವ ತುಗಾಕ್ಷೀರೀ ತಥೈವ ಚ || ಕರ್ಷಾರ್ಧಕಪ್ರಮಾಣೇನ ಯೋಜಯೇನ್ಮತಿಮಾನ್ನರಃ || ವೈಕ್ರಾಂತ ಮಾಷಕಂ ಚೈವ ಖರ್ಪರಂ ಚ ಪೃಥಕ್ಸಮಮ್ || ವಿರಕ್ತಿಕೋತ್ಪರಂಚೈವ ಟಂಕ ದ್ವಯ ಪ್ರಮಾಣಕಂ || ತ್ರಿಟಂಕಂ ನಿಸ್ತುಷಂ ಶುದ್ಧಂ ಬೀಜಂ ಕುಲ್ಫಕಸಂ ಭವಮ್ || ಮೃದುದಾಡಿಮಸಾರಂ ಚ ಸಾರಂ ಮುಷ್ಟಿವದರಜಮ್ || ಸಾರಾಮ್ರತಫಲಾಬೀದಂ ಗಂಗ ಶತಪ

ತ್ರೀಜಲನ್ ॥ ದ್ವಿಭಾಗಾ ಚ ಸಿತಾ ಶುದ್ಧಾ ಭಾಗೈಕಂ ನಾಕ್ಷಿ
ಕಂ ಸ್ಮೃತಮ್ ॥ ಸಮ್ಮೇಲ್ಯ ವಿಧಿನಾ ಸರ್ವಮವಲೇಹಂ ಚ
ಕಾರಯೇತ್ ॥ ಕಸ್ತೂರಿಕಾವಲೇಹೋಽಯಂ ಭಕ್ಷಣೀಯಃ ಸದಾ
ನರೈಃ ॥ ವಾತರೋಗಾದಿ ಶಮನಂ ಬಲಕಾಂತಿ ವಿವರ್ಧನಮ್ ॥
ಯಥಾಽಪಿ ಉತ್ತಮಾಯೋಗಾ ಹ್ಯಸ್ಮಾತ್ಪೂರ್ವಂ ಪ್ರಕಾಶಿತಾಃ ॥
ಲೋಕೇ ಪ್ರಥಾಧುನಾಚಾಸ್ಯ ಅತ ಅತ್ರ ಉದಾಹೃತಮ್ ॥ ”

“ದಾಲಚಿನ್ನಿ ೯ ಮಾಸೆ, ಬೆಳ್ಳಿಯವರ್ಕ್ ೧ ಮಾಸೆ, ಕೊರಿಯದಿರುವ ಮುತ್ತು, ಜಹರ್ ಮೊಹರಾಖತಾಯಿ, ಹವಳದಬಳ್ಳಿ, ಉತ್ತಮವಾದ ಯಾಕೂತಮಣಿ, ಕಹರವಾ, ಅಂಬರ್, ಕಸ್ತೂರೀ, ಚಿನ್ನದವರ್ಕ್, ಇವು ೧॥-೧॥ ಮಾಸೆ, ಕೇಸರಿ, ಸಣ್ಣಯಾಲಕ್ಕಿ, ಇವು ೨-೨ ಮಾಸೆ, ಆವರೇಶಮುದಚೂರ್ಣ, ಶ್ರೀಗಂಧ ಅರದದ್ದು, ಗುಲಾಬಿಯಹೂವು, ಗಾಜುವಾಬೀಜ, ಗಾಜವೆಯ ಹೂವು, ಜಾವಿತ್ರೀ ಇವು ೪-೪ ಮಾಸೆ, ಕೊತ್ತುಂಬರೀ ಶಿಪ್ಪೆ ತೆಗದ ಅಕ್ಕಿ, ವಂಶಲೋಚನ ಇವು ೬-೬ ಮಾಸೆ, ಅಫೀಮು, ಖರ್ಪರ ಇವು ೬ ಮಾಸೆ, ೨ ರತಿಯಂತೆ, ಕುಲುಫೇಯಬೀಜ ೯ ಮಾಸೆ, ಸೇಬು, ಅನಾರ್ (ದಾಳಿಂಬ) ಬದರೀಹಣ್ಣು ಇವುಗಳ ತಿರುಳು ೨।-೨। ಮಾಸೆ, ಗುಲಾಬಿಯ ಅರ್ಕ್ ॥ ಪಾವು, ಸೋಪಿನ ಅರ್ಕ್ ಅರ್ಧಪಾವು, ಜೇನುತುಪ್ಪ ೧ ಭಾಗ, ಸಕ್ಕರೆ ೨ ಭಾಗ— ಇವೆಲ್ಲವನ್ನೂ ವಿಧಿಪೂರ್ವಕವಾಗಿ ಶೇರಿಸಿ ಅವಲೇಹ (ಮಾಜೂನ್) ಮಾಡುವದು. ಇದು ದಿವಾಲ್‌ಮುಷ್ಕ್ ಎಂದು ಪ್ರಸಿದ್ಧವಾದದ್ದು. ಇದನ್ನು ಉಚಿತರೀತಿಯಾಗಿ ಸೇವನೆ ಮಾಡಿದರೆ ವಾಯುರೋಗಗಳು ನಾಶವಾಗುವವು. ಬಲ, ಕಾಂತಿಗಳನ್ನು ವೃದ್ಧಿಮಾಡುತ್ತದೆ. ಯದ್ಯಪಿ ನಾವು ಈ ಮೊದಲೇ ಇದಕ್ಕಿಂತಲೂ ಎಷ್ಟೋ ಶ್ರೇಷ್ಠಗಳಾದ ವಾಜೀಕರಣ ಪ್ರಯೋಗಗಳನ್ನು ಕಥನಮಾಡಿದ್ದೇವೆ. ಇದು ವ್ಯವಹಾರದಲ್ಲಿ ಪ್ರಸಿದ್ಧವಾದ್ದರಿಂದ ಇದನ್ನೂ ಬರೆದದ್ದಾಯಿತು.”

## ಆಮ್ರಪಾಕ (ಬೇರೇವಿಧ.)

“ಪಕ್ವವಾದ ಶೀಮಾವಿನಹಣ್ಣಿನರಸ ೧೨೮೦ ತೊಲಾ, ಸಕ್ಕರೆ ೩೨೦ ತೊಲಾ, ಘೃತ ೮೦ ತೊಲಾ, ಇವೆಲ್ಲವನ್ನೂ ಮಣ್ಣಿನ ಪಾತ್ರೇಲಿ (ತಳಹಿಡಿಯದಂತೆ ಮಂದಾಗ್ನಿಯಲ್ಲಿ) ಪಾಕಮಾಡುತ್ತಾ ಗಟ್ಟಿಯಾಗಿ ಲೇಹ್ಯಪಾಕ ಬರಲು ಶುಂಠಿ ೮ ತೊಲಾ, ಮೆಣಸು ೮ ತೊಲಾ, ಹಿಪ್ಪಲಿ ೨ ತೊಲಾ, ಕೊತ್ತುಂಬರಿ ಬೀಜ ೨ ತೊಲಾ, ಜೀರಿಗೆ ೧ ತೊಲಾ, ಚಿತ್ರಮೂಲ ೧ ತೊಲೆ, ಜಾಪತ್ರೆ ೧ ತೊಲೆ, ದಾಲಚಿನ್ನಿ ೧ ತೊಲೆ, ನಾಗಕೇಸರಿ ೧ ತೊಲೆ, ಕೇಸರಿ ೧ ತೊಲಾ, ಯಾಲಕ್ಕಿ ೧ ತೊಲಾ, ಲವಂಗ ೧ ತೊಲಾ, ಜಾಫಲ ೧ ಕಸ್ತೂರಿ ೪ ಮಾಸೆ,

ಪಚ್ಚಕರ್ಪೂರ ೧ ತೊಲಾ, ಜೇನುತುಪ್ಪ ೨೦ ತೊಲಾ, ಈ ದಿನಸುಗಳನ್ನು ಚೂರ್ಣಿಸಿ, ವಸ್ತ್ರಗಾಳಿತಮಾಡಿ ಎಲ್ಲವನ್ನೂ ಒಂದೇ ಜೀವವಾಗುವಂತೆ ಪಾತ್ರೇಲಿ ಕಲಕಿ ತುಂಬುವದು. ಇದರಲ್ಲಿ ಹೊತ್ತಿಗೆ ೧ ತೊಲೆಯಂತೆ ೨ ಹೊತ್ತು ಸೇವಿಸುತ್ತಾ ಮೇಲೆ ಯಮ್ಮೆಹಾಲು ಕುಡಿಯುತ್ತಾ ಬರಲು ನಪುಂಸಕತ್ವವು ನಾಶವಾಗುವದು. ಸ್ತ್ರೀಸಂಗದಲ್ಲಿ ಎಂದಿಗೂ ಸೋಲದಂತಹ ಕಾವಶಕ್ತಿಯುಂಟಾಗುತ್ತದೆ. ಇದರಿಂದ—ಸಂಗ್ರಹಣಿ, ಕ್ಷಯ, ಶ್ವಾಸರೋಗ, ಅರುಚಿ, ಆಮ್ಲಪಿತ್ತ, ರಕ್ತಪಿತ್ತ, ಪಾಂಡುರೋಗ ನಾಶವಾಗುವವು. (ಈ ವಿಧವಾದ ಪಾಕಗಳು ಲೇಹ್ಯದಂತೆ ಬಹುದಿನ ನಿಲ್ಲುವದಿಲ್ಲ; ೧-೨ ತಿಂಗಳೊಳಗಾಗಿಯೇ ಉಪಯೋಗಿಸಬೇಕು, ಇಲ್ಲವಾದರೆ ಕೆಟ್ಟುಹೋಗುತ್ತವೆ.)

ಸಣ್ಣನೆಗ್ಗಿಲು ಚೂರ್ಣಿಸಿದ್ದು ೪ ತೊಲಾ, ಜೇನುತುಪ್ಪ ೪ ತೊಲಾ, ಕೇರಿಸಿಟ್ಟು ಇದರಲ್ಲಿ (ಅರ್ಧತೊಲೆಯಷ್ಟು ಹೊತ್ತಿಗೆ) ದಿನ ೨ ಹೊತ್ತು ಆಡಿನಹಾಲಿನ ಅನುಪಾನದಿಂದ ಸೇವಿಸುವದು. ೨ ತಿಂಗಳು ಸೇವಿಸಿದರೆ ನಪುಂಸಕತ್ವ ನಿವಾರಣೆಯಾಗುವದು.

## ಚಂದನಾದಿತೈಲ (ಬೇರೇವಿಧ.)

ರಕ್ತಚಂದನ, ಪತಂಗಚಕ್ಕೆ, ಅಗರು, ದೇವದಾರು, ಪದ್ಮಾಕ್ಷ, ಪಚ್ಚಕರ್ಪೂರ, ಕಸ್ತೂರಿ, ಕೇಸರ, ಜಾಫಲ, ಜಾವಿತ್ರಿ, ಲವಂಗ, ದೊಡ್ಡಯಾಲಕ್ಕಿ, ಸಣ್ಣಯಾಲಕ್ಕಿ, ಕಂಕೋಲ, ದಾಲಚಿನ್ನಿ, ಲವಂಗಪತ್ರೆ, ನಾಗಕೇಸರಿ, ಸೊಗದೇಬೇರು, ಮುಡಿವಾಳ, ಅಳಲೇಕಾಯಿ, ದಾರುಹಲದಿ, ಮುರ್ವೆ, ಕಚೋರ, ತುಂಗಮುಸ್ತೆ, ಪ್ರಿಯಂಗುಪುಷ್ಪ, ಲೋಬಾನ, ಗುಗ್ಗುಲು, ಅರಗು, ನಖ, ರಾಲ, ಧಾತಕೀಕುಸುಮ, ಕುಸುಬೆಯಹೂವು, ಮೋಡಿ, ಮಂಜಿಷ್ಟ, ತಗರ, ಜೇನುಮೇಣ ಈ ಎಲ್ಲಾ ಔಷಧಿಗಳು ಪಾವಲಿ-ಪಾವಲಿತೂಕ, ಇವೆಲ್ಲವನ್ನೂ ಕುಟ್ಟಿ (ಸುಗಂಧವಸ್ತುಗಳು ಹೊರ್ತು ಉಳಿದವುಗಳನ್ನು) ಕಷಾಯ ಮಾಡುವದು. ಉರಿಯನ್ನು ಸಣ್ಣಗೆ ಹಾಕಬೇಕು. ಚತುರ್ಥಾಂಶ ಕಷಾಯವಾದ ಕೂಡಲೆ ೨೦ ತೊಲಾ ಯಳ್ಳೆಯಣ್ಣೆ ಹಾಕಿ ತೈಲಪಾಕದಂತೆ ಪಕ್ವಮಾಡುತ್ತಾ-ತೈಲ ಸಿದ್ಧವಾದನಂತರ ಸುಗಂಧವಸ್ತುಗಳೆಲ್ಲವನ್ನೂ ಚೂರ್ಣಿಸಿ ಅರಿಯಬೇಕು. ಈ ಚಂದನಾದಿ ತೈಲವನ್ನು ಶರೀರದಲ್ಲಿ ಮರ್ದನೆ ಮಾಡುವದರಿಂದ ವೃದ್ಧನೂ ತರುಣನಾಗುತ್ತಾನೆ. ಶರೀರದ ಎಲ್ಲಾ ರೋಗಗಳೂ ನಿವೃತ್ತಿಯಾಗುವವು.

## ವಾನರೀವಡೆಗಳು.

ನಸುಗುನ್ನಿಬೀಜ ೨೦ ತೊಲೆ, ೨೦ ತೊಲೆ ಆಕಳಹಾಲಿನಲ್ಲಿ ಪಕ್ವಮಾಡಿ, ಮೇಲಿನಸಿಪ್ಪೆ ತೆಗಿದು ಎಲ್ಲವನ್ನೂ ಅರಿಯುವದು. ಅದರೊಡನೆ ದಾ

ಲ್ಚಿನ್ನಿ, ಜಾಕಾಯಿ, ಜಾಪತ್ರೆ, ಲವಂಗ, ನಾಗಕೇಸರಿ, ಯಾಲಕ್ಕಿ, ಕೇಸರಿ, ಪಚ್ಚ ಕರ್ಪೂರ, ವಂಶಲೋಚನ, ಇವೆಲ್ಲಾ ಪಾವಲಿ-ಪಾವಲಿ ತೂಕದಂತೆ ಬಾರೀಕ್ ಚೂರ್ಣಮಾಡಿ ಕೇರಿಸಿಕೊಂಡು ಅದೇ ಹಾಲಿನಲ್ಲಿ ಚೆನ್ನಾಗರದು ಆಕಳತುಪ್ಪದಲ್ಲಿ ಕರಿಯುವದು. ಅದಾದನಂತರ ಸಕ್ಕರೆಪಾಕದಲ್ಲಿ ಅದನ್ನು ಮುಳುಗಿಸಿಡುವದು. ಶೀಸೆಯಲ್ಲಿ ತುಂಬಿಟ್ಟುಕೊಂಡು ದಿನವೂ ೧ ತೊಲೆ ವಡೆಯನ್ನು ತಿಂದು ಮೇಲೆ ಸಕ್ಕರೆ ಬೆರಸಿದ ಕಾದಹಾಲನ್ನು ಕುಡಿಯುತ್ತಾ ಬರಲು, ನಪುಂಸಕತ್ವವು ನಾಶವಾಗುವದು. ಲಘುಪತನವು ನಿಂತು ಸ್ತ್ರೀಯರಲ್ಲಿ ಮದೋತ್ಕಟನಾಗುವನು.

## ಮ ದ ನ ಮಂ ಜ ರೀ ಘು ಟಿ ಕಾ.

ತ್ರಿಕಟು ೪ ಭಾಗ, ಶುದ್ಧ ಪಾದರಸ ೧ ಭಾಗ, ವಂಗಭಸ್ಮ ೨ ಭಾಗ, ಇವೆಲ್ಲದರ ಸಮವಾಗಿ ಶತಾವರಿ; ದಾಲ್ಚಿನ್ನಿ, ಲವಂಗಪತ್ರೆ, ನಾಗಕೇಸರಿ, ಯಾಲಕ್ಕಿ, ಜಾಫಲ, ಮೆಣಸು, ಹಿಪ್ಪಲಿ, ಶುಂಠಿ, ಲವಂಗ, ಜಾವಿತ್ರಿ ಇವೆಲ್ಲವೂ ೨ ಭಾಗ, ಇವೆಲ್ಲವನ್ನೂ ಸಣ್ಣಗೆ ಚೂರ್ಣಿಸಿ ಸಮಸಕ್ಕರೆ ಜೇನುತುಪ್ಪ-ಘೃತ ಸ್ವಲ್ಪ ಕಡಮೆ, ೪ ಆಣೆತೂಕ ಗೋಲೀ ಕಟ್ಟುವದು. ದಿನವೂ ೧ ಗೋಲೀ ನುಂಗಿ ಮೇಲೆ ಸಕ್ಕರೆ ಬೆರಸಿದ ಹಾಲನ್ನು ಕುಡಿಯುವದು. ವೃದ್ಧನೂ ತರುಣನಾಗುವನು.

ಶುದ್ಧ ಅಫೀಮು, ಶುದ್ಧ ಪಾರದ ಇವು ಸಮತೂಕವಾಗಿ ಖಲ್ವದಲ್ಲಿ ಹಾಕಿ ಧತ್ತೂರೆ (ಉನ್ಮತ್ತ) ಬೀಜದ ತೈಲದಲ್ಲಿ ೩ ದಿನ ಅರಿಯುವದು. ಅನಂತರ ಸಕ್ಕರೆ ಮತ್ತು ಶುದ್ಧ ಭಂಗೀಸೊಪ್ಪು (ಇದನ್ನು ತುಪ್ಪದಲ್ಲಿ ಹುರಿಯಬೇಕು.) ಸಮವಾಗಿ ಕೇರಿಸಿ ಅರದು ೧ ರತ್ತಿತೂಕದ ಮಾತ್ರೆಮಾಡಿ ಒಂದು ಮಾತ್ರೆ ದಿನವು ಸೇವಿಸುತ್ತಾ ಮೇಲೆ ಹಾಲುಕುಡಿಯುವದು. ವೀರ್ಯ ಬಂದಾಗುತ್ತದೆ. ನಪುಂಸಕತ್ವ ನಿವಾರಣೆಯಾಗುವದು.

ಜಾಫಲ, ಆಕಲಕರೆ, ಲವಂಗ, ಶುಂಠಿ, ಕೇಸರಿ, ಹಿಪ್ಪಲಿ, ಕಸ್ತೂರಿ, ಪಚ್ಚ ಕರ್ಪೂರ, ಅಭ್ರಕಭಸ್ಮ ಇವೆಲ್ಲದರ ಸಮತೂಕ ಅಫೀಮು ಇವೆಲ್ಲವನ್ನೂ ಅರದು ಹೆಸರುಕಾಳಷ್ಟು ಮಾತ್ರೆಮಾಡಿ ದಿನ ೧ ಅಥವಾ ೨ ಗೋಲೀ ಸೇವಿಸಿ ಮೇಲೆ ಹಾಲುಕುಡಿದರೆ ವೀರ್ಯವು ನಿದಾನವಾಗಿ ಬಿದ್ದು ಪರಮಾನಂದವನ್ನುಂಟು ಮಾಡುತ್ತದೆ.

ಚೋಪಚಿನ್ನಿ ೩ ತೊಲಾ, ಶುಂಠಿ, ಮೋಚರಸ (ಬೂರಗದ ಅಂಟು) ಶತಾವರಿ, ನೆಲತಾಟಗಡ್ಡೆ, ಮೆಣಸು, ವಾಯುವಿಳಂಗ, ಸೋಪು ಇವು ೧-೧ ತೊಲಾ ಚೂರ್ಣಿಸಿ ದಿನವೂ ೧ ತೊಲಾ ಚೂರ್ಣ ಸೇವಿಸಿ ಸಕ್ಕರೆ ಬೆರಸಿದ

ಹಾಲನ್ನು ಕುಡಿದರೆ ನಪುಂಸಕತ್ವ ನಾಶವಾಗುವದು. ಬಲವೃದ್ಧಿ, ಕಾಮೋ ತ್ತೇಜನವಹುದು.

ಬಿಳೀ ಕಣಗಿಲುಬೇರಿನ ಬೊಬ್ಬಡೆ ೨ ದುಡ್ಡುತೂಕ, ಚನ್ನಾಗಿ ಕು ೩ ಶೇರು ಆಕಳಹಾಲಿನಲ್ಲಿ ಹಾಕಿ ಕಾಯಿಸುವದು. ಹಾಲು ೩ ಶೇರಿಗಿಳಿದ ಇಳಿಸಿ, ಆರಿಸಿ, ಆ ಮೂಲಿಕೆಸಮೇತವೇ ಹೆಪ್ಪುಹಾಕುವದು. ೨ನೇ ದಿನ ಕಡೆದು ಬೆಣ್ಣೆ ತೆಗಿಯುವದು. ಇದನ್ನು ತುಪ್ಪಮಾಡಿ ಸಕ್ಕರೆಬೆರಸಿ ಪಾವ ತೂಕ ದಿನಂಪ್ರತಿ ಸೇವಿಸುತ್ತಾ ಹಾಲನ್ನು ಕುಡಿದರೆ ವೀರ್ಯವೃದ್ಧಿಯಹುದು

ಮಂಜಿಷ್ಟ ೪೦ ತೊಲೆ, ನೆಗ್ಗಿಲು ೪೦ ತೊಲೆ, ಚಳ್ಳೆಹಣ್ಣು ೪೦ ತೂಲೆ ಹಾಲಿನಲ್ಲಿ ಪಕ್ವಮಾಡುವದು. ನಾಲ್ಕರಲ್ಲಿ ೧ ಭಾಗ ವುಳಿಯಲು ಆಗ ಎಲ್ಲವನ್ನೂ ಒಣಗಿಸುವದು. ಅದನ್ನು ಕುಟ್ಟಿ ಚೂರ್ನಿಸಿ—ಜಾಫಲ ಅರ್ಧ ತೊಲಾ, ಶತಾವರಿ ೧ ತೊಲಾ, ನೆಲತಾಟಿಗಡ್ಡೆ ೧ ತೊಲಾ, ಮೋಡಿ, ಶುಂಠಿ ಅರ್ಧತೊಲೆ, ಗರಗ ಇವನ್ನು ಚೂರ್ನಿಸಿ ಮೇಲಿನದಕ್ಕೆ ಬೆರಸಿ ಗೋಲಿಮಾಡಿ ದಿನವೂ ಅರ್ಧತೊಲೆಯಷ್ಟು ಸೇವಿಸಿ, ಸಕ್ಕರೆ ಬೆರಸಿದ ಹಾಲನ್ನು ಕುಡಿಯು ವದು. ೧೪ ದಿನಕ್ಕೆ ನಪುಂಸಕನಿಗೂ ಕಾಮೋಚ್ಚೆಯುಂಟಾಗುವದು.

ಕ್ರೋಸ್ತ್ ೪೦ ತೊಲಾ, ಮಾಜೂಫಲ ೪೦ ತೊಲಾ, ಇವನ್ನು ೩ ಕೊಡ ನೀರಿನಲ್ಲಿ ಕಷಾಯವಿಟ್ಟು ೪ ಶೇರಿಗೆ ಇಳಿಸುವದು. ಕಷಾಯವನ್ನು ಸೋಧಿ ಸಿಕ್ಕೊಂಡು—ಜಾಫಲ, ಲವಂಗ, ದಾಲ್ಚಿನ್ನಿ ಇವು ಅರ್ಧ ಅರ್ಧತೊಲೆ, ನೆಲ ಗುಂಬಳ ೨ ತೊಲೆ, ಬೂರಗದಬೀಜ ೪೦ ತೊಲೆ, ನಾಗಕೇಸರಿ ೧ ತೊಲೆ, ಶುಂಠಿ ೪೦ ತೊಲೆ, ಹಳೇಬೆಲ್ಲ ೧೬೦ ತೊಲೆ, ಆಕಳ ೧೦ ಶೇರು ಹಾಲಿನಲ್ಲಿ ಪಕ್ವಮಾಡುವದು. ೩ ಶೇರು ಶೇಷವಿರುವಾಗ ಬೆಲ್ಲವನ್ನೂ ಮೇಲಿನ ಕಷಾ ಯವನ್ನೂ ಹಾಕಿ ಪಾಕಮಾಡುವದು. ಘಟ್ಟಿಯಾಗಲು ನೆಲ್ಲಿಕಾಯಿಯಷ್ಟು ದಿನವೂ ಸೇವಿಸುತ್ತಾಬಂದು ಮೇಲೆ ನೀರು ಕುಡಿಯುವದು. ೧೪ ದಿನದಲ್ಲಿ ನಪುಂಸಕತೆ ನಿವೃತ್ತಿಯಾಗುವದು.

ನಸುಗುನ್ನೀಬೀಜ ಮತ್ತು ಅದರ ಬೇರು ಸಹಾ ಕುಟ್ಟಿ ದಿನವೂ ಪಾವ ಲಿತೂಕ ದಿನ ೨ ಹೊತ್ತು ಸೇವಿಸಿ ಹಾಲು ಸಕ್ಕರೆ ಸೇವಿಸಿದರೆ ನಪುಂಸಕ ತೆಯು ನಾಶವಾಗಿ ಬಲ ವೀರ್ಯವುಂಟಾಗುವದು.

ಉದ್ದಿನಹಿಟ್ಟು, ಯವದಹಿಟ್ಟು, ನೆಗ್ಗಿಲುಚೂರ್ಣ, ಶತಾವರಿ ಇವೆಲ್ಲಾ ಸಮತೂಕ ಹಾಲಿನಲ್ಲಿ ಖೋವಾಮಾಡಿ, ತುಪ್ಪದಲ್ಲಿ ಹುರಿದು, ಸಂಧ್ಯಾ ಸಮ ಯದಲ್ಲಿ ಮುಕ್ಕಾಲು ತೊಲದಷ್ಟು ಸೇವಿಸುತ್ತಾ ಹಾಲು ಸಕ್ಕರೆ ಸೇರಿಸಿ ಕುಡಿ ಯುವದು. ಇದರಿಂದ ಕಾಮೋತ್ತೇಜಕ ಶಕ್ತಿಯುಂಟಾಗುವದು.

ತ್ರಿಫಲೆ, ಧಾತಕೀಕುಸುಮ, ಎಲ್ಲವೂ ಸಮತೂಕ ಕುಟ್ಟಿ, ಬಾರೀಕ್ ಚೂರ್ಣಮಾಡಿ ನೆಲ್ಲೀಕಾಯಿರಸದ ಅಥವಾ ಮತ್ಯಾವದಾದರೂ ಅದೇ ಪದಾರ್ಥದ ಕಷಾಯದಲ್ಲಿ ಭಾವನೆಮಾಡಿ ಬಿಸಲಲ್ಲಿ ಒಣಗಿಸುತ್ತಾ ೭ ಸಲ ಭಾವನೆ ಮಾಡುವದು. ಸಂಧ್ಯಾ ಸಮಯದಲ್ಲಿ ಜೇನುತುಪ್ಪದೊಂದಿಗೆ ಅರ್ಧತೊಲೆ ಚೂರ್ಣ ಸೇವಿಸಿ ಮೇಲೆ ಸಕ್ಕರೆ ಬೆರಸಿದ ಹಾಲು ಕುಡಿದರೆ ಕಾಮವೃದ್ಧಿಯಹುದು. ೪೦ ದಿನ ಸೇವಿಸಬೇಕು.

ನಸುಗುನ್ನಿಬೇರು, ಯಳ್ಳು, ಅಶ್ವಗಂಧಿ, ನೆಲಕುಂಬಳಗಡ್ಡೆ, ೬೦ ದಿನಕ್ಕೆ ಬೆಳೆಯುವ ಭತ್ತದ ಅಕ್ಕಿ ಇವು ಸಮತೂಕ ಕುಟ್ಟಿ ಚೂರ್ಣಿಸಿ ೧ ಶೇರು ಹಾಲಿನಲ್ಲಿ ಖೋವಾ ಮಾಡಿಟ್ಟುಕೊಂಡು ಸಮಸಕ್ಕರೆಯಲ್ಲಿ ನಿತ್ಯವೂ ಅರ್ಧ ತೊಲಾದಂತೆ (ದಿನ ೨ ಹೊತ್ತು) ಸೇವಿಸಿದರೆ ಮಹಾಕಾಮಿಯಹನು.

ನೆಲಗುಂಬಳಗೆಡ್ಡೆ, ನೆಗ್ಗಿಲು ಇವೆರಡನ್ನೂ ಸಮತೂಕವಾಗಿ ಚೂರ್ಣಿಸಿ ಈ ಚೂರ್ಣ ದಿನ ಅರ್ಧ ತೊಲೆಯಂತೆ ಸೇವಿಸಿ, ಸಕ್ಕರೆಬೆರಸಿದ ಹಾಲನ್ನು ಕುಡಿಯುತ್ತಾ ಬರಲು ಹತ್ತು ಜನ ಸ್ತ್ರೀಯರನ್ನು ಭೋಗಿಸುವಷ್ಟು ಕಾಮೋತ್ಪತ್ತಿಯಹುದು. ಇದರಿಂದ ಪ್ರಮೇಹ, ಮೂತ್ರ ಬಿಂದುಬಿಂದಾಗಿ ಬೀಳುವಿಕೆ ಈ ಮುಂತಾದ ರೋಗ ನಾಶನವಹುದು.

ಜಾಫಲ, ಜಾವಿತ್ರಿ, ಲವಂಗ, ಕೇಸರಿ, ಅಶ್ವಗಂಧಿ, ಕರಿಯಳ್ಳು (ಶನಿಗ್ರಹ) ತೂಕ, ಅಫೀಮು, ಇವೆಲ್ಲಾ ಸಮತೂಕವಾಗಿ ಅರದು ೨ ಮಾಶೆ ತೂಕ ಜೇನಿನಲ್ಲಿ ಗೋಲಿಮಾಡಿಡುವದು. ಬೆಳಗ್ಗೆ ೧-೧ ಗೋಲಿಯನ್ನು ೭ ದಿನ ಸೇವಿಸಿದರೆ ಕ್ಲೈಬ್ಯ ನಿವೃತ್ತಿಯಾಗಿ ವೀರ್ಯವೃದ್ಧಿಯಹುದು.

ಉದ್ದು, ಯವ, ಅಶ್ವಗಂಧಿ, ಶತಾವರಿ, ಕೊಳವಳಿಕೆಬೀಜ, ಬೂರಗದ ಚಕ್ಕೆ ಇವು ಸಮಾನವಾಗಿ ಕುಟ್ಟಿ ಸೋಧಿಸಿಕೊಂಡು ಹಾಲಿನೊಂದಿಗೆ ದಿನಕ್ಕೆ ಅರ್ಧ ತೊಲೆಯಂತೆ ಸೇವಿಸಿದರೆ ಅಪರಿಮಿತ ವೀರ್ಯವಕ್ಕು ಪಥ್ಯದಲ್ಲಿ ೪೦ ದಿನ ಇರಬೇಕು.

ಯವ, ಉದ್ದಿನಹಿಟ್ಟು, ಇವೆರಡನ್ನು ಹಾಲು ಸಕ್ಕರೆಯೊಡನೆ ಸೇವಿಸಿದರೆ ವೀರ್ಯವೃದ್ಧಿ.

ಆಕಳಕರೆ, ತೇಜಬಲ, ಜಾವಿತ್ರಿ, ನಾಗಕೇಸರ, ಜಾಫಲ, ಲವಂಗ, ಯಾಲಕ್ಕಿ ( ಶಿಪ್ಪೆ ಸಹಾ ಶೇರಿ ) ಶತಾವರಿ, ಇವು ಸಮತೂಕ, ಸಕ್ಕರೆ ಸ್ವಲ್ಪ ಜಾಸ್ತಿ ಅಂದರೆ ಪ್ರತಿಯೊಂದರ ಒಂದೂಕಾಲು ತೂಕ ಇವನ್ನು ವೀಳ್ಯದೆಲೆಯ ಗಸದಲ್ಲಿ ಅರದು ಮಾತ್ರೆಮಾಡಿ ಪ್ರಾತಃಕಾಲದಲ್ಲಿ ೧-೧ ಗೋಲೀ ಸೇವಿಸಿದರೆ ನಿರ್ವೀರ್ಯನೂ ವೀರ್ಯವಂತನಾಗುತ್ತಾನೆ.

## ಬಂಧೇಜ್ ಮಾಜೂನಗಳು.

ಕೇಸರಿ ೧ ತೊಲಾ, ಲವಂಗ ೧ ತೊಲಾ, ಜಾವಿತ್ರೀ ೧ ತೊಲಾ, ಆಕಳ ಕರೆ ೧ ತೊಲಾ, ರುಮ್ಮಿಮಸ್ತಕೀ ೧ ತೊಲಾ, ಶತಾವರಿ ೨ ತೊಲೆ, ನೆಲತಾಟಿ ಗಡ್ಡೆ ೨ ತೊಲೆ, ಚೋಪಚಿನ್ನಿ ೨ ತೊಲೆ, ಯಾಲಕ್ಕಿ ೨ ತೊಲೆ, ದಾಲಚಿನಿ ೧ ತೊಲೆ, ಹಿಪ್ಪಲಿ ೧ ತೊಲೆ, ಅಳಲೆಕಾಯಿ ಅರ್ಧತೊಲೆ, ಅತಿವಿಷ ಅರ್ಧ ತೊಲೆ, ಶತಾವರಿ ೨ ತೊಲೆ, ಬೇಖಬಲಧೀ ೨ ತೊಲೆ, ಮದನಮಸ್ತಕೀ ೪ ತೊಲೆ, ಖುರಾಸಾನಿ ಅಜವಾನ ೧ ತೊಲೆ, ಕಬಾಬಚೀನಿ ೧ ತೊಲೆ, ಅಫೀಮು ಶುದ್ಧಿಮಾಡಿದ್ದು ೨ ತೊಲೆ, ಪಿಸ್ತಾ ೪ ತೊಲೆ, ಬಾದಾಮಿ ೪ ತೊಲೆ, ಸಾಲ ಮಮಿಶ್ರಿ ೪ ತೊಲೆ, ಬೆಳ್ಳಿಯವರ್ಕ ೪ ತೊಲೆ, ಈ ಔಷಧಗಳಲ್ಲಿ ಸುಗಂಧವಸ್ತುಗಳನ್ನು ಬಿಟ್ಟು ಬಾಕೀವೆಲ್ಲಾ ಕುಟ್ಟಿ ವಸ್ತ್ರಗಾಳಿತಮಾಡಿ ಇವೆಲ್ಲಾದರ ಸಮತೂಕ ಸಕ್ಕರೆ ಪಾಕವಿಟ್ಟು ಮೊದಲು ಆ ಚೂರ್ಣ ಬೆರಸಿ ಅನಂತರ ಸುಗಂಧಿ ವಸ್ತುಗಳನ್ನರದು ಬೆರಸುವದು. ಹೀಗೆ ತಯಾರಾದ ಮಾಜೂನ ಅಮೃತಬಾನದಲ್ಲಿಟ್ಟು ಪ್ರತಿದಿನ ಸಾಯಂಕಾಲ ಅರ್ಧ ತೊಲೆಯಷ್ಟು ಶರೀರ ಧರ್ಮವರಿತು ಸೇವಿಸಿ ಮೇಲೆ ಹಾಲು ಕುಡಿಯುವದು. ವೀರ್ಯಬಂದಾಗಿ ಆನಂದಪ್ರದವಾಗಿರುತ್ತದೆ. ಬಲವೃದ್ಧಿಯಾಗುವದು, ಇನ್ನೂ ಬಹುಗುಣವಿದೆ.

## ೨ನೇ ಮಾಜೂನ ಬಂಧೇಜ್‌ನಮೇಲೆ.

ದಾಲಚಿನ್ನಿ, ಜಾಫಲ, ಜಾವಿತ್ರೀ, ಲವಂಗ, ಗುಜರಾತಿ ಯಾಲಕ್ಕಿ, ಜೇಷ್ಟಮಧು, ಸಾಲಮಿಶ್ರಿ, ವಂಶಲೋಚನ ಎಲ್ಲಾ ೧-೧ ತೊಲೆ, ಕಸ್ತೂರಿ ೧ ಮಾಸೆ, ಕೇಸರಿ ೧ ಮಾಸೆ, ತೀಖುರ ೮ ತೊಲೆ, ನೆಗ್ಗಿಲು ೮ ತೊಲೆ, ಶತಾವರಿ, ನಸುಗುನ್ನಿಬೀಜ, ಬಾದಾಮಿನತುಪ್ಪ ಇವು ೧-೧ ತೊಲೆ, ಪಚ್ಚಕರ್ಪೂರ ೩ ಮಾಸೆ, ಭಾಂಗ್ ಶುದ್ಧಿಮಾಡಿ ತುಪ್ಪದಲ್ಲಿ ಹುರದದ್ದು; ತುಪ್ಪ ಆಕಳದ್ದು, ತಲಾ ೪೦-೪೦ ತೊಲಾ, ಹಾಲು ೮೦ ತೊಲಾ, ಈ ಎಲ್ಲಾ ಜಿನಸುಗಳ ಸಮತೂಕ ಸಕ್ಕರೆಪಾಕದಲ್ಲಿ ಇವೆಲ್ಲಾ ಸೇರಿಸಿ ಮಾಜೂನ ಮಾಡುವದು. ಸಂಧ್ಯಾಸಮಯದಲ್ಲಿ ಕಾಲುತೊಲಾ ತಿಂದು ಹಾಲು ಕುಡಿಯುವದು. ಸ್ತಂಭನವಾಗುತ್ತದೆ.

## ೩ನೇ ಮಾಜೂನ.

ಕಸ್ತೂರಿ, ಜಾವಿತ್ರಿ, ಕಬಾಬಚೀನಿ, ನಸುಗುನ್ನಿಬೀಜ, ಮುಂಡೀ, ಮೆಂತಿಯಾ, ಬೀಜಬಂದ್, ನೆಗ್ಗಿಲು, ಕೇಸರಿ, ನಾಗಕೇಸರಿ, ಯಾಲಕ್ಕಿ, ಚೋಪಚಿನ್ನಿ, ಗಾಜರಬೀಜ, ಜ್ಯೋತಿಷ್ಮತಿ, ಮದನಮಸ್ತ, ಸಮುದ್ರಸೋಲೀ, ಬನಫ್ಷಾದಬೇರು, ಕಹರವಾ, ಲವಂಗ, ಜಾಫ್, ದಾಲಚಿನ್ನಿ,

ರುಮ್ಮಿಮುಸ್ತಕಿ, ಮೋಚರಸ (ಬೂರಗದಬಂಕೆ) ಸ್ಯಾಹಮುಸಲೀ, ಮೋಡಿ, ಇಂದ್ರಯವ, ಶತಾವರಿ, ಆಕಳಕರೆ ಇವೆಲ್ಲಾ ೧-೧ ತೊಲಾ, ಗುಡತಿಬರಸಾ ೪ ತೊಲೆ, ಇವೆಲ್ಲಾ ಕುಟ್ಟಿ ಸಮತೂಕ ಬೆಲ್ಲದಲ್ಲಿ ಕೇರಿಸಿ ಜಾಕಾಯಿಪ್ರಮಾಣ ಗೋಲೀಮಾಡಿಡುವದು. ಮಲಗುವಾಗ ೧ ಗೋಲೀ ತಿಂದು ಮೇಲೆ ಹಾಲು ಕುಡಿಯುವದು, ಸ್ತಂಭನೆಮಾಡುವದು. ಹಾಲು ಶಿಕ್ಕದಿದ್ದರೆ ಸಕ್ಕರೆಯೊಡನೆ ಗೋಲೀ ನುಂಗುವದು. ಬಂಧೇಜ್ ಮಾಡುತ್ತದೆ.

## ಮದನಮೋದಕ.

ಅಶ್ವಗಂಧಿ, ಚಂಗಲಕೋಷ್ಟ, ಕಾಮೀಕಲ್ಲು, ಛಡೀಲಾ, ಅಜವೋದಾ, ತ್ರಿಫಲ, ಶುಂಠಿ, ಮುಲತಾನಿ, ನೆಲಗುಂಬಳ, ಕೊತ್ತಂಬರಿ, ತುಂಗಮುಸ್ತೆ, ಮೋಚರಸ (ಬೂರಗದ ಮೇಣ) ಗಜಹಿಪ್ಪಲಿ, ಬೂರಗದಬೀಜ, ಕಚೋರ, ಸಫೇದ್‌ಮುಸಲೀ, ಕಾಲೀಮುಸಲೀ, (ನೆಲತಾಟಗಡ್ಡಿ) ಹಿಪ್ಪಲಿ, ನೆಲಗುಳ್ಳ, ದೊಡ್ಡಗುಳ್ಳ, ಲವಂಗಪತ್ರಿ, ಶುಂಠಿ, ಗೋಧೀರವೆ, ಸ್ಯಾಹಜೀರಾ, ಜೀರಿಗೆ, ಜಟಾಮಾಂಸೀ, ಭಾರಂಗೀ, ನೆಲಗಡಲೆಬೀಜದಪ್ರೊಪ್ಪು, ಜೇಷ್ಟಮಧು, ಕಮಲಗಟ್ಟಾ, ಸಿಂಘಾಡಾ, ಕರ್ಕಾಟಕಶೃಂಗೀ, ನಾಗಕೇಸರ, ಪುಷ್ಕರಮೂಲ, ಶತಾವರಿ, ತಾಲೀಸಪತ್ರಿ, ಲವಂಗ, ಜಾಫಲ, ಜಾವಿತ್ರಿ, ದಾಲಚಿನ್ನಿ, ಅಡಕೆ, ಅಗರು, ಶ್ರೀಗಂಧ, ಚಂದನ, ಕರ್ಪೂರ, ಗರಗ, ಲಕ್ಕೀ, ಚೂಕ ಇವೆಲ್ಲಾ ಸಮತೂಕ ಕುಟ್ಟಿ ವಸ್ತ್ರಗಾಳಿತಮಾಡಿ ೫ ಪಕ್ಕಾಶೇರು ಆಕಳಹಾಲಿನಲ್ಲಿ ಹಾಕಿ ಖೋವಾ ಮಾಡಬೇಕು. ಯಾವಾಗ ೨ ಶೇರು ಬಾಕಿ ನಿಂತಲ್ಲಿ ಇಳಿಸಿ ಈ ಕೆಳಗಿನ ಜಿನಸುಗಳು—ಲವಂಗ, ಚಿರೌಂಜಿ, ಬಾದಾಮಿಪ್ರೊಪ್ಪು, ಖರ್ಜೂರ, ಗಿರಿ, ಅಶ್ವಗಂಧಿ, ಸಣ್ಣಯಾಲಕ್ಕಿ, ದೊಡ್ಡಯಾಲಕ್ಕಿ, ದ್ರಾಕ್ಷಿ, ಬಾಂಗ್(ಹುರದದ್ದು) ಈ ಭಂಗಿಯನ್ನು ಪ್ರೋಟಲಿಕಟ್ಟಿ ಅರ್ಧ ಶೇರು ಹಾಲಿನಲ್ಲಿ ಕಾಸುತ್ತಾ ಅರ್ಧ ಭಾಗ ಇಮರಿದಮೇಲೆ ಮೇಲಿನ ಖೋವಾ ಮತ್ತು ಈ ಸಾಮಾನುಗಳು ಎಲ್ಲಾ ಶೇರಿಸಿ ಅರ್ಧ ತೊಲೆಯ ತೂಕದ ಗೋಲಿಗಳು ಮಾಡಿಡುವದು. ೧ ಗೋಲಿ ಪ್ರಭಾತಸಮಯ ಸೇವಿಸಲು ಧಾತುವೃದ್ಧಿಯಾಗುವದು. ಪುಷ್ಟಿ, ಜಠರಾಗ್ನಿ ಪ್ರಬಲವಾಗುವದು, ಕ್ಷೀಣತೆಯು ನಿವಾರಣೆಯಾಗುವದು, ಕಾಂತಿಕಾರಕ, ವೀರ್ಯವೃದ್ಧಿ.

## ಕುಚೆಲಾದಿಘುಟಿಕಾ.

ಶುದ್ಧಿಮಾಡಿದ ವಿಷಮುಷ್ಟಿ ೧ ದುಡ್ಡುತೂಕ, ಶುಂಠಿ ೫ ದುಡ್ಡು ತೂಕ, ಆಕಳಕರೆ, ಜಾಫಲ, ಲವಂಗ, ಜಾವಿತ್ರೀ, ರುಮ್ಮಿಮಸ್ತಕೀ ಇವೆಲ್ಲಾ ಪಾವಲಿ ಪಾವಲಿತೂಕ ಕುಟ್ಟಿ ಶೋಧಿಸಿ, ವೀಳ್ಯದೆಲೆಯ ರಸದಲ್ಲಿ ೪ ಪ್ರಹರ ಅರಿಯುವದು, ಕಡಲೆಪ್ರಮಾಣದ ಗೋಲಿಗಳನ್ನು ಮಾಡಿ ೧ ಗೋಲಿಯನ್ನು

ವೀಳ್ಯದೆಲೆಯು ಜತೇಲಿ ಸೇವಿಸುವದು. ಧಾತುವೃದ್ಧಿ, ಹಶಿವಾಗುವದು, ರತಿಶಕ್ತಿಯುಂಟಾಗುವದು.

ಬೂರಗದಬೀಜ ೪೦ ತೊಲಾ, ೫ ಶೇರು ಹಾಲಿನಲ್ಲಿ ಹಾಕಿ ಚತುರ್ಥಾಂಶವುಳಿಯುವಂತೆ ಬತ್ತಿಸುವದು. ಆಮೇಲೆ ಆ ಬೀಜಗಳು ತೆಗದುಕೊಂಡು— ಜಾವಿತ್ರೀ, ಜಾಫಲ, ಲವಂಗ, ದಾಲಚಿನ್ನಿ ತಲಾ ೧-೧ ತೊಲೆ, ಶತಾವರಿ ೧೦ ತೂಲೆ, ನೆಲತಾಟಿಗಡ್ಡೆ ೧೧ ತೊಲೆ, ನಿರ್ಗುಂಡೀ, ಮುಂಡೀ, ಭಾರಂಗೀ, ಗರಗ, ಇವು ೧-೧ ತೊಲಾ ಎಲ್ಲಾ ಕುಟ್ಟಿ, ಶೋಧಿಸಿಕೊಂಡು ೧-೧ ತೊಲೆಯು ಗೋಲಿಗಳನ್ನು ಮಾಡುವದು, ಮಲಗುವಾಗ ರಾತ್ರಿ ೧ ಗೋಲಿ ತಿಂದು ಅರ್ಧಶೇರು ಹಾಲಿನಲ್ಲಿ ಸಕ್ಕರೆಹಾಕಿ ಕುಡಿಯುವದು. ಧಾತುಪುಷ್ಟಿಯಾಗುವದು, ವೃದ್ಧನೂ ತರುಣನಾಗುವನು.

## ಧಾತುಪುಷ್ಟಿಗೆ ಮಾಜೂನ್.

ಜಾಫಲ, ಜಾಪತ್ರಿ, ಲವಂಗ, ರೂಮಿಮಸ್ತಕಿ, ಚೀನಾಕರ್ಪೂರ, ಆಕಳಕರೆ, ದಾಲಚಿನ್ನಿ, ಲವಂಗಪತ್ರೆ, ಅಗರು, ತಗರ, ವಂಶಲೋಚನ, ಶ್ರೀಗಂಧ, ಮುಡಿವಾಳ, ಕಚೋರ, ಅಶ್ವಗಂಧಿ, ಹಿಪ್ಪಲಿ, ಶುಂಠಿ, ಮೆಣಸು, ಎಳ್ಳು, ನಸುಗುನ್ನೀಬೀಜ, ಸಾಲಮಮಿಶ್ರಿ, ಯಾಲಕ್ಕಿ, ಬಾದಾಮಿ, ಅಖರೋಟು, ಖರ್ಜೂರ, ಹತ್ತಿಯಬೀಜದ ಪ್ಪೊಪ್ಪು, ಮಾಲಂಗಿಬೀಜ, ಕೊಳವಳಿಕೆಬೀಜ, ಬೀಜಬಂದ್, ನೆಗ್ಗಿಲು, ಶತಾವರಿ, ನೆಲತಾಟಿಗಡ್ಡೆ, ಇಂದ್ರಯವ, ಜೇಷ್ಟಮಧು ನಾಗಕೇಸರ, ಸೊಗದೆ, ಮೋಚರಸ,(ಬೂರಗದಬಂಕೆ)ನೆಲಕುಂಬಳ, ಕುಲೀಂಜನ, ಸ್ಯಾಹಜೀರಿಗೆ, ಬಿಳೀಜೀರಿಗೆ, ಕಮಲಗಡ್ಡೆ, ಧನಿಯಾ, ಶಿಲಾಜಿತು ಇವೆಲ್ಲಾ ಅರ್ಧ ಅರ್ಧ ತೊಲಾ, ಆಕಳತುಪ್ಪ ಸಮತೂಕ, ಇದರ ದ್ವಿಗುಣ ಸಕ್ಕರೆ, ಈ ಎಲ್ಲಾ ಔಷಧಿ ಕುಟ್ಟಿ ವಸ್ತ್ರಗಾಳಿತಮಾಡಿ ತುಪ್ಪದಲ್ಲಿ ಹುರಿಯುವದು,ಅನಂತರ ಸಕ್ಕರೆ ಪಾಕದಲ್ಲಿ ಹಾಕಿ ಅವಲೇಹಮಾಡಿ ಬಾದಾಮಿ, ಪಿಸ್ತಾ, ದ್ರಾಕ್ಷಿ, ಖರ್ಜೂರ ಹಾಕಿ ಸೇವಿಸುವದು. ಪ್ರಮಾಣ ೧-೧ ತೊಲಾ, ಮೇಲೆ ಸಕ್ಕರೆಹಾಕಿದ ಹಾಲು ಕುಡಿಯುವದು, ದಿನ ೨ ಹೊತ್ತು, ಅಪರಿಮಿತ ವೀರ್ಯವುಂಟಾಗುವದು.

ಅಶ್ವಗಂಧಿ ೧೬ ತೊಲಾ ಪುಡಿಮಾಡಿ ೮ ತೊಲಾ ತುಪ್ಪದಲ್ಲಿ ಹುರಿಯುವದು. ತದನಂತರ ಇದಕ್ಕೆ ಪಕ್ಕಾ ೫ ಶೇರು ಹಾಲು ಹಾಕಿ ಖೋವಾ ಮಾಡುವದು. ಅದಕ್ಕೆ—ಶುಂಠಿ, ದಾಲ್ಚಿನ್ನಿ, ಹಿಪ್ಪಲಿ, ಮೆಣಸು, ಲವಂಗಪತ್ರೆ, ಯಾಲಕ್ಕಿ, ಬಾಳೆಯಗಡ್ಡೆ, ಕರ್ಕಾಟಕಶೃಂಗೀ, ಶ್ರೀಗಂಧ, ರಕ್ತಚಂದನ, ವಂಗಭಸ್ಮ, ಶಿಲಾಜಿತು, ಜಾಫಲ, ನಾಗಕೇಸರಿ, ತುಂಗಮುಸ್ತೆ, ಕಚೋರ, ಜಾವಿತ್ರಿ, ವಂಶಲೋಚನ, ಸ್ಯಾಹಜೀರಿಗೆ, ಜೀರಿಗೆ, ಚೀನಾಕರ್ಪೂರ,ಸೊಗದೆ

ಅಭ್ರಕಭಸ್ಮ, ರುಮ್ಮಿಮಸ್ತಕೀ, ನಸುಗುನ್ನೀಬೀಜ, ಕೊಳವಳಿಕೆಬೀಜ,
ಬೀಜಬಂದ್, ಕಮಲಗಡ್ಡೆ, ತವಕ್ಷೀರ, ಶತಾವರಿ, ನೆಲತಾಟಿಗಡ್ಡೆ, ಲಕ್ಕಿ,
ಗರಗ ಇವೆಲ್ಲಾ ಅರ್ಧ ಅರ್ಧ ತೊಲಾ, ಕುಟ್ಟಿ ಶೋಧಿಸಿ ಸಕ್ಕರೆ ೪ ಶೇರಿನ
ಪಾಕದಲ್ಲಿ ಎಲ್ಲವನ್ನೂ ಹಾಕಿ ದಿನ ೨ ಹೊತ್ತು ೧-೧ ತೊಲಾದಂತೆ ಸೇವಿ
ಸುತ್ತಾ ಪಥ್ಯದಲ್ಲಿದ್ದರೆ ಪ್ರಮೇಹ ನಾಶವಾಗುವದು, ವೀರ್ಯಪ್ರವಾಹವುಂಟಾ
ಗುವದು, ಅತಿಪುಷ್ಟಿ.

ಚೋಪಚಿನ್ನಿ, ಮುಲತಾನಿ, ಶುಂಠಿ, ಮೆಣಸು, ಮೋಚರಸ (ಬೂರ
ಗದಬುಂಕೆ), ವಾಯುವಿಳಂಗ, ಸೋಪು ಇವೆಲ್ಲಾ ಅರ್ಧ ಅರ್ಧ ತೊಲಾ, ಕುಟ್ಟಿ
ಶೋಧಿಸಿ ಪಕ್ಕಾ ೧ ಶೇರು ಆಕಳಹಾಲಿನಲ್ಲಿ ಪಾಕಮಾಡುವದು. ಅರ್ಧಶೇರು
ಬಾಕಿ ಉಳಿದಾಗ ಅರ್ಧಶೇರು ಜೇನುತುಪ್ಪ ೧ ಶೇರು ಸಕ್ಕರೆಪಾಕದಲ್ಲಿ ಮೇ
ಲಿನದೆಲ್ಲಾ ಹಾಕಿ, ಪಾಕಮಾಡಿ ದಿನ ಅರ್ಧ ಅರ್ಧ ತೊಲಾದಂತೆ ಬೆಳಗಿನ
ಹೊತ್ತು ಸೇವಿಸುತ್ತಾ ಬರುವದು. ಮಹಾ ಕಾಮೋದ್ದೀಪನವಹುದು.

ಅಶ್ವಗಂಧಿ ಅರ್ಧತೊಲಾ, ಬ್ರಹ್ಮದಂಡಿ ಅರ್ಧತೊಲಾ, ಲಕ್ಕಿ ಅರ್ಧ
ತೊಲಾ, ಸಕ್ಕರೆ ೨೦ ತೊಲಾ, ಶೇರಿಸಿ ಆಡಿನಹಾಲಿನಲ್ಲಿ ೭ ದಿನ ಸೇವಿಸಿದರೆ
ನಪುಂಸಕನೂ, ಕಾಮಿಯಾಗುವನು.

ವಂಶಲೋಚನ, ಭಂಗಿ (ಇದನ್ನು ಶುದ್ಧಿಮಾಡಿ ತುಪ್ಪದಲ್ಲಿ ಹುರಿಯು
ವದು) ಸಕ್ಕರೆ ಸಮತೂಕ ಈ ಚೂರ್ಣವನ್ನು ೨೧ ದಿನ ಸೇವಿಸಿದರೆ ಧಾತು
ಘಟ್ಟಿಯಾಗುವದು.

ಮೋಚರಸ, ಮೆಣಸು, ಶತಾವರಿ, ನೆಲತಾಟಿಗಡ್ಡೆ, ಜೇಷ್ಟಮಧು,
ಸ್ಯಾಹಜೀರಿಗೆ, ಜೀರಿಗೆ, ಅಶ್ವಗಂಧಿ, ರುಮ್ಮಿಮಸ್ತಕಿ, ಹೂಲೀಬೇರು, ಯಾ
ಲಕ್ಕಿ, ಲಕ್ಕಿ, ಅಮೃತಸಾರ, ಉದ್ದಿನಬೇಳೆ, ಹಿಪ್ಪಲಿ, ಭಾರಂಗಿ, ಲವಂಗ,
ಶತಾವರಿ, ಶುಂಠಿ, ಮುಂಡೀ, ಗರಗ, ದಾಲಚಿನ್ನಿ, ಚಿರೌಂಜಿ, ದ್ರಾಕ್ಷೆ, ಖ
ರ್ಜೂರ, ಬೀಜಬಂದ್, ತಾಲಮಖಾನಾ, ನೆಲಗುಂಬಳ, ತ್ರಿಫಲೆ ಇವೆಲ್ಲಾ
ಅರ್ಧ ಅರ್ಧತೊಲೆ, ಕುಟ್ಟಿ ಶೋಧಿಸಿ, ಫಕ್ಕಾ ೫ ಶೇರು ಆಕಳಹಾಲಿನಲ್ಲಿ
ಹಾಕಿ ಖೋವಾಮಾಡುವದು. ೨ ಶೇರು ಶೇಷವಿರುವಾಗ ೨೦ ತೊಲಾ ತುಪ್ಪ
೧೬ ತೊಲಾ ಜೇನುತುಪ್ಪ ಬೆರಸಿ ಘಟ್ಟಿಯಾಗಿ ಪಾಕಮಾಡಿ ನೆಲ್ಲಿಕಾಯಿಪ್ರ
ಮಾಣ ಗೋಲಿಮಾಡಿ ದಿನವೂ ೨ ಹೊತ್ತು ಸೇವಿಸುತ್ತಾ ಸಕ್ಕರೆ ಬೆರಸಿದ
ಆಕಳಹಾಲನ್ನು ಕುಡಿಯುತ್ತಾ ಬರಲು ಮಹಾ ಕಾಮೋತ್ಪತ್ತಿಯಾಗುವದು.

೪೦ ತೊಲಾ ನೆಲಗುಂಬಳಗಡ್ಡೆಯನ್ನು ಚೂರ್ಣಿಸಿ ತುಳಸೀರಸದಲ್ಲಿ ಅರಿ
ಯುತ್ತಾ, ನೆರಳಲ್ಲಿ ಒಣಗಿಸುತ್ತಾ ೪ ಭಾವನೆ ಮಾಡುವದು. ಆಕಳಹಾಲು

ವೀಳ್ಯದೆಲೆಯು ಜತೇಲಿ ಸೇವಿಸುವದು. ಧಾತುವೃದ್ಧಿ, ಹಶಿವಾಗುವದು, ರತಿಶ ಕ್ತಿಯುಂಟಾಗುವದು.

ಬೂರಗದಬೀಜ ೪೦ ತೊಲಾ, ೫ ಶೇರು ಹಾಲಿನಲ್ಲಿ ಹಾಕಿ ಚತುರ್ಥಾಂಶ ವುಳಿಯುವಂತೆ ಬತ್ತಿಸುವದು. ಆಮೇಲೆ ಆ ಬೀಜಗಳು ತೆಗದುಕೊಂಡು— ಜಾವಿತ್ರೀ, ಜಾಫಲ, ಲವಂಗ, ದಾಲಚಿನ್ನಿ ತಲಾ ೧-೧ ತೊಲೆ, ಶತಾವರಿ ೧। ತೊಲೆ, ನೆಲತಾಟಗಡ್ಡೆ ೧೧ ತೊಲೆ, ನಿರ್ಗುಂಡೀ, ಮುಂಡೀ, ಭಾರಂಗೀ, ಗರಗ ಇವು ೧-೧ ತೊಲಾ ಎಲ್ಲಾ ಕುಟ್ಟಿ, ಶೋಧಿಸಿಕೊಂಡು ೧-೧ ತೊಲೆಯು ಗೋಲಿ ಗಳನ್ನು ಮಾಡುವದು, ಮಲಗುವಾಗ ರಾತ್ರಿ ೧ ಗೋಲಿ ತಿಂದು ಅರ್ಧಶೇರು ಹಾಲಿನಲ್ಲಿ ಸಕ್ಕರೆಹಾಕಿ ಕುಡಿಯುವದು. ಧಾತುಪುಷ್ಟಿಯಾಗುವದು, ವೃ ನೂ ತರುಣನಾಗುವನು.

## ಧಾತುಪುಷ್ಟಿಗೆ ಮಾಜೂಣ.

ಜಾಫಲ, ಜಾಪತ್ರಿ, ಲವಂಗ, ರೂಮಿಮಸ್ತಕಿ, ಚೀನಾಕರ್ಪೂರ, ಆಕ ಳಕರೆ, ದಾಲಚಿನ್ನಿ, ಲವಂಗಪತ್ರಿ, ಅಗರು, ತಗರ, ವಂಶಲೋಚನ, ಶ್ರೀಗಂಧ ಮುಡಿವಾಳ, ಕಚೋರ, ಅಶ್ವಗಂಧಿ, ಹಿಪ್ಪಲಿ, ಶುಂಠಿ, ಮೆಣಸು, ಎಳ್ಳು, ನಸುಗುನ್ನೀಬೀಜ, ಸಾಲಮಮಿಶ್ರಿ, ಯಾಲಕ್ಕಿ, ಬಾದಾಮಿ, ಅಖರೋಟ ಖರ್ಜೂರ, ಹತ್ತಿಯಬೀಜದ ಪೊಪ್ಪು, ಮೂಲಂಗಿಬೀಜ, ಕೊಳವಳಕೆಬೀಜ, ಬೀಜಬಂದ್, ನೆಗ್ಗಿಲು, ಶತಾವರಿ, ನೆಲತಾಟಗಡ್ಡೆ, ಇಂದ್ರಯವ, ಜೇಷ್ಟಮಧು ನಾಗಕೇಸರ, ಸೊಗದೆ, ಮೋಚರಸ,(ಬೂರಗದಬಂಕೆ)ನೆಲಕುಂಬಳ, ಕುಲೀಂ ಜನ, ಸ್ಯಾಹಜೀರಿಗೆ, ಬಿಳೀಜೀರಿಗೆ, ಕಮಲಗಡ್ಡೆ, ಧನಿಯಾ, ಶಿಲಾಜಿತು ಇವೆಲ್ಲಾ ಅರ್ಧ ಅರ್ಧ ತೊಲಾ, ಆಕಳತುಪ್ಪ ಸಮತೂಕ, ಇದರ ದ್ವಿಗುಣ ಸಕ್ಕರೆ, ಈ ಎಲ್ಲಾ ಔಷಧಿ ಕುಟ್ಟಿ ವಸ್ತ್ರಗಾಳಿತಮಾಡಿ ತುಪ್ಪದಲ್ಲಿ ಹುರಿಯು ವದು,ಅನಂತರ ಸಕ್ಕರೆ ಪಾಕದಲ್ಲಿ ಹಾಕಿ ಅವಲೇಹಮಾಡಿ ಬಾದಾಮಿ, ಪಿಸ್ತಾ, ದ್ರಾಕ್ಷಿ, ಖರ್ಜೂರ ಹಾಕಿ ಸೇವಿಸುವದು. ಪ್ರಮಾಣ ೧-೧ ತೊಲಾ, ಮೇಲೆ ಸಕ್ಕರೆಹಾಕಿದ ಹಾಲು ಕುಡಿಯುವದು, ದಿನ ೨ ಹೊತ್ತು, ಅಪರಿಮಿತ ವೀರ ವುಂಟಾಗುವದು.

ಅಶ್ವಗಂಧಿ ೧೬ ತೊಲಾ ಪುಡಿಮಾಡಿ ೮ ತೊಲಾ ತುಪ್ಪದಲ್ಲಿ ಹುರಿಯು ವದು. ತದನಂತರ ಇದಕ್ಕೆ ಪಕ್ಕಾ ೫ ಶೇರು ಹಾಲು ಹಾಕಿ ಖೋವಾ ಮಾಡು ವದು. ಅದಕ್ಕೆ—ಶುಂಠಿ, ದಾಲ್ಚಿನ್ನಿ, ಹಿಪ್ಪಲಿ, ಮೆಣಸು, ಲವಂಗಪತ್ರಿ, ಯಾಲಕ್ಕಿ, ಬಾಳೆಯಗಡ್ಡೆ, ಕರ್ಕಾಟಕಶೃಂಗೀ, ಶ್ರೀಗಂಧ, ರಕ್ತಚಂದನ ವಂಗಭಸ್ಮ, ಶಿಲಾಜಿತು, ಜಾಫಲ, ನಾಗಕೇಸರಿ, ತುಂಗಮುಸ್ತೆ, ಕಚೋರ, ಜಾವಿತ್ರಿ, ವಂಶಲೋಚನ, ಸ್ಯಾಹಜೀರಿಗೆ, ಜೀರಿಗೆ, ಚೀನಾಕರ್ಪೂರ,ಸೊಗದೆ

ಅಭ್ರಕಭಸ್ಮ, ರುಮ್ಮಿಮಸ್ತಿಕೀ, ನಸುಗುನ್ನೀಬೀಜ, ಕೊಳವಳಿಕೆಬೀಜ, ಬೀಜಬಂದ್, ಕಮಲಗಡ್ಡೆ, ತವಕ್ಷೀರ, ಶತಾವರಿ, ನೆಲತಾಟಿಗಡ್ಡೆ, ಲಕ್ಕಿ, ಗರಗ ಇವೆಲ್ಲಾ ಅರ್ಧ ಅರ್ಧ ತೊಲಾ, ಕುಟ್ಟಿ ಶೋಧಿಸಿ ಸಕ್ಕರೆ ೪ ಶೇರಿನ ಪಾಕದಲ್ಲಿ ಎಲ್ಲವನ್ನೂ ಹಾಕಿ ದಿನ ೨ ಹೊತ್ತು ೧-೧ ತೊಲಾದಂತೆ ಸೇವಿಸುತ್ತಾ ಪಥ್ಯದಲ್ಲಿದ್ದರೆ ಪ್ರಮೇಹ ನಾಶವಾಗುವದು, ವೀರ್ಯಪ್ರವಾಹವುಂಟಾಗುವದು, ಅತಿಪುಷ್ಟಿ.

ಚೋಪಚಿನ್ನಿ, ಮುಲತಾನಿ, ಶುಂಠಿ, ಮೆಣಸು, ಮೋಚರಸ (ಬೂರಗದಬಂಕೆ), ವಾಯುವಿಳಂಗ, ಸೋಪು ಇವೆಲ್ಲಾ ಅರ್ಧ ಅರ್ಧ ತೊಲಾ, ಕುಟ್ಟಿ ಶೋಧಿಸಿ ಪಕ್ಕಾ ೧ ಶೇರು ಆಕಳಹಾಲಿನಲ್ಲಿ ಪಾಕಮಾಡುವದು. ಅರ್ಧಶೇರು ಬಾಕಿ ಉಳಿದಾಗ ಅರ್ಧಶೇರು ಜೇನುತುಪ್ಪ ೧ ಶೇರು ಸಕ್ಕರೆಪಾಕದಲ್ಲಿ ಮೇಲಿನದೆಲ್ಲಾ ಹಾಕಿ, ಪಾಕಮಾಡಿ ದಿನ ಅರ್ಧ ಅರ್ಧ ತೊಲಾದಂತೆ ಬೆಳಗಿನ ಹೊತ್ತು ಸೇವಿಸುತ್ತಾಬರುವದು. ಮಹಾ ಕಾಮೋದ್ದೀಪನವಹುದು.

ಅಶ್ವಗಂಧಿ ಅರ್ಧತೊಲಾ, ಬ್ರಹ್ಮದಂಡಿ ಅರ್ಧತೊಲಾ, ಲಕ್ಕಿ ಅರ್ಧ ತೊಲಾ, ಸಕ್ಕರೆ ೨೦ ತೊಲಾ, ಶೇರಿಸಿ ಆಡಿನಹಾಲಿನಲ್ಲಿ ೭ ದಿನ ಸೇವಿಸಿದರೆ ನಪುಂಸಕನೂ, ಕಾಮಿಯಾಗುವನು.

ವಂಶಲೋಚನ, ಭಂಗಿ (ಇದನ್ನು ಶುದ್ಧಿಮಾಡಿ ತುಪ್ಪದಲ್ಲಿ ಹುರಿಯುವದು) ಸಕ್ಕರೆ ಸಮತೂಕ ಈ ಚೂರ್ಣವನ್ನು ೨೦ ದಿನ ಸೇವಿಸಿದರೆ ಧಾತು ಘಟ್ಟಿಯಾಗುವದು.

ಮೋಚರಸ, ಮೆಣಸು, ಶತಾವರಿ, ನೆಲತಾಟಿಗಡ್ಡೆ, ಜೇಷ್ಟಮಧು, ಸ್ಯಾಹಜೀರಿಗೆ, ಜೀರಿಗೆ, ಅಶ್ವಗಂಧಿ, ರುಮ್ಮಿಮಸ್ತಿಕಿ, ಹೂಲೀಬೇರು, ಯಾಲಕ್ಕಿ, ಲಕ್ಕಿ, ಅಮೃತಸಾರ, ಉದ್ದಿನಬೇಳೆ, ಹಿಪ್ಪಲಿ, ಭಾರಂಗಿ, ಲವಂಗ, ಶತಾವರಿ, ಶುಂಠಿ, ಮುಂಡೀ, ಗರಗ, ದಾಲಚಿನ್ನಿ, ಚಿರೌಂಜಿ, ದ್ರಾಕ್ಷಿ, ಖರ್ಜೂರ, ಬೀಜಬಂದ್, ತಾಲಮಖಾನಾ, ನೆಲಗುಂಬಳ, ತ್ರಿಫಲೆ ಇವೆಲ್ಲಾ ಅರ್ಧ ಅರ್ಧತೊಲೆ, ಕುಟ್ಟಿ ಶೋಧಿಸಿ, ಪಕ್ಕಾ ೫ ಶೇರು ಆಕಳಹಾಲಿನಲ್ಲಿ ಹಾಕಿ ಖೋವಾಮಾಡುವದು. ೨ ಶೇರು ಶೇಷವಿರುವಾಗ ೨೦ ತೊಲಾ ತುಪ್ಪ ೧೬ ತೊಲಾ ಜೇನುತುಪ್ಪ ಬೆರಸಿ ಘಟ್ಟಿಯಾಗಿ ಪಾಕಮಾಡಿ ನೆಲ್ಲಿಕಾಯಿಪ್ರಮಾಣ ಗೋಲಿಮಾಡಿ ದಿನವೂ ೨ ಹೊತ್ತು ಸೇವಿಸುತ್ತಾ ಸಕ್ಕರೆ ಬೆರಸಿದ ಆಕಳಹಾಲನ್ನು ಕುಡಿಯುತ್ತಾಬರಲು ಮಹಾ ಕಾಮೋತ್ಪತ್ತಿಯಾಗುವದು.

೪೦ ತೊಲಾ ನೆಲಗುಂಬಳಗಡ್ಡೆಯನ್ನು ಚೂರ್ಣಿಸಿ ತುಳಸೀರಸದಲ್ಲಿ ಅರಿಯುತ್ತಾ, ನೆರಳಲ್ಲಿ ಒಣಗಿಸುತ್ತಾ ೪ ಭಾವನೆ ಮಾಡುವದು. ಆಕಳಹಾಲು

ಪಕ್ಕಾ ೫ ಶೇರಿನಲ್ಲಿ ಇದನ್ನು ಹಾಕಿ ಪಾಕಮಾಡುತ್ತಾ ೨ ಶೇರು ಶೇಷವಿರುವಾಗ ೪೦ ತೊಲಾ ಸಕ್ಕರೆ ಬೆರಸಿ ಲೇಹ್ಯ ಪಾಕಮಾಡಿ ೬ ಪಾಲುಮಾಡಿ ೬ ದಿನ ಸೇವಿಸಿದರೆ ಅಪರಿಮಿತ ವೀರ್ಯವೃದ್ಧಿಯಹುದು.

ಕಸ್ತೂರಿ, ಕೇಸರಿ, ಜಾಪತ್ರಿ, ದಾಲಚಿನ್ನಿ, ಆಕಳಕರೆ, ಲವಂಗ, ಅಶ್ವಗಂಧಿ, ಮೂಲಂಗಿಯಬೀಜ, ರುಮ್ಮಿಮಸ್ತಕಿ, ಮೆಣಸು, ದಾಲಚಿನ್ನಿ, ಲವಂಗಪತ್ರಿ, ಶತಾವರಿ, ನೆಲತಾಟಿಗಡ್ಡೆ, ಹಿಪ್ಪಲಿ, ಸಾಲಮ್ಮಿಶ್ರಿ, ಬೀಜಬಂದ್, ನೆಗ್ಗಿಲು, ಅಜಾಮೊದ, ಜ್ಯೋತಿಷ್ಮತೀಬೇರು, ಸಮುದ್ರಫೇನ, ಸಮುದ್ರಶೋಷ, ಅಮೃತಸಾರ, ಚಿತ್ರಮೂಲ, ನಸುಗುನ್ನಿಬೀಜ, ಭದ್ರಮುಸ್ತೆ, ಇಂದ್ರಯವ, ಇಸಬಂದ್, ಮೋಡಿ, ಕಮಲಗಡ್ಡೆ, ಇವೆಲ್ಲಾ ಅರ್ಧ ಅರ್ಧತೊಲಾ, ಕುಟ್ಟಿ ಶೋಧಿಸಿ, ೪೦ ತೊಲಾ ಸಕ್ಕರೆ ಶೇರಿಸಿ ದಿನವೂ ೨ ಹೊತ್ತು ೧-೧ ತೊಲಾ ಚೂರ್ಣ ಸೇವಿಸುತ್ತಾ ಹಾಲುಕುಡಿಯುವದು. ಧಾತುಪುಷ್ಟಿಯಾಗುವದು. ದಶಸ್ತ್ರೀ ಸಹವಾಸ ಮಾಡುವನು.

ಚೋಪಚೀನಿ, ಮೋಚರಸ, ಸೋಪು, ಗಜಪಿಪ್ಪಲಿ, ಗಾಜರಬೀಜ, ಸಲಗಮಬೀಜ, ತೇಜಬಲ, ಇಂದ್ರಯವ, ನಾಗಕೇಸರಿ, ಶತಾವರಿ, ನೆಲತಾಟಿಗಡ್ಡೆ, ಬೂರಗದಬೀಜ, ಚಳ್ಳೇಬೀಜ, ಸಾಲಮ್ಮಿಶ್ರಿ, ಭದ್ರಮುಸ್ತೆ, ಕೊಳವಳಿಕೆಬೀಜ, ದಾಲಚಿನ್ನಿ, ಮಜ್ಜಿಗೆಗಡ್ಡೆ (ಹಲವುಮಕ್ಕಳ ಬೇರು), ೨ ಬಗೆ ನೆಗ್ಗಿಲು, ಭಾರಂಗಿ, ಗರಗ, ಚಿರೌಂಜಿ, ಕಮಲಗಡ್ಡೆ, ನಸುಗುನ್ನಿಬೀಜ, ಇವೆಲ್ಲಾ ಅರ್ಧ ಅರ್ಧತೊಲೆ ಚೂರ್ಣಿಸಿ,ಶೋಧಿಸಿ, ೫ ಪಕ್ಕಾಶೇರು ಆಕಳಹಾಲನ್ನು ಮೊದಲು ಘಟ್ಟಮಾಡುತ್ತಾಬಂದು ೧ ಶೇರು ಉಳಿದಾಗ ಈ ಚೂರ್ಣವನ್ನು ಹಾಕಿ ೪೦ ತೊಲಾ ಸಕ್ಕರೆ ಹಾಕಿ ಲೇಹ್ಯಪಾಕದಂತೆ ತಯಾರ್‍ಮಾಡಿ ದಿನವೂ ೨ ಹೊತ್ತು ೧-೧ ತೊಲೆಯಂತೆ ಸೇವಿಸುವದು. ಅತಿಕಾಮಿಯಹನು.

೨ ನೆಗ್ಗಿಲು, ನಸುಗುನ್ನಿಬೀಜ, ಬೀಜಬಂದ್, ಶತಾವರಿ, ನೆಲಗುಂಬಳ, ಕೊಳವಳಿಕೆಬೀಜ, ಅಶ್ವಗಂಧಿ, ಆಡುಸೋಗೆಬೇರು, ಭದ್ರಮುಸ್ತೆ, ಅಮೃತಬಳ್ಳಿಸಾರ, ರಕ್ತಚಂದನ, ದಾಲ್ಚಿನ್ನಿ, ಲವಂಗಪತ್ರಿ, ಯಾಲಕ್ಕಿ, ಹಿಪ್ಪಲಿ, ತ್ರಿಫಲೆ, ನಾಗಕೇಸರ, ಬೂರಗದಬೀಜ, ನೆಲಗುಳ್ಳದಬೇರು ಇವೆಲ್ಲಾ ಅರ್ಧ ಅರ್ಧತೊಲಾ, ಕುಟ್ಟಿ ಶೋಧಿಸಿ, ಪಕ್ಕಾ ೫ ಶೇರು ಹಾಲು ಘಟ್ಟಮಾಡುತ್ತಾ ಬಂದು ೧ ಶೇರು ಉಳಿದಾಗ ಈ ಚೂರ್ಣ ಹಾಕಿ ೩ ಶೇರು ಸಕ್ಕರೆ ಹಾಕಿ ಲೇಹಮಾಡಿ ದಿನವೂ ೧-೧ ತೊಲಾದಂತೆ ೨ ಹೊತ್ತು ಸೇವಿಸುವದು. ಧಾತುಪುಷ್ಟಿ, ಪರಾಕ್ರಮ, ತೇಜಸ್ಸು ಉಂಟಾಗುವದು.

ನೆಲತಾಟಿಗಡ್ಡೆ, ಶತಾವರಿ, ರತ್ನಜ್ಯೋತಿ, ಅಜಮೋದ, ಬೂರಗದ ಬಂಕೆ, ಹಲವುಮಕ್ಕಳಬೇರು, ಬೂರಗದಬೇರು, ಸಮುದ್ರಶೋಷ, ತಾಲಮ

ಖಾನಾ, ಬೀಜಬಂದ್, ಪಿಸ್ತಾದಹೂವು, ಕೊತ್ತಂಬರಿ ಮೇಲಿನ ಶಿಪ್ಪೇತಗಡ
ಅಕ್ಕಿ, ದೇಶೀನೆಗ್ಗಿಲು, ರೂಮಿಮಸ್ತಕಿ, ವಂಶಲೋಚನ, ಸಾಲಂಮಿಶ್ರಿ,
ಶಕಾಕುಲಮಿಸ್ರಿ, ಉತ್ತರಣಿಬೀಜ, ಧಾತಕೀಕುಸುಮ ಇವೆಲ್ಲಾ ಅರ್ಧ ಅರ್ಧ
ತೊಲಾ; ಭದ್ರಮುಸ್ತೆ, ಜಾಫಲ, ಯಾಲಕ್ಕಿ, ದಾಲಚಿನ್ನಿ, ಶೀತಲಚೀನಿ ಇವೆ
ಲ್ಲಾ ಕಾಲು ಕಾಲು ತೊಲಾ, ಖೇಲಖಡೀ ಅರ್ಧತೊಲಾ, ಚೀನಿಯಾಗೋಂದ್
ಅರ್ಧತೊಲಾ, ಜಾಲೀಗೋಂದ್ ಅರ್ಧತೊಲಾ, ಪಿಸ್ತಾ ಅರ್ಧತೊಲಾ, ಅಖರೋ
ಟನಪಪ್ಪು ಅರ್ಧತೊಲಾ, ಬಣಕೊಬ್ಬರಿ ಅರ್ಧತೊಲಾ, ಬಾದಾಮಿನಪೊಪ್ಪು
ಅರ್ಧತೊಲಾ, ಚಿರೌಂಜಿ ಅರ್ಧತೊಲಾ, ಇವೆಲ್ಲಾ ಕುಟ್ಟಿ ಶೋಧಿಸಿ ಜೇನು
ತುಪ್ಪದಲ್ಲಿ ಮಾಜ್ಜ್ಞ ಪಾಕಮಾಡುವದು. ದಿನವೂ ಒಂದೊಂದು ತೊಲಾ
ದಂತೆ ಸಂಧ್ಯಾಸಮಯ ಸೇವಿಸಿದರೆ ವೀರ್ಯ ಪ್ರಬಲವಾಗುವದು.

ತಾಲಕೇಶ್ವರ ಕಾಲುತೊಲಾ, ವಂಗಭಸ್ಮ ಕಾಲುತೊಲಾ, ದೂಧೀಗಿಡದ
ಸಮೂಲ ಅರ್ಧತೊಲಾ, ಎಳ್ಳು ಕುಟ್ಟಿದ್ದು ಮುಕ್ಕಾಲುತೊಲಾ, ಬೀಜಬಂದ್
ಮುಕ್ಕಾಲುತೊಲಾ, ಆನೆನೆಗ್ಗಿಲು ಮುಕ್ಕಾಲುತೊಲಾ, ಶುಂಠಿ ಮುಕ್ಕಾಲು
ತೊಲಾ, ಮೆಣಸು ಮುಕ್ಕಾಲುತೊಲಾ, ಬೆಲ್ಲ ೫ ತೊಲಾ, ಮೇಲಿನ ಜಿನಸುಗ
ಳನ್ನು ಕುಟ್ಟಿ ಶೋಧಿಸಿಕೊಂಡು ಬೆಲ್ಲದಲ್ಲಿ ಗೋಲೀಕಟ್ಟುವದು. ದಿನವೂ
ಬೆಳಗ್ಗೆ ೧ ಗೋಲಿ ಸೇವಿಸುತ್ತಾ ಹುಳಿ ಶಲದಿ ವರ್ಜ್ಯವಾಗಿ ಹಾಸಿಗೆಪಥ್ಯದಲ್ಲಿ
ದ್ದರೆ ಮಹಾ ಕಾಮಶಕ್ತಿಯಹುದು.

ಖುರಾಸಾನಿ ಅಜವಾನ, ಚೀನೀಕರ್ಪೂರ, ಜಾಫಲ, ಲವಂಗ, ಬೀಜ
ಬಂದ್, ಆಕಳಕರೆ, ಶುದ್ಧಿಮಾಡಿದ ಇಂಗಳೀಕ, ಮಾಜೂಫಲ (ಮಾಯಿ
ಪಾಳ), ಪಟಿಕ, ಯಣ್ಣೆಬೆಳೆಗಾರ, ಇವೆಲ್ಲಾ ಸಮತೂಕ, ಕರ್ಪೂರವಿನಾ
ಉಳಿದವುಗಳನ್ನು ಕುಟ್ಟಿ ಶೋಧಿಸಿಕೊಂಡು ಕರ್ಪೂರವನ್ನು ಬೆರಸಿ ನಿಂಬೆ
ಹುಳಿಯಲ್ಲಿ ಮರ್ದಿಸಿ ಸಣ್ಣಗೆ ಗೋಲೀಮಾಡಿಡುವದು. ೧ ಗೋಲಿ ತೊಗರಿ
ಕಾಳಿನಷ್ಟು ಬೆಳಗ್ಗೆ ಸೇವಿಸುವದು. ಪಥ್ಯದಲ್ಲಿದ್ದರೆ ಎಲ್ಲಾ ಧಾತುವಿಕಾ
ರವೂ ನಿವೃತ್ತಿಯಾಗುವದು. ಗೋಧಿ ಕಡ್ಲೆ ಮತ್ತು ತುಪ್ಪ ಇವೇ ಪಥ್ಯ.
ಹುಳಿ, ಶಲದಿ, ಮೈಥುನವರ್ಜ್ಯ. ಮಹಾ ಪುಷ್ಟಿಯುಂಟಾಗಿ, ತೇಜಸ್ಸೂ,
ಬಲ, ವೀರ್ಯವೃದ್ಧಿಯಾಗುವದು.

ಬಾದಾಮಿ, ಕೇಸರಿ, ಸಣ್ಣ ಮಾಯಿಪಾಳದಕಾಯಿ, ಜಾಪತ್ರಿ, ಇವನ್ನು
ಸಮವಾಗಿ ಚೂರ್ನಿಸಿ, ಶೋಧಿಸಿಕ್ಕೊಂಡು ಜೇನುತುಪ್ಪದಲ್ಲಿಯೂ, ತಿಲತೈ
ಲದಲ್ಲಿಯೂ ಅರಿಯುವದು. ಪಿಸ್ತಾ, ಬೆಲ್ಲ ಇವನ್ನು ಶೇರಿಸಿ ಅರದು ಗೋಲಿ
ಸಣ್ಣಗೆ ಕಟ್ಟಿ ದಿನವೂ ಬೆಳಗ್ಗೆ ೧ ಗೋಲಿ ಸೇವಿಸುತ್ತಾ ಹುಳಿಶಲದಿ ವರ್ಜ್ಯ
ಹಾಸಿಗೆಪಥ್ಯದಲ್ಲಿರುವದು. ಧಾತುಪುಷ್ಟಿಯಹುದು.

ಪಕ್ಕಾ ೫ ಶೇರಿನಲ್ಲಿ ಇದನ್ನು ಹಾಕಿ ಪಾಕಮಾಡುತ್ತಾ ೨ ಶೇರು ಶೇಷವಿರುವಾಗ ೪೦ ತೊಲಾ ಸಕ್ಕರೆ ಬೆರಸಿ ಲೇಹ್ಯ ಪಾಕಮಾಡಿ ೭ ಪಾಲುಮಾಡಿ ದಿನ ಸೇವಿಸಿದರೆ ಅಪರಿಮಿತ ವೀರ್ಯವೃದ್ಧಿಯಹುದು.

ಕಸ್ತೂರಿ, ಕೇಸರಿ, ಜಾಪತ್ರಿ, ದಾಲಚಿನ್ನಿ, ಆಕಳಕರೆ, ಲವಂಗ, ಅಶ್ವಗಂಧಿ, ಮೂಲಂಗಿಯಬೀಜ, ರುಮ್ಮಿಮಸ್ತಕಿ, ಮೆಣಸು, ದಾಲಚಿನ್ನಿ, ಲವಂಗಪತ್ರಿ, ಶತಾವರಿ, ನೆಲತಾಟಿಗಡ್ಡೆ, ಹಿಪ್ಪಲಿ, ಸಾಲಮ್ಮಿಶ್ರಿ, ಬೀಜಬಂದ್, ನೆಲು, ಅಜಾಮೊದ, ಜ್ಯೋತಿಷ್ಮತೀಬೇರು, ಸಮುದ್ರಫೇನ, ಸಮುದ್ರಶೋಷ ಅಮೃತಸಾರ, ಚಿತ್ರಮೂಲ, ನಸುಗುನ್ನಿಬೀಜ, ಭದ್ರಮುಸ್ತೆ, ಇಂದ್ರಯವ, ಇಸಬಂದ್, ಮೋಡಿ, ಕಮಲಗಡ್ಡೆ, ಇವೆಲ್ಲಾ ಅರ್ಧ ಅರ್ಧತೊಲಾ, ಕುಟ್ಟಿ ಶೋಧಿಸಿ, ೮೦ ತೊಲಾ ಸಕ್ಕರೆ ಶೇರಿಸಿ ದಿನವೂ ೨ ಹೊತ್ತು ೧-೧ ತೊಲಾ ಚೂರ್ಣ ಸೇವಿಸುತ್ತಾ ಹಾಲುಕುಡಿಯುವದು. ಧಾತುಪುಷ್ಟಿಯಾಗುವದು ದಶಸ್ತ್ರೀ ಸಹವಾಸ ಮಾಡುವನು.

ಚೋಪಚೀನಿ, ಮೋಚರಸ, ಸೋಪು, ಗಜಪಿಪ್ಪಲಿ, ಗಾಜರಬೀಜ ಸಲಗಮಬೀಜ, ತೇಜಬಲ, ಇಂದ್ರಯವ, ನಾಗಕೇಸರಿ, ಶತಾವರಿ, ನೆಲತಾಟಿಗಡ್ಡೆ, ಬೂರಗದಬೀಜ, ಚಳ್ಳೇಬೀಜ, ಸಾಲಮ್ಮಿಶ್ರಿ, ಭದ್ರಮುಸ್ತೆ, ಕೊಳವಳಿಕೆಬೀಜ, ದಾಲಚಿನ್ನಿ, ಮಜ್ಜಿಗೆಗಡ್ಡೆ (ಹಲವುಮಕ್ಕಳ ಬೇರು), ೨ ಬಗೆ ನೆಗ್ಗಿಲು, ಭಾರಂಗಿ, ಗರಗ, ಚಿರೌಂಜಿ, ಕಮಲಗಡ್ಡೆ, ನಸುಗುನ್ನಿಬೀಜ, ಇವೆಲ್ಲಾ ಅರ್ಧ ಅರ್ಧತೊಲೆ ಚೂರ್ನಿಸಿ,ಶೋಧಿಸಿ, ೫ ಪಕ್ಕಾಶೇರು ಆಕಳಹಾಲನ್ನು ಮೊದಲು ಘಟ್ಟಮಾಡುತ್ತಾಬಂದು ೧ ಶೇರು ಉಳಿದಾಗ ಈ ಚೂರ್ಣವನ್ನು ಹಾಕಿ ೮೦ ತೊಲಾ ಸಕ್ಕರೆ ಹಾಕಿ ಲೇಹ್ಯಪಾಕದಂತೆ ತಯಾರ್ಮಾಡಿ ದಿನವೂ ೨ ಹೊತ್ತು ೧-೧ ತೊಲೆಯಂತೆ ಸೇವಿಸುವದು. ಅತಿಕಾಮಿಯಹನು.

೨ ನೆಗ್ಗಿಲು, ನಸುಗುನ್ನಿಬೀಜ, ಬೀಜಬಂದ್, ಶತಾವರಿ, ನೆಲಗುಂಬಳ, ಕೊಳವಳಿಕೆಬೀಜ, ಅಶ್ವಗಂಧಿ, ಆಡುಸೋಗೆಬೇರು, ಭದ್ರಮುಸ್ತೆ, ಅಮೃತಬಳ್ಳಿಸಾರ, ರಕ್ತಚಂದನ, ದಾಲ್ಚಿನ್ನಿ, ಲವಂಗಪತ್ರಿ, ಯಾಲಕ್ಕಿ, ಹಿಪ್ಪಲಿ ತ್ರಿಫಲೆ, ನಾಗಕೇಸರ, ಬೂರಗದಬೀಜ, ನೆಲಗುಳ್ಳದಬೇರು ಇವೆಲ್ಲಾ ಅರ್ಧ ಅರ್ಧತೊಲಾ, ಕುಟ್ಟಿ ಶೋಧಿಸಿ, ಪಕ್ಕಾ ೫ ಶೇರು ಹಾಲು ಘಟ್ಟಮಾಡುತಾ ಬಂದು ೧ ಶೇರು ಉಳಿದಾಗ ಈ ಚೂರ್ಣ ಹಾಕಿ ೪ ಶೇರು ಸಕ್ಕರೆ ಹಾಕಿ ಲೇಹಮಾಡಿ ದಿನವೂ ೧-೧ ತೊಲಾದಂತೆ ೨ ಹೊತ್ತು ಸೇವಿಸುವದು. ಧಾತುಪುಷ್ಟಿ, ಪರಾಕ್ರಮ, ತೇಜಸ್ಸು ಉಂಟಾಗುವದು.

ನೆಲತಾಟಿಗಡ್ಡೆ, ಶತಾವರಿ, ರತ್ನಜ್ಯೋತಿ, ಅಜಮೋದ, ಬೂರಗದ ಬಂಕೆ, ಹಲವುಮಕ್ಕಳಬೇರು, ಬೂರಗದಬೇರು, ಸಮುದ್ರಶೋಷ, ತಾಲಮ

ಖಾನಾ, ಬೀಜಬಂದ್, ಪಿಸ್ತಾದಹೂವು, ಕೊತ್ತುಂಬರಿ ಮೇಲಿನ ಸಿಪ್ಪೇತೆಗೆದ
ಕ್ಕಿ, ದೇಶೀನೆಗ್ಗಿಲು, ರೂಮಿಮಸ್ತಕಿ, ವಂಶಲೋಚನ, ಸಾಲಂಮಿಶ್ರಿ,
ನಾಕುಲಮಿಸ್ರಿ, ಉತ್ತರಣೆಬೀಜ, ಧಾತಕೀಕುಸುಮ ಇವೆಲ್ಲಾ ಅರ್ಧ ಅರ್ಧ
ತೊಲಾ; ಭದ್ರಮುಸ್ತೆ, ಜಾಫಲ, ಯಾಲಕ್ಕಿ, ದಾಲಚಿನ್ನಿ, ಶೀತಲಚೀನಿ ಇವೆ
ಲ್ಲಾ ಕಾಲು ಕಾಲು ತೊಲಾ, ಖೇಲಖಡೀ ಅರ್ಧತೊಲಾ, ಚೀನಿಯಾಗೋಂದ್
ಅರ್ಧತೊಲಾ,ಜಾಲೀಗೋಂದ್ ಅರ್ಧತೊಲಾ, ಪಿಸ್ತಾ ಅರ್ಧತೊಲಾ, ಅಖರೋ
ಟನಪಪ್ಪು ಅರ್ಧತೊಲಾ, ಬಣಕೊಬ್ಬರಿ ಅರ್ಧತೊಲಾ, ಬಾದಾಮಿನಪೊಪ್ಪು
ಅರ್ಧತೊಲಾ, ಚಿರೌಂಜಿ ಅರ್ಧತೊಲಾ, ಇವೆಲ್ಲಾ ಕುಟ್ಟಿ ಶೋಧಿಸಿ ಜೇನು
ತುಪ್ಪದಲ್ಲಿ ಮಾಜುಮ್ ಪಾಕಮಾಡುವದು. ದಿನವೂ ಒಂದೊಂದು ತೊಲಾ
ದಂತೆ ಸಂಧ್ಯಾಸಮಯ ಸೇವಿಸಿದರೆ ವೀರ್ಯ ಪ್ರಬಲವಾಗುವದು.

ತಾಲಕೇಶ್ವರ ಕಾಲುತೊಲಾ, ವಂಗಭಸ್ಮ ಕಾಲುತೊಲಾ, ದೂಧೀಗಿಡದ ಸಮೂಲ ಅರ್ಧತೊಲಾ, ಎಳ್ಳು ಕುಟ್ಟಿದ್ದು ಮುಕ್ಕಾಲುತೊಲಾ, ಬೀಜಬಂದ್ ಮುಕ್ಕಾಲುತೊಲಾ, ಆನೆನೆಗ್ಗಿಲು ಮುಕ್ಕಾಲುತೊಲಾ, ಶುಂಠಿ ಮುಕ್ಕಾಲು ತೊಲಾ, ಮೆಣಸು ಮುಕ್ಕಾಲುತೊಲಾ, ಬೆಲ್ಲ ೫ ತೊಲಾ, ಮೇಲಿನ ಜಿನಸುಗಳನ್ನು ಕುಟ್ಟಿ ಶೋಧಿಸಿಕೊಂಡು ಬೆಲ್ಲದಲ್ಲಿ ಗೋಲೀಕಟ್ಟುವದು. ದಿನವೂ ಬೆಳಗ್ಗೆ ೧ ಗೋಲಿ ಸೇವಿಸುತ್ತಾ ಹುಳಿ ಶಲದಿ ವರ್ಜ್ಯವಾಗಿ ಹಾಸಿಗೆಪಥ್ಯದಲ್ಲಿದ್ದರೆ ಮಹಾ ಕಾಮಶಕ್ತಿಯಹುದು.

ಖುರಾಸಾನಿ ಅಜವಾನ, ಚೀನೀಕರ್ಪೂರ, ಜಾಫಲ, ಲವಂಗ, ಬೀಜ ಬಂದ್, ಆಕಳಕರೆ, ಶುದ್ಧಿಮಾಡಿದ ಇಂಗಳೀಕ, ಮಾಜೂಫಲ (ಮಾಯಿ ಪಾಳ), ಪಟಿಕ, ಯಣ್ಣೆಬಿಳಿಗಾರ, ಇವೆಲ್ಲಾ ಸಮತೂಕ, ಕರ್ಪೂರವಿನಾ ಉಳಿದವುಗಳನ್ನು ಕುಟ್ಟಿ ಶೋಧಿಸಿಕೊಂಡು ಕರ್ಪೂರವನ್ನು ಬೆರಸಿ ನಿಂಬೆ ಹುಳಿಯಲ್ಲಿ ಮರ್ದಿಸಿ ಸಣ್ಣಗೆ ಗೋಲೀಮಾಡಿಡುವದು. ೧ ಗೋಲಿ ತೊಗರಿ ಕಾಳಿನಷ್ಟು ಬೆಳಿಗ್ಗೆ ಸೇವಿಸುವದು. ಪಥ್ಯದಲ್ಲಿದ್ದರೆ ಎಲ್ಲಾ ಧಾತುವಿಕಾರವೂ ನಿವೃತ್ತಿಯಾಗುವದು. ಗೋಧಿ ಕಡ್ಲೆ ಮತ್ತು ತುಪ್ಪ ಇವೇ ಪಥ್ಯ. ಹುಳಿ, ಶಲದಿ, ಮೈಥುನವರ್ಜ್ಯ. ಮಹಾ ಪುಷ್ಟಿಯುಂಟಾಗಿ, ತೇಜಸ್ಸೂ, ಬಲ, ವೀರ್ಯವೃದ್ಧಿಯಾಗುವದು.

ಬಾದಾಮಿ, ಕೇಸರಿ, ಸಣ್ಣ ಮಾಯಿಪಾಳದಕಾಯಿ, ಜಾಪತ್ರಿ, ಇವನ್ನು ಸಮವಾಗಿ ಚೂರ್ಣಿಸಿ, ಶೋಧಿಸಿಕ್ಕೊಂಡು ಜೇನುತುಪ್ಪದಲ್ಲಿಯೂ, ತಿಲತೈಲದಲ್ಲಿಯೂ ಅರಿಯುವದು. ಪಿಸ್ತಾ, ಬೆಲ್ಲ ಇವನ್ನು ಶೇರಿಸಿ ಅರದು ಗೋಲಿ ಸಣ್ಣಗೆ ಕಟ್ಟಿ ದಿನವೂ ಬೆಳಗ್ಗೆ ೧ ಗೋಲಿ ಸೇವಿಸುತ್ತಾ ಹುಳಿಶಲದಿ ವರ್ಜ್ಯ ಹಾಸಿಗೆಪಥ್ಯದಲ್ಲಿರುವದು. ಧಾತುಪುಷ್ಟಿಯಹುದು.

ತಾಲಮಖಾನಾ, ಆನೆನೆಗ್ಗಿಲು, ಸಮುದ್ರಶೋಷ, ಅಡಕೆ, ಜಾಲಿ ಮೇಣ, ಬೂರಗದಚಕ್ಕೆ, ಸ್ಯಾಹಮುಸಲೀ, ಶತಾವರಿ, ಬೀಜಬಂದ್, ಕವಲಗಡ್ಡೆ, ಇವೆಲ್ಲಾ ಕಾಲು ಕಾಲುತೊಲಾ, ಇವು ಚೂರ್ಣಿಸಿ ಇವುಗಳಜತೆ ೨೧ ತೊಲಾ ಆಲದಬಿಳಲುಚೂರ್ಣ, ೨೧ ತೊಲಾ ಸಕ್ಕರೆ ಬೆರಸಿ ನಿತ್ಯವೂ ಸೇವಿಸುವದು. ಮಹಾಪುಷ್ಟಿಯಹುದು.

ತಾಲಮಖಾನಾ ೧ ತೊಲಾ, ಆನೆನೆಗ್ಗಿಲು ೧ ತೊಲಾ, ಶಿಲಾಜತು ತೊಲಾ, ಇದಕ್ಕೆ ೪ ತೊಲಾ ಸಕ್ಕರೆ ಕೇರಿಸಿ ೧೪ ಪಾಲುಮಾಡಿ ೭ ದಿನ ೨ ಹೊತ್ತಿನಂತೆ ಸೇವಿಸುತ್ತಾ ಪಥ್ಯದಲ್ಲಿದ್ದರೆ ಮಹಾ ಕಾಮೋತ್ಪತ್ತಿಯಾಗುವದು.

ತಾಲಮಖಾನಾ, ದಾಲಚಿನ್ನಿ, ಚೀನಿಯಾಗೋಂದ್ ಇವು ಸಮತೂಕ ಚೂರ್ಣಿಸಿ, ಶೋಧಿಸಿಕೊಂಡು ಇದರ ೨ ರಷ್ಟು ಜೇನುತುಪ್ಪದಲ್ಲಿ ಚನ್ನಾದದು ದಿನವೂ ಅರ್ಧ ಅರ್ಧತೊಲೆ ಗೋಲಿಯನ್ನು ಸೇವಿಸುತ್ತಾ ಮೇಲೆ ಹಾಲು ಕುಡಿಯುವ ವಿಧಾನ—ಮೊದಲನೇ ದಿನ ೬ ರೂಪಾಯಿ ತೂಕದಿಂದ ದಿನಕ್ಕೆ ಹೆಚ್ಚಿಸುತ್ತಾ ಬಂದು ೮೦ ತೊಲಾಕ್ಕೆ ವೃದ್ಧಿಪಡಿಸುವದು. ಪಥ್ಯದಿಂದಿರಬೇಕು. ೨೫ ದಿನ ಹೀಗೆ ಸೇವಿಸಿದರೆ ಅಪರಿಮಿತ ಧಾತುವೃದ್ಧಿಯಹುದು

ಯಾಲಕ್ಕಿ, ಲವಂಗಪತ್ರೆ, ವಂಶಲೋಚನ, ದಾಲ್ಚಿನ್ನಿ, ಕಿಸಮಿಸ್, ಹಿಪ್ಪಲಿ ಇವೆಲ್ಲಾ ೧-೧ ತೊಲೆ, ಕುಟ್ಟಿ ಶೋಧಿಸಿ, ಸಕ್ಕರೆ, ಜೇಷ್ಟಮಧು ಖರ್ಜೂರ ಇವು ಅರ್ಧ ಅರ್ಧ ತೊಲೆ ಇವೆಲ್ಲಾ ಕೇರಿಸಿ ಜೇನಿನಲ್ಲಿ ಅರದು ಅರ್ಧ ತೊಲೆಯ ಗೋಲಿಗಳನ್ನು ಮಾಡಿ, ಒಂದೊಂದು ಗೋಲಿ ಪ್ರತಿದಿನವೂ ಸೇವಿಸಿದರೆ—ರಕ್ತಪಿತ್ತ, ಕಾಸಶ್ವಾಸ, ಪಿತ್ತಜ್ವರ, ಬಿಕ್ಕಳಿಕೆ, ಮೂರ್ಛಾ, ಮಂದಾಗ್ನಿ, ಭ್ರಮೆ, ದಾಹ, ನರಗಳಲ್ಲಿ ಉಷ್ಣದಿಂದ ಶೂಲಿ, ಅರುಚಿ; ಸ್ವರಭಂಗ, ಕ್ಷಯ ಈ ರೋಗಗಳನ್ನು ನಾಶಮಾಡಿ, ಕಾಂತಿಯನ್ನೂ, ವೀರ್ಯ ಪಟುತ್ವವನ್ನೂ, ಪರಾಕ್ರಮವನ್ನೂ ಕೊಡುವದು.

ಅಮೃತಸಾರ, ಕಾಂತಭಸ್ಮ ಇವನ್ನು ಜೇನುತುಪ್ಪ, ಬೆಣ್ಣೆ ಸಂಯೋಗದಿಂದ ಸೇವಿಸಿದರೆ ಕ್ಷಯರೋಗಹರ, ಕಾಂತಿ, ಬಲ, ವೀರ್ಯಗಳುಂಟಾಗುವವು.

ಪಚ್ಚಕರ್ಪೂರ, ದಾಲ್ಚಿನ್ನಿ, ಮೆಣಸು, ಜಾಫಲ, ಲವಂಗ ಇವು ೫-೫ ತೊಲ, ನಾಗಕೇಸರಿ ೭ ತೊಲೆ, ಹಿಪ್ಪಲಿ ೮ ತೊಲಾ, ಶುಂಠಿ ೯ ತೊಲಾ, ಇವೆಲ್ಲಾ ಕುಟ್ಟಿ ಶೋಧಿಸಿ ದ್ವಿಗುಣ ಸಕ್ಕರೆಬೆರಸಿ, ದಿನವೂ ೧ ತೊಲೆಯಷ್ಟು ಜೇನಿನಲ್ಲಾಗಲೀ, ಅಥವಾ ಬೇರೆಬೇರೆ ಅನುಪಾನದಲ್ಲಿಯಾಗಲೀ ಸೇವಿಸು

ತ್ತಾಬಂದರೆ—ರಾಜರೋಗ, ಅರುಚಿ, ಕೃಶತ್ವ, ಕಾಸ, ಶ್ವಾಸ, ಜ್ವರಗಡ್ಡೆ, ಮೊಳೇಜಾಡ್ಯ, ವಮನ, ಕಂಠರೋಗ ಇವೆಲ್ಲಾ ನಾಶವಹುದು, ಬಲಪುಷ್ಟಿಪ್ರದ. ಅಮಿತ ವೀರ್ಯವುಂಟಾಗುವದು.

## ಚ್ಯವನಪ್ರಾಶ್ಯಾವಲೇಹ.

ಬಲಿತು ಪಕ್ವವಾದ ೫೦೦ ನೆಲ್ಲೀಕಾಯಿ ನೀರಲ್ಲಿ ಪಾಕಮಾಡಿ ಅವುಗಳ ರಸವನ್ನು ತೆಗಿಯುವದು. ಆ ರಸದಲ್ಲಿ ೫೦೦ ತೊಲಾ ಸಕ್ಕರೆಶೇರಿಸಿ ಪಾಕಮಾಡುವದು. ಇದು ಘಟ್ಟಿಯಾಗುತ್ತಾಬಂದಮೇಲೆ—ಮುನಕ್ಕಾ, ಕಿಸಮಿಸ್, ಅಗರು, ಶ್ರೀಗಂಧ, ಕಮಲಗಡ್ಡೆ, ಯಾಲಕ್ಕಿ, ಅಳಲೇಕಾಯಿಶಿಪ್ಪೆ, ಕಾಕೋಲೀ, ಕ್ಷೀರಕಾಕೋಲೀ, ಋದ್ಧಿ, ವೃದ್ಧಿ, ಮೇದಾ, ಮಹಾಮೇದಾ, ಜೀವಕ, ಋಷಭಕ, ಅಮೃತಸಾರ, ಕರ್ಕಾಟಕಶೃಂಗೀ, ಪುಷ್ಕರಮೂಲ, ಕಚೋರ, ಆಡುಸೋಗೆ, ನೆಲಗುಂಬಳ, ಚಿಟ್ಟಾಮುಟ್ಟಿ, ದಶಮೂಲ, ತುಂಗಮುಸ್ತೆ ಈ ಔಷಧಗಳೆಲ್ಲಾ ಅರ್ಧಅರ್ಧತೊಲೆ ಅತ್ಯಂತ ನುಣ್ಣಗೆ ಚೂರ್ನಿಸಿ, ಶೋಧಿಸಿ, ಮೇಲಿನ ನೆಲ್ಲೀಕಾಯಿರಸ ಸಕ್ಕರೆಪಾಕ ಮೃದುವಾಗಿ ಬಂದಿರುವಾಗ ಈ ಚೂರ್ಣಹಾಕಿ, ೬ ತೊಲಾ ಜೇನುತುಪ್ಪಹಾಕಿ, ಹಿಪ್ಪಲಿ ೧ ತೊಲೆ, ದಾಲಚಿನ್ನಿ ೧ ತೊಲೆ, ಲವಂಗಪತ್ರೆ ೧ ತೊಲೆ, ನಾಗಕೇಸರ ೧ ತೊಲೆ, ಯಾಲಕ್ಕಿ ೧ ತೊಲೆ, ವಂಶಲೋಚನ ೧ ತೊಲೆ ಇವೆಲ್ಲಾ ನುಣ್ಣಗೆಕುಟ್ಟಿ ಶೋಧಿಸಿ ಶೇರಿಸುವದು. ದಿನವೂ ಅರ್ಧತೊಲೆಯಂತೆ ೨ ಹೊತ್ತು ಸೇವಿಸುತ್ತಾ ಬರುವದು—ರಾಜರೋಗ, ಶೋಷರೋಗ, ಇವುಗಳನ್ನು ನಿರ್ಮೂಲಮಾಡಿ, ಶರೀರಕ್ಕೆ ಬಲ, ಪುಷ್ಟಿ, ಕಾಂತಿ, ಓಜಸ್ಸುಗಳನ್ನು ಕೊಡುವದು. ಇದರ ಸೇವನೆಯಿಂದ ವೃದ್ಧನೂ ತರುಣಸಮಾನನಾಗಿ ರತ್ಯಾಸಕ್ತಿಯನ್ನು ಹೊಂದುವನು. ಈದು ಮಹಾ ಪ್ರಸಿದ್ಧವಾದ ಚ್ಯವನಪ್ರಾಶ್ಯಾವಲೇಹವು!!!

## ಕಾಮದೇಶ್ವರರಸ.

ಅಭ್ರಕ ೧ ಭಾಗ, ಪಾರದ ೧ ಭಾಗ (ಇವೆಲ್ಲವನ್ನೂ ಶುದ್ಧಿಮಾಡಿಕೊಳ್ಳಬೇಕು.) ತೂತಿಲ್ಲದಮುತ್ತು ೨ ಭಾಗ, ಶುದ್ಧಗಂಧಕ ೨ ಭಾಗ, ಮೊದಲು ಗಂಧಕರಸಗಳನ್ನು ಕಜ್ಜಲಿಮಾಡಿಕೊಂಡು ಎಲ್ಲವನ್ನೂ ಕೂಡಿ ಗಂಜೀಲಿ ಅರಿಯುವದು. ೧ ದಿನವೆಲ್ಲಾ ಖಲ್ವದಲ್ಲಿ ಮರ್ದನಮಾಡಿ ಮಾತ್ರೆಗಳನ್ನು ಮಾಡಿ ಒಂದು ಮುಚ್ಚಳದಲ್ಲಿ ತುಂಬಿ ಮೇಲೊಂದುಮುಚ್ಚಿ ಕೆಮ್ಮಣ್ಣು ಬಟ್ಟೆ ಸುತ್ತಿ, ಈ ಮುಚ್ಚಳಗಳನ್ನು ಉಪ್ಪುತುಂಬಿರುವ ಒಂದುಭಾಂಡದ ಉಪ್ಪಿನ ಮಧ್ಯೆ ಇಟ್ಟು ೧ ದಿನವೆಲ್ಲಾ ಉರಿಹಾಕುವದು. ಸ್ವಾಂಗಶೀತಲವಾದನಂತರ ತೆಗದು ಇಟ್ಟುಕೊಳ್ಳುವದು. ಇದರಲ್ಲಿ ಹೆಸರುಕಾಳುಪ್ರಮಾಣ ಪ್ರಾತಃ

ಕಾಲ ಸಕ್ಕರೆಯೊಡನೆ ಸೇವಿಸುತ್ತಾ ಬರುವದರಿಂದ—ರಾಜರೋಗ, ಪಿತ್ತವಿಕಾರ, ಅರುಚಿ, ಮಂದಾಗ್ನಿ, ಕಾಸಶ್ವಾಸ ಮುಂತಾದ ಸಕಲರೋಗಹರ, (ಆ ಉಪ್ಪು ಸಹ ಜ್ವರಗಡ್ಡೆಗೆ ಬೆಲ್ಲದೊಡನೆ ಕೊಡುವದು. ಯಕೃತ್ ಗುಲ್ಮಗಳನ್ನು ನಾಶಮಾಡುತ್ತದೆ.) ಈ ಮೇಲಿನ ರಸವು ವೀರ್ಯವೃದ್ಧಿ, ರಕ್ತವೃ ಕಾಂತಿಕರ, ಅಶಕ್ತನೂ ರತಿಯಲ್ಲಿ ಸಮರ್ಥನಾಗುತ್ತಾನೆ ಪಥ್ಯದಿಂದ ೪೦ ಸೇವಿಸುವದು.

## ಕಂದರ್ಪಕೇಶ್ವರ ರಸ.

ಶುದ್ಧಪಾರದ, ಶುದ್ಧಗಂಧಕಗಳೆರಡನ್ನೂ ಅರದು ಕಜ್ಜಲಿಮಾಡಿ ಹಳದೀಕವಡೆಗಳಲ್ಲಿ ತುಂಬುವದು. ಅದರಬಾಯಿಗೆ ಬೆಳಗಾರದ ಸರಿ ಹಚ್ಚವದು. ಈ ಕವಡೆಗಳನ್ನು ಒಂದು ಮುಚ್ಚಳದಲ್ಲಿಟ್ಟು ಮೇಲೊಂದು ಮುಚ್ಚಿ ಕಪಡಮಟ್ಟಮಾಡಿ ಪುಟವಿಡಲು ಭಸ್ಮವಾಗುತ್ತದೆ. ಇದನ್ನು ಅರದು ಇಟ್ಟುಕೊಂಡು ನಿತ್ಯವೂ ೧ ಹೆಸರುಕಾಳಷ್ಟನ್ನು ಜೇನಿನಲ್ಲಿ ಸೇರಿಸಲು—ರಾಜಯಕ್ಷ್ಮ, ಕಾಸ ಶ್ವಾಸ, ಸಂಗ್ರಹಣಿ, ಜ್ವರಾತಿಸಾರ ಮುಂತಾದ ಎಷ್ಟೋ ರೋಗಗಳು ನಾಶವಹುವು. ಕಾಂತಿ, ಪುಷ್ಟಿ, ವೀರ್ಯ, ರಕ್ತ ಇವುಗಳನ್ನು ಟುಮಾಡುವದು. ರಸಔಷಧಿಗಳ ಸೇವನೆಯ ಕಾಲದಲ್ಲಿ ಪಥ್ಯದಿಂದಿರಬೇಕ ಸ್ತ್ರೀಸಂಗ ಕೂಡದು. ಹುಷಾರ್ !!!

ಅಭ್ರಕಭಸ್ಮ, ಪಚ್ಚಕರ್ಪೂರ, ಜಾವಿತ್ರೀ, ಮುಡಿವಾಳ, ಲವಂಗಪತ್ರ, ಲವಂಗ, ತಾಲೀಸಪತ್ರ, ದಾಲಚಿನ್ನಿ, ಧಾತಕೀಕುಸುಮ, ತ್ರಿಫಲೆ, ಶುಂಠಿ ಇವೆಲ್ಲಾ ಸಮತೂಕ ಮರ್ದಿಸಿ, ಶೋಧಿಸಿ ನೀರಿನಲ್ಲಿ ಕಡ್ಲೆಪ್ರಮಾಣ ಮಾತ್ರೆಮಾಡಿ ಪ್ರತಿದಿನವೂ ೧-೧ ಗೋಲಿಯಂತೆ ತಣ್ಣೀರಿನ ಅನುಪಾನದಲ್ಲಿ ಸೇವಿಸುವದು—ಕ್ಷಯ, ಶ್ವಾಸ, ಕಾಸ, ಶೂಲಿ, ಪ್ರಮೇಹ, ವಮನ, ಆಮ್ಲಪಿತ್ತ, ಅರುಚಿ, ಸಂಗ್ರಹಣಿ, ವಾತರಕ್ತ ಈ ರೋಗಗಳೆಲ್ಲಾ ಇದರಿಂದ ನಾಶವಾಗುವವು. ಶರೀರಕ್ಕೆ ಬಲ, ಪುಷ್ಟಿ, ಕಾಂತಿ, ಕಾಮೋತ್ತೇಜಕಶಕ್ತಿಯುಂಟಾಗುವದು.

ಹಳೇಬೆಲ್ಲ ೨೦ ತೊಲೆ, ಹಶೀಶುಂಠಿರಸ ೮೦ ತೊಲೆ ಇವೆರಡನ್ನೂ ಕೇರಿಸಿ ಮೃದ್ವಗ್ನಿಯಿಂದ ಚಂದ್ರಪಾಕ ಮಾಡುವದು. ದಾಲಚಿನ್ನಿ, ಲವಂಗಪತ್ರಿ, ನಾಗಕೇಸರಿ, ಯಾಲಕ್ಕಿ, ಲವಂಗ, ಶುಂಠಿ, ಮೆಣಸು, ಹಿಪ್ಪಲಿ ಇವು ೧-೧ ತೊಲಾ ಚೂರ್ಣಿಸಿ, ಆ ಪಾಕದಲ್ಲಿ ಹಾಕಿ ಕೂಡಿಸಿಟ್ಟು ದಿನವೂ ೧-೧ ತೊಲಾದಂತೆ ತುಪ್ಪ ಅಥವಾ ಜೇನಿನಲ್ಲಿ ಸೇವಿಸುತ್ತಾ ಮೇಲೆ ಹಾಲು ಕುಡಿಯುತ್ತಾ ಬರಲು—ರಾಜಯಕ್ಷ್ಮ, ಮಂದಾಗ್ನಿ, ಕಾಸ ಶ್ವಾಸ, ಅರುಚಿ ಇವೆಲ್ಲಾ ನಾಶವಾಗುವವು. ಧಾತುಪುಷ್ಟಿ, ವೀರ್ಯವೃದ್ಧಿಯುಹುದು.

ಆಡಿನ ಹಾಲು ಅರ್ಧಪಾವು, ಅರಪಾವು ನೀರುಬೆರಸಿ ಕಾಯಿಸುತ್ತಾ ಮೊದಲುದಿನ ೪ ಹಿಪ್ಪಲಿ ಚೂರ್ನಿಸಿ ಹಾಕುವದು, ದಿನವೂ ೧-೧ ಹಿಪ್ಪಲಿ ಜಾಸ್ತಿಮಾಡುತ್ತಾ ೪೦ ಹಿಪ್ಪಲಿವರಿಗೆ ಏರಿಸುತ್ತಾ ಹಾಗೆಯೇ ಒಂದೊಂದು ಇಳಿಸುತ್ತಾ ಬರುವದು. ಈ ಚೂರ್ಣಹಾಕಿ ಹಾಲುಮಾತ್ರ ನಿಂತು, ನೀರೆಲ್ಲಾ ಬತ್ತಿಹೋದನಂತರ ಕುಡಿಯುತ್ತಾ ಬರುವದು. ದಿನ ಒಂದೇಹೊತ್ತು. ಇದರಿಂದ—ರಾಜಯಕ್ಷ್ಮ, ಕಾಸ, ಶ್ವಾಸ ಇವು ನಾಶವಾಗುವವು. ವೀರ್ಯವೃದ್ಧಿ ಬಲಕಾಂತಿಯುಂಟಾಗುವದು.

೪೨೦ ತೊಲಾ ದ್ವೀಪದ್ರಾಕ್ಷಿ, ಇದನ್ನು ೮೦ ಪಕ್ಕಾಶೇರು ನೀರಿನಲ್ಲಿ ಚತುರ್ಥಾಂಶ ಕಷಾಯಕಾಶಿ, ಅದನ್ನು ಕೆಳಗಿಳಿಸಿ ಹಳೇಬೆಲ್ಲ ತಕ್ಕಷ್ಟು ಹಾಕಿ—ವಾಯುವಿಳಂಗ, ಪ್ರಿಯಂಗುಪುಷ್ಪ, ದಾಲಚಿನ್ನಿ, ಯಾಲಕ್ಕಿ, ಪತ್ರಜ, ನಾಗಕೇಸರ ಇವೆಲ್ಲಾ ೧-೧ ತೊಲೆಯಂತೆ ಚೂರ್ನಿಸಿ ಕೂಡಿಸಿ ಮದಿರಾಯಂತ್ರದಲ್ಲಿ ಇದರ ಅರ್ಕತೆಗದು ದಿನವೂ ಅರ್ಧಅರ್ಧತೊಲೆಯಂತೆ ಸೇವಿಸುತ್ತಾಬರಲು—ರಾಜರೋಗ, ಕಾಸ, ಶ್ವಾಸ ದೂರವಾಗುವವು. ಕಾಂತಿ, ಪುಷ್ಟಿಕರ.

## ಅಗಸ್ತ್ಯಹರೀತಕೀ.

ದಶಮೂಲ, ನಸುಗುನ್ನೀಬೀಜ, ಹೂಲಿಬೇರು, ಕಚೋರ, ಚಿಟ್ಟಾಮುಟ್ಟಿ, ಗಜಪಿಪ್ಪಲಿ, ಲಟಜೀರಾ, ಮೋಡಿ, ಚಿತ್ರಮೂಲ, ಭಾರಂಗಿ, ಪುಷ್ಕರಮೂಲ, ಈ ಔಷಧಗಳು ೧-೧ ತೊಲಾ ಕುಟ್ಟಿ ಬಳಿಕ ಪಕ್ವವಾದ ದೊಡ್ಡ ಅಳಲೇಕಾಯಿ ೧೦೦ ಇವೆಲ್ಲಾ ೨೦ ಪಕ್ಕಾಶೇರು ನೀರಿನಲ್ಲಿ ಹಾಕಿ ಕಷಾಯ ಚತುರ್ಥಾಂಶಮಾಡಿ ಇಳಿಸಿ, ಆ ಅಳಲೇಕಾಯಿಗಳ ಬೀಜತೆಗದು ಅರಿಯುವದು. ಅನಂತರ ಈ ಕಷಾಯಕ್ಕೆ ೧೦೦ ತೊಲಾ ಬೆಲ್ಲಹಾಕಿ ಪಾಕಮಾಡುತ್ತಾ ಈ ಅಳಲೇಕಾಯಿ ಅರದದ್ದನ್ನೂ, ಸ್ವಲ್ಪ ಆಕಳತುಪ್ಪವನ್ನೂ ಹಾಕಿ ಪಾಕ ಕ್ರಮವಾಗಿ ಮಾಡಿಟ್ಟುಕೊಂಡು ನಿತ್ಯವೂ ಅರ್ಧತೊಲೆಯಂತೆ ಸೇವಿಸುತ್ತಾಬರಲು—ರಾಜಯಕ್ಷ್ಮ, ಶೋಷರೋಗ, ಕಾಸ, ಶ್ವಾಸ, ಬಿಕ್ಕಳಕೆ, ವಿಷಮಜ್ವರ, ಸಂಗ್ರಹಣೀ, ಮೊಳೇಜಾಡ್ಯ, ಅರುಚಿ, ಪೀನಸಿ ಈ ರೋಗಗಳು ನಾಶವಾಗುವವು. ಶರೀರದಲ್ಲಿ ಪುಷ್ಟಿಯನ್ನೂ, ಕಾಂತಿಯನ್ನೂ, ವೀರ್ಯವೃದ್ಧಿಯನ್ನೂ, ಉಂಟುಮಾಡುವದು, ಕ್ಷುಧೆಯನ್ನು ವೃದ್ಧಿಮಾಡುವದು, ಕುಷ್ಟವನ್ನು ನಿರ್ನಾಮಮಾಡುವದು.

ನಸುಗುನ್ನಿಬೀಜ ೫ ತೊಲಾ, ಕೊಳವಳಕೆಬೀಜ ೧೦ ತೊಲಾ, ದ್ವೀಪದ್ರಾಕ್ಷಿ ೧೦ ತೊಲಾ, ಹಿಪ್ಪಲಿ ೧ ತೊಲಾ, ತಾಲಮಖಾನಾ ೧। ತೊಲಾ, ಸಕ್ಕರೆ ೧೦ ತೊಲಾ, ಇವೆಲ್ಲಾ ನುಣ್ಣಗರದು ಬಿಶೀಹಾಲಲ್ಲಿ ದಿನವೂ ೧-೧ ತೊಲಾ

ದಂತೆ ಹಾಕಿ ಆಕಳತುಪ್ಪ, ಜೇನುತುಪ್ಪ ಸಹ ಸ್ವಲ್ಪ ಶೇರಿಸಿ ಕುಡಿಯುವದು. ಇದರಿಂದ ಶುಕ್ರಸಂಬಂಧಿ ಮೂತ್ರಾಘಾತಹರ, ವಂಧ್ಯಾಪುತ್ರನನ್ನು ಪಡಿಯುವಳು. ಅಶಕ್ತನೂ ವೀರ್ಯಸಂಪನ್ನನಾಗುವನು.

ಚಿತ್ರಮೂಲ ೨೦ ತೊಲಾ, ಗೌರೀಸರ ೫ ತೊಲಾ, ಚಿಟ್ಟಾಮುಟ್ಟ ೧೦ ತೊಲಾ, ದ್ರಾಕ್ಷಿ ೧೦ ತೊಲಾ, ತ್ರಿಫಲ ೫-೫ ತೊಲಾ, ಇಂದ್ರವಾರುಣೀಬೇರು ೨ ತೊಲಾ, ದೊಡ್ಡ ನೆಲ್ಲೀಕಾಯಿ ೧೦೦ ಇಷ್ಟನ್ನೂ ೧೬ ಪಕ್ಕಾಶೇರು ನೀರಿನಲ್ಲಿ ಹಾಕಿ ಕಷಾಯ ಚತುರ್ಥಾಂಶವಿರುವಾಗ ಇಳಿಸಿ ಚನ್ನಾಗಿ ಹಿಂಚಿಗಿ ಶೋಧಿಸಿಕೊಂಡು ಪಕ್ಕಾ ೪ ಶೇರು ಆಕಳತುಪ್ಪ ಹಾಕಿ ಘೃತಪಾಕವಿಧಿಯಂತೆ ಪಕ್ವಮಾಡಿಡುವದು. ಇದಕ್ಕೆ ೧೦ ತೊಲಾ ವಂಶಲೋಚನವನ್ನು ಚೂರ್ಣಿಸಿ ಬೆರಸಿ ಈ ಘೃತವನ್ನು ದಿನವೂ ೨-೨ ತೊಲಾದಂತೆ ಸೇವಿಸುತ್ತಾಬಂದರೆ ಸರ್ವಪ್ರಕಾರದ ವೀರ್ಯದೋಷಗಳನ್ನೂ ನಾಶಮಾಡುವದು. ಸ್ತ್ರೀಯರಿಗೆ ಗರ್ಭಪ್ರದವಾದದ್ದು. ಮೂತ್ರಾಘಾತ, ಪ್ರದರ, ಮೂತ್ರಕೃಛ್ರ ಇವೆಲ್ಲವನ್ನೂ ನಾಶಮಾಡಿ, ವೀರ್ಯಪ್ರದವಾದದ್ದು.

## ಗೋಕ್ಷುರಪಾಕ.

ಆನೆನೆಗ್ಗಿಲು ೪೦ ತೊಲಾ ಸಣ್ಣಾಗೆ ಕುಟ್ಟಿ ಶೋಧಿಸಿಕೊಂಡು ೮೦ ತೊಲಾ ತುಪ್ಪದಲ್ಲಿ ಹುರಿಯುವದು. ಅನಂತರ ಪಕ್ಕಾ ೫ ಶೇರು ಆಕಳಹಾಲನ್ನು ಸುರಿದು ಎಲ್ಲಾ ಪಕ್ವಮಾಡಿ ಘಟ್ಟಿಯಾಗಿ ಖೋವಾಮಾಡುವದು. ಅದರಲ್ಲಿ ಬಿಲ್ವಪತ್ರಬೀಜ, ಮೆಣಸು, ಜಾಫಲ, ಸಮುದ್ರಶೋಷ, ಯಾಲಕ್ಕಿ, ಪಚ್ಚಕರ್ಪೂರ, ಲವಂಗಪತ್ರಿ, ದಾಲಚಿನ್ನಿ, ಅರಿಶಿನ, ಚಂಗಲಕೋಷ್ಟ, ಕೊಳವಳಿಕೆಬೀಜ, ಅಫೀಮು, ಇವೆಲ್ಲಾ ೧-೧ ತೊಲಾ, ಭಂಗಿಸೊಪ್ಪನ್ನೂ ಶುದ್ಧಿಮಾಡಿ ತುಪ್ಪದಲ್ಲಿ ಹುರದು ಸ್ವಲ್ಪ ಹಾಕುವದು. ಅನಂತರ ೩೨೦ ತೊಲಾ ಸಕ್ಕರೆಯ ಪಾಕಮಾಡಿ ಅದರಲ್ಲಿ ಇದೆಲ್ಲಾ ಬೆರಸಿ, ಮೃಣ್ಮಯ ಸ್ನಿಗ್ಧಪಾತ್ರೇಲಿಟ್ಟು ನಿತ್ಯವೂ ೧ ಅಥವಾ ೧॥ ತೊಲೆ ದೇಹಾನುಗುಣ್ಯವಾಗಿ ನಿತ್ಯವೂ ಸೇವಿಸುವದು. ಇದರಿಂದ ಪ್ರಮೇಹರೋಗಗಳು ನಾಶವಾಗುವವು. ವೀರ್ಯಬಂಧನವಾಗುವದು ಕಾಮೋತ್ತೇಜಕ ವುಂಟಾಗುವದು.

ಪಚ್ಚಕರ್ಪೂರ, ಕಸ್ತೂರಿ, ಜಾಪತ್ರಿ ಇವು ೧-೧ ತೂಕ, ಅಫೀಮು ೪ ತೂಕ ಇವನ್ನು ವಿಳ್ಯದಯಲೆಯರಸದಲ್ಲಿ ಬಾರೀಕಾಗಿ ಅರದು ಜೋಳದ ಕಾಳಿಗಿಂತ ಸಣ್ಣಗೆ ಗೋಲೀಮಾಡಿ, ದಿನವೂ ೧-೧ ಗೋಲಿ ಹಾಲು ಸಕ್ಕರೆಯೊಡನೆ ಸೇವಿಸುತ್ತಾಬಂದರೆ ಪ್ರಮೇಹರೋಗಹರ, ವೀರ್ಯಬಂಧಾಗಿ ರತಿಯಾಗಿ ಅತಾನಂದಪ್ರದವಾದದ್ದು.

## ಫಲಘೃತ.

ಮಂಜಿಷ್ಟ, ಜೇಷ್ಟಮಧು, ಚಂಗಲಕೋಷ್ಟ, ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಸಕ್ಕರೆ, ಚಿಟ್ಟಾಮುಟ್ಟಿ, ಮೇದಾ, ಅಶ್ವಗಂಧಿ, ಅಜಮೋದ, ೨ ಬಗೆ ಅರಿಶಿನ, ಪ್ರಿಯಂಗುಹುವ್ವು, ಕಟುಕರೋಹಿಣಿ, ಕಮಲಗಡ್ಡೆ, ದ್ರಾಕ್ಷಿ, ರಕ್ತಚಂದನ ಇವೆಲ್ಲಾ ಪಾವಲಿ ಪಾವಲಿತೂಕ, ಆಕಳ ತುಪ್ಪ ೨೦ ತೊಲಾ, ಹಲವುಮಕ್ಕಳಬೇರಿನರಸ ೮೦ ತೊಲೆ, ಇವೆಲ್ಲಾ ಮೃದ್ವಗ್ನಿಯಿಂದ ಜಿನಸುಗಳ ಚೂರ್ಣವನ್ನು ಬೆರಸಿ ಪಕ್ವಮಾಡುವದು. ಇದರಲ್ಲಿ ನಿತ್ಯವೂ ೨ ಹೊತ್ತು ಅರ್ಧ ಅರ್ಧ ತೊಲಾ ಘೃತವನ್ನು ಸ್ತ್ರೀಯಾಗಲೀ ಪುರುಷನಾಗಲೀ ಸೇವಿಸಿದರೆ ಪುರುಷನು ಮಹಾ ಕಾಮಿಯಾಗಿ ರತಿಯಲ್ಲಿ ಅಜೇಯನಾಗುವನು. ಸ್ತ್ರೀಯು ಸೇವಿಸಿದರೆ ಯೋನಿಯ ಸರ್ವರೋಗಗಳೂ ನಾಶವಾಗಿ ದೀರ್ಘಾಯು ಬಲವಾನ್, ಬುದ್ಧಿವಾನ್ ಪುತ್ರನು ಹುಟ್ಟುವನು.

## ಮಹಾಚ್ಯವನಪ್ರಾಶ್ಯಾವಲೇಹ.

ದಶಮೂಲ, ಹಿಪ್ಪಲಿ, ದೊಡ್ಡನೆಗ್ಗಲು, ೨ ಬಗೆ ಗುಳ್ಳ, ಕರ್ಕಾಟಕಶೃಂಗೀ, ನೆಲನೆಲ್ಲಿ, ದ್ರಾಕ್ಷಿ, ಜೀವಂತೀ, ಪುಷ್ಕರಮೂಲ, ಅಗರು, ಅಳಲೆಶಿಪ್ಪೆ, ಅಮೃತಸಾರ, ಋದ್ಧಿ, ಜೀವಕ, ಋಷಭಕ, ಕಚೋರ, ತುಂಗಮುಸ್ತೆ, ಪುನರ್ನವಾ, ಮೇದಾ, ಮಹಾಮೇದಾ, ಸಣ್ಣಯಾಲಕ್ಕಿ, ಕಮಲಗಡ್ಡೆ, ಕೆಂಪುಚಂದನ, ನೆಲಗುಂಬಳ, ಆಡುಸೋಗೆಯಬೇರು, ಕಾಕೋಲೀ, ಕಾಕಜಂಘಾ ಇವೆಲ್ಲಾ ೪-೪ ತೊಲೆಯಂತೆ ಚೂರ್ಣಿಸುವದು. ದೊಡ್ಡದೊಡ್ಡ ಬಲಿತ ೫೦೦ ನೆಲ್ಲೀಕಾಯಿಗಳನ್ನು ಶುದ್ಧವಾಗಿ ಆರಿಸಿ ಅವುಗಳನ್ನು ಒಂದು ಬಟ್ಟೆಯೊಳಗೆ ಗಂಟುಕಟ್ಟಿ, ಬಹುದೊಡ್ಡ ಘಟ್ಟಿಯಾದ ಮಣ್ಣಿನ ಗುಡಾಣದಲ್ಲಿ ೪೦ ಪಕ್ಕಾಶೇರು ನೀರನ್ನು ಹಾಕಿ ಅದರಲ್ಲಿ ಮೇಲಿನ ಜಿನಸುಗಳ ಚೂರ್ಣವನ್ನು ಕದರಿ, ನೆಲ್ಲೀಕಾಯಿಗಂಟು ಆ ನೀರೊಳಗೆ ತಳಕ್ಕೆ ತಗಲದಂತೆಯೂ, ನೀರಿನಮೇಲಕ್ಕೆ ಬರದಂತೆಯೂ ಉಪಾಯವಾಗಿ ತಳಬಿಟ್ಟು ಎರಡುಬೆಟ್ಟಿನ ಮೇಲಕ್ಕೆ ಬರುವಂತೆ ತೂಗಕಟ್ಟಿ ಉರಿಹಾಕುವದು. ಚತುರ್ಥಾಂಶ ಕಷಾಯವಿಳಿದನಂತರ ಆಗ ಉರಿಯನ್ನು ನಿಲ್ಲಿಸಿ ಆ ನೆಲ್ಲೀಕಾಯಿ ಗಂಟನ್ನು ಬೇರೇ ಬಿಚ್ಚಿ ಅವುಗಳ ಬೀಜ ಬೇರೆಮಾಡಿ ೬ ತೊಲಾ ತುಪ್ಪ, ೬ ತೊಲೆ ತಿಲತೈಲದಲ್ಲಿ ಆ ನೆಲ್ಲಿಕಾಯಿಯ ತಿರಳನ್ನು ಹುರಿಯುವದು. ಅನಂತರ ಆ ತಿರಳನ್ನು ಕಲ್ಲಿನಮೇಲೆ ನುಣ್ಣಗರದು—ಆ ಗುಡಾಣದಲ್ಲಿರುವ ಚತುರ್ಥಾಂಶಕ್ವಾಥವನ್ನು ಅಡಕವಾದ ಮಣ್ಣಿನಪಾತ್ರೇಲಿ ಹಾಕಿ ಅದರೊಂದಿಗೆ ೫೦೦ ತೊಲಾ ಸಕ್ಕರೆ ಹಾಕಿ, ಅರದ ನೆಲ್ಲಿಕಾಯಿತಿರಳನ್ನೂ ಹಾಕಿ ಲೇಹ್ಯಪಾಕದಂತೆ ಮೃದ್ವಗ್ನಿಯಿಂದ ಪಕ್ವ

ಮಾಡುವದು. ಹೀಗೆ ಪಾಕ ಕ್ರಮವಾಗಿ ಆಗಿ ಅವಲೇಹ ಸಿದ್ಧವಾಗಲು, ಅದಕ್ಕೆ ವಂಶಲೋಚನ ೧೬ ತೊಲಾ, ಹಿಪ್ಪಲಿ ೮ ತೊಲಾ, ದಾಲಚಿನ್ನಿ ೨ ತೊಲಾ, ಲವಂಗಪತ್ರಿ ೧ ತೊಲೆ, ಸಣ್ಣ ಯಾಲಕ್ಕಿಯಬೀಜ ೧ ತೊಲಾ, ನಾಗ ಕೇಸರಿ ೧ ತೊಲಾ—ಇವೆಲ್ಲವನ್ನೂ ಬಾರೀಕ್ ಚೂರ್ಣಮಾಡಿ ಶೋಧಿಸಿ ಕೊಂಡು ಆ ಅವಲೇಹದಲ್ಲಿ ಹಾಕುವದು. ಆರಿದನಂತರ ೨೪ ತೊಲಾ ಜೇನು ತುಪ್ಪ ಸ್ವಲ್ಪ ತುಪ್ಪಸಹ ಹಾಕಿ, ತುಪ್ಪಬಳಸಿದ ಮಣ್ಣಿನ ಅಥವಾ ಗಾಜಿನಪಾ ತ್ರೇಲಿಟ್ಟುಕೊಂಡು, ನಿತ್ಯವೂ ೨-೨ ತೊಲಾದಂತೆ (೨ ಹೊತ್ತು) ಸೇವಿಸಿ ಮೇಲೆ ಆಡಿನಹಾಲು ಅರೆಪಾವು ಕುಡಿಯುವದು. ಇದರ ಸೇವನೆಯಿಂದ— ರಾಜಯಕ್ಷ್ಮಾ, ಸ್ವರಭಂಗ, ಕಾಸಶ್ವಾಸ, ಹೃದ್ರೋಗ, ಎದೆಯ ಬೇರೆಬೇರೆ ರೋಗಗಳು, ವಾತರಕ್ತ, ದಾಹ, ಶುಕ್ರದೋಷ, ಮೂತ್ರವಿಕಾರ ಇವೆಲ್ಲಾ ನಷ್ಟವಾಗುತ್ತದೆ. ಈ ಅವಲೇಹವು—ವ್ರಣಶೋಷಿತನಿಗೂ, ವೃದ್ಧನಿಗೂ, ಬಾಲಕರಿಗೂ, ಅಂಗಗಳನ್ನು ಪುಷ್ಟಿಗೊಳಿಸುವದಲ್ಲದೆ, ಸಮಸ್ತ ಧಾತುಗ ಳನ್ನೂ ವೃದ್ಧಿಪಡಿಸುತ್ತದೆ. ಆಯುರ್ವೃದ್ಧಿ, ಮೇಧಾ, ಸ್ಮರಣಶಕ್ತಿ, ಕಾಂತಿ, ಓಜಸ್ಸುಗಳನ್ನುಂಟುಮಾಡುವದಲ್ಲದೆ, ಇಂದ್ರಿಯಗಳಿಗೆ ಬಲವೀಯುವದು, ಅಗ್ನಿಯನ್ನು ಪ್ರದೀಪನಮಾಡುವದು, ಕಾಮೋತ್ತೇಜಕಶಕ್ತಿಯನ್ನು ದೀಪ ನಗೊಳಿಸುವದು. ಇದರ ಸೇವನೆಯಿಂದ ವೃದ್ಧನೂ ತರುಣನಾಗಿ, ರತಿಯಲ್ಲಿ ಅತ್ಯಾಸಕ್ತನಾಗುತ್ತಾನೆ. ಪೂರ್ವಕಾಲದಲ್ಲಿ ಚ್ಯವನಋಷಿಯು ತನ್ನ ವೃದ್ಧಾ ವಸ್ಥೆಯನ್ನು ಈ ಅವಲೇಹದ ಪ್ರತಾಪದಿಂದಲೇ ಕಳದುಕೊಂಡು ನವಯೌ ವನವನ್ನು ಪಡದುಕೊಂಡು ದಿವ್ಯಸ್ತ್ರೀಯರಲ್ಲಿ ರತಿಸುಖವನ್ನುಪಡಿಯುತ್ತಾ ಇದ್ದನಾದ್ದರಿಂದ ಈ ಅವಲೇಹವು "ಚ್ಯವನಪ್ರಾಶ್ಯ" ವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

## ಪಿಪ್ಪಲ್ಯಾಸವ.

ಹಿಪ್ಪಲಿ, ಮೆಣಸು, ಚವ್ಯ, ಅರಿಶಿನ, ಚಿತ್ರಮೂಲ, ತುಂಗಮುಸ್ತೆ, ವಾಯುವಿಳಂಗ, ಅಡಕೆ, ಲೋಧ್ರ, ಅಗಳುಶುಂಠಿ, ನೆಲ್ಲೀಚಟ್ಟು, ಛಡೇಲಾ, ಪುಡಿಮಾಳ, ಶ್ರೀಗಂಧ, ಚಂಗಲಕೋಷ್ಟ, ಲವಂಗ, ಗ್ರಂಥಿಕತಗರ, ಜಟಾ ಮಾಂಸಿ, ದಾಲಚಿನ್ನಿ, ಯಾಲಕ್ಕಿ, ಲವಂಗಪತ್ರಿ, ಪುಷ್ಪಪ್ರಿಯಂಗು ಅಥವಾ ಪ್ರಿಯಂಗುವೃಕ್ಷದ ಗೋಂದು, ನಾಗಕೇಸರ ಇವೆಲ್ಲಾ ೨-೨ ತೊಲಾ, ಕುಟ್ಟಿ ಶೋಧಿಸಿ, ೪ ತೊಲಾ ಬೆಲ್ಲದೊಡನೆ ೮೦ ತಂಬಿಗೆ ನೀರನ್ನು ಗುಡಾಣಕ್ಕೆ ಹಾಕಿ, ಧಾತಕೀಕುಸುಮ ೪೦ ತೊಲಾ, ದ್ರಾಕ್ಷಿ ೨೪೦ ತೊಲಾ, ಇವೆಲ್ಲವನ್ನು ಆ ಗುಡಾಣಕ್ಕೆ ತುಂಬಿ ಎಲ್ಲವೂ ಸಮರಸವಾಗುವಂತೆ ಕೂಡಿಸಿ ಬಾಯಿಕಟ್ಟಿ, ಒಂದು ತಿಂಗಳುವರಿಗೆ ಇಡುವದು. ಅನಂತರ ದೇಹಬಲವರಿತು ನಿತ್ಯವೂ

೧ ತೊಲಾ ಅಥವಾ ೨ ತೊಲಾವಟ್ಟಿಗೆ ಒಂದೇಹೊತ್ತು ಸೇವಿಸುತ್ತಾ ಬರುವದು. ಇದರಿಂದ—ಕ್ಷಯ, ಉದರವ್ಯಾಧಿ, ದುರ್ಬಲತ್ವ, ಗ್ರಹಣೀ, ಪಾಂಡು, ಅರ್ಶಸ್ಸು (ಮೊಳೇಜಾಡ್ಯ) ಈ ಜಾಡ್ಯಗಳು ಶೀಘ್ರವಾಗಿ ನಾಶವಾಗುವವಲ್ಲದೆ ರಕ್ತಶುದ್ಧಿ, ವೀರ್ಯವೃದ್ಧಿ, ತೇಜಸ್ಸು, ಓಜಸ್ಸು ಇವು ಉಂಟಾಗಿ ವಲೀಪಲಿತ ನಾಶನವಹುದು.

## ದ್ರಾಕ್ಷಾರಿಷ್ಟ.

೧೨॥ ತೊಲೆ ದ್ರಾಕ್ಷಿಯನ್ನು ೪೦ ತಂಬಿಗೆ ನೀರಿನಲ್ಲಿ ಪಕ್ವಮಾಡುವದು. ಚತುರ್ಥಾಂಶ ಇರುವಾಗ ಇಳಿಸಿ ತಣ್ಣಗಾಗುವಂತೆ ಇಟ್ಟು—ಬೆಲ್ಲ ೨ ತೊಲೆ, ದಾಲ್ಚಿನ್ನಿ, ಲವಂಗಪತ್ರೆ, ಕೇಸರಿ, ಪ್ರಿಯಂಗುಹೂವು; ಮೆಣಸು, ಹಿಪ್ಪಲಿ, ವಾಯುವಿಳಂಗ ಇವು ೪-೪ ತೊಲಾ, ಮಣ್ಣಿನಪಾತ್ರೇಲಿ ಎಲ್ಲವನ್ನೂ ಶೇರಿಸಿ ಮುಖಬಂಧನಮಾಡಿ, ಮುದ್ರಿತವಾದ ಈ ಭಾಂಡವನ್ನು ೧ ತಿಂಗಳುವರಿಗೂ ಇಟ್ಟದ್ದು ಆ ಮುಂದೆ ಇದನ್ನು ನಿತ್ಯವೂ ದೇಹಬಲವರಿತು ೧ ತೊಲಾದಿಂದ ೨ ತೊಲಾದವರಗೂ ಸೇವಿಸುತ್ತಾ ಬಂದರೆ—ಉರಃಕ್ಷತ, ಕಾಸ, ಶ್ವಾಸ, ಗಳದ ಸರ್ವರೋಗಗಳೂ ನಾಶವಾಗುವವು ಇದು ಧಾತುವೃದ್ಧಿಮಾಡಿ ಪುಷ್ಟಿಯನ್ನೀಯುವದು. ಮಲವನ್ನು ಶೋಧಿಸುವದು.

## ಬಲಾತೈಲ.

ಚಿಟ್ಟಾಮುಟ್ಟಿಬೇರಿನ ಕಷಾಯ, ಹುರಳೀ ಕಟ್ಟು, ಯವದ ಕಷಾಯ ಇವು ೪-೪ ಪಕ್ಕಾಶೇರು, ೪೦ ತೊಲಾ ಯಳ್ಳುಯಣ್ಣೆ ಹಾಕಿ ಮೃದ್ವಗ್ನಿಯಿಂದ ಪಾಕಮಾಡುತ್ತಾ, ಜೀವನೀಯಗಣದ ಮೂಲಿಕೆಗಳು, ಶತಾವರಿ, ಇಂದ್ರವಾರುಣಿ, ಮಂಜಿಷ್ಟ, ಕೋಷ್ಟ, ಛಡೀಲಾ, ತಗರ, ಅಗರು, ಸೈಂಧವ, ಭಜೆ, ಜಟಾಮಾಂಸಿ, ಲವಂಗಪತ್ರಿ, ಸೋಪು, ಸುಗಂಧಪಾಲ, ಜೇಷ್ಟಮಧು, ಅಶ್ವಗಂಧಿ ಇವು ೪-೪ ತೊಲಾ ಚೂರ್ಣಿಸಿ ತೈಲಪಾಕಕ್ಕೆ ಶೇರಿಸಿ, ಪಕ್ವಮಾಡುವದು. ಇಳಿಸಿದನಂತರ ಇದನ್ನು ಗರ್ಭಿಣಿಸ್ತ್ರೀಯರಿಗೂ, ಧಾತುಕ್ಷೀಣಪುರುಷನಿಗೂ, ಪ್ರಸೂತಿಸ್ತ್ರೀಗೂ, ಉಪಯೋಗಿಸುವದು. ಇದನ್ನು ಮರ್ದನಮಾಡುವದರಿಂದ ಪುಷ್ಟಿ, ಸೌಂದರ್ಯ, ಕಾಂತಿ, ಓಜಸ್ಸು, ಆಯು, ಬಲವುಂಟಾಗುವದು. ವಾತವಿಕಾರಗಳನ್ನು ನಾಶಮಾಡುವದು. ರಾಜರುಗಳೂ, ಸುಖೀಪುರುಷರೂ ಈ ತೈಲಮರ್ದನದಿಂದ ಮಹದಾನಂದವನ್ನು ಪಡಿಯುವರು.

## ಶತಾವರಿತೈಲ.

ಶತಾವರಿ, ಸೊಗದೆ, ನೆಲಮಾಗಳಿ, ೨ ಬಗೆ ಪರ್ಣೀ, ಹರಳುಬೇರು, ಅಶ್ವಗಂಧಿ, ಆನೆನೆಗ್ಗಿಲು, ಬಿಲ್ವಚಕ್ಕೆ, ಕಾಶತೃಣ, ಕೊಡಚಿಗೆಚಕ್ಕೆ ಇವೆಲ್ಲಾ

೬-೬ ತೊಲಾ ಚೂರ್ಣಿಸಿ ಶೋಧಿಸುವದು. ಇದರ ನಾಲ್ಕು ಪಾಲು ತೂಕ ನೀರಿನಲ್ಲಿ ಪಕ್ವಮಾಡುವದು. ಚತುರ್ಥಾಂಶ ಕಷಾಯ ಉಳಿದನಂತರ— ೧ ಪ್ರಸ್ಥ ತಿಲತೈಲ, ೧ ಪ್ರಸ್ಥ ಆಕಳ ಹಾಲು, ೧ ಪ್ರಸ್ಥ ಹಲವು ಮಕ್ಕಳಬೇರಿನ ರಸ, ೧ ಪ್ರಸ್ಥ ಜಲ ಇವೂ ಕಷಾಯವೆಲ್ಲಾ ಕೂಡಿಸಿ ಮೃದ್ಭಾಂಡದಲ್ಲಿ ಪಕ್ವ ಮಾಡುವದು. ಅನಂತರ—ಶತಾವರಿ, ದೇವದಾರು, ಜಟಾಮಾಂಸೀ, ತಗರ ಚಂದನ, ಸೋಪು, ಚಿಟ್ಟಾಮುಟ್ಟ, ಕೋಷ್ಟ, ಯಾಲಕ್ಕಿ, ಕಮಲ, ಋದ್ಧಿ, ವೃದ್ಧಿ, ಸಿದ್ಧಿ, ಮೇಧಾ, ಮಹಾಮೇದಾ, * ಕಾಕೋಲಿ, ಜೀವಕ ಇವು ೧-೧ ತೊಲಾದಂತೆ ಚೂರ್ಣಿಸಿ, ತೈಲಪಾಕವಾಗುವದರಲ್ಲಿ ಹಾಕುವದು. ಇದನ್ನು ಬರೀ ಕಾಡುಬೆರಣಿಯ ಉರಿಯಲ್ಲಿಯೇ ಪಕ್ವಮಾಡುವದು. ಈ ತೈಲವನ್ನು ತಲೆಯಿಂದ ಸರ್ವಾಂಗಕ್ಕೂ ಮರ್ದಿಸುವದರಿಂದ—ಪುರುಷನು ಸ್ತ್ರೀಯರಲ್ಲಿ ವೃಷಭತುಲ್ಯನಾಗಿ ಕ್ರೀಡಿಸುವನು. ಸ್ತ್ರೀಯು ಮರ್ದಿಸಿಕೊಳ್ಳುವುದರಿಂದ ಬಂಜೆತನವು ನಾಶವಾಗಿ ಪುತ್ರವತಿಯಾಗುವಳು. ಸ್ತ್ರೀಯರ ಸರ್ವ ಯೋನಿವಿಕಾರಗಳೂ ನಾಶವಾಗುವವು. ಅಂಗಶೂಲಿ, ಶಿರಃಶೂಲಿ, ಕಾಮಲೆ, ಪಾಂಡು, ಗೃಧ್ರಸೀ, ಹಲೀಮಕ, ಪ್ಲೀಹ, ಎಲ್ಲಾ ಪ್ರಮೇಹಗಳು, ದಂಡಾಪತಾನಕವೆಂಬ ವಾಯು ಜಾಡ್ಯ, ವಾತವ್ಯಾಧಿಗಳು, ದಾಹಸಹಿತವಾದ ವಾತರಕ್ತ, ವಾತಪಿತ್ತ, ಮದ, ಕಿವಿಕಿವಡು, ಆಧ್ಮಾನವೆಂಬ ವಾಯು, ರಕ್ತಪಿತ್ತ, ಈ ರೋಗಗಳು ನಾಶವಾಗುವವು. ಈ ತೈಲಾಭ್ಯಂಗಮಾಡುವವನು ಶತಸ್ತ್ರೀಯರಲ್ಲಿ ರಮಿಸ ಶಕ್ತನಾಗುವನು. ಅಮಿತರೇತಸ್ಸನ್ನು ಪಡಿಯುವನು.

ಜೇಷ್ಟಮಧು, ನೆಲಗುಂಬಳ, ದಾಲ್ಚಿನ್ನಿ, ಲವಂಗ, ಆನೆನೆಗ್ಗಿಲು, ಅಮೃತಸಾರ, ಶತಾವರಿ ಇವೆಲ್ಲಾ ಔಷಧಗಳನ್ನೂ ಸಮತೂಕವಾಗಿ ಕುಟ್ಟಿ, ಶೋಧಿಸಿ ನಿತ್ಯವೂ ೨ ಹೊತ್ತು ಕಾಲುಕಾಲು ತೊಲಾ ಚೂರ್ಣ ಸೇವಿಸಿ ಅರ್ಧಶೇರು ಹಾಲು, ಸಕ್ಕರೆ ಹಾಕಿ ಕಾಸಿದ್ದನ್ನು ಕುಡಿಯುವದು. ಪುರುಷನಿಗೆ ಸಾರ್ವದಾ ಪುಷ್ಟಿಯಿರುವದು, ರತಿಯಲ್ಲಿ ತುಂಬಾ ಶಕ್ತಿಯುಂಟಾಗಿರುವದು.

ಜೇಷ್ಟಮಧು, ಅಮೃತಸಾರ, ತ್ರಿಫಲೆ, ನೆಲಗುಂಬಳ, ಕರೀಮುಸಲೀ, ಬಿಳೀಮುಸಲೀ, (ಅಂದರೆ ಕರೀಮುಸಲಿ ನೆಲತಾಟಗಡ್ಡೆ, ಬಿಳೀಮುಸಲಿಯು ಶತಾವರಿ) ನಾಗಕೇಸರ, ಶತಾವರಿ, (ಇಲ್ಲಿ ಶತಾವರಿ ೨ ಸಲ ಬಂದಿದೆ. ಅದಕ್ಕಾಗಿ ದ್ವಿಗುಣ ಶೇರಿಸಬೇಕು.) ಇವು ಸಮತೂಕ ಚೂರ್ಣಿಸಿ, ವಸ್ತ್ರಗಾಳಿತಮಾಡಿಡುವದು. ತುಪ್ಪ, ಸ್ವಲ್ಪ ಕಡಮೆ ಜೇನುತುಪ್ಪ ಶೇರಿಸಿದ್ದರಲ್ಲಿ ದಿನವೂ ಅರ್ಧತೊಲೆ ಚೂರ್ಣ ಸೇವಿಸುತ್ತಾ ೨೧ ದಿನ ೨ ಹೊತ್ತು ಸೇವಿ

* ಒಂದೇ ಔಷಧಿಯ ಹೆಸರು ೨ ಕಡೆ ಬಂದರೆ ಅದನ್ನು ದ್ವಿಗುಣವಾಗಿ ಶೇರಿಸತಕ್ಕದ್ದು.

ಸುತ್ತಾ ಪಥ್ಯದಿಂದಿರಲು, ವೃದ್ಧಪುರುಷನೂ ೧೧ ಸ್ತ್ರೀಯರಲ್ಲಿ ಸುಖಪಡು ವಷ್ಟು ಕಾಮಶಕ್ತಿಯುಂಟಾಗುವನು.

ಮೆಣಸು, ಲವಂಗ, ದ್ರಾಕ್ಷಿ, ಬಾದಾಮಿ, ಚಿರೌಂಜಿ, ದಾಲಚಿನ್ನಿ, ಲವಂಗಪತ್ರಿ, ಯಾಲಕ್ಕಿ, ರಕ್ತಚಂದನ, ಹಿಪ್ಪಲಿ, ಜೀರಿಗೆ, ಸ್ಯಾಹಜೀರಿಗೆ, ಶುಂಠಿ, ಧನಿಯಾ, ಮೋಡಿ, ನಸುಗುನ್ನೀಬೀಜ, ತುಂಗಮುಸ್ತೆ, ವಂಶಲೋಚನ, ಕಮಲಗಡ್ಡೆ, ತವಕ್ಷೀರ, ೨ ಬಗೇಮುಸಲೀ, ಶತಾವರಿ ಇವೆಲ್ಲಾ ಅರ್ಧ-ಅರ್ಧತೊಲಾ, ಕುಟ್ಟಿ, ವಸ್ತ್ರಗಾಳಿತಮಾಡಿ, ಸಮಸಕ್ಕರೆಬೆರಸಿ, ನಿತ್ಯವೂ ೨ ಹೊತ್ತು, ಹೊತ್ತಿಗೆ ಅರ್ಧ-ಅರ್ಧತೊಲಾ ಚೂರ್ಣ ಸೇವಿಸಿ ಸಕ್ಕರೆ ಬೆರಸಿದ ಹಾಲನ್ನು ಕುಡಿಯುತ್ತಾ ಬರುವದು. ಸಕಲ ಪ್ರಮೇಹಹರ ಧಾತು ಪುಷ್ಟಿಯುಂಟಾಗುವದು. ಬಲ, ಕಾಂತಿ, ಓಜಸ್ಸು, ರಕ್ತ ಇವು ವೃದ್ಧಿ ಯಾಗುವವು.

## ಅಶ್ವಗಂಧಾದಿ ಚೂರ್ಣ.

ಅಶ್ವಗಂಧಿ, ನೆಲಗುಮ್ಮಳಗಡ್ಡೆ, ಸ್ಯಾಹಮುಸಲೀ, ಸಫೇದ್‌ಮುಸಲೀ, ತಾಲಮಖಾನಾ, (ಕೊಳವಳಿಕೆಬೀಜ) ಬೀಜಬಂದ್, ಬೂರಗದ ಬಂಕೆ, ಆನೆನೆಗ್ಗಿಲು, ಇವೆಲ್ಲಾ ಅರ್ಧ-ಅರ್ಧತೊಲಾ ಶೇರಿಸಿ, ಕುಟ್ಟಿ, ವಸ್ತ್ರಗಾಳಿತ ಮಾಡಿ, ಇದಕ್ಕೆ ವಂಗಭಸ್ಮ, ಅಭ್ರಕಭಸ್ಮ, ಇವು ಸ್ವಲ್ಪ ಬೆರಸಿ, ಸಕ್ಕರೆ ಬಟ್ಟು ಚೂರ್ನದ ೨ ರಷ್ಟು, ಆಕಳತುಪ್ಪ ೧ ಶೇರು, ಆಕಳಹಾಲು ಪಕ್ಕಾ ಶೇರು ೫ ಇವೆಲ್ಲಾ ಕೂಡಿಸಿ ಖೋವಾಮಾಡಬೇಕು. ೨ ಶೇರು ಬಾಕಿ ಇರುವಾಗ ಇಳಿಸಿ, ಮೇಲಿನ ಚೂರ್ಣ ಶೇರಿಸಿ ದಿನವೂ ಅರ್ಧ-ಅರ್ಧ ತೊಲಾದಂತೆ ೨ ಹೊತ್ತು ಸೇವಿಸುತ್ತಾ ಬರುವದು. ಧಾತುಪುಷ್ಟಿಯನ್ನುಂಟು ಮಾಡುವದು. ಬಲ, ವೀರ್ಯ, ಕಾಂತಿಗಳುಂಟಾಗುವವು. ರತಿಯಲ್ಲಿ ಅತಿ ವೇಗವುಂಟಾಗುವದು. ವಲೀಪಲಿತವರ್ಜಿತನಹನು.

## ಜೀವನೀಯಗಣ.

ಕಾಕೋಲೀ, ಕ್ಷೀರಕಾಕೋಲೀ, ಜೀವಕ, ಋಷಭಕ, ಮೇದಾ, ಮಹಾಮೇದಾ, ಜೀವಂತೀ ಕ್ಷೀರಿಣೀ, ಜೇಷ್ಟಮಧು, ನೆಲಗಡ್ಲೆಬೀಜ, ಕಾಡುಉದ್ದು, ಇವುಗಳ ಚೂರ್ಣವು ಸ್ಥಿತಿಕಾರಕ, ಭಾರೀ, ದುಗ್ಧವರ್ಧಕ, ಧಾತುಪೋಷಕ, ಧಾತುಶೋಧಕ, ಸ್ನಿಗ್ಧ, ಶೀತಲಕರವಾದದ್ದು—ದಾಹ, ರಕ್ತಪಿತ್ತ, ಕ್ಷಯಾ, ಶೋಷ, ಜ್ವರ, ವಾಯು ಇವುಗಳನ್ನು ಹರಿಸುತ್ತದೆ.

## ಲವಂಗಾದಿ ಚೂರ್ಣ.

ಲವಂಗ, ಪಚ್ಚಕರ್ಪೂರ, ಯಾಲಕ್ಕಿ, ನಾಗಕೇಸರ, ಜಾಫಲ, ಮುಡಿವಾಳ, ಶುಂಠಿ, ಕರೀಜೀರಿಗೆ, ಕೃಷ್ಣಾಗರು, ವಂಶಲೋಚನ, ಜಟಾಮಾಂಸೀ,

ನೀಲಕಮಲ, ಹಿಪ್ಪಲಿ, ಶ್ರೀಗಂಧ, ತಗರ, ಸೊಗದೆ, ಕಂಕೋಲ ಇವೆಲ್ಲಾ ಸಮತೂಕ ಶೇಖರಿಸಿ, ಕುಟ್ಟಿ, ವಸ್ತ್ರಗಾಳಿತಮಾಡಿ ಇವುಗಳ ಸಮತೂಕ ಸಕ್ಕರೆ ಬೆರಸಿಡುವದು, ಇದನ್ನು ಹೊತ್ತಿಗೆ ಅರ್ಧತೊಲೆಯಂತೆ ದಿನವೂ ೨ ಹೊತ್ತು ಸೇವಿಸುತ್ತಾ ಬಂದರೆ—ರೋಚನ, ತೃಪ್ತಿ, ಧಾತುಪುಷ್ಟಿ ಇವನ್ನು ಟುಮಾಡಿ, ತ್ರಿದೋಷಗಳನ್ನು ಹರಿಸುತ್ತದೆ. ಬಲ, ವೀರ್ಯಗಳನ್ನುಂ ಮಾಡುತ್ತದೆ. ಕಂಠ, ಹೃದಯರೋಗಗಳು, ಕಾಸ, ಬಿಕ್ಕಳಿಕೆ, ಪೀನಸಿ ಕ್ಷಯ, ತಮಕಶ್ವಾಸ, ಅತಿಸಾರ, ಉರಃಕ್ಷತ, ಪ್ರಮೇಹ, ಅರುಚಿ, ಗುಲ್ಮ ಗ್ರಹಣೀ ಇವುಗಳನ್ನು ನಾಶಮಾಡುತ್ತದೆ.

## ಜಾತೀಫಲಾದಿ ಚೂರ್ಣ.

ಜಾಫಲ, ಲವಂಗ, ಯಾಲಕ್ಕಿ, ದಾಲ್ಚಿನ್ನಿ, ಲವಂಗಪತ್ರೆ, ನಾಗಕೇಸರ, ಪಚ್ಚಕರ್ಪೂರ, ಶ್ರೀಗಂಧ, ತಿಲ, ವಂಶಲೋಚನ, ತಗರ, ನೆಲ್ಲೀಚಟ್ಟು, ತಾಲೀಸಪತ್ರೆ, ಹಿಪ್ಪಲಿ, ಅಳಲೆಕಾಯಿ, ಚಿತ್ರಮೂಲ, ಕರೀಜೀರಿಗೆ, ಶುಂಠಿ, ವಾಯುವಿಳಂಗ, ಮೆಣಸು, ಇವೆಲ್ಲದರ ಸಮಾನ ತುಂಗಮುಸ್ತೆ ಇವೆಲ್ಲವನ್ನೂ ಕುಟ್ಟಿ, ವಸ್ತ್ರಗಾಳಿತಮಾಡಿ, ಸಮಸಕ್ಕರೆ ಬೆರಸಿ, ದಿನವೂ ೨ ಹೊತ್ತು, ಹೊತ್ತಿಗೆ ಅರ್ಧತೊಲೆಯಿಂದ ೧ ತೊಲೆಯವರಿಗೆ ದೇಹಬಲಾನುಸಾರವಾಗಿ ಸೇವಿಸುತ್ತಾ ಬಂದರೆ—ಗ್ರಹಣಿ, ಕಾಸಶ್ವಾಸ, ಅರುಚಿ, ಕ್ಷಯ, ವಾತವ್ಯಾಧಿಗಳು, ಕಫವ್ಯಾಧಿಗಳು, ಮೂಗಿನಲ್ಲಿ ರಕ್ತಸುರಿಯುವಿಕೆ ಇವೆಲ್ಲಾ ನಾಶವಾಗಿ, ಧಾತುವೃದ್ಧಿಯಹುದು. ಕಾಮಶಕ್ತಿ ವೃದ್ಧಿಯಾಗುವದು.

## ಸಿತೋಪಲಾದಿ ಚೂರ್ಣ.

ಸಕ್ಕರೆ ೧೬ ಭಾಗ, ವಂಶಲೋಚನ ೮ ಭಾಗ, ಹಿಪ್ಪಲಿ ೪ ಭಾಗ, ಯಾಲಕ್ಕಿ ೨ ಭಾಗ, ದಾಲ್ಚಿನ್ನಿ ೧ ಭಾಗ ಇವೆಲ್ಲಾ ಶೇರಿಸಿ ಚೂರ್ಣಮಾಡಿ ಜೇನು ತುಪ್ಪ ಮತ್ತು ಸ್ವಲ್ಪ ಹೆಚ್ಚುಕಡಮೆ ತುಪ್ಪ ಶೇರಿಸಿ ಅದರಲ್ಲಿ ಈ ಚೂರ್ಣ ಅರ್ಧತೊಲೆಯಂತೆ ನಿತ್ಯವೂ ೨ ಹೊತ್ತು ಸೇವಿಸಿದರೆ—ಕಾಸಶ್ವಾಸ, ಕ್ಷಯ, ಕೈಕಾಲುಉರಿ, ಮಂದಾಗ್ನಿ, ಬಾಯಿ ಒಣಗುವಿಕೆ, ಪಾರ್ಶ್ವಶೂಲೆ, ಅರುಚಿ, ಜ್ವರ, ರಕ್ತಪಿತ್ತ ಇವೆಲ್ಲಾ ನಾಶವಾಗುವವು. ರಕ್ತವೃದ್ಧಿ, ವೀರ್ಯವೃದ್ಧಿ, ಬಲ ತೇಜೋಗಳನ್ನುಂಟುಮಾಡುವದು.

## ಶತಾವರೀ ಚೂರ್ಣ.

ಶತಾವರಿ, ಆನೆನೆಗ್ಗಿಲು, ನಸುಗುನ್ನಿಬೀಜ, ಅಮೃತಸಕ್ಕರೆ, ಚಿಟ್ಟಾಮುಟ್ಟಿ, ತಾಲಮಖಾನಾ (ಕೊಳವಳಿಕೆಬೀಜ), ಇವೆಲ್ಲಾ ಸಮತೂಕ ಶೇರಿಸಿ ಚೂರ್ಣಿಸಿ, ಶೋಧಿಸಿ ಸಮಸಕ್ಕರೆ ಬೆರಸಿ, ಆಕಳಹಾಲಿನಜತೇಲಿ ದಿನವೂ ೨

ಹೊತ್ತು ಹೊತ್ತಿಗೆ ಅರ್ಧತೊಲೆಯಂತೆ ಸೇವಿಸಿದರೆ—ಸ್ತ್ರೀಸುಖದಲ್ಲಿ ತೃಪ್ತಿಯೇ ಆಗುವದಿಲ್ಲ; ಬಲ, ವೀರ್ಯ, ಕಾಂತಿ, ಓಜಸ್ಸುಗಳನ್ನು ವೃದ್ಧಿಪಡಿಸುತದು.

## ಅಶ್ವಗಂಧಾದಿಚೂರ್ಣ.

ಅಶ್ವಗಂಧಿ ೪೦ ತೊಲಾ, ನೆಲಕುಂಬಳ ೪೦ ತೊಲಾ, ಎರಡನ್ನೂ ಚೂರ್ಣಿಸಿ ವಸ್ತ್ರಗಾಳಿತಮಾಡಿ, ದಿನವೂ (೨ ಹೊತ್ತು) ಹೊತ್ತಿಗೆ ಅರ್ಧತೊಲೆ ಚೂರ್ಣವನ್ನು ಸೇವಿಸಿ ಹಾಲಿನಲ್ಲಿ ಸಕ್ಕರೆ ಬೆರಸಿ ಕಾಸಿದ್ದನ್ನು ಕುಡಿಯುವದು. ದಶಸ್ತ್ರೀಭೋಗದ ಶಕ್ತಿಯಕ್ಕು.

## ನವಾಯಸಾದಿಚೂರ್ಣ.

ಚಿತ್ರಮೂಲ, ತ್ರಿಫಲೆ, ತುಂಗಮುಸ್ತೆ, ವಾಯುವಿಳಂಗ, ತ್ರಿಕಟುಕ, ಇವೆಲ್ಲಾ ಸಮಾನಭಾಗ, ಇವೆಲ್ಲದರಷ್ಟು ಶುದ್ಧ ಲೋಹಭಸ್ಮ ಇದನ್ನು ದಿನವೂ ೧ ಹೊತ್ತು ತೊಗರೀಕಾಳಷ್ಟು ತುಪ್ಪ, ಜೇನುತುಪ್ಪ ಹೆಚ್ಚು ಕಡಮೆಯಾಗಿ ಬೆರಸಿ ಸೇವಿಸುತ್ತಾ ಬರುವದು. ಅಥವಾ ಗೋಮೂತ್ರದಲ್ಲಿ ಸೇವಿಸುವದು. ಪಾಂಡು, ಹೃದ್ರೋಗ, ಭಗಂದರ, ಶೋಭೆ, ಕುಷ್ಟ, ಉದರರೋಗ, ಮೊಳೇಜಾಡ್ಯ, ಮಂದಾಗ್ನಿ, ಅರುಚಿ, ಕ್ರಿಮಿ, ಇವು ಹರ. ತುಪ್ಪದಲ್ಲಿ ಸೇವಿಸುತ್ತಾ ಸಕ್ಕರೆ ಬೆರಸಿದ ಹಾಲನ್ನು ಕುಡಿಯುತ್ತಾ ಬಂದರೆ ರಕ್ತವೃದ್ಧಿ, ವೀರ್ಯವೃದ್ಧಿ, ಅಮಿತಬಲವಕ್ಕು.

ನೆಲ್ಲೀಚಟ್ಟು, ಕಮಲಗಡ್ಡೆ, ಕೋಷ್ಟ, ಆಲದಬಿಳಲು ಇವು ಸಮಗೊಂಡು ಚೂರ್ಣಿಸಿ ಜೇನುತುಪ್ಪದಲ್ಲಿ ಅರದು ಗೋಲೀಮಾಡಿಡುವದು. ಮುಖದಲ್ಲಿ ಒಂದು ಗೋಲಿಯನ್ನಿಟ್ಟರೆ ಮಹಾ ದಾಹಹರ, ಮುಖವಣಗುವದು ನಾಶವಾಗುತ್ತದೆ. ಈ ಗೋಲಿಯನ್ನು ದಿನವೂ ೨ ಹೊತ್ತು ೧-೧ ರಂತೆ ಸೇವಿಸುತ್ತಾ ಹಾಲು ಸಕ್ಕರೆ ಸೇವಿಸಿದರೆ ಮಹಾ ಪುಷ್ಟಿಯಹುದು.

ತೊಳದ ಉದ್ದಿನಬೇಳೆ, ಗೋಧಿಯಹಿಟ್ಟು, ಯವಧಾನ್ಯದಹಿಟ್ಟು, ಷಷ್ಠಿಕ ಅಕ್ಕಿಯಹಿಟ್ಟು, ಹಿಪ್ಪಲೀಚೂರ್ಣ, ಇವೆಲ್ಲಾ ೪-೪ ತೊಲೆ, ಇವೆಲ್ಲದರ ಅರ್ಧಭಾಗ ತುಪ್ಪದಲ್ಲಿ ಹುರಿಯುವದು. ಚೂರ್ಣದ ಸಮಾನಭಾಗ ಸಕ್ಕರೆಯನ್ನು ಮೃದ್ವಗ್ನಿಯಿಂದ ಪಾಕಮಾಡಿ, ಚೂರ್ಣಹಾಕಿ ಕೂಡಿಸಿಡುವದು. ದಿನವೂ ೨-೨ ತೊಲೆಯಂತೆ ಈ ಲೇಹ್ಯವನ್ನು ತುಪ್ಪ-ಸ್ವಲ್ಪ ಜೇನುತುಪ್ಪ ಬೆರಸಿ ಅದರಲ್ಲಿ ಕಲಿಸಿ ಸೇವಿಸಿ ಮೇಲೆ ಹಾಲು ಕುಡಿಯುತ್ತಾ ಸಾಯಂಕಾಲದಲ್ಲಿ ಸೇವಿಸುವದು. ಹುಳಿ, ಶಲದಿವರ್ಜ್ಯವಾಗಿ ಪಥ್ಯದಲ್ಲಿದ್ದರೆ ಬಹು ಪುಷ್ಟಿಯುಂಟಾಗುವದು.

## ಅಜವೋದಾದಿಘುಟಿಕಾ.

ಅಜವೋದಾ, ತ್ರಿಫಳೆ, ನೆಲಗುಂಬಳಗಡ್ಡೆ, ಶುಂಠಿ, ಧನಿಯಾ, ವೋಚರಸ (ಬೂರಗದಬಂಕೆ) ತುಂಗವುುಸ್ತೆ, ಗಜಪಿಪ್ಪಲಿ, ಲವಂಗ, ಜಾಫಲ ಹಿಪ್ಪಲಿ, ಮುುಲತಾನಿ, ಶುದ್ಧಿವಾಡಿದ ಭಂಗಿ, ಅನಾರ್‌ದಾನಾ (ಶೀಮೇ ದಾಳಿಂಬರೇಬೀಜ), ಜೀರಿಗೆ, ಸ್ಯಾಹಜೀರಿಗೆ, ಚಿತ್ರಮೂಲ, ಗಂಟುಭಾರಂಗಿ, ಕಮಲಗಡ್ಡೆ; ನಸುಗುನ್ನಿಬೀಜ, ಜೇಷ್ಟಮಧು, ಶಿಲಾಜತು, ಕರ್ಕಾಟಕಶೃಂಗಿ, ಕೇಸರಿ, ನಾಗಕೇಸರಿ, ಪುಷ್ಕರಮೂಲ, ಶತಾವರಿ ಇವೆಲ್ಲಾ ಅರ್ಧ ಅರ್ಧತೊಲಾ ಶೇರಿಸಿ ಕುಟ್ಟಿ ವಸ್ತ್ರಗಾಳಿತವಾಡಿ ೫ ಪಕ್ಕಾಶೇರು ಆಕಳಹಾಲನ್ನು ಒಲೆಯಮೇಲಿಟ್ಟು ಉರಿಹಾಕುತ್ತಾ ೧ ಶೇರು ಮಾತ್ರ ನಿಂತು, ಗಟ್ಟಿಯಾದಾಗ ೮೦ ತೊಲಾ ಸಕ್ಕರೆಯನ್ನು ಹಾಕಿ ಪಾಕವಾಡಿ ಅದರಲ್ಲಿ ಮೇಲಿನ ಚೂರ್ಣವನ್ನು ಹಾಕಿ ಸ್ವಲ್ಪ ತುಪ್ಪಹಾಕಿ, ಜೇನುತುಪ್ಪವನ್ನೂ ಸ್ವಲ್ಪ ಬೆರಸಿಡುವದು. ದಿನವೂ ೨ ಹೊತ್ತು ಹೊತ್ತಿಗೆ ಅರ್ಧತೊಲೆಯಂತೆ ಸೇವಿಸಿ ಮೇಲೆ ೧ ಪಾವು ಹಾಲುಕುಡಿಯುತ್ತಾ ಬಂದವನು ನವಮನ್ಮಥನಾಗುವನು. ಪಥ್ಯದಿಂದಿದ್ದು ೪೦ ದಿನ ಸೇವಿಸಿದರೆ ಅಪರಿಮಿತ ವೀರ್ಯನಾಗುವನು.

## ಕ್ಷಯಾಂತಕಚೂರ್ಣ.

ದಾಲ್ಚಿನ್ನಿ ೧ ತೊಲೆ, ಸಣ್ಣಯಾಲಕ್ಕಿ ೨ ತೊಲಾ, ಸಣ್ಣಹಿಪ್ಪಲಿ ೪ ತೊಲಾ, ವಂಶಲೋಚನ ೮ ತೊಲಾ, ಸಕ್ಕರೆ ೧೬ ತೊಲಾ, ಇವೆಲ್ಲಾ ಕುಟ್ಟಿ ಶೋಧಿಸುವದು. ಅನಂತರ ೧೬ ತೊಲಾ ಆಕಳತುಪ್ಪ, ೩೨ ತೊಲಾ ಜೇನುತುಪ್ಪ ಹಾಕಿ ಒಂದು ತುಪ್ಪ ಬಳಸಿದ ಹೊಸಮಡಿಕೆಯಲ್ಲಿ ಬಾಯಿತಟ್ಟಿ ಕಟ್ಟಿ ಇಟ್ಟುಕೊಂಡು ದಿನ ೨ ಹೊತ್ತು ಹೊತ್ತಿಗೆ ಅರ್ಧತೊಲೆಯಿಂದ ಮುಕ್ಕಾಲುತೊಲೆಯವರಿಗೆ ದೇಹಬಲವರಿತು ಸೇವಿಸುವದು. ಇದರಜತೇಲಿ ಅಕ್ಕಿಕಾಳಷ್ಟು ನಿತ್ಯವೂ ಮಾಲತೀವಸಂತರಸವನ್ನಾಗಲೀ, ಮೃಗಾಂಕ ಅಥವಾ ಸುವರ್ಣದವರ್ಕ್ ಆಗಲೀ ಸೇವಿಸುತ್ತಾ ಬರುವದೊಳ್ಳೇದು. ಇದರ ಸೇವನೆಯಿಂದ ಕ್ಷಯರೋಗ ಸಂಪೂರ್ಣವಾಗಿ ಗುಣವಾಗುವದು. ಕಾಸಶ್ವಾಸ, ಪಿತ್ತಜ್ವರ, ಪಾರ್ಶ್ವಶೂಲೆ, ಮಂದಾಗ್ನಿ, ಅರುಚಿ, ಕೈಕಾಲುಉರಿ, ರಕ್ತಪಿತ್ತ ಇವು ನಾಶವಾಗುವವು. ಧಾತುವೃದ್ಧಿ, ಕಾಮೋತ್ತೇಜಕರವಾದದ್ದು, ಕಾಂತಿ, ಓಜಸ್ಸು ಇವುಗಳನ್ನುಂಟುಮಾಡುತ್ತದೆ.

ಅಶ್ವಗಂಧಿ ೪೦ ತೊಲಾ, ನೆಲಗುಂಬಳಗಡ್ಡೆ ೪೦ ತೊಲಾ, ಚೆನ್ನಾಗಿ ಕುಟ್ಟಿ ಶೋಧಿಸಿಟ್ಟುಕೊಳ್ಳುವದು. ನಿತ್ಯವೂ ೨ ಹೊತ್ತು ಹೊತ್ತಿಗೆ ಅರ್ಧ ಅರ್ಧತೊಲಾ ಚೂರ್ಣವನ್ನು ಆಕಳಹಾಲಿನಲ್ಲಿ ೮೦ ದಿವಸ ಸೇವಿಸಿದರೆ ವೃದ್ಧಾ

ವಸ್ಥೆಯು ಬೇರೆಬೇರೆ ಆತಂಕಗಳು ಯಾವವೂ ತಲೆಯುತ್ತದೆ ಮನುಷ್ಯನು ರಕ್ತವೃದ್ಧಿ, ವೀರ್ಯವೃದ್ಧಿ, ಆಹಾರಪಚನಶಕ್ತಿ ಮುಂತಾದ ಅನೇಕ ಗುಣಗಳನ್ನು ಪಡಿಯುತ್ತಾನೆ. ಇನ್ನೂ ಹೆಚ್ಚು ಗುಣಗಳನ್ನು ಪಡಿಯಬೇಕಾದರೆ ಈ ಔಷಧ ಸೇವನೆಯಕಾಲದಲ್ಲಿ ಸ್ತ್ರೀಸಂಗ, ಹುಳಿ, ಖಾರ ಮುಂತಾದ ಕಲದೀ ವರ್ಜ್ಯವಾಗಿದ್ದರೆ ಸಾಕು ; ಎಲ್ಲಾ ಉಪಕಾರವನ್ನೂ ಮಾಡುತ್ತದೆ.

## ಪಂಚಶರರಸಾಯನ.

ಆಲದಬಿಳಲುರಸ, ಅತ್ತಿಯಚಕ್ಕೆರಸ, ನೆಲ್ಲೀಕಾಯಿರಸ, ಅಮೃತಬಳ್ಳಿಯರಸ, ಗೇಕಿನಗೆಡ್ಡೆರಸ, ಬೂರಗದಬೇರಿನ ತೊಗಟೆಯರಸ, ನೆಲಗುಂಬಳಬೇರಿನರಸ, ಹಿರೀಮದ್ದಿನಬೇರಿನರಸ, ಹಲವುಮಕ್ಕಳಬೇರಿನರಸ, ಇವೆಲ್ಲಾ ೧-೧ ಶೇರು ಶೇರಿಸಿ ಅದರಲ್ಲಿ ೧೦ ಶೇರು ಸಕ್ಕರೆಬೆರಸಿ ೨ ಶೇರು ಆಕಳತುಪ್ಪ ಹಾಕಿ ಪಕ್ವಮಾಡುವದು. ಇದು ಚಂದ್ರಪಾಕಕ್ಕೆ ಬಂದಾಗ—ವಂಶಲೋಚನ, ನೆಲತಾಟಗಡ್ಡೆ, ತುಂಗಮುಸ್ತೆ, ಜಾಫಲ, ಜಾಪತ್ರಿ, ಪರ್ಪಾಷ್ಟಕ, ದಾಲಚಿನ್ನಿ, ಬಾಲಮೆಣಸು, ತ್ರಿಕಟುಕ, ತ್ರಿಫಲೆ, ಲವಂಗಪತ್ರಿ, ಸೋಪು, ಕೇಸರಿ, ಶ್ರೀಗಂಧ, ಆಕಳಕರೆ, ತಕ್ಕೋಲ, ಲವಂಗ ಇವು ತಲಾ ೨-೩ ರಂತೆ ಚೂರ್ಣಿಸಿ ಬೆರಸಿ ರಸಾಯನವನ್ನು ಸಿದ್ಧಮಾಡಿ ಒಲೆಯಿಂದಿಳಿಸಿದನಂತರ ೧ ಶೇರು ಜೇನುತುಪ್ಪ ಬೆರಸಿಡುವದು. ಇದನ್ನು ನಿತ್ಯವೂ ೧-೧ ತೊಲೆಯಂತೆ ಕಾದಾರಿದ ಯಮ್ಮೆಹಾಲು ಅರಪಾವಿನಲ್ಲಿ ಬೆರಸಿ ಸೇವಿಸುತ್ತಾ ಬಂದರೆ-ಧಾತುಕ್ಷೀಣತೆ, ಬಲಕ್ಷೀಣತೆ, ವೀರ್ಯಕ್ಷೀಣತೆ, ಪ್ರಜ್ಞಾಕ್ಷೀಣತೆಗಳೆಲ್ಲವೂ ನಾಶವಾಗಿ ಅತುಲಿತವಾದ ತೇಜೋ, ಬಲ, ವೀರ್ಯಗಳುಂಟಾಗುವವು. ೪೮ ದಿನ ಸೇವಿಸಿ—ಮಧುರಾಹಾರಸೇವಿಯಾಗಿ ಹಾಸಿಗೆಪಥ್ಯದಲ್ಲಿರಬೇಕು. ೪-೪ ದಿನಕ್ಕೆ ಅಭ್ಯಂಗಸ್ನಾನಮಾಡುತ್ತಾ ಪಥ್ಯದಲ್ಲಿರಬೇಕು. ಕುಚಿಂತೆ, ಕಾಮವಿಲಾಸ ವ್ಯಾಪಾರದ ಆಲೋಚನೆ ಇವನ್ನು ವರ್ಜಿಸಬೇಕು. ಈ ಪಂಚಶರರಸಾಯನವು ಅತ್ಯಂತ ಬಲವಾದ ವಾಜೀಕಾರಕವು ! ! !

ಇಂತು ವಾಜೀಕರಣವೆಂಬ ಹದಿನಾಲ್ಕನೆಯ ಆಶಯವು.

ಇತಿ ದ್ವಿತೀಯಭಾಗಸ್ಸಮಾಪ್ತಃ.



# ಅಥ ತೃತೀಯಭಾಗ ಪ್ರಾರಂಭ.

## ಹದಿನೈದನೆಯ ಅಧ್ಯಾಯವು.

### ಗರ್ಭಿಣೀದಶಾ.

ಸ್ತ್ರೀಯರಿಗೆ ಮೇಲೆ ವಿವರಿಸಿರುವಂತೆ ಮೂತ್ರಕೋಶ (bladder) ಕ್ಕೂ, ದೊಡ್ಡ ಕರುಳ (rectum) ಗೂ ಮಧ್ಯದಲ್ಲಿರುವದೇ ಗರ್ಭಾಶಯವು. ಇದೇ ಪಿಂಡನಿಲ್ಲುವಸ್ಥಳವು. ಆ ಪಿಂಡವೂ ಅದರ ಅವಯುವಗಳೂ ಹುಟ್ಟುತ್ತಾ ಪೂರ್ಣವಾಗುವವರಿಗೆ ಗರ್ಭಾಶಯದಲ್ಲಿ ಪೋಷಿಸಲ್ಪಡುತ್ತಾ ಇರುವದೇ ಲೋಕವಾಡಿಕೆಯು! ಹೀಗೆ ಗರ್ಭವು ಪೂರ್ಣವಾಗಿ ಹೊರಕ್ಕೆ ಬರಲು ಮೂವತ್ತೊಂಭತ್ತು ವಾರಗಳು ಹಿಡಿಯುವವು. ಈ ಗರ್ಭಾಶಯವು—ತಳ (Fundus) ಹೊಟ್ಟೆ (Corpus) ಕಂಠ (Cervix) ಬಾಯಿ (Os) ಎಂಬದಾಗಿ ನಾಲ್ಕು ಭಾಗಗಳಾಗಿ ವಿಭಜಿಸಲ್ಪಡುವದು.

ಗರ್ಭವನ್ನು ಧರಿಸದಿರುವ ಸ್ತ್ರೀಯ ಗರ್ಭಾಶಯದ ಉದ್ದಳತೆ ಮೂರು ಅಂಗುಲಕ್ಕಿಂತ ಕಡಮೆಯಾಗಿರುವದು ; ಅಗಲವು ಅಡಿಯಲ್ಲಿ ಎರಡು ಅಂಗುಲಕ್ಕಿಂತ ಕಡಮೆ, ಕಂಠದಲ್ಲಿ ಒಂದು ಅಂಗುಲವು ; ದಪ್ಪದಲ್ಲಿ ಅದರಪಕ್ಕದ ಕಂಡಗಳು ೧/೩ ಅಂಗುಲವಿರುವದು.

ಗರ್ಭಾಶಯದ ಹಳ್ಳವು ತ್ರಿಕೋಣಾಕೃತಿಯಾಗಿರುವದು ; ಆ ಹಳ್ಳವು ಯೋನಿಯಲ್ಲಿರತಕ್ಕ ನೆತ್ತರದ ನರಗಳು ತುಂಬಿ ಸಣ್ಣಗಿರುವ ಜವ್ವಿನಿಂದ ಮುಚ್ಚಲ್ಪಟ್ಟಿರುವದು. ಈ ಮುಚ್ಚುವಿಕೆಯಿಂದ ಗರ್ಭಾಶಯದ ಕಂಠದಲ್ಲಿ ಮಡತೆಗಳಾಗಿರುವವು. ಅವು ವೃಕ್ಷದಂತೆ ಸೊಗಸಾಗಿ ಏರ್ಪಟ್ಟಿರುವದರಿಂದ ಅದನ್ನು ಪ್ರಾಣವೃಕ್ಷ (Tree of Morgagni) ವೆಂದು ಕರಿಯುವರು. ಇವುಗಳ ನಡುವೆ ಗೋಳಗಳನೇಕ ಇರುವವು.

**ಗರ್ಭಾಶಯದ ಕೆಲಸ:**—ಗರ್ಭವನ್ನು ಧರಿಸುವದಕ್ಕೆ ಮೊದಲು ಇದಕ್ಕೆ ಮಾಸಿಕ ಆರ್ತವವನ್ನುಂಟುಮಾಡುವದೊಂದೇ ಕೆಲಸವಿತ್ತು. ಗರ್ಭಾಶಯದ ಹಳ್ಳದಲ್ಲಿ ಸ್ರವಿಸತಕ್ಕ ಕೆಂಪಾದ ದ್ರವವೇ ಆರ್ತವವು.

ಗರ್ಭವನ್ನು ಧರಿಸುವದಕ್ಕಾಗಿ ಸ್ತ್ರೀಯ ನಾದಾಶಯ (Ovaria) ವೂ, ಅಲ್ಲಿಗೆ ಹೋಗುವಮಾರ್ಗವೂ, ಪುರುಷನ ವೃಷಣಗಳೂ ಸೌಖ್ಯವಾಗಿಯೂ, ನಿರಾತಂಕಗಳಾಗಿಯೂ ಇರಬೇಕು. ಸಾಧಾರಣವಾಗಿ ಸ್ತ್ರೀಪುರುಷರಿಬ್ಬರಿಗೂ ಜನನೇಂದ್ರಿಯಗಳೆಲ್ಲದರಲ್ಲಿಯೂ ರಕ್ತವು ಅಧಿಕವಾಗಿ ಶೇರಿ ಲಿಂಗದ

ಉತ್ಥಾಪನೆಯನ್ನುಂಟುಮಾಡುವದು. ಆದರೂ ಇದೇ ಪಿಂಡೋತ್ಪತ್ತಿಗೆ ಮುಖ್ಯ ಕಾರಣವಾಗುವದಿಲ್ಲ; ಸಂಯೋಗವೇ ಮುಖ್ಯವು.

ಪುರುಷನಿಂದ ಬೀಳುವ ಶುಕ್ರವು ಗರ್ಭಾಶಯದಲ್ಲಿ ಪ್ರವೇಶಿಸಿ ನಾದ ವಾಹೀಮಾರ್ಗವಾಗಿ ನಾದಾಶಯವನ್ನು ಶೇರಿ, ನಾದಬುಗ್ಗಿ (Vecicle) ಗಳಲ್ಲಿ ಬಂದಕ್ಕಾಗಲೀ ಅಥವಾ ಕೆಲವಕ್ಕಾಗಲೀ ಪ್ರಾಣಪ್ರತಿಷ್ಠೆಯನ್ನು ಮಾಡು ವದು. ಆ ಬುಗ್ಗಿ (Vecicle) ಗಳಲ್ಲಿ ನಾದವೆಂಬ ಪಿಂಡಾಂಡಗಳು ಅಡಗಿ ರುತ್ತವೆ; ಈ ಪಿಂಡಾಂಡವೆಂಬ ಇವುಗಳಲ್ಲಿ ಪಿಂಡದ ಮೂಲಾಧಾರವಸ್ತುವು ಅಣುಗಿರುವಂತೆ ತೋರುತ್ತದೆ.

ನಾದಾಶಯದಿಂದ ಹೊರಬೀಳುವದಕ್ಕೆ ಸಿದ್ಧವಾಗಿರತಕ್ಕ ಪಿಂಡಾಂಡ ವನ್ನು ತ್ವರೆಯಾಗಿ ಸಂಧಿಸುವದಕ್ಕೆ, ಸಂಯೋಗಕಾಲದಲ್ಲಿ ನಾದವಾಹಿನಿಗ ಳಾದ ಕುಚ್ಚುಗಳು ವಿಕಸಿತಗಳಾಗಿ ನಾದಾಶಯವನ್ನು ಮುಚ್ಚುತ್ತವೆ. ಫಲ ವಿದ್ದ ಪಿಂಡಾಂಡವು ನಾದಾಶಯದ "ಪೆರಿಟನಿಯಮ್" ಎಂಬ ಜವ್ವ ಮುಚ್ಚಿಗೆಯನ್ನು ಶೀಳಿಕೊಂಡು, ಆಕಡೆಗೇ ಮುಚ್ಚಿಕೊಂಡಿದ್ದು ತೆರದಿ ರುವ ನಾದವಾಹಿನಿಯಲ್ಲಿ ಪ್ರವೇಶಿಸುವದು. ಪ್ರಾಣಪ್ರತಿಷ್ಠೆಯಾಗಿ ಸುಮಾ ರು ಮೂರುವಾರಗಳಲ್ಲಿ ಆ ಪಿಂಡಾಂಡವನ್ನು ಗರ್ಭಾಶಯಕ್ಕೆ ತೆಗದುಕೊಂಡು ಹೋಗಿ ಶೇರಿಸುವದು. ಅಲ್ಲಿ ಈ ಅಂಡವು ಕ್ರಮವಾಗಿ ವೃದ್ಧಿಯಾಗಿ ಪೂರ್ಣತ್ವವನ್ನು ಪಡಿಯುವದು. ಇದಕ್ಕೆ "ಕಳೆ" ಎಂದೆನ್ನುವರು.

ಇದೇ ವಿಷಯವು ಶಬ್ದಭೇದದಿಂದ ಜನರಿಗೆ ವಿವರವಾಗಿ ತಿಳಿಯಲಾರ ದೆಂದರಿತು, ಪ್ರಸಿದ್ಧರಾದ ಡಾಕ್ಟರವರ ಇಂಗ್ಲಿಷ್ ಬರವಣಿಗೆಯನ್ನೇ ಜನರ ತಿಳುವಳಿಕೆಗಾಗಿ ಇದರಡಿ ಬರಿಯುವೆವು; ಯಾಕೆಂದರೆ ಇದೇ ಮುಖ್ಯ ವಿಷಯವು !!

"The fimbriated extremities of the tubes expand and embrace the ovaria, having become during the coitus ready to receive, the ovum, which is about to escape from the ovarium. The impregnated ovum bursts through the peritoneal covering of the ovarium, and enters the grasping and open end of the Tuba Follopeana, of the fecundated side; along which it is conveyed into the Uterns in about three weeks after conception, there gradually to undergo its complete development."

ಗರ್ಭಧರಿಸಿ ಕೆಲವು ವಾರಗಳವರಿಗೆ ಪಿಂಡದ ಭಾಗಗಳು ಸೂಕ್ಷ್ಮವಾಗಿರುವವು. ದುರ್ಬೀನವುೂಲಕ ನೋಡಿದರೂ ಬಂಕೆಯಹಾಗೆ, ಬೂದಿಬಣ್ಣ ಕೇರಿರುವ ಮುದ್ದೆಯಂತೆ ತೋರುತ್ತಾ ಇದೆ.

ಗರ್ಭಧರಿಸಿದ ನಾಲ್ಕನೆಯ ವಾರದಲ್ಲಿ ಅದು ಅಂಡಾಕಾರವಾಗಿ ಒಂದು ಆಕೃತಿಯಲ್ಲಿರುವದು. ಅದು ಜರಾಯುವೆಂಬ ಪರೆಯಿಂದ ಮುಚ್ಚಲ್ಪಟ್ಟಿರುವದು. ಇದರೊಳಗೆ ಒಳಪರೆಯೊಂದು ಮುಚ್ಚಿಕ್ಕೊಂಡಿರುವದು. ಈ ಒಳಪರೆಯಲ್ಲಿ ಜರಾಯುಜಲವಿರುವದು. ಆ ಜಲದಲ್ಲಿ ಒಂದು ಮಂದವಾದ ಚುಕ್ಕಿಯು ಕಾಣಲ್ಪಡುವದು. ಇದೇ ಪಿಂಡವು. ಆಗ ಅದು ಒಂದು ಇರುವೆಯಂತಿರುವದು.

ಐದನೆಯ ವಾರದಲ್ಲಿ ಪಿಂಡವು ಸುಮಾರು ಕಾಲುಅಂಗುಲ ಉದ್ದವಾಗುವದು. ಸುಮಾರು ೬ನೆಯ ವಾರದಲ್ಲಿ ರೂಪದಲ್ಲಿ ಫ್ರೆಂಚು ಹುರಳೀಕಾಯಿ ಬೀಜದ ಅರ್ಧದಷ್ಟು ಇರುವದು. ಆಗ ಕೈಕಾಲುಗಳು ಹುಟ್ಟುತ್ತಿರುವದನ್ನು ನೋಡಬಹುದು. ಅದರ ಶಿರಸ್ಸೂ ಶರೀರವೂ ಪ್ರಮಾಣದಲ್ಲಿ ಒಂದೇ ಇರುವದು.

೭ನೇ ಅಥವಾ ೮ನೇ ವಾರದಲ್ಲಿ ಅವಯವಗಳು ಸ್ಪಷ್ಟವಾಗಿ ಏರ್ಪಟ್ಟಿರುವವು. ಆಗ ಶಿಶುವು ೧ ರಿಂದ ೨ ಅಂಗುಲ ಉದ್ದವಾಗಿರುವದು. ಆಗ ಸುಮಾರು ಮೂರುವರಹಾ ತೂಕವಿರಬಹುದು.

ಮೂರನೆಯ ತಿಂಗಳಲ್ಲಿ ಅದರ ಉದ್ದ ಆರು ಅಂಗುಲವಾಗಿರುವದು.

ಐದನೆಯ ಮಾಸದಲ್ಲಿ ಸಾಧಾರಣವಾಗಿ ೧೦ ಅಂಗುಲ ಉದ್ದವಾಗಿರುವದು.

ಏಳನೆಯ ಮಾಸದಲ್ಲಿ ಅದರ ಉದ್ದ ಸುಮಾರು ೧೪ ಅಂಗುಲವಾಗಿರುವದು.

ಹಾಗೆಯೇ ೯ನೇ ತಿಂಗಳು ತುಂಬಿದಮೇಲೂ, ಅಥವಾ ಪೂರ್ಣ ಗರ್ಭಕಾಲದಲ್ಲಿಯೂ ಅದರ ಉದ್ದ ಸರಾಸರಿ ೨೦ ಅಂಗುಲಗಳು, ತೂಕವು ಸರಾಸರಿ ೭ ಪೌಂಡು ಅಂದರೆ ಕಾಲುಮಣ ತೂಕವೂ ಇರುತ್ತದೆ.

**ಗರ್ಭಚಿಹ್ನೆಗಳು:**—ಕೆಲವು ಸ್ತ್ರೀಯರಿಗೆ ಗರ್ಭಧಾರಣೆಕಾಲದಿಂದಲೂ, ಪ್ರಸವಕಾಲದವರಿಗೂ ದೇಹಸೌಖ್ಯವೇನೂ ಇಲ್ಲದೆ ಇರುವದು; ಆದರೆ ಮುಟ್ಟಾಗದಿರುವಿಕೆಯಲ್ಲದೆ, ಗರ್ಭಿಣಿಯು ಕೆಲವು ಚಿಹ್ನೆಗಳಿರುವವು.

ಗರ್ಭಾಶಯಕ್ಕೂ, ದೇಹದ ಇತರ ಅವಯವಗಳಿಗೂ ಇರತಕ್ಕ ಅನ್ಯೋನ್ಯತ್ವದಿಂದ ಶರೀರಕ್ಕೂ ಮನಸ್ಸಿಗೂ ಉಂಟಾಗತಕ್ಕ ಉಪದ್ರುಗಳನ್ನು ಊಹಿ

ಸಬಹುದು. ನಿದ್ರಾಭಂಗ, ಜ್ವರ, ಓಕರಿಕೆ, ವಾಂತಿ, ಅಜೀರ್ಣ, ಮುಂಗೋಪ ಇವುಗಳಿರುತ್ತವೆ.

ಗರ್ಭವನ್ನು ಧರಿಸಿದಕೂಡಲೆ ಸ್ತನಗಳು ದೊಡ್ಡವಾಗುವವು. ಚೊಚ್ಚಲು, ಮರಚಲು ಗರ್ಭಿಣಿಯರಿಗೆ ಸ್ತನಗಳ ಸುತ್ತಲಿರುವ ರೇಖೆಗಳು ಕರ್ರಗೆ ದೊಡ್ಡವಾಗುವವು.

ಗರ್ಭಾಶಯದಲ್ಲಿ ಪಿಂಡನಿಂತದ್ದಕ್ಕೆ ಪಿಂಡಚಲನೆಯೇ ಮೊದಲನೇ ಗುರುತು. ಈ ಪಿಂಡಚಲನೆಯಾಗುವಾಗ ಪ್ರಾಯಶಃ ಸ್ತ್ರೀಯರು ಮೂರ್ಛೆಹೊಂದುವರು. ಇದು ನಾಲ್ಕು ತಿಂಗಳು ಕಳೆದನಂತರ ೧-೨ನೇ ವಾರದೊಳಗಾಗಿ ಅಥವಾ ೧೯ನೇ ವಾರ ಕಳೆದನಂತರ ಇದು ಸಂಭವಿಸುವದು ವಾಡಿಕೆಯು; ಇದೇ ನಿಜವಾದ ಗರ್ಭಧಾರಣೆಯ ಗುರುತು! ಕೆಲವು ಸಮಯದಲ್ಲಿ ಕರಳುಗಳಲ್ಲಿರುವ ವಾಯುಚಲನೆಯಿಂದು ಸ್ತ್ರೀಯರು ತಪ್ಪಾಗಿ ತಿಳಿದರೂ ಸಹ ವೈದ್ಯನು ಮೋಸಹೋಗಬಾರದು.

ಹೊಟ್ಟೆ ದೊಡ್ಡದಾದದ್ದು ನಿಜವಾದ ಕಾರಣವಲ್ಲ; ಹೊಟ್ಟೆಯೊಳಗಿರುವ ಅವಯವಗಳು ವ್ಯಾಧಿಯಿಂದಲೂ, ಅಥವಾ ನೀರು ಶೇರುವದರಿಂದಲೂ ಹೊಟ್ಟೆ ದೊಡ್ಡದಾಗಬಹುದು.

## ಗರ್ಭಕಾಲಸ್ಥಿತಿ.

ಸ್ತ್ರೀಯು ಗರ್ಭವನ್ನು ೯ ತಿಂಗಳು ಅಥವಾ ೪೧ ವಾರಗಳು, ಅಥವಾ ೨೭೩ ದಿನಗಳಿಗೆ ಹೆಚ್ಚಾಗಿ ಯಾವಾಗಲೂ ಹೊರುವದಿಲ್ಲ!

ನಾಗರಿಕದಶೆಯಲ್ಲಿರುವ ಸ್ತ್ರೀಯರು, ಗರ್ಭಿಣಿಯರಾಗಿರುವಾಗಲೂ, ಬಾಣಂತಿಯರಾದಾಗಲೂ ಅನುಭವಿಸತಕ್ಕ ಉಪದ್ರಗಳನ್ನು ಕಷ್ಟಪಟ್ಟು ಜೀವನಮಾಡತಕ್ಕ ಸ್ತ್ರೀಯರು ಅನುಭವಿಸುವದಿಲ್ಲ.

ಗರ್ಭವನ್ನು ಧರಿಸಿದಾಗ ಭೋಜನವು ಮಿತವಾಗಿಯೂ, ಪೋಷಿಸತಕ್ಕದ್ದಾಗಿಯೂ, ಶೀಘ್ರವಾಗಿ ಜೀರ್ಣಿಸತಕ್ಕದ್ದಾಗಿಯೂ ಇರಬೇಕು. ಉಷ್ಣಪದಾರ್ಥಗಳನ್ನು ಬಿಟ್ಟುಬಿಡಬೇಕು. ಯಾಕೆಂದರೆ ರಕ್ತಸ್ಪರ್ಶ ನರಗಳೆಲ್ಲವೂ ಮೊದಲೇ ಹೆಚ್ಚು ಕೆಣಕಲ್ಪಟ್ಟಿರುವದರಿಂದ ಉಷ್ಣಪದಾರ್ಥಗಳು ಕೆಡಕನ್ನುಂಟುಮಾಡುವವು.

ನಮ್ಮ ದೇಶದ ಗರ್ಭಿಣಿಯರು ತಮ್ಮ ಮನೆಯ ಅಡಿಗೆಯನ್ನಲ್ಲದೆ ಬೇರೆಬೇರೆ ನೆಂಟರಮನೆಯಲ್ಲಿ ಆಗುವ ಊಟಗಳನ್ನೂ, ತಿಂಡಿಗಳನ್ನೂ ಆಶಿಸುತ್ತಾ, ಶಿಕ್ಕಿದ್ದನ್ನು ಸೇವಿಸುತ್ತಿರುತ್ತಾರೆ. ಇವರು ಮಾಡುವ ಈ ದೋಷಕೃತ್ಯಗಳಿಗಾಗಿ ನಾವು ವಿನಯವಾಗಿ ಅವರುಗಳ ತಪ್ಪುಗುಣಗಳನ್ನು ಬಿಡುವಂತೆ ತಿಳಿಯಹೇಳುವೆವು.

ಕ್ರಮವಾಗಿ ಸ್ವಲ್ಪದೂರ ನಡಿಯಬೇಕು; ಶರೀರಕ್ಕೆ ಕಷ್ಟವನ್ನು ಉಂಟುಮಾಡದಂತೆಯೂ, ಮನೋವ್ಯಥೆಯು ಉಂಟಾಗದಂತೆಯೂ ಇರಬೇಕು ಯಾಕೆಂದರೆ ಗರ್ಭವನ್ನು ಧರಿಸದೆ ಇದ್ದಾಗ ತೊಂದರೆಯನ್ನುಂಟುಮಾಡದ ತಹ ಕಾರ್ಯಗಳು ಸಹ ಗರ್ಭಿಣಿಯಾಗಿ ಮನಸ್ಸನ್ನೂ, ಶರೀರಪ್ರಕೃತಿಯನ್ನೂ ರೇಗಿಸುತ್ತಿರುವಾಗ ಹೆಚ್ಚು ಕೆಡಕುಗಳನ್ನುಂಟುಮಾಡುವವು.

ಓಕರಿಕೆಯೂ, ವಮನವೂ ಗರ್ಭಿಣಿಯರಿಗೆ ಮೊದಲು ಉಂಟಾಗುವ ವ್ಯಾಧಿಗಳು ; ಗರ್ಭಿಣಿಗೆ ಮಲಬಂಧ ಅನುಸರಿಸುವಿಕೆಯೇ ವಾಡಿಕೆಯು. ಇದು ಕರಳುಗಳ ಮಂದತ್ವದಿಂದಲೂ, ಅಥವಾ ಪಿಂಡವನ್ನು ಧರಿಸಿರುವ ಗರ್ಭಾಶಯದ ಮುದುರುವಿಕೆಯಿಂದಲೂ ಸಂಭವಿಸುವದು. ಹುಳಿ ಕಡಮೆಯಾಗಿರುವ ಹಣ್ಣುಗಳನ್ನೂ, ಕಾಯಿಪಲ್ಯಗಳನ್ನೂ ಕ್ರಮವಾಗಿ ಭಕ್ಷಿಸುತ್ತಾ, ದಿನವೂ ಕೊಂಚದೂರ ವ್ಯಾಯಾಮ (ವಾಕಿಂಗ್) ಮಾಡುತ್ತಾ ಬರುವದರಿಂದ ಈ ಮಲಬಂಧವು ಹೆಚ್ಚಾಗಿ ಉಂಟಾಗುವದಿಲ್ಲ.

**ಗರ್ಭಲಕ್ಷಣ:**—ಇದನ್ನು ನಮ್ಮ ಆದಿಮಹರ್ಷಿಗಳ ಆಯುರ್ವೇದ ಶಾಸ್ತ್ರ ಕ್ರಮವಾಗಿ ತಿಳಿಸುವೆವು.

**"ಸ್ತ್ರೀಪುರುಷಯೋರವ್ಯಾಪನ್ನ ಶುಕ್ರಶೋಣಿತಯೋನಿ ಗರ್ಭಾ**
**ಶಯಯೋಃ ಶ್ರೇಯಸೀಂ ಪ್ರಜಾಮಿಚ್ಛತೋಸ್ತನ್ನಿವೃತ್ತಿಕರಂ**
**ಕರ್ಮೋಪದೇಕ್ಷ್ಯಾಮಃ ॥"**

"ಯಾವ ಸ್ತ್ರೀಯ ರಜಸ್ಸು ಯೋನಿ ತಥಾ ಗರ್ಭಾಶಯಗಳು ದೂಷಿತವಲ್ಲದೆ, ಪುರುಷನ ವೀರ್ಯವೂ ದೂಷಿತವಲ್ಲದೆ ಇರುವಲ್ಲಿ—ಇಂತಹ ಸಂತಾನವೇ ಆಗಬೇಕೆಂಬ ಸ್ತ್ರೀಪುರುಷರಿಗೋಸ್ಕರ ಹಿತಕಾರಿಯಾದ ಕರ್ಮವನ್ನು ತಿಳಿಸುವೆವು."

**"ಉಪಾಚರೇಚ್ಚ ಮಧುರೌಷಧಸಂಸ್ಕೃತಾಭ್ಯಾಂ ಘೃತಕ್ಷೀರಾ**
**ಭ್ಯಾಂ ಪುರುಷಂ ಸ್ತ್ರಿಯಂ ತು ತೈಲಮಾಷಾಭ್ಯಾಮ್ ॥"**

ತದನಂತರ ಪುರುಷನನ್ನು ಮಧುರೌಷಧಿಗಳಾದ ಹಲ್ವಾ ಮುಂತಾದವುಗಳಿಂದಲೂ, ಪಾಕಮಾಡಲ್ಪಟ್ಟ ಘೃತ, ಹಾಲು ಮುಂತಾದವುಗಳಿಂದಲೂ, ಸ್ತ್ರೀಯನ್ನು ತೈಲಮಾಷಾದಿಗಳಿಂದಲೂ ಉಪಚರಿಸಬೇಕು."

**"ಪೂರ್ವಂ ಪಶ್ಯೇದೃತುಸ್ನಾತಾ ಯಾದೃಶಂ ನರಮಂಗನಾ ॥**
**ತಾದೃಶಂ ಜನಯೇತ್ಪುತ್ರಂ ತತಃ ಪಶ್ಯೇತ್ಪತಿಂ ಪ್ರಿಯಮ್ ॥"**

"ಋತುಸ್ನಾತಳಾದ ಸ್ತ್ರೀಯು ಯಾವ ಪುರುಷನನ್ನು ನೋಡುತ್ತಾಳೆಯೋ ಅವನ ಅವಯವಗಳಸ್ಪಷ್ಟವ, ರೂಪರೇಖಾ, ಶರೀರದ ರಚನೆ ಮುಂತಾದುವೇ ಅವಳ ಮನಸ್ಸಿನಲ್ಲಿ ಬೇರೂರುವವು. ಅವಳು ಗರ್ಭವನ್ನು

ಧರಿಸಿದರೂ ಆ ಶರೀರರಚನೆ, ರೂಪ, ಶರೀರಸೌಷ್ಟವ ಮುಂತಾದ್ದನ್ನುಳ್ಳ ಪುತ್ರನನ್ನೇ ಪಡೆಯುವಳು. ಅದಕ್ಕಾಗಿ ಪ್ರಿಯನಾದ, ಪ್ರಾಣಪ್ರಿಯನಾದ, ಗಂಡನನ್ನೇ ನೋಡಬೇಕು, ಸದಾ ಮನಸ್ಸಿನಲ್ಲಿ ಸ್ಮರಿಸುತ್ತಾ ಇರಬೇಕೆಂದು ಭಾವವು."

## ಗ ರ್ಭಿ ಣಿ ಯ ಚಿ ಕಿ ತ್ಸೆ.

೧ ನೇ ತಿಂಗಳಲ್ಲಿ—ಲಾವಂಚ, ಶ್ರೀಗಂಧ, ಗ್ರಂಥಿಕತಗರ ಇವನ್ನು ಸಮತೂಕವಾಗಿ ಶೀನೀರಿನಲ್ಲಿ ಕಾಡಿಗೆಯಂತೆ ಅರದು ಹಸುವಿನಹಾಲಲ್ಲಿ ಕುಡಿಸುವದು ೫ ದಿನ ಇಚ್ಛಾಪಥ್ಯ; ಮೊದಲನೇ ತಿಂಗಳಲ್ಲಿ ಗರ್ಭಕ್ಕೆ ಬೇರೆ ಉಪಹತಿ ಇಲ್ಲದೆ ವೃದ್ಧಿಯಾಗುವದು.

೨ ನೇ ತಿಂಗಳಲ್ಲಿ—ನೈದಿಲೆಗೆಡ್ಡೆ, ಮುಡಿವಾಳ, ಇವೆರಡನ್ನೂ ಸಮತೂಕವಾಗಿ ಪಾವಲಿ-ಪಾವಲಿತೂಕವನ್ನು ನೀರಿನಲ್ಲಿ ಮೇಣದಂತೆ ಅರದು, ಆಕಳಹಾಲಿನಲ್ಲಿ ೩ ದಿನ ಹಗಲೂ ರಾತ್ರಿ ಕುಡಿಸುವದು ಇಚ್ಛಾಪಥ್ಯ.

೩ ನೇ ತಿಂಗಳಲ್ಲಿ—ಸುಗಂಧಪಾಲ, ಶ್ರೀಗಂಧ ಇವು ಅರ್ಧ-ಅರ್ಧವರಹಾತೂಕವನ್ನು ನೀರಿನಲ್ಲಿ ನುಣ್ಣಗರದು, ಆಕಳಹಾಲಿನಲ್ಲಿ ಕದರಿ (೫ ದಿನ) ರಾತ್ರಿ ಹಗಲೂ ಕುಡಿಸುವದು.

೪ ನೇ ತಿಂಗಳಲ್ಲಿ—ಸಣ್ಣನೆಗ್ಗಿಲು, ನೈದಿಲೆಗೆಡ್ಡೆ, ವ್ಯೋಮ ಇವನ್ನು ಸಮವಾಗಿ ಅರದು ಮೇಲಿನಂತೆ ಕುಡಿಸುವದು.

೫ ನೇ ತಿಂಗಳಲ್ಲಿ—ಚಂಗಲಕೋಷ್ಟ, ಸಣ್ಣನೆಗ್ಗಿಲು, ನೈದಿಲೆಗೆಡ್ಡೆ, ತಾವರೆದಂಟು, ವ್ಯೋಮ ಇವನ್ನು ಸಮತೂಕವಾಗಿ ಮೇಲಿನಂತೆ ಅರದು ಆಕಳಹಾಲಿನಲ್ಲಿ ೩ ದಿನ, ದಿನ ೨ ಹೊತ್ತು ಕುಡಿಸುವದು.

೬ ನೇ ತಿಂಗಳಲ್ಲಿ—ಜೇಷ್ಟಮಧು, ಕ್ಷೀರಕಾಕೋಲೀ, ದೇವದಾರು, ಕರೀಯಳ್ಳು, ರಾಳ, ಹಿಪ್ಪಲಿ, ಶತಾವರಿ, ಕಮಲಗಡ್ಡೆ, ರಾಸ್ಮೆ, ೨ ಗುಳ್ಳ, ದ್ರಾಕ್ಷಿ ಇವನ್ನು ಸಮವಾಗಿ ೪-೪ ಆಣೆತೂಕ ಶೇರಿಸಿ ನೀರಿನಲ್ಲಿ ಕಾಡಿಗೆಯಂತೆ ಅರದು ಸಕ್ಕರೆಹಾಕಿ ಆಕಳಹಾಲಿನಲ್ಲಿ ಕದರಿ ಬಿಸಿಮಾಡಿ ಕುಡಿಸಿದರೆ, ಸ್ತ್ರೀಯಗರ್ಭ ದೃಢವಾಗುವದು. ಯಾವ ಉಪದ್ರವವೂ ಆಗುವದಿಲ್ಲ. ಈ ಔಷಧವನ್ನು ೭ ತಿಂಗಳವರಿಗೂ ಮಾಡಬಹುದು ಅಥವಾ ಮೇಲೆಹೇಳಿದ ಯಾವದಾದರೂ ಔಷಧವನ್ನು ಎಲ್ಲಾ ತಿಂಗಳಲ್ಲಿಯೂ ಮಾಡಬಹುದು.

೭ ನೇ ತಿಂಗಳ ಔಷಧ—ಬ್ಯಾಲದ ಎಲೆ, ಕಾಚು, ಅರಳು, ಸಕ್ಕರೆ ಇವನ್ನು ನೀರಿನಲ್ಲಿ ಅರದು ಹಸುವಿನಹಾಲಿನಲ್ಲಿ (೫ ದಿನ) ದಿನ ೨ ಹೊತ್ತು ಕುಡಿಸುವದು.

೮ ನೇ ತಿಂಗಳ ಔಷಧಿ—ಬ್ಯಾಲದಬೇರಿನ ತೊಬಟೆ, ನೆಲಗುಳ್ಳದಬೇರು ಬಿಲ್ವಪತ್ರೆಯಬೇರು, ಇವನ್ನು ಹಾಲಿನಲ್ಲಿ ಅರದು ಕುಡಿಸಿದರೆ ಗರ್ಭಪುಷ್ಟಿಯಾಗುತ್ತದೆ.

೯ ನೇ ತಿಂಗಳ ಔಷಧಿ—ಹಿಪ್ಪಲಿ, ಲಾವಂಚ, ಸೊಗದೇಬೇರು ಇವು ೧-೧ ವರಹಾತೂಕ ನೀರಿನಲ್ಲಿ ಅರದು ಹಾಲಿನಲ್ಲಿ ಕದರಿ ಕುಡಿಸುವದು.

೧೦ ನೇ ತಿಂಗಳ ಔಷಧಿ—ನೈದಲೆಗಡ್ಡೆ ಇದನ್ನು ಜೇನುತುಪ್ಪದ ಅರದು ಆಕಳಹಾಲಲ್ಲಿ ಕದರಿ ಕುಡಿಸುವದು.

### ಗರ್ಭಿಣಿಯ ಜ್ವರಕ್ಕೆ ಚಿಕಿತ್ಸೆ.

(೧) ಸೊಗದೇಬೇರು, ಅಗಳುಶುಂಠಿ, ಮುಡಿವಾಳ, ತುಂಗಮುಸ್ತೆ, ಶುಂಠಿ ಈ ದಿನಸುಗಳು ಕಾಲು-ಕಾಲುತೊಲಾ, ಜಜ್ಜಿ ಕಷಾಯವಿಟ್ಟು, ದಿನ ೨ ಹೊತ್ತು ಕುಡಿದರೆ ಗರ್ಭಿಣಿಯು ಜ್ವರಹರ.

(೨) ಬೂದಿಗುಮ್ಮಳಬೇರು, ಅಮೃತಬಳ್ಳಿ ಇವೆರಡನ್ನೂ ಸಮತೂಕ ಕಷಾಯವಿಟ್ಟು, ಸಕ್ಕರೆ, ಜೇನುತುಪ್ಪಹಾಕಿ (ದಿನ ೨ ಹೊತ್ತು) ೩ ದಿನ ಕೊಟ್ಟರೆ ಜ್ವರ ನಿಲ್ಲುತ್ತದೆ.

(೩) ಜೇಷ್ಟಮಧು, ರಕ್ತಚಂದನ, ಕಮಲಗಡ್ಡೆ ಇವುಗಳ ಕಷಾಯಕಾಶಿ ಸಕ್ಕರೆ, ಜೇನುತುಪ್ಪ ಹಾಕಿ ಕುಡಿಸುವದು.

### ಗರ್ಭಿಣಿಯ ಅತಿಸಾರ ರೋಗಕ್ಕೆ.

(೧) ಆಡುಸೋಗೆ, ತುಂಗಮುಸ್ತೆ, ಮರದರಿಶಿನ, ದೇವದಾರು, ಇವನ್ನು ಸಮಗೂಡಿ, ಕಷಾಯಕಾಶಿ ದಿನ ೨ ಹೊತ್ತು ಕೊಟ್ಟರೆ ಅತಿಸಾರ, ಜ್ವರ ಸಹಾ ನಿಲ್ಲುವದು.

(೨) ಮರದರಿಶಿನ, ಜೇಷ್ಟಮಧು, ತುಂಗಮುಸ್ತೆ, ಕುಂಬಳಬೇರು, ಸೊಗದೇಬೇರು, ಚಿಟ್ಟಾಮುಟ್ಟಬೇರು ಇವನ್ನು ಸಮತೂಕವಾಗಿ ಅರ್ಧ ತೊಲಾ ಕಲ್ಕವನ್ನು ಕಷಾಯವಿಟ್ಟು ದಿನ ೨ ಹೊತ್ತು ೫ ದಿನ ಕೊಟ್ಟರೆ ಅತಿಸಾರಹರ.

### ಗರ್ಭಿಣಿಯ ಶೋಭೆಗೆ.

ಗರುಗದಬೇರು, ಹಶೀಶುಂಠಿ ಇವನ್ನು ಕಷಾಯಕಾಶಿ ಸಮವಾಗಿ ಆಕಳಹಾಲುಹಾಕಿ (ದಿನ ೨ ಹೊತ್ತು) ೭ ದಿನ ಕೊಟ್ಟರೆ ಗುಣವಾಗುವದು.

### ಗರ್ಭಿಣೀ ಶೂಲೆಗೆ.

ಹಶೀಶುಂಠಿ ಕಷಾಯದಲ್ಲಿ ಹಾಲು, ತುಪ್ಪ, ಬೆಲ್ಲ ಹಾಕಿ, ಹಿಪ್ಪಲಿಪುಡಿ ಹಾಕಿ ಕುಡಿಸಿದರೆ ಶೂಲೆಹರ.

ಗರ್ಭಿಣಿಯ ಶ್ವಾಸಕಾಸಕ್ಕೆ.

(೧) ಅತಿಮಧುರ, ಲಾವಂಚ, ಗಂಟುಭಾರಂಗಿ, ಕಟುಕರೋಹಿಣಿ ಈ ದಿನಸುಗಳು ಸಮವಾಗಿ ಚೂರ್ಣಿಸಿ, ಶೋಧಿಸಿ, ಕಷಾಯವಿಟ್ಟು ಸ್ವಲ್ಪ ಬೆಲ್ಲಹಾಕಿ ದಿನ ೨ ಹೊತ್ತು ಕೊಡುವದು.

(೨) ಮೆಣಸು ಹುರದು ಚೂರ್ಣಮಾಡಿ ಸಕ್ಕರೆಹಾಕಿ ಲೇಹ್ಯಪಾಕವಾಗಿ ಕಾಸಿ ತುಪ್ಪಹಾಕಿ, ಜೇನನ್ನೂ ಸ್ವಲ್ಪ ಕೇರಿಸಿ, ಗಜ್ಜುಗದಷ್ಟು ದಿನ ೨ ಹೊತ್ತು ಕೊಡುತ್ತಾಬಂದರೆ ಗುಣವಾಗುವದು.

ಗರ್ಭಿಣಿಯ ಓಕರಿಕೆಗೆ.

(೧) ಮಾದಳಹಣ್ಣಿನ ಸ್ವರಸದಲ್ಲಿ ಹಿಪ್ಪಲಿಚೂರ್ಣ, ಸೈಂಧವಲವಣ ಹಾಕಿ ಕುಡಿಸಿದರೆ ಗುಣವಾಗುವದು.

(೨) ಬಿಲ್ವದಹಣ್ಣು, ಚಿಟ್ಟಾಮುಟ್ಟ, ಇವೆರಡನ್ನೂ ಕಷಾಯ ಕಾಸಿ ಹಾಲು ಸಕ್ಕರೆ ಹಾಕಿ ಕೊಟ್ಟರೆ ಗರ್ಭಿಣಿಯ ಓಕರಿಕೆಯು ಗುಣವಾಗುವದು.

(೩) ಕೊತ್ತುಂಬರಿಬೀಜವನ್ನು ಅಕ್ಕಿಕಚ್ಚಿನಲ್ಲಿ ಅರದು ಕಷಾಯವಿಟ್ಟು ಸಕ್ಕರೆ ಹಾಕಿ ಕುಡಿಸುವದು.

(೪) ಪರೂಷಕವೆಂಬ ಗಂಧಿಕದ್ರವ್ಯವನ್ನು ದ್ರಾಕ್ಷಿ ಕೇರಿಸಿ ಕಷಾಯ ಕಾಸಿ ಸಕ್ಕರೆ ಹಾಕಿ ಕುಡಿಸುವದು.

(೫) ನೆಲ್ಲಿಚಟ್ಟು, ದ್ರಾಕ್ಷಿ, ಪರೂಷಕ ಇದರ ಕಷಾಯ ಸಕ್ಕರೆವೆರಸಿ ಕೊಡುವದು.

(೬) ಕೇವಲ ದ್ರಾಕ್ಷಿ ನೆಲ್ಲಿಚಟ್ಟಿನ ಕಷಾಯವನ್ನು ಜೇನುತುಪ್ಪ ಕೇರಿಸಿ ಕುಡಿಸಬಹುದು.

(೭) ಯಾಲಕ್ಕಿ, ನಾಗಕೇಸರಗಳೆರಡನ್ನೂ ಸಮಗೊಂಡು ಚೂರ್ಣಿಸಿ ಜೇನಿನಲ್ಲಿ ಕಲಿಸಿ ಹಾಲು ಸಕ್ಕರೆ ಬೆರಸಿ ಕುಡಿಸುವದು.

(೮) ಅಮೃತಸಾರ, ಯಾಲಕ್ಕಿ, ನಾಗಕೇಸರಿ, ಲಾವಂಚ ಇವುಗಳಲ್ಲಿ ಒಂದಾಗಲೀ, ಎರಡಾಗಲೀ, ಮೂರಾಗಲೀ ಅಥವಾ ಬೇಕಾದ್ದನ್ನು ಕೂಡಿಸಿದ ಕಷಾಯಕ್ಕೆ ಜೇನುತುಪ್ಪ, ತುಪ್ಪ ಹಾಕಿ ಹಾಲಲ್ಲಿ ಕುಡಿಸುವದು.

(೯) ನೈದಿಲೆಗೆಡ್ಡೆ, ಅಮೃತಸಾರ, ಯಾಲಕ್ಕಿ ಇದನ್ನು ಚೂರ್ಣಿಸಿ ಶೋಧಿಸಿ ಈ ಚೂರ್ಣ ೩ ಬೆರಳಿಗೆ ಬಂದಷ್ಟನ್ನು ತುಪ್ಪದಲ್ಲಿ ಕಲಸಿ ಸಕ್ಕರೆ ವೆರಸಿ ಸೇವಿಸಿ ಮೇಲೆ ಹಾಲು ಕುಡಿಯುವದು.

(೧೦) ತವಕ್ಷೀರ, ನೈದಿಲೆ ಇವೆರಡನ್ನೂ ಚೂರ್ಣಿಸಿ ಹಾಲು ಸಕ್ಕರೆ ವೆರಸಿ ಕುಡಿಸಲು ಹಿತವಾಗುವದು.

ಇಲ್ಲಿ ತಿಳಿಯಬೇಕಾದ ವಿಷಯವೇನೆಂದರೆ:—ಗರ್ಭಿಣಿದಶೆಯಲ್ಲಿ ಉಂಟಾಗುವ ರೋಗಗಳೂ, ಸಂಕಟಗಳೂ ಸಹ ಸ್ಪರ್ಶನರಗಳು ಉದ್ರೇಕವಾಗು

ವದರಿಂದಲೂ, ರಕ್ತವು ಮೊದಲಿಗಿಂತಲೂ ಗರ್ಭಕೋಶದಲ್ಲಿ ಹೆಚ್ಚಾಗಿ ಪ್ರವಹಿಸುವದರಿಂದಲೂ, ಹಾಗೆಯೇ ಪಿಂಡವನ್ನು ಧರಿಸಿರುವ ಗರ್ಭಾಶಯವು ತನ್ನ ಸುತ್ತಪಕ್ಕದಲ್ಲಿರುವ ಅವಯುವಗಳಲ್ಲಿ ತನ್ನ ವ್ಯಾಪನೆಯನ್ನುಂಟುಮಾಡುತ್ತಾ ಅವುಗಳನ್ನು ಅಡಗಿಸುವದರಿಂದಲೂ ಉಂಟಾಗುವವು. ಓಕರಿಕೆಯೂ, ವಮನವೂ ಸಹ ಪಿಂಡಚಲನೆಯಾದನಂತರ ಸುಮ್ಮನೆ ನಿಂತುಹೋಗುವವು. ಕೆಲವರಿಗೆ ಪ್ರಸವಕಾಲದವರಿಗೂ ಇರುವವು. ಇವುಗಳಿಗೆ ಯಾವಾಗ್ಯೂ ಚಿಕಿತ್ಸೆಯನ್ನು ಮಾಡುವದೇ ಅನಾವಶ್ಯಕವು !! ಅನ್ನಾಶಯದಲ್ಲಿ ಈ ಓಕರಿಕೆ, ವಮನಗಳಿಂದ ಹೆಚ್ಚು ಉಪದ್ರವಗಳುಂಟಾದರೆ ಮೇಲೆ ಹೇಳಿದ ಅಥವಾ ಇನ್ನೂ ಗುಣಕಾರಿಗಳೆಂದು ತೋರುವ ಉಪಚಾರಗಳಿಂದಲೇ ತಿದ್ದುತ್ತಾ ಬರಬೇಕು. ನೆಲಬೇವು ಮೊದಲಾದ ಕಹಿಮೂಲಿಕೆಗಳ ಕಷಾಯದಲ್ಲಿ ನಿಂಬೆಹುಳಿ, ಮಾದಲಹುಳಿ, ವಾಟೆಯಹುಳಿ, ಪುಲ್ಲಂಪುರುಚೆ ಮುಂತಾದ್ದರಲ್ಲಿ ಯಾವದನ್ನಾದರೂ ಕೇರಿಸಿ, ಸ್ವಲ್ಪ ಉಪ್ಪನ್ನೂಬೆರಸಿ ಕುಡಿಸಿದರೆ ಸೌಖ್ಯವಾಗುವದು. ಎಲ್ಲವೂ ಮಿತಿಯಾಗಿರಬೇಕು ; ಉಪಚಾರದಂತಿರಬೇಕಲ್ಲದೆ, ಔಷಧದಂತೆ ಇರಬಾರದು. ಉಪದ್ರವವು ಹೆಚ್ಚಾಗಿ ಸ್ತ್ರೀಯು ಬದುಕುವದೇ ಕಷ್ಟವೆಂಬುವುದಾದರೆ ಹೊಟ್ಟೆಯೊಳಕ್ಕೆ ಏನನ್ನೂ ಕೊಡದೆ ಆಸನದ ದ್ವಾರಾ ಆಹಾರಾದಿಗಳನ್ನೂ ಉಪಯೋಗಿಸಬಹುದು. ಒಂದು ಸಲಕ್ಕೆ ಉದ್ದಿನಕಾಳುದಪ್ಪಕ್ಕಿಂತ ಕಡಮೆಯಾದ ಶುದ್ಧ ಅಫೀಮನ್ನು ಅದರ ಸಮವಾಗಿ ಕರೀಮೆಣಸಿನಕಾಳುಪುಡಿ ಕೇರಿಸಿ ಕೊಟ್ಟರೆ ಒಳ್ಳೆಯದು. ಇದರಿಂದ ವಾಂತಿ ನಿಲ್ಲುತ್ತದೆ. ಇದು ದೇಹದಾರ್ಢ್ಯ ಕಡಮೆ ಇರುವ ಗರ್ಭಿಣಿಗೂ ಕಾಲಾನುಸಾರವಾಗಿ ಉಪಯೋಗವಾಗಿರುವದು.

ಅನ್ನಾಶಯದಲ್ಲಿರುವ ಎದೆಯುರಿಯೂ ಸಹ ಒಂದೊಂದುವೇಳೆ ಹೆಚ್ಚು ಉಪದ್ರಕರವಾಗುವದು. ಇದರಿಂದುಂಟಾಗುವ ಕುತ್ತಿಗೆ ಉರಿಗೂ, ಪದೇಪದೇ ಬರುತ್ತಿರುವ ತೇಗಿನಿಂದ ಬಾಯಿಯಲ್ಲಿ ನೀರು ಸುರಿಯುವದಕ್ಕೂ, ಸಹ ಆ ನೀರು ಕಡಮೆಯಾಗುವಂತೆ ಔಷಧ ಕೊಡಬೇಕು. ಇದಕ್ಕೆ ಕಹಿಮೂಲಿಕೆಗಳನ್ನು ಕೊಡುವದೇ ಒಳ್ಳೇದು.

ಗರ್ಭವನ್ನು ಧರಿಸಿದ ಕೆಲವು ತಿಂಗಳಲ್ಲಿ ಇತರ ಲಕ್ಷಣಗಳಿಂದ ಉಂಟಾಗುವ ತಲೆನೋವು, (ಮುಟ್ಟಾಗುವಿಕೆ ನಿಂತದ್ದರಿಂದ ಉಂಟಾಗುವ ರಕ್ತಪುಷ್ಟಿಗೆ ಶರೀರವು ತಡಿಯಲಾರದ್ದರಿಂದ) ಉಂಟಾಗುತ್ತದೆ. ಅದಕ್ಕಾಗಿ ರಕ್ತವ್ಯಾಪನೆಯು ಸಮವಾಗಿ ಆಗುವವರಿಗೆ ಲಘುವಿರೇಚನೆಯನ್ನು ಮಾಡಿಸುತ್ತಾ ಬರಬೇಕು.

ಸ್ಪರ್ಶನರಗಳ ಉಪದ್ರದಿಂದಲೂ, ರಕ್ತನರಗಳ ಉದ್ರೇಕದಿಂದಲೂ ಇತರ ರೋಗಗಳು ಉಂಟಾಗುವವು. ಅವುಗಳಿಗೆ ಬೇರೇ ಕಾರಣಗಳಿಂದ ಉಂಟಾದಾಗ ಮಾಡುವಂತೆಯೇ ಚಿಕಿತ್ಸೆಯನ್ನು ಮಾಡಬೇಕು.

ಪಿಂಡವನ್ನು ಹೊತ್ತಿರುವ ಗರ್ಭಾಶಯವು ತನ್ನ ಪಕ್ಕದ ಅವಯವಗಳನ್ನು ಅಣಗಿಸಿ ತಾನು ಬೆಳಿಯುತ್ತಾ ಬರುವದರಿಂದ ಈ ಕೆಳಗಿನ ರೋಗಗಳು ಬರುವವು:—

ಅರ್ಶಸ್ಸು (ಆಸನದಲ್ಲಿ ರಕ್ತ) ಇದು ಗರ್ಭಿಣಿಯರಿಗೆ ಸಾಧಾರಣವಾಗಿ ಉಂಟಾಗುವ ರೋಗವು. ಗುದನಾಳದಲ್ಲಿರುವ ರಕ್ತವು ಯಕೃತ್ ಖಂಡದಲ್ಲಿರುವ ಗುಂಡಿಯಲ್ಲಿ ಸಂಚರಿಸುವ ನಾಳಕ್ಕೆ ಹೋಗುವದಕ್ಕೆ ಅವಕಾಶವಿಲ್ಲದೆ ತಟಸ್ಥವಾಗುವದರಿಂದ ಅವು ದೊಡ್ಡವಾಗಿ, ನೋತಹುಟ್ಟಿ, ಈ ರೋಗವುಂಟಾಗುವದು.

ಇದರ ಚಿಕಿತ್ಸೆಯು:—ಮೊದಲು ದ್ರಾಕ್ಷೆಉಪ್ಪು, ಚಿಟ್ಟಹರಳು ಯಣ್ಣೆ, ಸೆಲೂವರಿಕೆಯಲೇಹ್ಯ ಈ ಮುಂತಾದ ಲಘುವಿರೇಚನಗಳನ್ನು ಕೊಟ್ಟು, ಮಲವಿಸರ್ಗವನ್ನು ಮಾಡಬೇಕು. ಬಾತಿರುವ ಸ್ಥಳಕ್ಕೆ ಅಗಸೀಬೀಜದ ಪ್ಲೋಲ್‌ಟೀಸ್ ಕಟ್ಟಬಹುದು. ಇದರಿಂದ ಬಾವೂ, ನೋವೂ ಶಮನವಾಗುವವು. ಥಣ್ಣನೆಯ ನೀರಿನ ವಸ್ತುಗಳನ್ನು ಉಪಯೋಗಿಸುವದರಿಂದಲೂ, ವಗರಾದ ಔಷಧಗಳನ್ನು ಸವರುವದರಿಂದಲೂ, ನರಗಳನ್ನು ಪೂರ್ವಸ್ಥಿತಿಗೆ ತರಬಹುದು.

ಗರ್ಭಿಣಿಗೆ ಮೂತ್ರಕೋಶದ ಹಳ್ಳದಲ್ಲಿ ಉರಿಯುಂಟಾಗುವದರಿಂದ ನಡಿಯುವದಕ್ಕೆ ಅಶಕ್ತಿಯೂ, ಗರ್ಭಭ್ರಂಶವುಂಟಾಗುವಂತೆ ಕಾಣುವಿಕೆಯೂ, ಮೂತ್ರದಲ್ಲಿ ಉರಿಯೂ, ಕೆಲವುವೇಳೆ ಮೂತ್ರಕಟ್ಟುವಿಕೆಯೂ, ಹಳದಿಬಣ್ಣದ ಶ್ಲೇಷ್ಮ ಅಧಿಕವಾಗಿ ಬರುವಿಕೆಯೂ ಗರ್ಭಿಣಿಯ ಮೊದಲನೇ ತಿಂಗಳಲ್ಲಿ ಆಗಾಗ್ಗೆ ಕಂಡುಬರುವದು. ಇದು ಗರ್ಭಾಶಯದಲ್ಲಿನ ಕೂಪಕವನ್ನು ಮೇಲಕ್ಕೆತ್ತುವ ಮೂತ್ರದ ಕೆಲಸದಿಂದಲೇ ತನ್ನಷ್ಟಕ್ಕೇ ನಿಂತು ಹೋಗುವದು. ಇದಕ್ಕೆ ಬೇಲದಬಂಕೆಯನ್ನು ಶೇರಿಸಿದ ಚಿಟ್ಟಹರಳು ಎಣ್ಣೆಯನ್ನು ಲಘುವಿರೇಚನಕ್ಕೆ ಕೊಡುವದು ಒಳ್ಳೇದು. ದಾಹವಾದರೆ ಸ್ವಲ್ಪ ಥಣ್ಣೀರು ಕೊಡಬೇಕು.

ಈ ಗರ್ಭಿಣಿದಶಾದಲ್ಲಿ ಬರತಕ್ಕ ಎಲ್ಲಾ ಉಪದ್ರಗಳೂ ಗರ್ಭಾಶಯದ ಪ್ರತಿಕ್ಷಣ ವ್ಯಾಪಾರದಿಂದ, ಆಯಾಯ ಅವಯವಗಳಲ್ಲಿ ಸಂಭವಿಸತಕ್ಕ ಕೃತ್ಯಗಳಮೂಲಕ ಹುಟ್ಟತಕ್ಕವಾದ್ದರಿಂದ ಆ ಕಾರಣಗಳನ್ನರಿಯದೆ ಶಿಕ್ಕಿದಂತೆ ಚಿಕಿತ್ಸೆ ಮಾಡುವದು ಸುತರಾಂ ಸರಿಯಲ್ಲ!! ಈ ವಿಷಯದಲ್ಲಿ ಸಾವಧಾನ

(ಹುಷಾರ್ !) ವಾಗಿರಬೇಕಾದ್ದು ಅತ್ಯಾವಶ್ಯಕವು. ಗರ್ಭಿಣಿಗೆ ಚಿಕಿತ್ಸೆಯಾಗಿ ಯಾವದುಮಾಡಿದರೂ ಅದು ಉಪಚಾರರೂಪವಾಗಿರಬೇಕಲ್ಲದೆ, ಔಷಧರೂಪದಿಂದಿರಬಾರದೆಂಬುದನ್ನು ಸರ್ವರೂ ಗಮನಿಕೆಯಿಂದ ಜ್ಞಾಪಕದಲ್ಲಿಡಬೇಕಾದದ್ದು ಪರಮಾವಶ್ಯಕವು.

ದೌಹೃದ ಲಕ್ಷಣ (ಬಯಕೆ.)

" ಸರ್ವಾಣ್ಯಂಗಾನ್ಯುಪಾಂಗಾನಿ ಚತುರ್ಥೇ ಸ್ಯುಃ ಸ್ಫುಟಾನಿ ಚ ||
ತಸ್ಮಾಚ್ಚತುರ್ಥೇ ಗರ್ಭಸ್ತು ನಾನಾವಸ್ತೂನಿ ವಾಂಛತಿ || ತತೋ ದ್ವಿಹೃದಯಾ ಯತ್ ಸ್ಯಾನ್ನಾರೀದೌಹೃದಿನೀ ಮತಾ ||
ದೌಹೃದಾವಜ್ಞಯಾ ಕುಬ್ಜಂ ಕುಣಿಂ ಖಂಜಂ ಚ ವಾಮನಮ್ || ವಿಕೃತಾಕ್ಷಮನಕ್ಷಂ ವಾ ಪುತ್ರಂ ನಾರೀ ಪ್ರಸೂಯತೇ ||
ಯತಃ ಸ್ತ್ರೀ ದೌಹೃದಂ ಪ್ರಾಪ್ಯ ವೀರ್ಯವಂತಂ ಚಿರಾಯುಷಂ ||
ಪುತ್ರಂ ಪ್ರಸೂಯತೇ ತಸ್ಮಾತ್ ತಸ್ಮೈ ವಾಂಛಿತಮರ್ಪಯೇತ್ || ಇಂದ್ರಿಯಾರ್ಥಾಂಸ್ತು ಯಾನ್ಯಾನ್ಸಾ ಭೋಕ್ತುಮಿಚ್ಛತಿ ಗರ್ಭಿಣೀ || ಗರ್ಭಬಾಧಾ ಭಯಾತ್ತಾಂಸ್ತಾನ್ ಭಿಷಗಾಹೃತ್ಯ ದಾಪಯೇತ್ || ('ಭೋಕ್ತುಮುಪಭೋಕ್ತುಮಿತ್ಯರ್ಥಃ) ಸಾ ಪ್ರಾಪ್ತ ದೌಹೃದಾ ಪುತ್ರಂ ಜನಯೇತ್ತು ಗುಣಾನ್ವಿತಮ್ || ಅಲಬ್ಧ ದೌಹೃದಾ ಗರ್ಭೇ ಲಭೇತಾತ್ಮನಿ ವಾ ಭಯಮ್ || ಯೇಷು ಯೇಷ್ವಿಂದ್ರಿಯಾರ್ಥೇಷು ದೌಹೃದೇ ಸಾವಮಾನಿತಾ || ಪ್ರಸೂಯತೇ ಸುತಂ ಸಾರ್ತಿಂ ತಸ್ಮಿಂ ಸ್ತಸ್ಮಿಂಸ್ತದಿಂದ್ರಿಯೇ || "

"ನಾಲ್ಕನೇ ತಿಂಗಳಲ್ಲಿ ಗರ್ಭಕ್ಕೆ ಸಂಪೂರ್ಣ ಅಂಗಪ್ರತ್ಯಂಗಗಳು ಸ್ಫುಟವಾಗಿ, ಹೃದಯುವೂ ಹುಟ್ಟುವದರಿಂದ, ಚೈತನ್ಯತೆಯೂ ಬಂದುಬಿಡುತ್ತದೆ. ಈ ಕಾರಣದಿಂದ ನಾಲ್ಕನಯ ತಿಂಗಳಲ್ಲಿ ಗರ್ಭವು ನಾನಾಪ್ರಕಾರದ ಅಪೇಕ್ಷೆಯನ್ನು ಮಾಡಲಾರಂಭಿಸುತ್ತದೆ. ಇದರಿಂದಲೇ ೨ ಹೃದಯ (ದ್ವಿಹೃದಯ) ವುಳ್ಳ ಗರ್ಭಿಣಿಯು "ದೌಹೃದಿನೀ" ಎಂದೆನ್ನಲ್ಪಡುವಳು. ದೌಹೃದವೆಂಬ ಗರ್ಭಿಣಿಸ್ತ್ರೀಯ ಅಭಿಲಾಷೆಗಳನ್ನು ಸಫಲಗೊಳಿಸಲೇಬೇಕು. ಅದನ್ನು ಸಫಲಗೊಳಿಸದೆ ಅನಾದರಣೆ ಮಾಡುವದರಿಂದ ಆ ಗರ್ಭಿಣಿಯು—ಕುಬ್ಜನನ್ನೂ, ಪಂಗುವನ್ನೂ, ಖಂಜನನ್ನೂ, ಗಿಡ್ಡನನ್ನೂ, ವಿಕಾರನಯನನನ್ನೂ, ನೇತ್ರರಹಿತನನ್ನೂ, ಹಡಿಯುವಳು. (ಅಂದರೆ ಅದೇ ಚಿಂತೆಯು ಮನಸ್ಸಿನಲ್ಲಿ ಬೇರೂರಿ, ಆಯಾಯ ಕಾಲದಲ್ಲಿ ಗರ್ಭಸ್ಥ ಶರೀರಕ್ಕೆ ಆಗಬೇಕಾಗಿರುವ ಇಂದ್ರಿಯ ಜನನ ವ್ಯಾಪಾರವು ನಿಂತುಬಿಟ್ಟು ಇಂತಹ ದುಷ್ಟ ಶಿಶುಗಳು ಹುಟ್ಟಲು ಅವಕಾಶವಾಗುವದು.) ಗರ್ಭಿಣಿಯು ತನ್ನ ದೌಹೃದ(ಅಪೇಕ್ಷೆಯು)

ನ್ನು ಹೊಂದಿ, ಬಲವಂತನನ್ನೂ, ದೀರ್ಘಾಯುಷ್ಯವನ್ನೂ, ಹಡಿಯುವಳು. ಈ ಕಾರಣದಿಂದ ಅವಳ ಅಭಿಲಾಷೆಯನ್ನು ನೆರವೇರಿಸಲೇಬೇಕು. ಗರ್ಭಿಣಿ ಸ್ತ್ರೀಯು ಯಾವಯಾವ ಇಂದ್ರಿಯಗಳ ವಿಷಯದ ಅಭಿಲಾಷೆಯನ್ನು ಮಾಡು ವಳೋ ಅವುಗಳನ್ನು (ಗರ್ಭಕ್ಕೆ ಉಪಹತಿಯಾಗುವದೆಂಬ ಭಯದಿಂದ)ತರಿಸಿ ತರಿಸಿ ವೈದ್ಯನಾದವನು ಗರ್ಭಿಣಿಗೆ ಕೊಡಿಸಲೇಬೇಕು. ಇಂತಹ ದೌಹೃದ ವನ್ನು ಹೊಂದಿ ಗುಣವಂತನಾದ ಪುತ್ರನನ್ನು ಪ್ರಸವಿಸುವಳು. ಹಾಗೆ ದೌಹೃ ದವನ್ನು ಪಡಿಯದಿದ್ದರೆ—ಅವಳಿಗಾಗಲೀ, ಪಿಂಡಕ್ಕಾಗಲೀ ಭಯವುಂಟಾಗುವ ಸಂಭವವಿದೆ. ಗರ್ಭಿಣಿಯು ಯಾವಯಾವ ಇಂದ್ರಿಯದ ವಿಷಯದಲ್ಲಿ ಅವ ಮಾನವನ್ನು ಪಡಿಯುವಳೋ ಆಯಾಯ ಇಂದ್ರಿಯಗಳಲ್ಲಿ ಪೀಡೆಯುಕ್ತ ನಾದ ಪುತ್ರನನ್ನು ಪ್ರಸುವಿಸುವಳು. ''

"ರಾಜಸಂದರ್ಶನೇ ಯಸ್ಯಾ ದೌಹೃದಂ ಜಾಯತೇ ಸ್ತ್ರಿಯಃ ॥ ಅರ್ಥವಂತಂ ಮಹಾಭಾಗಂ ಕುಮಾರಂ ಸಾ ಪ್ರಸೂಯತೇ ॥ ದುಕೂಲ ಪಟ್ಟಕೌಶೇಯ ಭೂಷಣಾದಿ ಷು ದೌಹೃದಾತ್ ॥ ಅ ಲಂಕಾರೈಷಿಣಂ ಪುತ್ರಂ ಲಲಿತಂ ಸಾ ಪ್ರಸೂಯತೇ ॥ ಆಶ್ರಮೇ ಸಂಯತಾತ್ಮಾನಂ, ಧರ್ಮಶೀಲಂ ಪ್ರಸೂಯತೇ ॥ ದೇವತಾ ಪ್ರ ತಿಮಾಯಾಂ ತು ಪ್ರಸೂತೇ ಪಾರ್ಷದೋಪಮಮ್ ॥ ದರ್ಶನೇ ವ್ಯಾಲಜಾತೀನಾಂ ಹಿಂಸಾಶೀಲಂ ಪ್ರಸೂಯತೇ ॥ ಅತೋಽನು ಕ್ತೇಷು ಯಾ ನಾರೀ ದೌಹೃದಂ ವಿದಧಾತಿ ಹಿ ॥ ಶರೀರಾಚಾರ ಶೀಲೈಃ ಸಾ ಸಮಾನಂ ಜನಯಿಷ್ಯತಿ ॥ "

'' ಗರ್ಭಿಣಿಯು—ರಾಜನ ದರ್ಶನಾಭಿಲಾಷಿಯಾದರೆ, ಧನವಂತನನ್ನೂ, ಮಹಾ ಭಾಗ್ಯವಂತನನ್ನೂ ಪಡಿಯುವಳು. ರೇಷಮಿವಸ್ತ್ರ, ಬಿಡಮೆ ಮುಂ ತಾದವುಗಳನ್ನು ಅಭಿಲಾಷಿಸುವವಳು ಮನೋಹರ ವಡವೆಗಳನ್ನು ಇಚ್ಛಿಸುವ, ಲಲಿತನಾದ ಪುತ್ರನನ್ನು ಪಡೆಯುವಳು. ಋಷ್ಯಾಶ್ರಮ ದರ್ಶನಾದಿಗಳನ್ನು ಅಪೇಕ್ಷಿಸುವವಳು ಧರ್ಮವಂತನೂ, ಜಿತೇಂದ್ರಿಯನೂ ಆದ ಮಗನನ್ನು ಪಡಿ ಯುವಳು, ದೇವತಾಮೂರ್ತಿಗಳ ದರ್ಶನಾದಿಗಳನ್ನು ಅಪೇಕ್ಷಿಸುವವಳು, ಮಹಾ ದೈವಭಕ್ತನನ್ನು ಹಡಿಯುವಳು. ಸರ್ಪಾದಿ ದುಷ್ಟ ಜಂತುಗಳನ್ನು ದರ್ಶಿಸಲಪೇಕ್ಷಿಸುವವಳು ಹಿಂಸಕನಾದ ಪುತ್ರನನ್ನು ಪಡಿಯುವಳು. ಇನ್ನೂ ಬೇರೆಬೇರೆ ದೌಹೃದಗಳನ್ನು ಅಪೇಕ್ಷಿಸುವದರ ಫಲಗಳನ್ನು ಅವುಗಳ ಶರೀರ, ಆಚಾರ, ಶೀಲಗಳಿಂದ ಅಂತಹ ಪುತ್ರರು ಹುಟ್ಟುತ್ತಾರೆಂದರಿಯಬೇಕು. ''

**ಮಾತಾಪಿತೃಗಳಿಂದಾದ ಅಂಗವಿಭಜನೆ:**—"ಕೇಶಾಃ ಶ್ಮಶ್ರೂ ಚ ಲೋಮಾನಿ ನಖಾ ದಂತಾಃ ಶಿರಾಸ್ತಥಾ ॥ ಧಮನ್ಯಃ ಸ್ನಾ

ಯವಶ್ಶುಕ್ರ ಮೇತಾನಿ ಪಿತೃಜಾನಿ ಹಿ ॥ ಮಾಂಸಾಸೃಙ್ಮಜ್ಜ ಮೇದಾಂಸಿ ಯಕೃತ್ಪ್ಲೀಹಾಂತ್ರನಾಭಯಃ ॥ ಹೃದಯಂ ಚ ಗುದಂ ಚಾಽಪಿ ಭವಂತ್ಯೇತಾನಿ ಮಾತೃತಃ ॥ ”

“ ಕೇಶ, ಶ್ಮಶ್ರು, ರೋಮ, ನಖ, ದಂತ, ಶಿರಸ್ಸು, ಧಮನೀ, ಸ್ನಾಯುಗಳು ಮತ್ತು ವೀರ್ಯ ಇವು ತಂದೆಯಿಂದುಂಟಾಗತಕ್ಕವು. ಮಾಂಸ, ರುಧಿರ ಮಜ್ಜಾ, ಮೇಧಸ್ಸು, ಯಕೃತ್, ಪ್ಲೀಹ, ಕರುಳುಗಳು, ನಾಭಿ, ಹೃದಯ ಗುದಾ ಇವು ಮಾತೆಯಿಂದ ಉತ್ಪನ್ನವಾಗುವವು. ”

ಗರ್ಭವತೀ ಕೃತ್ಯಾಕೃತ್ಯಗಳು:—“ ಗುರ್ವಿಣೀ ಪ್ರಥಮಾದಹ್ನಃ ಪ್ರಹೃಷ್ಟಾ ಭೂಷಿತಾ ಶುಚಿಃ ॥ ಭವೇಚ್ಛುಕ್ಲಾಂಬರಧರಾ ಗುರು ವಿಪ್ರಾರ್ಚನೇ ರತಾ ॥ ಭೋಜ್ಯಂ ತು ಮಧುರಪ್ರಾಯಂ ಸ್ನಿಗ್ಧಂ ಹೃದ್ಯಂ ದ್ರವಂ ಲಘು ॥ ಸಂಸ್ಕೃತಂ ದೀಪನೀಯಂ ತು ನಿತ್ಯಮೇವೋಪಯೋಜಯೇತ್ ॥ ಗುರ್ವಿಣೀ ನ ತು ಕುರ್ವೀತ ವ್ಯಾಯಾಮಮಪತರ್ಪಣಮ್ ॥ ವ್ಯವಾಯಂ ಚ ನ ಸೇವೇತ ನ ಕುರ್ಯಾದತಿ ತರ್ಪಣಮ್ ॥ ರಾತ್ರೌ ಜಾಗರಣಂ ಶೋಕಂ ಯಾನಸ್ಯಾರೋಹಣಂ ತಥಾ ॥ ರಕ್ತಮೋಕ್ಷಂ ವೇಗರೋಧಂ ನ ಕುರ್ಯಾದುತ್ಕಟಾಸನಮ್ ॥ ದೋಷಾಭಿಘಾತೈರ್ಗರ್ಭಿಣ್ಯಾ ಯೋಯೋ ಭಾಗಃ ಪ್ರಪೀಡ್ಯತೇ ॥ ಸ ಸ ಭಾಗಃ ಶಿಶೋಸ್ತಸ್ಯ ಗರ್ಭಸ್ಥಸ್ಯ ಪ್ರಪೀಡ್ಯತೇ ॥ ಮಲಿನಾಂ ವಿಕೃತಾಕಾರಾಂ ಹೀನಾಂಗೀಂ ನ ಸ್ಪೃಶೇತ್ ಸ್ತ್ರಿಯಮ್ ॥ ನ ಜಿಘ್ರೇದಪಿ ದುರ್ಗಂಧಂ, ನ ಪಶ್ಯೇನ್ನಯನಾಪ್ರಿಯಮ್ ॥ ವಚಾಂಸಿ ನಾಽಪಿ ಶೃಣುಯಾತ್ಕರ್ಣಯೋರಪ್ರಿಯಾಣಿ ಚ॥ ನಾನ್ನಂ ಪರ್ಯುಷಿತಂ ಶುಷ್ಕಂ ಭುಂಜೀತ ಕ್ವಾಽಪಿ ತಂ ನ ಚ ॥ ಚೈತ್ಯಸ್ಮಶಾನವೃಕ್ಷಾಂಶ್ಚ ಛಾಯಾಂ ಶ್ಚಾಪ್ಯಯಶಸ್ಕರಾನ್ ॥ ವಹ್ನಿ ನಿಷ್ಕ್ರಮಣಂ ಕ್ರೋಧಂ ಶೂನ್ಯಾಗಾರಂ ಚ ವರ್ಜಯೇತ್ ॥ ನೋಚ್ಚೈರ್ಬ್ರೂಯಾನ್ನತತ್ಕುರ್ಯಾತ್ ಯೇನ ಗರ್ಭೋ ವಿನಶ್ಯತಿ ॥ ತೈಲಾಭ್ಯಂಗೋದ್ವರ್ತನಂ ಚ ನಾತ್ಯರ್ಥಂ ಕಾರಯೇದಪಿ ॥ ನಾಮೃದ್ವಾಸ್ತರಣಂ ಕುರ್ಯಾನ್ನಾತ್ಯುಚ್ಚಂ ಶಯನಾಸನಮ್ ॥ ಏತಾಂ ಸ್ತುನಿಯಮಾನ್ ಸರ್ವಾನ್ ಯತ್ನಾತ್ಕುರ್ವೀತ ಗುರ್ವಿಣೀ ॥ ”

“ ಗರ್ಭವತೀ ಸ್ತ್ರೀಯು ಮೊದಲಿನ ದಿನದಿಂದಲೂ—ಪ್ರಸನ್ನಚಿತ್ತಳೂ, ಆಭರಣದಿಂ ಶೋಭಿತಳೂ, ಪವಿತ್ರಳೂ, ಶ್ವೇತವಸ್ತ್ರವನ್ನುಟ್ಟವಳೂ, ಗುರುಗಳು, ಬ್ರಾಹ್ಮಣರು ಇವರ ಪೂಜೆಯಲ್ಲಿರತಳೂ, ಆಗಿರಬೇಕು. ನಿತ್ಯವೂ

ಮಧುರವಾದ, ಸ್ನಿಗ್ಧವಾದ, ಮನಸ್ಸಿಗೂ ಬಾಯಿಗೂ ರುಚಿಯಾದ, ಯೋಗ್ಯತರ, ಬೇಗ ಪಕ್ವವಾಗತಕ್ಕ, ಸಪ್ಪಕ್ಷಾರಯುಕ್ತವಾದ, ಜಠರಾಗ್ನಿಯನ್ನು ವೃದ್ಧಿಪಡಿಸತಕ್ಕ ಭೋಜನವನ್ನು ಮಾಡುತ್ತಾ ಇರಬೇಕು. ಗರ್ಭವತಿಯು-ಕಸರತ್ತನ್ನೂ, ಲಂಘನವನ್ನೂ, ಮೈಥುನವನ್ನೂ, ಅತಿಯಾದ ಭೋಜನವನ್ನೂ,ರಾತ್ರಿಯಲ್ಲಿ ಜಾಗರಣೆಯನ್ನೂ, ಶೋಕವನ್ನೂ, ಸವಾರಿಯನ್ನೇರುವಿಕೆಯನ್ನೂ, ರಕ್ತಮೋಕ್ಷಣ ಮಾಡಿಸುವಿಕೆಯನ್ನೂ, ಮಲ ಮೂತ್ರಾದಿ ವೇಗಗಳ ತಡೆಯುವಿಕೆಯನ್ನೂ, ವಿಷಮವಾಗಿ ಕೂರುವಿಕೆಯನ್ನೂ ಬಿಟ್ಟುಬಿಡಬೇಕು. ದೋಷವೂ, ಪೆಟ್ಟು ಬೀಳುವಿಕೆಯೂ ಗರ್ಭಿಣಿಯ ಯಾವಯಾವ ಅಂಗದಲ್ಲಿ ಉಂಟಾಗಿ ಪೀಡಾಕರವಾಗುವದೋ, ಗರ್ಭಸ್ಥನಾದ ಬಾಲಕನ ಆಯಾಯ ಅಂಗಗಳೂ ಪೀಡಾಕ್ಕೆ ಪ್ರಾಪ್ತವಾಗುವವು. ಗರ್ಭಿಣಿಯು— ಮಲಿನಳೂ, ವಿಕಾರ ಚೇಷ್ಟಾಯುಕ್ತಳೂ, ಹೀನ ಅಂಗವುಳ್ಳವಳೂ, ಆದ ಯಾವ ಸ್ತ್ರೀಯನ್ನೂ ಸ್ಪರ್ಶಮಾಡಬಾರದು. ದುರ್ಗಂಧವಸ್ತುವನ್ನು ಮೂಸಿ ನೋಡಬಾರದು. ನೇತ್ರಗಳಿಗೆ ಅಪ್ರಿಯವಾದದ್ದನ್ನು ನೋಡಬಾರದು, ಕಿವಿಗೆ ಅಪ್ರಿಯ ವಾಕ್ಯಗಳನ್ನು ಕೇಳಬಾರದು, ಹಳಸಿದ, ಒಣಕಲು, ಬಹುಬೆಂದ ಅನ್ನವನ್ನುಣ್ಣಲಾಗದು, ಚೈತ್ಯಗಳು, ಭೂತಾವಿಷ್ಟವೃಕ್ಷಾದಿಗಳು, ಸ್ಮಶಾನ ವೃಕ್ಷಗಳೂ ಅಪಯಶಸ್ಸನ್ನು ತರುವ ಕಾರ್ಯಗಳು, ಶಿಕ್ಕಿದಕಡೆ ತಿರುಗುವಿಕೆ, ಕ್ರೋಧ, ಶೂನ್ಯವಾದ ಮನೆ, ಇವುಗಳನ್ನು ತ್ಯಜಿಸಬೇಕು. ಜೋರಾಗಿ ಮಾತನಾಡಬಾರದು, ಗರ್ಭನಷ್ಟವಾಗುವಂತಹ ಕಾರ್ಯವನ್ನು ಮಾಡಬಾರದು, ಬಹಳವಾಗಿ ಎಣ್ಣೆ ಹಚ್ಚಿಕೊಂಡು ಅಭ್ಯಂಗ ಮಾಡುವಿಕೆ, ತೈಲ ನಾಶನಕ್ಕಾಗಿ ಶೀಗೆ ಮುಂತಾದವುಗಳಿಂದ ತಿಕ್ಕಿಕೊಳ್ಳುವಿಕೆ, ಇವನ್ನು ಅತಿಯಾಗಿ ಮಾಡಿಕೊಳ್ಳಬಾರದು. (ಹೀಗೆ ಮೈಯ್ಯನ್ನು ಶಿಕ್ಕಿದಹಾಗೆ ಮಾಲೀಸು ಮಾಡಿದರೆ; ಉಜ್ಜಿಕೊಂಡರೆ ಗರ್ಭಕ್ಕೆ ಅಪಾಯವಾದರೂ ಆಗಬಹುದು, ಅದಕ್ಕಾಗಿ ಉಪಾಯವಾಗಿ, ಆಯಾಸವಾಗದಂತೆ ಈ ಅಭ್ಯಂಗ ಸ್ನಾನವನ್ನು ಆಚರಿಸಬೇಕೆಂದು ತಾತ್ಪರ್ಯವು.) ಕಠೋರವಾದ, ಅತ್ಯುನ್ನತವಾದ ಶಯನದಲ್ಲಿ ಮಲಗಬಾರದು, ಗರ್ಭಿಣಿಯು ಮೇಲಿನ ಆದೇಶಗಳನ್ನು ಯತ್ನಪೂರ್ವಕವಾಗಿ ಆಚರಿಸಲೇಬೇಕು. ''

☞ ಮೇಲಿನ ಹೇಳಿಕೆಯಲ್ಲಿ:—" ಗರ್ಭಿಣಿಯು " ಪಿಂಡದ ಮಾತು ಪಿಂಡಕ್ಕೆ, ನಮ್ಮ ಮಾತು ನಮಗೆ '' ಎಂದು ಮನಸ್ವೀ ತಿಂದು, ಉಂಡು, ಕುಡಿದು ಮಾಡುವ ದುರ್ವ್ಯವಹಾರದಿಂದ ಪಿಂಡಕ್ಕೆ ಅಪಾಯ ಬರುತ್ತದೆಂತಲೂ, ಗರ್ಭಿಣಿಗೆ ಇಷ್ಟವಿರುವ ದೌಹೃದವನ್ನು ಸಲ್ಲಿಸಲೇಬೇಕೆಂತಲೂ'' ಪರಸ್ಪರ ವಿರೋಧ ಪ್ರಾಪ್ತವಾಯಿತೆಂದು ಕೆಲವರು ಭಾವಿಸಬಹುದು. ಈ

ಕಾಲದಲ್ಲಿ ಬಸರಿಯರಿಗೆ ಬಯಕೆ (ದೌಹೃದ) ಎಂದು ಕೊಡುವ ಪದ್ಧತಿಯಲ್ಲಿ ಎಂದಾದರೊಂದುದಿನ ಶಿಕ್ಕಿದಹಾಗೆ—ಉಂಡೆ, ಚಕ್ಕುಲಿ, ಲಾಡು, ಚಿರೋಟಿ, ಹುರಕಲುಕಾಳು, ಮುಂತಾದ ವಿಶೇಷ ಭಕ್ಷ್ಯ, ತಿಂಡಿಗಳನ್ನುಮಾಡಿ, ನೂರಾರುಜನ ಮುತ್ತೈದೆಯರ ಕೈಮೆರವಣಿಗೆಯಿಂದ ಅವರೆದುರಿನಲ್ಲಿ ಆ ಬಸುರಿಗೆ ಕೊಟ್ಟು—ತನ್ಮೂಲಕ "ತಾವು ಬಯಿಕೆಯನ್ನು ಕೊಟ್ಟೆವು" ಎಂದು ಜಂಭ ಕೊಚ್ಚಿಕೊಳ್ಳುವ ಪರಿಪಾಟಿಯು ಬಯಕೆಯನ್ನು ತಿನ್ನುವ ಗರ್ಭಿಣಿಗೆ ಖಂಡಿತವಾಗಿಯೂ ಆ ಮುತ್ತೈದೆಯರ ದೃಷ್ಟಿದೋಷ ವುಂಟಾಗದೆ ಬಿಡುವದಿಲ್ಲ. ಪ್ರತಿ ಕುಟುಂಬಿಯೂ ತನ್ನ ಐಶ್ವರ್ಯಾನುಸಾರವಾಗಿ ಬೇಕಾದ—ಶುಚಿ, ರುಚಿಯಾದ ಅನೇಕ ಭೋಗ ವಿಲಾಸದ ಭೋಜನವನ್ನು ತಮ್ಮ ಗರ್ಭಿಣಿಗಾಗಿ ಮಾಡಿಸಿ ತೃಪ್ತಿಪಡಿಸುವದೇ ನಿಜವಾದ ದೌಹೃದವನ್ನೀಯುವದಾಗಿದೆ. ಗರ್ಭಿಣಿದೆಶೆಯೋ ಕೇವಲ ನಾಜೂಕಾದದ್ದು, ಅಂತಾದ್ದರಲ್ಲಿ ಶಿಕ್ಕಿಶಿಕ್ಕಿದ ಜನರ ಗುಂಪೆಲ್ಲಾ ಶೇರಿ "ಬಯಕೆ" ಯಂದು ಕೊಡುವ ಪರಿಪಾಟಿಯು ಕೇವಲ ನಿಷಿದ್ಧಾಚಾರವೂ, ಗರ್ಭಿಣಿಯ ಮನಸ್ಸಿಗೆ ಅಹಿತವೂ, ಗರ್ಭಕ್ಕೆ ಹಾನಿಕರವೂ ಎಂದು ತಿಳಿಯಬೇಕಾಗುತ್ತದೆ. ಇದರಿಂದ ದೌಹೃದವನ್ನು ಕೊಡಿಸುವಿಕೆಯು ಗುಪ್ತವಾಗಿ ಮಿತವಾಗಿ ನಡಿಯತಕ್ಕದ್ದಾದ್ದರಿಂದ ಮೇಲಿನ ವಿಷಯವು ಅದಕ್ಕೆ ವ್ಯತಿರೇಕವಾಗಿರುವದೆಂದು ತಿಳಿಯಲಾಗದು.

ಗರ್ಭವಿಘಾತ ಕೃತ್ಯಗಳು ಅದರ ಚಿಕಿತ್ಸೆ:—ಗರ್ಭಿಣಿ ದೆಶೆಯಲ್ಲಿ ಬಹು ಮೈಥುನ ಮಾಡುವದರಿಂದಲೂ, ಮಾರ್ಗವನ್ನು ನಡಿಯುತ್ತಾ ಬಳಲುವದರಿಂದಲೂ, ಜ್ವರ ಬರುವದರಿಂದಲೂ, ಉಪವಾಸ ಮಾಡುವದರಿಂದಲೂ, ಪೆಟ್ಟುಬೀಳುವದರಿಂದಲೂ, ಅಜೀರ್ಣವಿದ್ದೂ ಮೇಲೆ ಭೋಜನ ಮಾಡುವದರಿಂದಲೂ, ಓಡುವದರಿಂದಲೂ, ವಮನಮಾಡುವದರಿಂದಲೂ, ಜುಲಾಬಿನ ಔಷಧಿ ಸೇವನೆಮಾಡುವದರಿಂದಲೂ, ತೀಕ್ಷ್ಣ, ಕಟು ಗರಮಿ, ಒಣಕಲು ವಸ್ತುಗಳನ್ನು ತಿನ್ನುವದರಿಂದಲೂ, ವಿಷಮಾಸನದಲ್ಲಿ ಕೂರುವದರಿಂದಲೂ, ಭಯಪಡುವದರಿಂದಲೂ, ಹೊಟ್ಟೆಯಲ್ಲಿ ಶೂಲಿಯುಂಟಾಗುವದರಿಂದಲೂ ಗರ್ಭಿಣಿಯು ಗರ್ಭಬೀಳುವ ಭಯವುಂಟಾಗುವದು.

ಗರ್ಭನಿಂತ ನಂತರ ೪ ತಿಂಗಳೊಳಗಾಗಿ ಗರ್ಭಬಿದ್ದರೆ ಅದಕ್ಕೆ ಗರ್ಭಸ್ರಾವವೆಂತಲೂ, ೪ ತಿಂಗಳು ಕಳದನಂತರ ಬಿದ್ದರೆ ಅದಕ್ಕೆ ಗರ್ಭಪಾತವೆಂಲೂ ಹೆಸರು.

ಗರ್ಭಸ್ರಾವವಾಗುವದಾದರೆ:—ಕಮಲದಗಡ್ಡೆ, ಕಮಲದನಾಳ, ಕಮಲದಹೂವು, ಜೇಷ್ಟಮಧು ಇವುಗಳನ್ನು ಸಮವಾಗಿ ತೆಗದುಕೊಂಡು

ಎಲ್ಲವೂ ಕೇರಿ ೧-೧॥ ತೊಲೆಯಷ್ಟು ಇರುವದನ್ನು ಆಕಳಹಾಲಿನೊಂದಿಗೆ ಅರದು ಅದರಲ್ಲಿಯೇ ಕದರಿ ಶೋಧಿಸಿಕೊಂಡು ಕುಡಿದರೆ ಗರ್ಭಸ್ರಾವ ನಿಲ್ಲುವದು. ಇದೇ ಔಷಧವೇ ಗರ್ಭಿಣಿಯ ದಾಹ, ಮೂರ್ಛಾ, ಛರ್ದಿ, ಅರುಚಿ ಇವುಗಳನ್ನೂ ನಾಶಗೊಳಿಸುವದು.

ಗರ್ಭಪಾತದ ಲಕ್ಷಣ:—ಸ್ತ್ರೀಯು ಗರ್ಭಬೀಳುವದರಿಂದ—ದಾಹ, ಶೂಲಿ, ಪಕ್ಕಗಳಲ್ಲಿ, ಬೆನ್ನಿನಲ್ಲಿಪೀಡಾ, ರಜೋಧರ್ಮ ಬಹಳವಾಗಿ ಆಗುವಿಕೆ, ಮೂತ್ರಬಾರದಿರುವಿಕೆ ಇವು ಉಂಟಾಗುವವು.

ಗರ್ಭಪಾತವಾಗುವದಾದರೆ ಅದನ್ನು ನಿಲ್ಲಿಸುವ ಔಷಧಿಯು:—ಆನೆ ನೆಗ್ಗಿಲು, ಜೇಷ್ಟಮಧು, ನೆಲಗುಳ್ಳ, ಮದನಬಾಣದಫಲ ಇವನ್ನು ನುಣ್ಣಗೆ ಆಕಳಹಾಲಲ್ಲಿ ಅರದು ಆಕಳತುಪ್ಪ ಬೆರಿಸಿ ಪಕ್ವಮಾಡಿ ಸ್ತ್ರೀಯು ಸೇವಿಸಲು ಗರ್ಭಬೀಳುವದು ನಿಂತುಬಿಡುತ್ತದೆ. ಸ್ತ್ರೀಯು ಎಲ್ಲಾವೇದನೆಯೂ ನಿಂತು ಬಿಡುತ್ತದೆ.

(೨) ಕುಂಬಾರನ ಚಕ್ರದಮಣ್ಣು, ಕಾವೀಕಲ್ಲು, ಜಾಜಿ, ಮಂಜಿಷ್ಟ, ಧಾತಕೀಕುಸುಮ, ರಸಾಂಜನ, ರಾಳ ಇವುಗಳ ಚೂರ್ಣಿಸಿ ಕಾಲುತೊಲೆಯನ್ನು ಜೇನುತುಪ್ಪದಲ್ಲಿ ಸೇವಿಸಿದರೆ ಸ್ತ್ರೀಯು ಪ್ರದರಾದಿ ರೋಗಗಳೂ, ಗರ್ಭಪಾತ ಮುಂತಾದವೂ ನಾಶವಾಗಿ ಸೌಖ್ಯವಹುದು.

(೩) ಕುರುಡನಗೂಡು, ಮಂಜಿಷ್ಟ, ಮುಟ್ಟದರೆಮುನಿಯುನಸ ಮೂಲ, ಕಮಲದಗಡ್ಡೆ ಇವನ್ನು ಗೋದುಗ್ಧದಲ್ಲಿ ಅರದು ಪಕ್ವಮಾಡಿ ಬಿಸಿಬಿಸಿಯಾಗಿ ಕುಡಿದರೆ ಗರ್ಭಬೀಳುವದು ನಿಲ್ಲುತ್ತದೆ.

(೪) ಜೇಷ್ಟಮಧು, ಬೂರಗದಬೀಜ, ಕ್ಷೀರಕಾಕೋಳೀ, ದೇವದಾರು, ಲೋಸಾಖ್ಯಶಾಕ, ಕರೀಯಳ್ಳು, ರಾಳ, ಹಿಪ್ಪಲಿ, ಶತಾವರಿ, ಕಮಲದಗಡ್ಡೆ, ಆಡುಸೋಗೆ, ರಾಸ್ನೆ, ಬಗೆಗುಳ್ಳ, ದ್ರಾಕ್ಷಿ, ಸಕ್ಕರೆ ಇವನ್ನು ಹಾಲಿನಲ್ಲಿ ಅರದು ಪ್ರತಿತಿಂಗಳಲ್ಲಿಯೂ ೩-೩ ದಿನ ಗರ್ಭಿಣಿಗೆ ಕುಡಿಸಿ ಸಾಮಾನ್ಯವಾದ ಪಥ್ಯದಲ್ಲಿಟ್ಟರೆ ಯಾವ ವಿಧವಾದ ಉಪದ್ರವೂ ಆಗುವದಿಲ್ಲ. ಈ ಔಷಧವನ್ನು ೭ನೇ ತಿಂಗಳವರಿಗೆ ಕೊಡತಕ್ಕದ್ದು.

೮ನೇ ತಿಂಗಳಲ್ಲಿ ಗರ್ಭಿಣಿಗೆ ಕೊಡತಕ್ಕ ಔಷಧವು—ಬ್ಯಾಲದಬೇರು, ಗುಳ್ಳದಬೇರು, ಬಿಲ್ವದಬೇರು, ಪಟೋಲದಬೇರು, ಷಷ್ಟಿಕದಬೇರು, ಇವನ್ನು ಆಕಳಹಾಲಲ್ಲಿ ಅರದು ಹಾಲಿನಲ್ಲಿ ಕದರಿ ಶೋಧಿಸಿ ಬಿಸಿಮಾಡಿ ಕುಡಿಸುವದು. ಇದರಿಂದ ಗರ್ಭವು ಪುಷ್ಟಿಯಾಗುವದು.

೯ನೇ ತಿಂಗಳಲ್ಲಿ ಗರ್ಭಿಣಿಗೆ ಕೊಡತಕ್ಕ ಔಷಧವು—ಜೇಷ್ಟಮಧು, ಆಡುಸೋಗೆ, ಕ್ಷೀರಕಾಕೋಲೀ, ಇವನ್ನು ಕಾಲು ರೂ. ತೂಕ ಸಮವಾಗಿ

ಶೇರಿಸಿ ಹಾಲಿನಲ್ಲಿ ಅರದು ಬಿಶಿಮಾಡಿ ಸೇವಿಸುವದು. ಗರ್ಭಪುಷ್ಟಿಯಾಗುವದು.

೧೦ ನೇ ತಿಂಗಳಲ್ಲಿ ಕೊಡುವ ಔಷಧಿಯು:—

(೧) ಶುಂಠಿ, ಕ್ಷೀರಕಾಕೋಳೀ ಇವೆರಡನ್ನೂ ಆಕಳಹಾಲಿನಲ್ಲಿ ಅರದು ಬಿಶಿಮಾಡಿ ಕುಡಿಸುವದು.

(೨) ಶುಂಠಿ, ಜೇಷ್ಟಮಧು, ದೇವದಾರು, ಕ್ಷೀರಕಾಕೋಳೀ, ಕಮಲಗಡ್ಡೆ, ಮಂಜಿಷ್ಟೆ ಇವನ್ನು ಜಲದಲ್ಲಿ ಅರದು ಸ್ವಲ್ಪ ಆಕಳಹಾಲು ಹಾಕಿ ನೀರು ಆರುವಂತೆ ಪಕ್ವಮಾಡಿ ಕುಡಿಸುವದು. ಇದರಿಂದ ಗರ್ಭಪುಷ್ಟವಾಗುವದು. ಯಾವರೋಗವೂ ಕಾಡುವದಿಲ್ಲ.

ವಾಯುವಿನಿಂದ ಗರ್ಭ ಒಣಗಿಹೋಗಿದ್ದರೆ—ಆ ಸ್ತ್ರೀಯ ಉದರವು ಪರಿಪೂರ್ಣವಾಗದೆ ಖಾಲಿಯಾಗಿಗುತ್ತದೆ. ಇಂತಹ ವಾಯು ನಾಶವಾಗಿ ಗರ್ಭಿಣಿಯು ಪುಷ್ಟಳಾಗಬೇಕಾದರೆ—ಹಾಲು, ಹಣ್ಣು ಮುಂತಾದ ಪುಷ್ಟಿ ಪದಾರ್ಥಗಳನ್ನು ಮಿತವಾಗಿ, ಸೇವಿಸುತ್ತಾ ಬರುವಂತೆ ಒಳ್ಳೊಳ್ಳೇ ಆಹಾರವನ್ನು ಕೊಡುವದರಿಂದಲೂ, ಆಗಾಗ್ಗೆ ಹಾಲು, ಷರಬತ್, ಬಾದಾಮಿಯು ಹರೀರಾ ಮುಂತಾದವುಗಳನ್ನು ಕುಡಿಸುವದರಿಂದಲೂ ವಾಯು ದೂರವಾಗಿ ಗರ್ಭವೃದ್ಧಿಯಾಗುವದು.

ಸ್ತ್ರೀಯು ಗರ್ಭಿಣಿಯಾಗಿರುವ ಕಾಲದಲ್ಲಿ ಪುಂಸವನವೆಂಬ ಮುಖ್ಯವಾದ ವೇದೋಕ್ತಕರ್ಮವು ನಡಿಯಬೇಕಾಗಿ ಚರಕ ಸುಶ್ರುತ, ವಾಗ್ಭಟಾದಿ ಆರ್ಷವೈದ್ಯಶಾಸ್ತ್ರಗಳಲ್ಲಿ ವಿಧಿಸಿರುತ್ತಾರೆ, ಇದು ಪುಷ್ಯನಕ್ಷತ್ರದ ದಿವಸ ನಡಿಯಬೇಕೆಂದು ತಿಳಿಸುತ್ತಿರುವರು. ಇದರ ನಂತರ ಸೀಮಂತವೆಂಬದನ್ನು ನಮ್ಮದೇಶೀಯರು ಮಹಾವಿಜೃಂಭಣೆಯಿಂದ ಗರ್ಭಿಣಿಗೆ “ಒಳೇ ತೊಡಿಸುವ ಕೃತ್ಯ” ವೆಂದು ಆಚರಿಸುತ್ತಿದ್ದಾರೆ. ಇವೆಲ್ಲವೂ ಗರ್ಭಿಣಿಯ ಮನಸ್ಸಿಗೆ ಆನಂದವೂ, ಬಂಧುವರ್ಗಸಮ್ಮೇಲನೆಯಿಂದ ವಿಧವಿಧ ಬಯಕೆ, ಖುಡಗರೆ, ಮುಂತಾದವುಗಳನ್ನೂ ಮಾಡಿ, ವಾದ್ಯಘೋಷಪೂರ್ವಕವಾಗಿ ಬಂಧುವರ್ಗವೆಲ್ಲವೂ ಸಂಭ್ರಮದಿಂದ ಗರ್ಭಿಣಿಯನ್ನು ಆನಂದಪಡಿಸುವದೂ ಗರ್ಭವರ್ಧನೆಗೆ ಮಹಾ ಪ್ರಯೋಜನಕರವಾದದ್ದು. ಆದರೆ ಗರ್ಭಿಣಿಯು ಇತ್ತರಕಾಲದಲ್ಲಿ ಯಾವವಿಧವಾದ ದುಷ್ಟಸ್ವಭಾವದವಳಾಗಿರಲಿ, ಗರ್ಭಧರಿಸಿದ ಕಾಲದಲ್ಲಿ—ಈರ್ಷ್ಯೆ, ದ್ವೇಷ, ಕ್ರೋಧ, ಲೋಭ, ಕೇಡಿಗತನ ಮುಂತಾದ ದುಷ್ಟವೃತ್ತಿಗಳೆಲ್ಲವನ್ನೂ ಸ್ವಲ್ಪದಿನಗಳಮಟ್ಟಿಗಾದರೂ ತ್ಯಜಿಸಿ, ಸದಾಶಾಂತಳಾಗಿಯೂ, ದಾಂತಳಾಗಿಯೂ, ಪರೋಪಕಾರ ನಿರತಳಾಗಿಯೂ, ಬಡವರಲ್ಲಿಯೂ, ಬಂಧುಗಳಲ್ಲಿಯೂ, ವಿನಯವೂ, ಉದಾರತೆಯೂ, ಅಭಿವಾದನಶೀಲ

ತೆಯೂ, ಹಿರಿಯರು ಗುರುಗಳಲ್ಲಿ ಸೇವಾಸತ್ಕಾರದತ್ತ ಚಿತ್ತಳೂ ಉಳ್ಳವಳಾಗಿ ಇರಲು ಯತ್ನಿಸುವದು ಭವಿಷ್ಯತ್ಪ್ರಜೆಯ ಕಲ್ಯಾಣಕ್ಕೆ ಮುಖ್ಯವಾದದ್ದಾಗಿದೆ. ಇದನ್ನು ಮನೆಯ ಯಜಮಾನರೂ, ಆ ಗರ್ಭಿಣಿಯ ಪತಿಯೂ ಗಮನಿಕೆಯಿಂದ ಆಚರಿಸುವಂತೆ ಮಾಡುವದೊಳ್ಳೇದು !!

ಸುಖಪ್ರಸವೋಪಾಯ:—

(೧) ಹಿಪ್ಪಲಿ ಖುರಾಸಾನೀ ಬಜೆ ಇವನ್ನು ಜಲದಲ್ಲಿ ನುಣ್ಣಗರದು ಯೋನಿಯಮೇಲೆ ಲೇಪನಮಾಡಿದರೆ ಸುಖವಾಗಿ ಆಗಲೇ ಜನನವಾಗುವದು.

(೨) ಚಿಟ್ಟಹರಳೆಣ್ಣೆಯನ್ನು ಗರ್ಭಿಣಿಯ ನಾಭಿಯಮೇಲೆ ಲೇಪಿಸಿದರೂ ತತ್‌ಕ್ಷಣವೇ ಸುಖಪ್ರಸುವಾಗುವದು.

(೩) ಮಾದಲಬೇರು, ಹಿಪ್ಪೆಹೂವು ಇವನ್ನು ಕಲ್ಕಮಾಡಿ ತುಪ್ಪದಲ್ಲಿ ನುಣ್ಣಗರದು ಕುಡಿಸಲು ತತ್‌ಕ್ಷಣವೇ ಜನನವಾಗುವದು.

(೪) ಸರ್ಪದಪೊರೆಯ ಹೊಗೆಯನ್ನು ಯೋನಿಗೆ ಕೊಟ್ಟರೂ ಸುಖಪ್ರಸುವಾಗುವದು.

(೫) ಅಪಾಮಾರ್ಗದಬೇರನ್ನು ಶುಭದಿನದಲ್ಲಿ ತಂದು ಇಟ್ಟದ್ದುಕ್ಕೊಂಡು ಗರ್ಭಿಣಿಯ ಕಟಿಯಲ್ಲಿ ಕಟ್ಟಲು ಶೀಘ್ರಪ್ರಸುವಾಗುವದು.

**ಸುಖ ಪ್ರಸವಾರ್ಥವಾಗಿ:—** "ಮುಕ್ತಾಃ ಪಾಶಾ ವಿಮುಕ್ತಾಶ್ಚ ಮುಕ್ತಾಸ್ಸೂರ್ಯೇಣ ರಶ್ಮಯಃ ‖ ಮುಕ್ತಃ ಸರ್ವಭಯಾದ್ಗರ್ಭ ಏಹಿಮಾಚಿರ ಮಾಚಿರ ‖" ಈ ಮಂತ್ರದಿಂದ ಸ್ವಲ್ಪ ಜಲವನ್ನು ೩ ಸಲ ಅಭಿಮಂತ್ರಿಸಿ ಅದನ್ನು ಗರ್ಭಿಣಿಗೆ ಕುಡಿಯಕೊಡಲು ಕೂಡಲೇ ಪ್ರಸವಾಗುವದು.

| | | |
|---|---|---|
| ೧೬ | ೬ | ೮ |
| ೨ | ೧೦ | ೧೮ |
| ೧೨ | ೧೪ | ೪ |

ಅಥವಾ ಈ ಯಂತ್ರವನ್ನು ಗರ್ಭಿಣಿಯು ದರ್ಶನ ಮಾಡಿದರೂ ಸುಖಪ್ರಸವವಾಗುವದು.

## ಸುಖ ಪ್ರಸವೌಷಧಗಳು.

" ಕರಂಜಪತ್ರ ಬೀಜಾನಾಂ ಕಲ್ಕೇನ ಚ ಭಿಷಗ್ವರಃ ‖ ತೈಲಂ ಪಕ್ತ್ವಾತ್ಯಜಾಕ್ಷೀರೇ ಯೋನಿಂ ಲಿಂಪೇತ್ಪ್ರಸೂಯತೇ ‖ "

" ಹೊಗೇ ಎಲೆಗಳ ಮತ್ತು ಬೀಜಗಳ ಕಲ್ಕವನ್ನುಮಾಡಿ ಆಡಿನಹಾಲನ್ನೂ, ತಿಲತೈಲವನ್ನೂ ಸುಮಾರಾಗಿ ಹಾಕಿ, ತೈಲವಿಧಿಯಂತೆ ಸಾಧಿಸಿದ ತೈಲವನ್ನು ಯೋನಿಗೆ ಲೇಪಮಾಡಿದರೆ ಸುಖಪ್ರಸವಾಗುವದು. "

ಲೇಪನ ಮಂತ್ರ:—" ಹಿಮವತ್ಯುತ್ತರೇ ಪಾರ್ಶ್ವೆ ಶರ್ವರೀನಾಮ ಯಕ್ಷಿಣೀ ‖ ತಸ್ಯಾ ನೂಪುರ ಶಬ್ದೇನ ವಿಶಲ್ಯಾ ಭವಗರ್ಭಿಣೀ ಸ್ವಾಹಾ ‖ "

ಮೇಲಿನ ತೈಲವನ್ನು ಈ ಮಂತ್ರದಿಂದ ಪ್ರೋಕ್ಷಿಸಿ, ಈ ಮಂತ್ರವನ್ನು ಜಪಿಸುತ್ತಾ ಲೇಪಿಸುವದು.

" ತತ್ಕಾಲೇ ಕಂಟಿಕಾ ಮೂಲಮುತ್ತರಸ್ಯಾಂ ದಿಶಿಸ್ಥಿತಮ್ ‖ ಉತ್ಪಾಟ್ಯ ಚೈವ ಹಸ್ತೇನ ಜಲೇನ ಸಹಪೇಷಯೇತ್ ‖ ಯೋನಿಂ ಲಿಪ್ತ್ವಾತು ಸಾ ನಾರೀ ಸುಖಂ ಸೂತೇ ನಸಂಶಯಃ ‖ "

" ಜನನವಾಗದೆ ಇರುವ ಕಾಲದಲ್ಲಿ ನೆಲಗುಳ್ಳದ ಉತ್ತರಕ್ಕೆ ಹರಿದ ಬೇರನ್ನು ಕೈಯ್ಯಿಂದ ಕಿತ್ತು ತಂದು, ಅದನ್ನು ಜಲದಲ್ಲಿ ಅರದು ಯೋನಿಗೆ ಲೇಪನಮಾಡಿದ ಕೂಡಲೆ ಗರ್ಭಿಣಿಗೆ ಸುಖಪ್ರಸವವಾಗುವದು. "

" ಮೂಲಂ ಧತ್ತೂರಕಸ್ಯೈವ ಗೃಹೀತ್ವಾ ಸೂರ್ಯಸಮ್ಮುಖಮ್‖ ಧತ್ತೇ ಶಿರಸಿ ಯಾ ನಾರೀ ಸುಖಂ ಸೂತೇ ನ ಸಂಶಯಃ ‖ "

" ಸೂರ್ಯಾಭಿಮುಖನಾಗಿ ನಿಂತುಕೊಂಡು ಉಮ್ಮತ್ತದ ಬೇರನ್ನು ಕಿತ್ತುಕೊಂಡು ಬಂದು, ಅದನ್ನು ಗರ್ಭಿಣಿಯು ಶಿರಸ್ಸಿನಲ್ಲಿ ಕಟ್ಟಲು ತತ್ಕ್ಷಣವೇ ಸಂಶಯವಿಲ್ಲದೆ ಸುಖಪ್ರಸುವನ್ನು ಪಡೆಯುವಳು. "

" ಪಶ್ಚಿಮಾಭಿಮುಖಂ ಮಂತ್ರೀ ಗುಂಜಾಮೂಲಂ ಸಮುದ್ಧರೇತ್‖ ಕಟೌ ಬದ್ಧ್ವಾ ಸುತಂ ಸೂತೇ ಕಾಮಿನೀ ನಾತ್ರ ಸಂಶಯಃ‖ "

" ಪಶ್ಚಿಮಮುಖದಿಂದ ನಿಂತು ಗುಂಜಾ (ಗುಲಗಂಜಿ) ಬೇರನ್ನು ಕಿತ್ತು ತಂದು ಧೂಪವಿಕ್ಕಿ ಗರ್ಭಿಣಿಯು ಕಟಿಯಲ್ಲಿ ಕಟ್ಟಲು ಸುಖಪ್ರಸವವಾಗುವದು. "

" ಅಪಾಮಾರ್ಗಸ್ಯ ಮೂಲಂ ತು ತತ್ಕಾಲೋತ್ಪಾಟಿತಂ ಸುಧೀಃ‖ ಪೂರ್ವಾಶಾಭಿಮುಖಃ ಪಶ್ಚಾದುದಕೇ ಪಿಪ್ರಲೇಪಯೇತ್ ‖ ಯೋನೌ ಸುಖಂ ಪ್ರಸೂತೇ ಸಾ ನಾರೀ ರಹಿತವೇದನಾ ‖ "

" ಪೂರ್ವಮುಖನಾಗಿ ಅಪಾಮಾರ್ಗ (ಉತ್ತರಣೆ) ಬೇರನ್ನು ಕಿತ್ತು ತಂದು ಜಲದಲ್ಲಿ ಅರದು ಯೋನಿಗೆ ಲೇಪಿಸಲು ಸುಖಪ್ರಸುವಾಗುವದು. "

" ಸರ್ಪಕಂಚುಕಮಾದಾಯ ಭಸ್ಮಕೃತ್ವಾ ವಿಧಾನವಿತ್‖ ಮಧುನಾ ಸಹ ಸಂಪಿಷ್ಯ ಚಾಂಜನೇ ನ ಪ್ರಸೂಯತೇ "

" ಹಾವಿನಪೊರೆಯನ್ನು ತಂದು ಸುಟ್ಟು ಬೂದಿಮಾಡಿ, ಅದನ್ನು ಜೇನಿನಲ್ಲಿ ಅರದು ಗರ್ಭಿಣಿಗೆ ಅಂಜನವಿಡುವದರಿಂದ ತತ್ಕಾಲವೇ ಸುಖಪ್ರಸುವಾಗುವದು. "

" ಶ್ವೇತಾಯಾಃ ಶರಪುಂಖಾಯಾ ಮೂಲಂ ಗೃಹ್ಯ ವಿಧಾನವಿ
ತ್ || ಕಟೌಬದ್ಧ್ವಾ ಸುಖಂ ಸೂತೇ ನಾರೀ ನಾತ್ರವಿಲಂಬಿತಮ್||"

" ಬಿಳೀ ಬಿಳೀಕೊಗ್ಗಿ ಬೇರನ್ನು ಶುಭದಿನದಲ್ಲಿ ಅರ್ಚಿಸಿ (ಪೂರ್ವದಿನದಲ್ಲಿ ಔತನವಿತ್ತಿದ್ದು) ಕಿತ್ತು ತರಬೇಕು. ಇದಕ್ಕೆ ಧೂಪವಿಕ್ಕಿ ಗರ್ಭಿಣಿಯ ಕಟಿಯಲ್ಲಿ ಕಟ್ಟಲು ಸುಖಪ್ರಸುವಾಗುವದು. "

"ಗುಗ್ಗುಲುಂ ಸರ್ಪನಿರ್ಮೋಕಂಚೂರ್ಣಂ ಧೂಪಂ ಪ್ರದಾಪಯೇ
ತ್|| ಯೋನೌ ಸಾ ಸುಷುವೇ ನಾರೀ ವೇದನಾ ರಹಿತಾ ಸತೀ||"

"ಗುಗ್ಗುಲು, ಸರ್ಪದಪೊರೆ ಇವುಗಳನ್ನು ಅರದು ಪ್ರಸವವೇದನೆಯಿಂದ ನರಳುತ್ತಿರುವ ಗರ್ಭಿಣಿಯ ಯೋನಿಗೆ ಧೂಪವೀಯಲು ಸುಖಪ್ರಸವಾಗುವದು. "

" ಇಂದ್ರವಾರುಣಿಕಾ ಮೂಲಂ ನಿಕ್ಷಿಪೇದ್ಯೋನಿಮಂಡಲೇ || ತೇ
ನ ಸಾ ಸುಷುವೇನಾರೀ ಶೀಘ್ರಮೇವ ನ ಸಂಶಯಃ || "

" (ಇಂದ್ರವಾರುಣೀ) ಕಾಡಕವಡೇಬಳ್ಳಿಯ ಬೇರನ್ನು ಶುಭವಾರದಲ್ಲಿ ತಂದಿರಿಸಿಕೊಂಡಿದ್ದು ಇದನ್ನು ಪ್ರಸವವೇದನೆಯಿಂದ ನರಳುತ್ತಿರುವ ಗರ್ಭಿಣಿಯ ಯೋನಿಯಲ್ಲಿಡಲು ತತ್‌ಕ್ಷಣವೇ ಪ್ರಸುವಾಗುವದು. "

" ಪುಷ್ಯಾರ್ಕೇ ಮೂಲ ಮಾಹೃತ್ಯ ಕನಕಸ್ಯ ವಿಧಾನತಃ || ಕಟೌ
ಬದ್ಧ್ವಾ ಸುಖಂ ಸೂತೇ ಗರ್ಭಿಣೀ ನಾತ್ರ ಸಂಶಯಃ || "

" ಭಾನುವಾರ ಪುಷ್ಯನಕ್ಷತ್ರಬಂದ ಶುಭಯೋಗದಲ್ಲಿ ವಿಧಾನಪೂರ್ವಕವಾಗಿ ಉಮ್ಮತ್ತದಬೇರನ್ನು ಕಿತ್ತು ತಂದಿಟ್ಟುಕೊಂಡು ಪ್ರಸವಕಷ್ಟದಿಂದಿರುವ ನಾರಿಗೆ ತಲೆಯಲ್ಲಿ ಕಟ್ಟಲು ತತ್‌ಕ್ಷಣವೇ ಪ್ರಸವವಾಗುವದು. "

" ವೃಷಸ್ಯ ಮೂಲಂ ಹಿಮ ತೋಯ ಪಿಷ್ಟಮ್ |
ರಸೋಽಥವಾ ಪರ್ಪಟಿ ಪತ್ರಜಾತಃ ||
ನಾಭೇರಧೋ ಲೇಪನತೋ ಽಂಗನಾನಾಮ್ |
ಸುಖೇನ ಗರ್ಭಪ್ರಸವಂ ಕರೋತಿ || ".

" ಆಡುಸೋಗೆಯ ಬೇರನ್ನು ತಣ್ಣೀರಿನಲ್ಲಿ ಅರದು ಗರ್ಭಿಣಿಯ ನಾಭಿಯ ಕೆಳಭಾಗಕ್ಕೆ ಲೇಪಿಸಿದರೂ, ಪರ್ಪಾಷ್ಟಕದ ಎಲೆಗಳನ್ನು ಅರದು ಹಿಂಡಿಕೊಂಡ ರಸವನ್ನು ನಾಭಿಯ ಕೆಳಗಡೆ ಲೇಪಿಸಿದರೂ ಸುಖದಿಂದ ಪ್ರಸುವಾಗುವದು. "

" ಲಾಂಗಲ್ಯಾ ಪರಿಲೇಪಃ |
ಕಾಂಜಿಕ ಯೋಗೇನ ಕಾಕಮಾಚ್ಯಾ ವಾ ||

ನಾಭೌ ಸಹಸಾ ಕುರುತೇ ।
ಗರ್ಭಪ್ರಸವಂ ನ ಸಂದೇಹಃ ॥ ”

“ ಲಾಂಗಲೀ (ಕೋಳಿಕುಟುಕನ ಗಿಡ) ದ ಬೇರನ್ನು ಗಂಜಿಯಲ್ಲಿ ಅರದು ನಾಭಿಯು ಭಾಗದಲ್ಲಿ ಲೇಪಿಸಿದರೂ, ಹಾಗೆಯೇ ಕಾಕಮಾಚೀ ಬೇರನ್ನೂ ಗಂಜಿಯಲ್ಲರದು ನಾಭಿಯು ಭಾಗದಲ್ಲಿ ಲೇಪಿಸಿದರೂ ತತ್‌ಕ್ಷಣ ಪ್ರಸವಾಗುವದು. ”

“ ತೈಲೇನ ಪಿಷ್ಟ್ವಾ ರುಬುಕಂ ಚ ಕೃಷ್ಣಾಮ್ ।
ವಚಾಂ ಪ್ರಲಿಪ್ತ್ವಾ ಖಲು ನಾಭಿದೇಶೇ ॥
ಸುಖಪ್ರಸೂತಿಂ ಕುರುತೇ ಽಂಗನಾನಾಮ್ ।
ಪ್ರಪೀಡನಾನಾಂ ಬಹುಭಿಃ ಪ್ರಮಾದ್ಯೈಃ ॥ ”

“ ಹರಳಕೊಪ್ಪು, ಹಿಪ್ಪಲಿ, ಬಜೆ ಇವುಗಳನ್ನು ತಿಲತೈಲದಲ್ಲಿ ಅರದು ನಾಭಿಗೆ ಲೇಪಮಾಡಿದರೆ ಎಂತಹ ಕಷ್ಟವಿದ್ದರೂ ನಿವೃತ್ತಿಯಾಗಿ ಸುಖವಾಗಿ ಪ್ರಸವಾಗುವದು. ”

“ ಮಯೂರಮೂಲಾಸನ ಶಿಗ್ರು ಪಾಠಾ ।
ವ್ಯಾಘ್ರೀ ಬಲಾ ಲಾಂಗಲಿಕಾ ಸಮೇತಾಃ ॥
ಪಿಷ್ಟ್ವಾರನಾಲೇನ ವಿಲಿಪ್ಯ ನಾಭೌ ।
ಸುಖೇನ ನಾರೀ ಪ್ರಸವಂ ಕರೋತಿ ॥ ”

“ ಮಯೂರಶಿಖಿಯಬೇರು, ವಿಜಯಸಾರ, ನುಗ್ಗೆಯಬೇರು, ಅಗಳು ಶುಂಠಿ, ನೆಲಗುಳ್ಳದಬೇರು, ಚಿಟ್ಟಾಮುಟ್ಟ, ಲಾಂಗಲೀ ಇವುಗಳನ್ನು ಗಂಜಿಯಲ್ಲರದು ನಾಭಿಲೇಪದಿಂದ ಸುಖಪ್ರಸವವಾಗುವದು. ”

“ ಶಾಲಪರ್ಣ್ಯಾ ಭವಂಮೂಲಂ ಪಿಷ್ಟಂ ತಂಡುಲವಾರಿಣಾ ॥
ನಾಭಿ ವಸ್ತಿ ಭಗೇ ಲೇಪಾತ್ಪ್ರಸೂತೇ ಪ್ರಮದಾ ಸುತಮ್ ॥ ”

“ ಶಾಲಪರ್ಣೀ ಬೇರನ್ನು ಅಕ್ಕಿಕಚ್ಚಿನಲ್ಲಿ ನುಣ್ಣಗರದು ಗರ್ಭಿಣಿಯು ನಾಭಿ, ವಸ್ತಿ (ಕಿಬ್ಬೊಟ್ಟೆ), ಭಗ ಇವುಗಳಿಗೆ ಲೇಪಿಸಿದರೆ ತತ್‌ಕ್ಷಣ ಪ್ರಸವಾಗುವಳು. ”

“ ಸರ್ಪಕಂಚುಕ ನೃಕೇಶ ಸರ್ಷಪೈ ।
ಸ್ತಿಕ್ತತುಂಬಿ ಕೃತವೇದನಾನ್ವಿತೈಃ ॥
ಧೂಪನಾತ್ಕಟುಕ ತೈಲಸಂಯುತೈ ।
ಸ್ತತ್‌ಕ್ಷಣಂ ಖಲು ಸುಖಂ ಪ್ರಸೂಯತೇ ॥ ”

“ ಹಾವಿನಪೊರೆ, ಮನುಷ್ಯನ ತಲೆಯಕೂದಲು, ಸಾಸವೆ, ಕಹಿಸೋರೆ, ಬ್ಯಾಟೆಯಬೇರಿನ ಬೊಬ್ಬುಡೆ, ಇವುಗಳನ್ನು ಕುಟ್ಟಿದ ಕಲ್ಕವನ್ನು ಕಹಿ (ಬೇ

ವಿನ) ತೈಲದಲ್ಲಿ ಶೇರಿಸಿ ಭಗಕ್ಕೆ ಧೂಪವಿಡಲು ತತ್‌ಕ್ಷಣವೇ ಪ್ರಸವಾಗುವದು."

"ಕೃತ್ವಾ ದಶಧಾ ಖಂಡನ್ |
ಗುಂಜಾಮೂಲಂ ನಿಬಧ್ಯ ಕಟಿದೇಶೇ ||
ಸೂತ್ರೈಸ್ಸಪ್ತಭಿರೇಕೈ |
ಸುಖಪ್ರಸೂತಿಂ ಹಿ ಭಾಮಿನೀ ಲಭತೇ ||"

"ಗುರುಗಂಜಿಯ ಬೇರನ್ನು ತಂದು ಹತ್ತು ತುಂಡುಮಾಡಿ ೭ ದಾರ ಕೂಡಿದ ಕೆಂಪುದಾರದಲ್ಲಿ ಬೇರೆಬೇರೆ ಕಟ್ಟಿ, ಅದನ್ನು ಪ್ರಸವವೇದನೆಯಲ್ಲಿರುವ ಸ್ತ್ರೀಯ ಸೊಂಟಕ್ಕೆ ಧೂಪಹಾಕಿ ಕಟ್ಟಿದರೆ ತತ್‌ಕ್ಷಣವೇ ಜನನವಾಗುವದು."

"ಮಾತಲುಂಗಸ್ಯ ಮೂಲಾನಿ ಮಧುಕಂ ಮಧುಸಂಯುತಮ್||
ಘೃತೇನ ಸಹದಾತವ್ಯಂ ಸುಖಂ ನಾರೀ ಪ್ರಸೂಯತೇ ||"

"ಮಾದಲದಬೇರು, ಜೇಷ್ಟಮಧು ಇವೆರಡನ್ನೂ ಚೆನ್ನಾಗಿ ಕುಟ್ಟಿ, ಜೇನುತುಪ್ಪ ಮತ್ತು ಸ್ವಲ್ಪ ನೀರುಹಾಕಿ ಅರದು ಸೀರಿನಲ್ಲಿ ಕದರಿ ಬಿಶಿಮಾಡಿ ಶೋಧಿಸಿ, ಕುಡಿಸಿದರೆ ತತ್‌ಕ್ಷಣವೇ ಜನನವಾಗುವದು."

"ಅಶ್ವತ್ಥೋತ್ತರಮೂಲಂ |
ತಂಡುಲಪಯಸಾನಿಘೃಷ್ಟ ಯಾ ಪಿಬತಿ ||
ಸದ್ಯೋ ಭವತಿ ವಿಶಲ್ಯಾ |
ವಿಮೂಢಗರ್ಭೇಽಪಿ ನಾತ್ರ ಸಂದೇಹಃ ||"

"ಅಶ್ವತ್ಥದ ಉತ್ತರದಿಕ್ಕಿನ ಬೇರನ್ನು ಅಕ್ಕಿಕಚ್ಚಿನಲ್ಲಿ ಕುಡಿಸಿದರೆ (ಮೂಢಗರ್ಭವಾಗಿದ್ದರೂ) ಕಷ್ಟರಹಿತವಾಗಿ ಪ್ರಸವಾಗುವದು."

ಇಲ್ಲಿ ತಿಳಿಯತಕ್ಕ ವಿಷಯವೇನೆಂದರೆ:—ಮೇಲೆ ಬರೆದಿರುವವೆಲ್ಲವೂ "ಅತಃಪರಂಪ್ರವಕ್ಷ್ಯಾಮಿ ಸುಖಪ್ರಸವಸಿದ್ಧಯೇ || ಸ್ತ್ರೀಣಾಂಸುಖಾಯಕರ್ತವ್ಯಾ ಉಪಾಯಾಅತಿಗೋಪಿತಾಃ ||" ಅಂದರೆ ಸ್ತ್ರೀಯರ ಸುಖಪ್ರಸವಾರ್ಥವಾದ ಉಪಾಯಗಳು ಅತಿಗೌಪ್ಯವಾದವುಗಳೆಂದು ತಂತ್ರಗಳಲ್ಲಿ ಉಕ್ತವಾಗಿದೆ. ಇವನ್ನು ಶುಚಿಯಾಗಿ, ಭೂತದಯಾಪರನಾದ, ಪರೋಪಕಾರನಿರತನಾದ ವಿಪ್ರನು ಈ ಮೂಲಿಕೆಗಳನ್ನು ಪೂರ್ವದಿನದಲ್ಲಿ ನಿಮಂತ್ರಣವಿತ್ತು ಪೂಜೆಮಾಡಿ ಹಳದೀದಾರವನ್ನು ಕಟ್ಟಿಬಂದು ೨ನೇ ದಿನ ಏಕಾಂತವಾಗಿ ಹೋಗಿ ಪೂಜೆಮಾಡಿ ಮೌನದಿಂದ—ಪುಷ್ಯನಕ್ಷತ್ರಯುಕ್ತ ಭಾನುವಾರದ ದಿನವೇ ತಂದಿಟ್ಟುಕ್ಕೊಂಡು ಗೌಪ್ಯವಾಗಿ, ಆ ಮೂಲಿಕೆಯ ಹೆಸರನ್ನು ಸಹಾ ಯಾವಾಗಲೂ ಉಚ್ಚರಿಸದೆ ಈ ಕ್ರಿಯೆಗಳನ್ನು ಭಕ್ತಿಶ್ರದ್ಧೆಯಿಂದ ದೇವರಮೇಲೆ

ಭಾರವಿಟ್ಟು ಆಚರಿಸಬೇಕು. ಹಾಗಲ್ಲದೆ ಪುಸ್ತಕ ನೋಡಿಕೊಂಡು ಔಷಧದಂತೆ ಬಂದಾಗುತ್ತಲೂ ಮತ್ತೊಂದರಂತೆ ಮಾಡುತ್ತಾ ಬರುವ—ಶಾಸ್ತ್ರಗಳಲ್ಲಿ ನಂಬಿಕೆಯೂ, ಪಾರಮಾರ್ಥಿಕ ಬುದ್ಧಿಯೂ ಇಲ್ಲದ ನಾಸ್ತಿಕವಾದಿಗೆ ಇವು ಸಿದ್ಧಿಸುವದಿಲ್ಲವೆಂದು ಆ ತಂತ್ರಗಳಲ್ಲಿಯೇ ಉಕ್ತವಾಗಿದೆ. ಅದರಿಂದ ಇವುಗಳಲ್ಲಿ ಯಾವದನ್ನಾದರೂ ಒಂದನ್ನು ಅತಿಗೌಪ್ಯವಾಗಿಟ್ಟುಕೊಂಡು ಸಮಯಾಸಮಯದಲ್ಲಿ ಉಪಯೋಗಿಸುತ್ತಾ ಬಂದರೆ—ಕೀರ್ತಿಯೂ, ಪುಣ್ಯವೂ ಲಭಿಸಿ ಸರ್ವರಲ್ಲಿಯೂ ಪೂಜ್ಯತೆಯುಂಟಾಗುವದು. ವ್ಯಾಪಾರಕ್ಕಾಗಿಯಾಗಲೀ, ದ್ರವ್ಯಾಶೆಯಿಂದಲಾಗಲೀ ಮಾಡುವ ಈ ಸಿದ್ಧಕ್ರಿಯೆಗಳು ನಡಿಯುವದೇ ಇಲ್ಲವೆಂದು ಶಾಸ್ತ್ರವಿದೆ. ಶುದ್ಧನೆಂದರೆ ತ್ರಿಕರಣಶುದ್ಧನಾಗಿ, ಸತ್ಯವಂತನಾಗಿ, ಆಸ್ತಿಕನಾಗಿ, ಮಿತಭಾಷಿಯಾಗಿ, ಗುರುಭಕ್ತನಾದವನೇ ಈ ಸಿದ್ಧಿಕ್ರಿಯೆಯನ್ನು ಆಚರಿಸುವದರಲ್ಲಿ ಸಮರ್ಥನೆಂಬುದನ್ನರಿಯುವದು.

## ಮಕಲ್ಲಕರೋಗ.

ಸ್ತ್ರೀಯು ಶಿಶುವನ್ನು ಹಡೆದನಂತರ ಸರಿಯಾದ ಔಷಧ, ಉಪಚಾರಗಳಿಲ್ಲದೆ—ಬಣಕಲಾದ, ವಾತಪ್ರಕೋಪಕರಗಳಾದ ಪದಾರ್ಥಗಳನ್ನು ಸೇವಿಸುವದರಿಂದ ಪ್ರಕುಪಿತವಾದ ವಾಯುವು ನಾಭಿಯ ಕೆಳಗಡೆಯಲ್ಲಾಗಲೀ, ಎರಡುಪಕ್ಕದ ಎಲುಬುಗಳಲ್ಲಾಗಲೀ, (ವಸ್ತಿ) ಕಿಬ್ಬೊಟ್ಟೆಯಲ್ಲಾಗಲೀ, ಉದರದಲ್ಲಾಗಲೀ, ಪಕ್ವಾಶಯದಲ್ಲಾಗಲೀ ಶೂಲೆಯನ್ನುಂಟು ಮಾಡುವದು. ಇದರ ಲಕ್ಷಣವು—ಮೂತ್ರದತಡೆ, ವಾಯುವಿನ ಶಬ್ದವು ಹೊಟ್ಟೆಯಲ್ಲುಂಟಾಗುವಿಕೆ ಇತ್ಯಾದಿ—ಇದಕ್ಕೆ ವೈದ್ಯರು ಮಕಲ್ಲಕರೋಗವೆನ್ನುವರು.

ಇದರ ಚಿಕಿತ್ಸೆ:—

(೧) ಯವಕ್ಷಾರವನ್ನು ಬಿಸಿನೀರಿನಲ್ಲಿ ಅರದು ಕುಡಿಯುವದು.

(೨) ಹಿಪ್ಪಲಿ, ಮೋಡಿ, ಮೆಣಸು, ಶುಂಠಿ, ಚಿತ್ರಮೂಲ, ಚವ್ಯ, ಯಾಲಕ್ಕಿ, ಅಜಮೋದ, ಬಿಳೀಸಾಸಿವೆ, ಹುರಿದ ಇಂಗು, ಅಗಳುಶುಂಠಿ, ಇಂದ್ರಯವೆ, ಜೀರಿಗೆ, ಅತಿಬಜೆ, ಕಟುಕರೋಹಿಣಿ, ವಾಯುವಿಳಂಗ ಇದು ಪಿಪ್ಪಲ್ಯಾದಿಗಣವು. ಇದರಲ್ಲಿ ಶಿಕ್ಕಿದಷ್ಟು ಸಮತೂಕವಾಗಿ ಶೇರಿಸಿ, ಕುಟ್ಟಿ ಶೋಧಿಸಿದ ಚೂರ್ಣ ಅರ್ಧತೊಲೆಯಷ್ಟನ್ನು ಬಿಸಿನೀರಿನಲ್ಲಿ ಸೇವಿಸುತ್ತಾ ಬರುವದು.

(೩) ಅಥವಾ ಮೇಲಿನ ಪಿಪ್ಪಲ್ಯಾದಿಗಣೋಕ್ತ ವಸ್ತುಗಳ ಕಷಾಯವನ್ನು ಸ್ವಲ್ಪ ಸೈಂಧವಲವಣವನ್ನು ಬೆರಸಿ ಕುಡಿಯುವದು. ಈ ೨ನೇ ೩ನೇ ಪ್ರಯೋಗದಿಂದ ಸ್ತ್ರೀಯ ಕಫ, ವಾಯುಪ್ರಕೋಪದ ಎಲ್ಲಾ ರೋಗ

ಗಳೂ ನಿವೃತ್ತಿಯಾಗುವವು. ಗೆಡ್ಡೆ, ಶೂಲಿ, ಉದರರೋಗ, ಜ್ವರ ಇವೆಲ್ಲವೂ ನಾಶವಾಗುವವು. ಹಶಿವುಂಟಾಗುವದು.

(೪) ತ್ರಿಕಟು, ದಾಲ್ಚಿನ್ನಿ, ಲವಂಗಪತ್ರಿ, ನಾಗಕೇಸರ, ಯಾಲಕ್ಕಿ, ನಿಯಾ ಇವು ಸಮವಾಗಿ ಕುಟ್ಟಿ, ಚೂರ್ಣಿಸಿ ಶೋಧಿಸಿಕೊಂಡು ಅರ್ಧ ತೊಲೆಯಷ್ಟನ್ನು ಹಳೇಬೆಲ್ಲದಲ್ಲಿ ಸೇವಿಸುತ್ತಾ ಬರುವದು.

☞ ಪ್ರಸೂತಿ ಸ್ತ್ರೀಗೆ ಯುಕ್ತಿಯಿಂದ ರೋಗಾಸ್ಪದವಿಲ್ಲದಂತೆ ಆಹಾರವಿಹಾರಗಳನ್ನು ಮಾಡಿಸುವದು. ಇವಳು ಖೇದ, ಮೈಥುನ, ಕ್ರೋಧ, ಅಕ್ರಮವಾಗಿ ಕುಳ್ಳಿರುವಿಕೆ, ಮಲಗುವಿಕೆ ಇವನ್ನು ಮಾಡದಂತೆ ಜಾಗರೂಕತೆಯಿಂದ ನೋಡಿಕೊಳ್ಳುತ್ತಿರಬೇಕು. ಆ ಕಾಲದಲ್ಲಿ ದುರಾಚಾರಗಳನ್ನು ನಡಿಸುವದರಿಂದ ಸೂತಿಕಾರೋಗ ಪ್ರಾಪ್ತವಾಗುವದು.

**ಸೂತಿಕಾರೋಗ:**—ಬಾಣಂತಿಯು ಮಿಥ್ಯಾಹಾರವಿಹಾರ ಮಾಡುವದರಿಂದಲೂ, ಬಹು ಕ್ಲೇಶಪಡುವದರಿಂದಲೂ, ವಿಷಮಾಸನದಿಂದಲೂ, ಅಜೀರ್ಣವಿದ್ದರೂ ಮೇಲೆ ಮೇಲೆ ಭೋಜನಮಾಡುವದರಿಂದಲೂ ಈ ಸೂತಿಕಾರೋಗವು ಪ್ರಾಪ್ತವಾಗುತ್ತದೆ.

ಇದರ ಲಕ್ಷಣ—ಅಂಗಗಳಲ್ಲಿ ಪೀಡಾ, ಜ್ವರ, ಕೆಮ್ಮು, ಬಹು ದಾಹ, ಶರೀರ ಭಾರಿಯಾಗುವಿಕೆ, ಶರೀರದಲ್ಲಿ ಶೋಭೆ, ಹೊಟ್ಟೆಯಲ್ಲಿಶೂಲಿ, ಅತಿಸಾರ, ಹೊಟ್ಟೆಯಲ್ಲಿ ವಾಯುವಿನ ಶಬ್ದ, ಶರೀರದಲ್ಲಿ ಬಲವೇನೂ ಇಲ್ಲದಿರುವಿಕೆ, ತಂದ್ರಾ ಮತ್ತು ಅರುಚಿ ಮುಂತಾದ ವಾತ ಮತ್ತು ಕಫಪ್ರಕೋಪದ ಬಹುವಿಧ ರೋಗಗಳಿರುವಿಕೆ, ಬಲ, ಮಾಂಸ, ಅಗ್ನಿ ಇವು ಕಡಿಮೆಯಾಗುತ್ತಾ ಬರುವಿಕೆ ಇವೆಲ್ಲಾ ರೋಗಗಳಿಗೂ ಸೂತಿಕಾರೋಗವೆಂದು ಹೆಸರು.

ಇದರ ಚಿಕಿತ್ಸೆ:—

(೧) ಯಾವ ಔಷಧಗಳು ವಾತವ್ಯಾಧಿಹರವಾದದ್ದೋ ಅವೆಲ್ಲವೂ ಈ ರೋಗವನ್ನು ಹರಿಸುವವು.

(೨) ದಶಮೂಲದ ಕಷಾಯವು ಉತ್ತಮ ಚಿಕಿತ್ಸೆಯು, ಇದನ್ನು ಸ್ವಲ್ಪ ಜೇನುತುಪ್ಪ ಹಾಕಿ ಕುಡಿಯುತ್ತಾ ಬರುವದು.

(೩) ಅಮೃತಬಳ್ಳಿ, ಶುಂಠಿ, ನುಗ್ಗಿಬೇರು, ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಸೊಗದೆ, ಇವುಗಳ ಕಷಾಯಕ್ಕೆ ಜೇನುತುಪ್ಪ ಹಾಕಿ ಕುಡಿಯುತ್ತಾ ಬರುವದು.

(೪) ದೇವದಾರು, ಖುರಾಸಾನಿ ಬಜೆ, ಕೋಷ್ಟ, ಹಿಪ್ಪಲಿ, ಶುಂಠಿ, ಚಿರಾಯಿತಾ, ಜಾಫಲ, ತುಂಗಮುಸ್ತೆ, ಅಳಲೇಮರದ ಚಕ್ಕೆ, ಗಜಹಿಪ್ಪಲಿ, ಬಳ್ಳದುರಚಿ, ಆನೆನೆಗ್ಗಿಲು, ಆಡುಸೋಗೆ, ನೆಲಗುಳ್ಳ, ಅಮೃತದ ಬಳ್ಳಿ, ಕರೀ

ಜೀರಿಗೆ ಇವೆಲ್ಲಾ ಸಮತೂಕವಾಗಿ ಕುಟ್ಟಿ ಕಷಾಯಮಾಡಿ, ಸ್ವಲ್ಪ ಅರಳು ಮಾಡಿದ ಇಂಗನ್ನೂ, ಸೈಂಧಲವಣವನ್ನೂ ಹಾಕಿ ಈ ಕಷಾಯವನ್ನು ಕುಡಿಯುತ್ತಾ ಬಂದರೆ—ಸೂತಿಕಾರೋಗ, ಶೂಲಿ, ಕಾಸ, ಶ್ವಾಸ, ಜ್ವರ, ಮೂರ್ಛಾ, ತಲೆನೋತ, ತಂದ್ರಾ, ಅತಿಸಾರ, ವಮನ ಇವೆಲ್ಲವೂ ನಾಶವಾಗುವವು.

## ಪಂಚಜೀರಕಪಾಕ.

ಕರೀಜೀರಿಗೆ, ಬಿಳೀಜೀರಿಗೆ, ಸೋಪು, ಅಜವಾನ, ಅಜಮೋದಾ ಕೊತ್ತುಂಬರೀಬೀಜ, ಮೆಂತಿಯಾ, ಶುಂಠಿ, ಹಿಪ್ಪಲಿ, ಮೋಡಿ, ಚಿತ್ರಮೂಲ ಬಿಲ್ವಪತ್ರಿಯ ಹೀಚು, ಕೋಷ್ಟ, ಕಂಪಿಲ್ಲ ಇವೆಲ್ಲಾ ಔಷಧಗಳೂ ಅರ್ಧ-ಅರ್ಧ ತೊಲಾ ಶೇರಿಸಿ ಕುಟ್ಟಿ ವಸ್ತ್ರಗಾಳಿತಮಾಡಿ, ೧ ಶೇರು ಆಕಳ ತುಪ್ಪದಲ್ಲಿ ಹುರಿಯುವದು. ೪ ಶೇರು ಆಕಳಹಾಲನ್ನು ಸುರಿದು ಘಟ್ಟಿಯಾಗುವಂತೆ ಖೋವಾ ಮಾಡುವದು. ಅದರಲ್ಲಿ ಮೇಲಿನ ಚೂರ್ಣವನ್ನು ಸುರಿದ ಇದೆಲ್ಲವನ್ನೂ ಪಕ್ವಮಾಡಿ, ೫೦ ತೊಲಾ ಸಕ್ಕರೆಯ ಪಾಕದಲ್ಲಿ ಇದ್ದೀವನ್ನೂ ಹಾಕಿ ಪಾಕವಿಧಿಯಂತೆ ಚೆನ್ನಾಗಿ ಮೃದ್ವಗ್ನಿಯಿಂದ ಪಕ್ವಮಾಡಿಕೊಂಡು, ನಿತ್ಯವೂ ಅರ್ಧ-ಅರ್ಧ ತೊಲೆಯಂತೆ ೨ ಹೊತ್ತು ಬಾಣಂತಿಯು ಸೇವಿಸುತ್ತಾ ಪಥ್ಯದಿಂದಿರಲು—ಸೂತಿಕಾರೋಗ, ಜ್ವರ, ಕ್ಷಯ, ಕಾಸ ಶ್ವಾಸ, ಪಾಂಡು, ಕ್ಷೀಣತಾ, ವಾಯುವಿಕಾರಗಳು ಇವೆಲ್ಲಾ ನಾಶವಾಗುವವು

## ಸೌಭಾಗ್ಯಶುಂಠೀಪಾಕ.

ಹಶೀಶುಂಠಿ ೪೦ ತೊಲಾ ಸಣ್ಣಗೆ ತುಂಡು ಕತ್ತರಿಸಿ ೪೦ ತೊಲಾ ಗೋಘೃತದಲ್ಲಿ ಹುರಿಯುವದು. ಅನಂತರ ೪೦೦ ತೊಲಾ ಸಕ್ಕರೆಪಾಕಮಾಡಿ ಅದರಲ್ಲಿ—ಧನಿಯಾ ೧ ತೊಲಾ, ಸೋಪು ೫ ತೊಲಾ, ವಾಯುವಿಳಂಗ ೧ ತೊಲಾ, ಶುಂಠಿ ೧ ತೊಲಾ, ಮೆಣಸು ೧ ತೊಲಾ, ಹಿಪ್ಪಲಿ ೧ ತೊಲಾ, ನಾಗಕೇಸರಿ ೧ ತೊಲಾ, ತುಂಗಮುಸ್ತೆ ೧ ತೊಲಾ ಇವೆಲ್ಲವನ್ನೂ ಕುಟ್ಟಿ ಶೋಧಿಸಿ ಸ್ವಲ್ಪ ಲೋಹಭಸ್ಮ, ಅಭ್ರಕಭಸ್ಮ ಸಹಾ ಹಾಕಿ, ಸ್ವಲ್ಪ ಜೇನುತುಪ್ಪವನ್ನು ಪಾಕ ಆರಿದನಂತರ ಬೆರಸುವದು. ನಿತ್ಯವೂ (೨ ಹೊತ್ತು) ಹೊತ್ತಿಗೆ ಅರ್ಧತೊಲಾದಂತೆ ಸೇವಿಸುತ್ತಾ ಪಥ್ಯದಿಂದಿದ್ದರೆ—ತೃಷಾ, ಛರ್ದಿ, ಜ್ವರ, ಕಾಸಶ್ವಾಸ, ಪಾಂಡು, ಮಂದಾಗ್ನಿಹರವಾಗಿ ದೀಪನಪಾಚನವಾಗುವದು.

**ಸ್ತನರೋಗ:**—ಸರ್ವ ಶರೀರದಲ್ಲಿ ವ್ಯಾಪಿಸುತ್ತಿರುವ ವಾಯು, ಪಿತ್ತ ಕಫದೋಷಗಳು ದುಷ್ಟಗಳಾಗಿ ಸ್ತ್ರೀಯ ಸ್ತನದಲ್ಲಿ ಪ್ರಾಪ್ತವಾಗುವದರಿಂದ ಆ ಸ್ತನದಲ್ಲಿ ರಕ್ತದೂಷಿತವಾಗಿ ರಕ್ತದ ಗಡ್ಡೆ ಕಟ್ಟುವಿಕೆ ಮುಂತಾದ ಸ್ತನರೋಗ ಪ್ರಾಪ್ತವಾಗುವವು.

## ಚಿಕಿತ್ಸೆ.

(೧) ಸ್ತನದ ಮೇಲ್ಗಡೆ ಬಾವಿದ್ದರೆ ವಿದ್ರಧಿರೋಗಕ್ಕೆ ಹೇಳಿರುವ ಚಿಕಿತ್ಸೆಗಳು ಯುಕ್ತವಾದವು.

(೨) ಇಂದ್ರಾಯಣ (ಹಾವುಮೆಕ್ಕೆ) ಬೇರನ್ನು ನಿಂಬೇಹುಳಿಯಲ್ಲಿ ತೆಯಿದು ಲೇಪಿಸುವದು.

(೩) ಅರಿಶಿನ, ಮುಳ್ಳು ದತ್ತೂರಿಗಿಡದಬೇರು, ಇವನ್ನು ನುಣ್ಣಗರದು ಸ್ತನಗಳಿಗೆ ಲೇಪಿಸುವದು ಗುಣವಾಗುವದು.

(೪) ಗೊಡ್ಡುಹಾಗಲಗೆಡ್ಡೆಯನ್ನು ನೀರಿನಲ್ಲಿ ಅರದು ಸ್ತನಗಳಿಗೆ ಪಟ್ಟು ಹಾಕುವದು.

(೫) ಕಬ್ಬಿಣದ ಶುದ್ಧವಾದ ಒಂದು ತುಂಡನ್ನು ಬೆಂಕಿಯಲ್ಲಿ ಕೆಂಪಗೆ ಕಾಯಿಸಿ ಅದನ್ನು ಅದ್ದಿದ ನೀರನ್ನು ಕುಡಿಸುವದರಿಂದ ಸ್ತನರೋಗ ನಿವೃತ್ತಿಯಹುದು.

ಇಂತು ಗರ್ಭಿಣಿದಶೆಯೆಂಬ ಹದಿನೈದನೆ ಆಶಯವು.

---

## ಹದಿನಾರನೆಯ ಆಶಯವು.

### ಶಿಶುಪರಿಚರ್ಯಾ.

“ತತಃ ಪ್ರತ್ಯಾಗತಪ್ರಾಣಂ ಪ್ರಕೃತಿಭೂತಮಭಿಸಮೀಕ್ಷ್ಯ ಸ್ನಾನೋದಕಗ್ರಹಣಾಭ್ಯಾಮುಪಪಾದಯೇತ್ ॥ ಅಥಾಸ್ಯ ತಾಲೋಷ್ಠ ಕಂಠ ಜಿಹ್ವಾ ಪ್ರಮಾರ್ಜನಮಾರಭೇತ । ಅಂಗುಲ್ಯಾಸುಪರಿ ಲಿಖಿತ ನಖಯಾ ಸುಪ್ರಕ್ಷಾಲಿತೋಪಧಾನ ಕಾರ್ಪಾಸಪಿಚುಮತ್ಯಾ ಪ್ರಥಮಂ ಪ್ರಮಾರ್ಜಿತ ಸ್ಯಾಸ್ಯ ಚ ಶಿರಸ್ತಾಲು ಕಾರ್ಪಾಸ ಪಿಚುನಾ ಸ್ನೇಹಗರ್ಭೇಣ ಪ್ರತಿಚ್ಛಾದಯೇತ್ ॥ ತತೋಽಸ್ಯಾನಂತರಂ ಕಾರ್ಯಂ ಸೈಂಧವೋಪಹಿತೇನ ಸರ್ಪಿಷಾ ಪ್ರಚ್ಛರ್ದನಮ್ ॥”

“ಮಗುವು ಸುಧಾರಿಸಿಕೊಂಡ ನಂತರ ಬಾಲಕನು ಪ್ರಕೃತಿಸ್ಥ (ಸಮಸ್ಥಿತಿಯಲ್ಲಿರುವ) ನೆಂದು ತಿಳಿದುಕ್ಕೊಂಡು ಅವನಿಗೆ ಸ್ನಾನಮಾಡಿಸಬೇಕು. ಮಲ ಮತ್ತು ಮೂತ್ರಸ್ಥಾನಗಳನ್ನು ಶುದ್ಧೀಕರಿಸಬೇಕು. ಅನಂತರ ಯಾವಳಾದರೊಬ್ಬಳು ತನ್ನ ಉಗುರನ್ನು ತೆಗದುಹಾಕಿ ತರ್ಜನೀಬೆರಳಿಗೆ ಹತ್ತಿಯನ್ನು ಸುತ್ತಿಕ್ಕೊಂಡು ಬಾಲಕನ ಓಷ್ಠ ಕಂಠ ತಾಲು, ಜಿಹ್ವಾಗಳನ್ನು ಶುಚಿಯಾಗಿ ತೊಳಿಯಬೇಕು. ಹೀಗೆ ಶುದ್ಧಿಮಾಡಿದ ಮಗುವನ್ನು ಶಿರಸ್ಸಿಗೂ,

ತಾಲುವಿಗೂ ತೈಲಸಿಕ್ತವಾದ ಹತ್ತಿಯನ್ನು ಮುಚ್ಚತಕ್ಕದ್ದು. ತದನಂತರ ಸೈಂಧವಲವಣಯುಕ್ತವಾದ ತುಪ್ಪವನ್ನು ಬಾಯಿಗೆ ಸವರುವದರಿಂದ ವಾಂತಿಯನ್ನು ಮಾಡಿಸಬೇಕು. ''

**"ತಸ್ಯಚೇನ್ನಾಭಿಃ ಪಚ್ಯೇತ್ತಾಂ ಲೋಧ್ರ ಮಧುಕ ಪ್ರಿಯಂಗು ದಾರು ಹರಿದ್ರಾ ಕಲ್ಕ ಸಿದ್ಧೇನ ತೈಲೇನಾಭ್ಯಜ್ಯಾದೇಷಾ ಮೇವ ತೈಲೌಷಧಾನಾಂ ಚೂರ್ಣೇನಾವಚೂರ್ಣಯೇದೇಷ ನಾಡೀ ಕಲ್ಪನವಿಧಿ ರುಕ್ತಃ ಸಮ್ಯಕ್ ॥"**

"ಶಿಶುವಿನ ನಾಭಿಯು ಹುಣ್ಣಾದರೆ—ಲೋಧ್ರ, ಜೇಷ್ಟಮಧು, ಪ್ರಿಯಂಗು, ಮರದರಶಿನ, ಇದರ ಕಲ್ಕದೊಡನೆ ಪಾಕಮಾಡಿದ ತೈಲವನ್ನು ನಾಭಿಗೆ ಹಚ್ಚುವದು. ಈ ಚೂರ್ಣವನ್ನು ಸಹ ನಾಭಿಗೆ ಉದುರಿಸುವದು. ಹೀಗೆ ನಾಳಕರ್ತನ ವಿಧಿಯು ಹೇಳಲ್ಪಟ್ಟಿತು. ''

**"ಪ್ರಾಗೆಶೋ ಜಾತಕರ್ಮಕಾರ್ಯ ತತೋ ಮಧುಸರ್ಪಿಷೀ ಮಂತ್ರೋಪಮಂತ್ರಿತೇ ಯಥಾ ನ್ಯಾಯಂ ಪ್ರಾಶಿತಮಸ್ಮೈ ದದ್ಯಾತ್॥ ಸ್ತನಮತಊರ್ಧ್ವಮನೇನೈವ ವಿಧಿನಾ ದಕ್ಷಿಣಂಪಾತುಂ ಪುರಸ್ತಾತ್ಪ್ರಯಚ್ಛೇತ್ ॥ ಅಥಾತಃ ಶೀರ್ಷತಃ ಸ್ಥಾಪಯೇದುದಕುಂಭಂ ಮಂತ್ರೋಪಮಂತ್ರಿತಮ್ ॥"**

"ನಾಲಛೇದನಕ್ಕೆ ಪೂರ್ವವಾಗಿಯೇ ಜಾತಕರ್ಮವನ್ನು ಮಾಡುವದು. ವೇದೋಕ್ತ ವಿಧ್ಯುಕ್ತವಾಗಿ ಮಂತ್ರಗಳಿಂದ ಅಭಿಮಂತ್ರಿತವಾದ ತುಪ್ಪವನ್ನೂ ಜೇನುತುಪ್ಪ ಸ್ವಲ್ಪವನ್ನೂ ಕೂಡಿಸಿ ಆ ಶಿಶುವಿಗೆ ನೆಕ್ಕಿಸುವದು. ಅದರನಂತರ ವಿಧಿಪೂರ್ವಕವಾಗಿ ಮೊದಲು ಬಲದ ಸ್ತನವನ್ನು ಶಿಶುವಿಗೆ ಉಣ್ಣಿಸುವದು. ಅನಂತರ ಮಂತ್ರಾಭಿಮಂತ್ರಿತ ಜಲಪೂರ್ಣವಾದ ಕುಂಭವನ್ನು ಬಾಲಕನ ತಲೆಯ ಕಡೆಗೆ ಇಡತಕ್ಕದ್ದು. ''

**"ದಶಮ್ಯಾಂ ನಿಶ್ಯತೀತಾಯಾಂ ಸಪುತ್ರಾಸ್ತ್ರೀ ಸರ್ವಗಂಧೋಷಧೈರ್ಗೌರಸರ್ಷಪ ಲೋಧ್ರೈಶ್ಚ ಸ್ನಾತಾ ಲಘ್ವಹತವಸ್ತ್ರಂ ಪರಿಧಾಯ ಪವಿತ್ರೇಷ್ಟ ಲಘುವಿಚಿತ್ರ ಭೂಷಣವತೀ ಸಂಸ್ಪೃಶ್ಯ ಮಂಗಲಾನ್ಯುಚಿತಾ ಮರ್ಚಯಿತ್ವಾ ಚ ದೇವತಾಂ ಶಿಖಿನಃ ಶುಕ್ಲವಾಸಸೋಽವ್ಯಂಗಾಂಶ್ಚ ಬ್ರಾಹ್ಮಣಾನ್ ಸ್ವಸ್ತಿವಾಚಯಿತ್ವಾ ಕುಮಾರ ಮಹತೇನ ಶುಚಿವಾಸಸಾಚ್ಛಾದಯೇತ್ । ಪ್ರಾಕ್ಶಿರಸಮುದಕ್ ಶಿರಸಂ ವಾ ಸಂವೇಶ್ಯ ದೇವತಾಪೂರ್ವಂ ದ್ವಿಜಾತಿಭ್ಯಃ ಪ್ರಣಮತೀತ್ಯುಕ್ತ್ವಾ ಕುಮಾರಸ್ಯ ಪಿತಾ ದ್ವೇನಾಮನೀ ಕಾರಯೇತ್ ॥"**

" ಜನನವಾಗಿ ೧೦ ರಾತ್ರಿಗಳು ಕಳೆದನಂತರ ೧೧ ನೇ ದಿನದಲ್ಲಿ ಪುತ್ರ ಸಹಿತಳಾದ ಬಾಣಂತಿಯು ಸಂಪೂರ್ಣ ಸುಗಂಧಿತ ಔಷಧ, ಬಿಳೀಸಾಸವೆ, ಲೋಧ್ರ ಇವುಗಳ ಚೂರ್ಣವನ್ನು ಉಜ್ಜಿಕೊಂಡು ಸ್ನಾನಮಾಡಬೇಕು. ಅನಂತರ ಕೇವಲ ಲಘುವಾದ, ಅಪ್ರೌಢ ವಸ್ತ್ರವನ್ನು ಧರಿಸಿದವಳಾಗಿ ಪವಿತ್ರವೂ, ಪ್ರಿಯವೂ, ಲಘುವೂ ಆಗಿರುವ ಒಡವೆಗಳನ್ನು, ಧರಿಸಿದವಳಾಗಿ, ಮಂಗಲವಸ್ತುಗಳನ್ನು ಸ್ಪರ್ಶಮಾಡಿ, ಇಷ್ಟದೇವತಾ ಪೂಜೆಯನ್ನು ನೆರವೇರಿಸಿಕೊಂಡು, ಶಿಖಾಯುಕ್ತರಾಗಿಯೂ, ಶ್ವೇತವಸ್ತ್ರವನ್ನು ಧರಿಸಿದವರಾಗಿಯೂ, ಸುಂದರಾಕಾರ (ಅಂದರೆ ಅಂಗಹೀನರಲ್ಲದೆ ಇರುವವ) ರಾಗಿಯೂ ಒಪ್ಪುತ್ತಿರುವ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿ, ಶಿಶುವಿಗೆ ಅಖಂಡಿತವಾದ ಶ್ವೇತವಸ್ತ್ರವನ್ನು ತುಂಬಾ ಹೊದಯಿಸಿಕೊಂಡು ಪೂರ್ವಶಿರಸ್ಸಾಗಿ ಅಥವಾ ಉತ್ತರ ಸಿರಸ್ಸಾಗಿ ತೊಡೆಯಮೇಲೆ ಮಲಗಿಸಿಕೊಳ್ಳುವದು. ಮೊದಲು ದೇವತೆಗಳಿಗೂ, ಅನಂತರ ಬ್ರಾಹ್ಮಣರಿಗೂ "ನಮಸ್ಕರಿಸುತ್ತೇನೆ" ಎಂದು ಉಚ್ಚರಿಸಿ ಶಿಶುವಿನ ತಂದೆಯು ಆ ಶಿಶುವಿಗೆ (ತನ್ನ ಹೆಸರನ್ನೂ ಶೇರಿಸಿದ) ೨ ಹೆಸರನ್ನು ಇಡತಕ್ಕದ್ದು. " *

---

☞ * ಸದ್ಗ್ರಂಥಗಳಲ್ಲಿ ಗೋತ್ರ ನಾಮವೂ ರೂಢಿಯಾಗಿ ಬರುವದು. ಅತ್ರಿ ಗೋತ್ರೋತ್ಪನ್ನನು ಆತ್ರೇಯನು; ಹಾಗೆಯೇ ಗಾರ್ಗ್ಯ, ಹಾರೀತ, ಭಾರದ್ವಾಜ ಎಂಬದರಲ್ಲಿ ವ್ಯಕ್ತಿಗತವಾಗಿ ಈ ಹೆಸರು ಬರುವದಿಲ್ಲ, ಆ ಗೋತ್ರಜರೆಲ್ಲರಿಗೂ ಈ ಹೆಸರಿನಲ್ಲಿ ಅಧಿಕಾರವಿದೆ. ಇದಲ್ಲದೆ—ವರ್ಷನಾಮ, ಮಾಸನಾಮ, ನಕ್ಷತ್ರನಾಮ, ನಿಜನಾಮಗಳೆಂಬವು ಶಾಸ್ತ್ರಗಳಲ್ಲಿ ಉಕ್ತವಾಗಿವೆ. ಇವೆಲ್ಲವನ್ನೂ ಬಿಟ್ಟು ಶಾಮಣ್ಣ, ತಮ್ಮಯ್ಯ, ಸ್ವಾಮಿ, ಮೂರ್ತಿ, ರಾಜಾ, ಮುತ್ತು ಎಂದು ಮುಂತಾದ ಮುದ್ದಿನ ಹೆಸರುಗಳೂ ರೂಢಿಗೆ ಬಂದುಬಿಡುತ್ತವೆ. ಹೆಸರನ್ನು ಹೇಳಿದ ಕೂಡ್ಲೆ ಶ್ರೀಪರಮಾತ್ಮನ ನಾಮೋಚ್ಚಾರಣೆಯಾಗಿ ಪುಣ್ಯವಾದರೂ ಬರಲೆಂದು—ಹರಿ ವಾಸುದೇವ, ಕೃಷ್ಣ ಎಂದು ಮುಂತಾಗಿ ಇಟ್ಟುಕೊಂಡ ಹೆಸರುಗಳ ಜತೇಲಿ, ಹರಿಯಪ್ಪ, ವಾಸುದೇವಾಚಾರ್, ಕಿಟ್ಟಂಣ ಎಂಬ ಪ್ರತ್ಯಯಗಳು ನಮ್ಮ ದೇಶದಲ್ಲಿ ವಾಡಿಕೆಯಾಗಿ ಬರುತ್ತವೆ. ಇತರ ದೇಶೀಯರು ತಮ್ಮ ವಂಶದ ತಂದೆಯ ಹೆಸರನ್ನು ವಿಕಾರವಿಲ್ಲದಂತೆ ಶೇರಿಸಿಕೊಂಡು ಉಚ್ಚರಿಸುತ್ತಾ ಇರುವಲ್ಲಿ ನಮ್ಮ ದೇಶೀಯರು ಶಿಕ್ಕಿದವರಿಗೆಲ್ಲಾ ಅಪ್ಪ, ಅಯ್ಯ, ಅಣ್ಣ, ಎಂಬ ಬಾಂಧವ್ಯ ಶಬ್ದ ಸಂಯೋಜನೆಯನ್ನು ಪಯೋಗಿಸುತ್ತಿರುವದು ನ್ಯಾಯವಾದದ್ದಲ್ಲ. ಒಬ್ಬ ಅಲ್ಪಾದಲ್ಪನೂ ಸಹ—"ಅಯ್ಯಾ, ಅಮ್ಮ, ಅಪ್ಪ" ಎಂದು ಸಂಬೋಧಿಸುತ್ತಾ ಕರಿಯುವಿಕೆಯು "ಕೇವಲ ತುಚ್ಛ, ಹಾಸ್ಯಾಸ್ಪದ, ಅಗೌರವ" ವೆಂದು ತೋರುತ್ತದೆ. ಇದಕ್ಕಾಗಿ ಅಪ್ಪ, ಅಣ್ಣ, ಅಯ್ಯ, ಎನ್ನುವದನ್ನು ಬಿಟ್ಟು, ಶುದ್ಧವಾದ ಹೆಸರನ್ನೂ, ತಂದೆಯ ಹೆಸರನ್ನೂ ಕೂಡಿಸಿ ಹೇಳುವದು ಗೌರವಾರ್ಹವಾದದ್ದೆಂಬದನ್ನು ಸೂಚಿಸುತ್ತೇವೆ. ಈಗಿನ ಇಂಗ್ಲಿಷ್ ಕಲಿತ ವಿದ್ಯಾರ್ಥಿಗಳು ತಮ್ಮ ತಂದೆಯ ಹೆಸರಿನ ಸಂಕೇತಾಕ್ಷರವನ್ನು ತಮ್ಮ ಹೆಸರಿಗೆ ಶೇರಿಸಿಕೊಳ್ಳುತ್ತಾರೆ. ಅದಕ್ಕಿಂತಲೂ ಆ ಹೆಸರನ್ನು ತಮ್ಮ ಹೆಸರಿನಜತೇಲಿ

ದೀರ್ಘಾಯುವಿನ ಪರೀಕ್ಷೆ:—ಕೃತೇ ಚ ನಾಮಕರ್ಮಣಿ ಕು
ಮಾರಂ ಪರೀಕ್ಷಿತುಮುಪಕ್ರಮೇದಾಯುಷಃ ಪ್ರಮಾಣ ಜ್ಞಾ
ನ ಹೇತೋಃ || ತತ್ರೇಮಾನಿ ಆಯುಷ್ಮತಾಂ ಕುಮಾರಾಣಾಂ
ಲಕ್ಷಣಾನಿ ಭವಂತಿ || ತದ್ಯಥಾ—ಏಕೈಕಜಾ ಮೃದವೋಽಲ್ಪಾಃ
ಸ್ನಿಗ್ಧಾಃ ಸುಬದ್ಧಮೂಲಾಃ ಕೃಷ್ಣಾಃ ಕೇಶಾಃ ಪ್ರಶಸ್ಯಂತೇ ||
ಸ್ಥಿರಾ ಬಹುಲಾ ತ್ವಕ್ಪ್ರಕೃತ್ಯಾಕೃತಿ ಸುಸಂಪನ್ನ ಮೀಷತ್ಪ್ರಮಾ
ಣಾತಿರಿಕ್ತಮನುರೂಪಮಾತಪತ್ರೋಪಮಂ ಶಿರಃ ಪ್ರಶಸ್ಯತೇ ||
ವ್ಯೂಢಂ ದೃಢಂ ಸಮಂ ಸುಶ್ಲಿಷ್ಟ ಶಂಖಸಂಧ್ಯೂರ್ಧ್ವ ವ್ಯಂಜನ
ಮುಪಚಿತಂ ಬಲಿನಮರ್ಧಚಂದ್ರಾಕೃತಿ ಲಲಾಟಂ || ಬಹುಲೌ
ವಿಪುಲಸಮಪೀಠೌ ಸಮೌನೀಚೌ ವೃದ್ಧೌ ಪೃಷ್ಠತೋಽವನತೌ
ಸುಶ್ಲಿಷ್ಟಕರ್ಣ ಪುಟಕೌ ಮಹಾಚ್ಛಿದ್ರೌ ಕರ್ಣೌ || ಈಷತ್ಪ್ರ
ಲಂಬಿನ್ಯಾವಸಂಗಗತೇ ಸಮೇ ಸಂಹತೇ ಮಹತ್ಯೌ ಭ್ರುವೌ || ಸ
ಮೇ ಸಮಾಹಿತ ದರ್ಶನೇ ವ್ಯಕ್ತಭಾಗ ವಿಭಾಗೇ ಬಲವತಿ ತೇಜ
ಸೋಪಪನ್ನೇ ಸ್ವಾಂಗೋಪಾಂಗೇ ಚಕ್ಷುಷೀ|| ಋಜ್ವೀ ಮಹೋ
ಚ್ಛ್ವಾಸಾ ವಂಶಸಂಪನ್ನೇಷದವನತಾಗ್ರಾ ನಾಸಿಕಾ || ಮಹದೃ
ಜು ಸುನಿವಿಷ್ಟ ದಂತಮಾಸ್ಯಮಾಯಾಮ ವಿಸ್ತಾರೋಪಪನ್ನಾ
ಶ್ಲಕ್ಷ್ಣಾ ತನ್ವೀ ಪ್ರಕೃತಿಯುಕ್ತಾ ಪಾಟಲವರ್ಣಾ ಜಿಹ್ವಾ || ಶ್ಲ
ಕ್ಷ್ಣಂ ಯುಕ್ತೋಪಚಯಮುಷ್ಮೋಪಪನ್ನಂ ರಕ್ತಂ ತಾಲು ||
ಮಹಾನದೀನಃ ಸ್ನಿಗ್ಧೋಽನುನಾದೀಗಂಭೀರ ಸಮುತ್ಥೋಧೀರಃ
ಸ್ವರಃ || ನಾತಿಸ್ಥೂಲೌ ನಾತಿಕೃಶೌ ವಿಸ್ತಾರೋಪಪನ್ನಾ ವಾಸ್ಯ
ಪ್ರಚ್ಛಾದನೌ ರಕ್ತಾವೋಷ್ಠೌ || ಮಹತ್ಯೌ ಹನೂವೃತ್ತಾ ನಾತಿ
ಮಹತೀ ಗ್ರೀವಾ | ವ್ಯೂಢಮುಪಚಿತಮುರೋ ದೃಢಂ ಜತ್ರು
ಪೃಷ್ಠವಂಶಶ್ಚ || ವಿಕೃಷ್ಟಾಂತರೌ ಸ್ತನೌ || ಅಂಸಪಾತಿನೀ ಸ್ಥಿರೇ
ಪಾರ್ಶ್ವೇ || ವೃತ್ತಪರಿಪೂರ್ಣಾಯತೌ ಬಾಹೂಸಕ್ಥಿನೀ ಅಂಗುಲ
ಯಶ್ಚ || ಮಹದುಪಚಿತಂ ಪಾಣಿಪಾದವತ್ || ಸ್ಥಿರಾ ವೃತ್ತಾಃ
ಸ್ನಿಗ್ಧ ತಾಮ್ರಾಂಗುಲಾಃ || ಕೂರ್ಮಾಕಾರಾಃ ಕರಜಾಃ|| ಪ್ರದಕ್ಷಿ
ಣಾವರ್ತಾ ಸೋತ್ಸಂಗಾ ಚ ನಾಭೀ || ನಾಭ್ಯುರಸ್ತ್ರಿಭಾಗಹೀನಾ
ಸಮಾ ಸಮುಪಚಿತಮಾಂಸಾ ಕಟೀ || ವೃತ್ತಾ ಸ್ಥಿರೋಪ
ಚಿತ ಮಾಂಸೌ ನಾತ್ಯುನ್ನತೌ ನಾತ್ಯವನತೌ ಸ್ಫಿಚಾವನುಪೂ

---

ರ್ವ್ಣ ರೂಪದಿಂದ—ಅಪ್ಪ, ಅಯ್ಯ, ಅಂಣ ಎಂಬ ಬಾಲವಿಲ್ಲದೆ ಉಚ್ಚರಿಸು
ವದು ಸಾಧುವಾದದ್ದೆಂಬದನ್ನು ಸರ್ವರೂ ಅನುಸರಿಸುವದು ಗೌರವಾರ್ಹವಾದದ್ದು.

ರ್ವವೃತ್ತೋ ಉಪಚಯಯುಕ್ತಾ ಪ್ರೂರೂ|| ನಾತ್ಯುಪಚಿತೇ ನಾತ್ಯಪಚಿತೇ ಏಣೀಪದೇ ಪ್ರಗೂಢ ಶಿರಾಸ್ಥಿ ಸಂಧೀಜಂಘೇ || ನಾತ್ಯುಪಚಿತೌ ನಾತ್ಯಪಚಿತೌ ಗುಲ್ಫೌ || ಪೂರ್ವೋಪದಿಷ್ಟ ಗುಣೌ ಪಾದೌ ಕೂರ್ಮಾಕಾರೌ || ಪ್ರಕೃತಿಯುಕ್ತಾನಿ ವಾತಮೂತ್ರಪುರೀಷ ಗುಹ್ಯಾನಿ||ತಥಾಸ್ವಪ್ನ ಜಾಗರಣಯಾ ಸಸ್ಮಿತ ರುದಿತ ಸ್ತನ ಗ್ರಹಣಾನಿ|| ಯಚ್ಚ ಕಿಂಚಿದನ್ಯದಪಿ ಅನುಕ್ತಮಸ್ತಿ ತದಪಿ ಸರ್ವ ಪ್ರಕೃತಿ ಸಂಪನ್ನ ಮಿಷ್ಟಂ ವಿಪರೀತಂ ಪುನರನಿಷ್ಟಮಿತಿ ದೀರ್ಘಾಯು ಲಕ್ಷಣಾನಿ || ”

“ ನಾಮಕರ್ಮದ ನಂತರ ಶಿಶುವಿನ ಆಯುವನ್ನು ತಿಳಿಯುವದಕ್ಕಾಗಿ ಶುವಿನ ಹತ್ತಿರಕ್ಕೆ ಹೋಗಿ ಪರೀಕ್ಷಿಸುವದು. ದೀರ್ಘಾಯುವುಳ್ಳ ಶಿಶುವಿಗೆ ಇರಬೇಕಾದ ಲಕ್ಷಣಗಳು:—ಪ್ರತ್ಯೇಕ ಪ್ರತ್ಯೇಕವಾಗಿ ಹುಟ್ಟಿರುವ ಕೋಮಲವಾದ ಅಲ್ಪವಾದ, ಸ್ನಿಗ್ಧವಾದ ಕೃಷ್ಣವರ್ಣದ ಕೇಶವು ಶ್ರೇಷ್ಠವಾದವು. ರವಾದ, ಘನೀಭೂತ ತ್ವಚೆಯು ಶ್ರೇಷ್ಠವಾದದ್ದು, ಪ್ರಕೃತಿಯಿಂದ ಸುಂದರವಾದ, ಶರೀರ ಪ್ರಮಾಣಕ್ಕಿಂತಲೂ ಸ್ವಲ್ಪ ದೊಡ್ಡದಾದ ಛತ್ರಿಯಂತೆ ಕಲ್ಪಿಸಲ್ಪಟ್ಟಿರುವ ಶಿರಸ್ಸು ಶ್ರೇಷ್ಠವಾದದ್ದು, ಅರ್ಧಚಂದ್ರಾಕೃತಿಯಾದ, ದೃಢವಾದ, ಸಮವಾದ, ದೊಡ್ಡ ಸುಂದರ ಶಂಖದ ಅರ್ಧಭಾಗದಂತ ಶೋಭಾಯುಕ್ತವಾದ, ಮಾಂಸಯುಕ್ತವಾದ, ರೇಖಾಯುಕ್ತವಾದ ಲಲಾಟವು ಶ್ರೇಷ್ಠವಾದದ್ದು, ಹಿಂದಿನಭಾಗ ದೊಡ್ಡದಾಗಿದ್ದು, ಸಮವಾದ, ಕೆಳಗೆ ದೊಡ್ಡದಾಗಿ ಕೆಳಕ್ಕೆ ಬಗ್ಗಿರುವ ದೊಡ್ಡ ಛಿದ್ರಯುಕ್ತಗಳಾದ ಕಿವಿಗಳು ಶ್ರೇಷ್ಠಗಳು, ಸ್ವಲ್ಪ ಉದ್ದವಾದ ಪರಸ್ಪರ ಸೇರದಿರುವ, ಸಮವಾದ, ಘನವಾದ ಮತ್ತು ದೊಡ್ಡ ಹುಬ್ಬು ಶ್ರೇಷ್ಠಗಳು, ಸಮವಾಗಿಯೂ, ನೋಡುವದಕ್ಕೆ ಸಮರ್ಥಗಳಾಗಿ, ಸಂಪೂರ್ಣಭಾಗಗಳಲ್ಲಿ ಒಳ್ಳೇ ರೀತಿಯಿಂದ ವಿಭಕ್ತಗಳೂ, ಬಲವಾನ್ ತೇಜೋಯುಕ್ತ, ಸುಂದರಾಪಾಂಗಗಳುಳ್ಳ ನೇತ್ರಗಳು ಪ್ರಶಸ್ತಗಳು, ಋಜು (ನೆಟ್ಟಗೆ)ವೂ, ದೀರ್ಘ, ಉಚ್ಛ್ವಾಸವಂಶಸಂಪನ್ನ, ಅಗ್ರಭಾಗದಲ್ಲಿ ಸ್ವಲ್ಪಬಗ್ಗಿರುವ ನಾಸಿಕವು ಪ್ರಶಸ್ತವು, ಋಜು, ದೊಡ್ಡ, ಸುಂದರ ದಂತಸ್ಥಾನಯುಕ್ತ, ಮುಖಪ್ರಶಸ್ತವಾದದ್ದು, ಉದ್ದ, ಅಗಲವುಳ್ಳ, ಸ್ನಿಗ್ಧ, ತೆಳುವಾದ, ವಿಕಾರರಹಿತ, ರಕ್ತವರ್ಣವುಳ್ಳ ಜಿಹ್ವಾ ಪ್ರಶಸ್ತವು, ಸ್ನಿಗ್ಧವಾದ, ಬಹು ತಗ್ಗಾಗಿಲ್ಲದೆ, ಬಹು ಎತ್ತರವಿಲ್ಲದೆ ಸಮವಾಗಿರುವ, ರಕ್ತವರ್ಣವುಳ್ಳ ತಾಲು ಶ್ರೇಷ್ಠವಾದದ್ದು, ಗಂಭೀರವಾದ, ದೊಡ್ಡ, ದೀನತಾರಹಿತವಾದ, ಸ್ನಿಗ್ಧವಾದ, ಪ್ರತಿಧ್ವನಿಯುಕ್ತ ಧೀರಸ್ವರ ಪ್ರಶಸ್ತವಾದದ್ದು, ಬಹು ದಪ್ಪವಿಲ್ಲದೆ, ಬಹುಸಣ್ಣಗಿಲ್ಲದೆ, ವಿಸ್ತಾರಯುಕ್ತ, ರಕ್ತವರ್ಣ, ಮತ್ತು ಮುಖವನ್ನು ಚನ್ನಾಗಿ ಮುಚ್ಚು

ವಂತಹ ಓಷ್ಠ ಶ್ರೇಷ್ಠವು, ದೊಡ್ಡ ಕಟವಾಯಿ ಶ್ರೇಷ್ಠವು. ಬಹು ಸಣ್ಣ ದಲ್ಲದೆ, ಬಹು ದೊಡ್ಡದಲ್ಲದೆ, ಗುಂಡಾದ ಗ್ರೀವಾ, (ಕೊರಳು) ಪ್ರಶಸ್ತವು, ವಿಶಾಲವಾದ, ಉಪಚಿತ (ಮಾಂಸಪುಷ್ಟ) ವಾದ ವಕ್ಷಃಸ್ಥಲಪ್ರಶಸ್ತವು, ಮಾಂಸದಿಂದ ದೃಢವಾದ ಕಂಕುಳ ಸಂಧಿಯೂ, ಬೆನ್ನು ಮೂಳೆಗಳೂ ಪ್ರಶಸ್ತಗಳು, ಮಧ್ಯದಲ್ಲಿ ಬಹು ಅಂತರವುಳ್ಳ ಸ್ತನಗಳು, ಪ್ರಶಸ್ತಗಳೂ, ಸ್ಥಿರವಾದ ಹೆಗಲುಗಳೂ ಪಾರ್ಶ್ವಭಾಗಗಳೂ, ಪ್ರಶಸ್ತಗಳು; ವೃತ್ತ (ಗುಂಡು) ಪರಿಪೂರ್ಣ, ದೀರ್ಘವಾದ ಬಾಹುಗಳೂ, ತೊಡೆಗಳೂ, ಬೆರಳುಗಳೂ, ಪ್ರಶಸ್ತಗಳು; ದೊಡ್ಡ, ಉಪಚಿತ (ಮಾಂಸಪುಷ್ಟ) ಕಾಲುಗಳು ಶ್ರೇಷ್ಠಗಳು, ಸ್ಥಿ ವೃತ್ತ (ಗುಂಡು) ಸ್ನಿಗ್ಧ, ಕೆಂಪಾದ, ಉನ್ನತಗಳಾದ, ಕೂರ್ಮಾಕಾರಷ್ ಉಗುರುಗಳು ಶ್ರೇಷ್ಠಗಳು, ದಕ್ಷಿಣಾವರ್ತವಾದ, ಗಂಭೀರವಾದ ನಾಭಿಯು ಪ್ರಶಸ್ತವು, ಉರ (ಎದೆ) ಸ್ಸಿನ ಮಧ್ಯಭಾಗದ ಅಳತೆಯು ಮೂರರಲ್ಲಿ ಒಂದು ಭಾಗವಿರುವ ಸಮವಾದ, ಸಮುಚಿತ (ಮಾಂಸಯುಕ್ತ) ವಾದ ಸೊಂಟ ಪ್ರಶಸ್ತವು, ಗುಂಡಾದ, ಸ್ಥಿರವಾದ ಮಾಂಸಯುಕ್ತವಾದ ಬಹು ಎತ್ತರವೂ, ಬಹು ತಗ್ಗೂ ಆಗದೆ ಇರುವ (ಸ್ಫಿಕ್) ಅಂಡುಗಳಮೇಲೆ ಎತ್ತರವಿರುವ ಸ್ಥಳಗಳು ಶ್ರೇಷ್ಠಗಳು; ಕ್ರಮವಾಗಿ ಗುಂಡಾಗುತ್ತಾ, ಮಾಂಸಯುಕ್ತಗಳಾದ ತೊಡೆಗಳು ಶ್ರೇಷ್ಠಗಳು, ಬಹು ದಪ್ಪವಿಲ್ಲದೆ, ಬಹು ತೆಳುವಿಲ್ಲದೆ, ಜಿಂಕೆಯ ಕಾಲಿನಂತೆ ಇರುವ, ಪ್ರಗೂಢ ನರಗಳೂ, ಅಸ್ಥಿ ಸಂಧಿಗಳೂ ಉಳ್ಳ ಜಂಘೆಗಳು ಶ್ರೇಷ್ಠಗಳು, ಬಹು ದಪ್ಪವಿಲ್ಲದೆ, ಬಹು ಸಣ್ಣದಾಗಿಲ್ಲದೆ, ಇರುವ (ಗುಲ್ಫ) ಹರಡುಗಳಮೇಲಿನ ಭಾಗಗಳು ಪ್ರಶಸ್ತಗಳು, ಪೂರ್ವೋಕ್ತಗುಣ ವಿಶಿಷ್ಟಗಳಾಗಿ, ಕೂರ್ಮಾಕಾರಗಳಾದ ಹೆಜ್ಜೆಗಳು ಶ್ರೇಷ್ಠಗಳು, ಅದರಂತೆಯೇ—ವಾಯು, ಮೂತ್ರ, ಪುರೀಷ, ಗುಹ್ಯೇಂದ್ರಿಯಗಳು, ನಿದ್ರಿಸುವಿಕೆ, ಎಚ್ಚರವಾಗುವಿಕೆ, ನಗುವಿಕೆ, ಅಳುವಿಕೆ, ಸ್ತನ್ಯಪಾನ ಮಾಡುವಿಕೆ ಇವೆಲ್ಲವೂ ಪ್ರಕೃತಿಗೆ ಅನುಸಾರವಿರುವಲ್ಲಿ ಶ್ರೇಷ್ಠಗಳು; ಇವಲ್ಲದೆ ಇಲ್ಲಿ ವರ್ಣಿಸದಿರುವವೆಲ್ಲವೂ ಪ್ರಕೃತಿಗೆ ಅನುಸಾರವಾಗಿದ್ದಲ್ಲಿ ಪ್ರಶಸ್ತಗಳಾಗುವವು. ಈ ಮೇಲಿನ ಲಕ್ಷಣಗಳಿಗೆ ವಿಪರೀತ ಲಕ್ಷಣಗಳಾಗಿದ್ದಲ್ಲಿ ಆ ಶಿಶುವನ್ನು ಅಲ್ಪಾಯುವನ್ನಾಗಿ ತಿಳಿಯಬೇಕು ಹೀಗೆ ದೀರ್ಘಾಯುಲಕ್ಷಣವನ್ನರಿಯಬೇಕು."

**ಧಾತ್ರೀ ಪರೀಕ್ಷಾ:—"ಅತೋ ಧಾತ್ರೀ ಪರೀಕ್ಷಾಮುಪದೇಕ್ಷ್ಯಾಮಃ ॥"**

"ಇನ್ನುಮುಂದೆ ಧಾತ್ರೀ (ಉಪಮಾತಾ) ಪರೀಕ್ಷಾ ವಿಷಯವನ್ನು ನಿರೂಪಿಸುವೆವು."

**"ಅಥ ಬ್ರೂಯಾದ್ಧಾತ್ರೀ ಮಾನಯೇತಿ । ಸಮಾನವರ್ಣಾಂ, ಯೌವನಸ್ಥಾಂ, ನಿಭೃತಾಮನಾತುರಾಮವ್ಯಂಗಾಮವ್ಯಸನಾಂ**

ಅವಿರೂಪಾಮಜುಗುಪ್ಸಿತಾಂ, ದೇಶಜಾತೀಯಾಮಕ್ಷುದ್ರಾಂ, ಅಕ್ಷುದ್ರಕರ್ಮಿಣೀಂ ಕುಲೇಜಾತಾಂ ವತ್ಸಲಾಮರೋಗಜೀವದ್ವತ್ಸಾಂ ಪುಂವತ್ಸಾಂ ದೋಗ್ಧ್ರೀ ಮಪ್ರಮತ್ತಾಂ ಅಶಾಯಿನೀಮನುಚ್ಚಾರಶಾಯಿನೀ ಮನಂತಾವಶಾಯಿನೀಂ ಕುಶಲೋಪಚಾರಾಂ ಶುಚಿಮಶುಚಿದ್ವೇಷಿಣೀಂ ಸ್ತನ್ಯ ಸಂಪದುಪೇತಾಮಿತಿ ॥ ”

“ವೈದ್ಯನು ಧಾತ್ರೀ (ಧಾಯಿ *) ಯನ್ನು ಕರಿಸುವದಕ್ಕಾಗಿ ಆಜ್ಞಾಪಿಸಬೇಕು. ಆ ಧಾತ್ರಿಯು ಹೇಗಿರಬೇಕೆಂದರೆ:—ಸಮಾನವರ್ಣ (ಕುಲ) ದವಳೂ, ಯೌವನಾನ್ವಿತೆಯೂ, ನಮ್ರಳೂ, ರೋಗರಹಿತಳೂ, ಸಂಪೂರ್ಣ ಅಂಗಯುಕ್ತಳೂ, (ಅಂದರೆ ಅಂಗಹೀನಳಾಗಿರಬಾರದು.) ಕಾಮಕ್ರೋಧಾದಿ ದೋಷ ರಹಿತಳೂ, ಸುಂದರರೂಪಿನವಳೂ, ನಿಂದಾರಹಿತಳೂ, ಸ್ವದೇಶೋತ್ಪನ್ನಳೂ, ಕ್ಷುದ್ರತಾ ರಹಿತಳೂ, ಶ್ರೇಷ್ಠಕುಲ ಪ್ರಸೂತಳೂ, ಸ್ನೇಹಯುಕ್ತಳೂ, ಪುತ್ರವತಿಯೂ, ಜೀವತ್ಪುತ್ರವತಿಯೂ, ಮೊಲೆಯಲ್ಲಿ ತುಂಬಾ ಹಾಲುಳ್ಳವಳೂ, ಸಾವಧಾನಚಿತ್ತಳೂ, ಬಹು ನಿದ್ರಾರಹಿತಳೂ, ಚತುರತೆಯಿಂದ ಉಪಚಾರ ಮಾಡುವವಳೂ, ಪವಿತ್ರಳೂ, ಅಪವಿತ್ರತೆಯನ್ನು ನೋಡಿ ಸಹಿಸದಿರುವವಳೂ, ಶ್ರೇಷ್ಠವಾದ ಸ್ತನಗಳೂ ಮತ್ತು ಹಾಲೂ ಉಳ್ಳವಳೂ ಆಗಿರಬೇಕು. ”

* ಧಾತ್ರೀ (ಧಾಯಿ) ಎಂದರೆ ಎಳೇ ಮಕ್ಕಳಿಗೆ ಮೊಲೆಯುಣ್ಣಿಸತಕ್ಕ ಉಪಮಾತೆಯು. ನಮ್ಮ ಹಿರಿಯರಾದ ಆರ್ಯ ಆರ್ಯರುಗಳು ತಮ್ಮ ಸ್ತ್ರೀಯರೇ ಎಳೇ ಶಿಶುಗಳಿಗೆ ಸ್ತನ್ಯವನ್ನು ಕೊಡುವದು ಅವರ ಕ್ಷೇಮಕ್ಕೆ ಹಾನಿಕರವೆಂದರಿತು, ಮೊಲೆಯುಣಿಸುವದಕ್ಕೆ ಧಾತ್ರೀ (ಉಪಮಾತೆ) ಯನ್ನು ನಿಯಮಿಸಿಕೊಳ್ಳುತ್ತಿದ್ದದ್ದನ್ನೂ, ಇನ್ನೂ ಬಸುರಿಯ, ಬಾಣಂತಿಯ ಉಪಚಾರ ಮುಂತಾದ ವಿಷಯಗಳನ್ನೂ, ಸೂತಿಕಾಗೃಹ, ಕುಮಾರಾಗಾರ ಮುಂತಾದ್ದರ ನಿರ್ಮಾಣ ಮೊದಲಾದ ಪೂರ್ವ ಕಾಲೀನರ ಅತ್ಯುಚ್ಚ ನಾಗರಿಕತೆಯ ಸ್ಥಿತಿಗಳನ್ನು ಬರೀ ಮಾತುಗಳಿಂದಲೇ ನಾವು ಬರೆದಿದ್ದರೆ ಅದು ಹಾಸ್ಯಾಸ್ಪದವಾದೀತೆಂದರಿತು, ಆ ಕಾಲದ ಗ್ರಂಥದ ಈ ಪ್ರಕರಣಗಳನ್ನೇ ಉದ್ಧೃತಮಾಡಿ, ಭಾವಾಂತರ ಸಮೇತ ಬರಿಯುತ್ತಿದ್ದೇವೆ. ನಮ್ಮ ಆರ್ಯ ಪಿತೃಗಳಾದ ಆರ್ಯರು ಈಗ ಎಷ್ಟೋ ಸಾವಿರಾರು ವರ್ಷಗಳ ಕೆಳಗೆ ಯಾವ ವಿಧವಾದ ನಾಗರಿಕತೆಯ ಸ್ಥಿತಿಯಿಂದ ಮೆರಿಯುತ್ತಿದ್ದರೆಂಬದು ಈ ಗ್ರಂಥಗಳಿಂದ ವಿಶದವಾಗಿ ತಿಳಿದು ಬರುವದೆಂಬದಕ್ಕೆ ಸಂದೇಹವೇ ಇಲ್ಲ; ಅಂತವರಕ್ಷಿಶೌರ್ಯ, ಧೈರ್ಯ, ವಿದ್ಯಾ, ವಿವೇಕ, ಗಾಂಭೀರ್ಯ, ದೇಶಾಭಿಮಾನ ಮುಂತಾದ ಸದ್ಗುಣಗಳ ಪೆಟ್ಟಿಗೆಯಿದ್ದ ಖಜಾನೆಯೋ ಅವರ ಸಂತಾನಗಳಾದ ನಮಗೆ ದೃಷ್ಟಿಪಥಕ್ಕೆ ಬೀಳದಂತೆ ಯಾವ ತಕ್ಷಶಿಲಾದಿ ಹಾಳು ಪಟ್ಟಣಗಳ ನಿವೇಶನಗಳಲ್ಲಿ ಭೂಗರ್ಭವನ್ನಾಶ್ರೈಸಿ ಬಿಟ್ಟಿವೆಯೋ ಎಂಬಂತೆ ನಾವು ಹೀನ, ದೀನ, ದಾಸರತ್ವವನ್ನಾಶ್ರೈಸಬೇಕಾಗಿ ಬಂದಿರುವದನ್ನರಿತು ವ್ಯಸನಪಡಬೇಕೋ ? ಇಲ್ಲ; ನಮ್ಮ ಪೌರುಷಭಾವಕ್ಕಾಗಿ ಆನಂದಿಸಬೇಕೋ ಯಾವದೂ ನಮಗೇ ತೋಚದೆ ಪಾಠಕ ಮಹಾಶಯರ ಪಾಲಿಗೇ ಇದರ ವಿವೇಚನೆಯನ್ನು ಬಿಟ್ಟು ಬಿಟ್ಟು ಪ್ರಕೃತ ವಿಷಯವನ್ನನುಸರಿಸಲು ಹೊರಡುವೆವು !!!

"ತತ್ರೇಯಂ ಸ್ತನಸಂಪನ್ನಾತ್ಯುದ್ಧೌ, ನಾತಿಲಂಬೌ, ಅನತಿಕೃಶೌ, ಅನತಿಪೀನೌ, ಯುಕ್ತಪಿಪ್ಪಲಕೌ, ಸುಖಪ್ರಪಾನೌಚೇತಿ ಸ್ತನಸಂಪತ್ ॥"

"ಬಹು ಎತ್ತರವಾಗಿರದ, ಬಹು ಉದ್ದವಾಗಿರದ, ಬಹು ದಪ್ಪವಾಗಿರದ, ಬಹು ಸಣ್ಣನಾಗಿರದ, ಯುಕ್ತವಾದ ಕುಚಭಾಗವುಳ್ಳ, ಸುಖವಾಗಿ ಕುಡಿಯಲು ಯೋಗ್ಯವಾದ ಸ್ತನವು ಶ್ರೇಷ್ಠವಾದದ್ದು."

"ಸ್ತನ್ಯ ಸಂಪತ್ತು ಪ್ರಕೃತಿವರ್ಣ ಗಂಧರಸ ಸ್ಪರ್ಶನುದಪಾತ್ರೇಚ ಯುದುಹ್ಯಮಾನಂ ದುಗ್ಧಮುದಕಂ ವ್ಯೇತಿಪ್ರಕೃತಿ ಭೂತತ್ವಾತ್ತತ್ಪುಷ್ಟಿಕರ ಮಾರೋಗ್ಯಕರಂ ಚೇತಿ॥ ಸ್ತನ್ಯಸಂಪತ್ತತೋನ್ಯಥಾ ವ್ಯಾಪನ್ನಂ ಜ್ಞೇಯಮ್ ॥"

"ಯಾವಳ ಸ್ತನ್ಯವು ಸ್ವಾಭಾವಿಕವರ್ಣ, ಗಂಧ, ರಸ, ತಥಾ ಸ್ಪರ್ಶದಿಂದ ಯುಕ್ತವಾಗಿರುವದೋ ಹಾಗೆಯೇ ಜಲಪಾತ್ರದಲ್ಲಿ ಆ ಸ್ತನ್ಯವನ್ನು ಹಿಂಡುವದರಿಂದ ಆ ಜಲದಲ್ಲಿ ಸೇರಿಬಿಡುವದಾದರೆ ಆ ಸ್ತನ್ಯವು ಶ್ರೇಷ್ಠವಾದದ್ದೆಂದು ತಿಳಿಯಬೇಕು. ಹಾಗೆಯೇ ಆ ಮೊಲೆ ಹಾಲು ವಿಕಾರಯುಕ್ತವಾಗಿಲ್ಲದಿರುವದರಿಂದ ಪುಷ್ಟಿಯನ್ನೂ, ಆರೋಗ್ಯವನ್ನೂ ಉಂಟುಮಾಡುವದು. ಹಾಗಲ್ಲದೆ ಆಮೊಲೆ ಹಾಲು ವಿಪರೀತ ಗುಣಯುಕ್ತವಾದದ್ದಾದರೆ ಅದನ್ನು ದೋಷಿಯನ್ನಾಗಿ ಅರಿಯುವದು."

"ತಸ್ಯವಿಶೇಷಾಃ—ಶ್ಯಾವಾಕಾರುಣವರ್ಣಂ ಕಷಾಯಾನುರಸಂ ವಿಶದ ಮನತಿ ಲಕ್ಷ್ಯಗಂಧಂ, ರೂಕ್ಷಂ ದ್ರವಂ ಫೇನಿಲಂ ಲಘು ಅತೃಪ್ತಿಕರಂ ಕರ್ಷಣಂ ವಾತವಿಕಾರಾಣಾಂ ಕರ್ತೃ ವಾತೋಪಸೃಷ್ಟಂ ಕ್ಷೀರಮಭಿಜ್ಞೇಯಮ್ ॥"

"ಆ ದೋಷೀ ದುಗ್ಧದ ವಿಶೇಷತಾ ಹೇಗೆಂದರೆ:—ಕಪಿಶವರ್ಣ, ಅರುಣವರ್ಣ, ಸ್ವಲ್ಪ ಒಗರು, ಗಂಧರಹಿತ, ರೂಕ್ಷ, ಬಹು ತೆಳು, ಫೇನಯುಕ್ತ, ಲಘು, ಅತೃಪ್ತಿಕರವಾದ, ವಾತಜರೋಗಗಳನ್ನುತ್ಪತ್ತಿ ಮಾಡತಕ್ಕ ಸ್ತನ್ಯವು ವಾತಯುಕ್ತವಾದದ್ದೆಂದರಿಯಬೇಕು."

"ಕೃಷ್ಣ ನೀಲ ಪೀತ ತಾಮ್ರಾವಭಾಸಂ ತಿಕ್ತಾಮ್ಲ ಕಟುಕಾನುರಸಂ, ಕುಣಪ ರುಧಿರಗಂಧಿ, ಭೃಶೋಷ್ಣಂ, ಪಿತ್ತವಿಕಾರಾಣಾಂ ಕರ್ತೃ ಪಿತ್ತೋಪಸೃಷ್ಟಂ ಕ್ಷೀರಮಭಿಜ್ಞೇಯಮ್ ॥"

"ಕಪ್ಪು, ನೀಲ, ಪೀತ, ತಾಮ್ರವರ್ಣ, ಸ್ವಲ್ಪ ಕಹಿ, ಸ್ವಲ್ಪ ಹುಳಿ, ಸ್ವಲ್ಪ ಖಾರ, ಶವರಕ್ತದ ವಾಸನೆಯುಳ್ಳ, ಬಹು ಉಷ್ಣವಾದ, ಪಿತ್ತಜ ರೋಗಗಳನ್ನುತ್ಪತ್ತಿ ಮಾಡತಕ್ಕ ಸ್ತನ್ಯವು ಪಿತ್ತಯುಕ್ತವನ್ನಾಗಿ ತಿಳಿಯುವದು."

"ಅತ್ಯರ್ಥಶುಕ್ಲಂ ಮತಿಮಾಧುರ್ಯೋಪಪನ್ನಂ ಲವಣಾನುರಸಂ ಘೃತತೈಲವಸಾಮಜ್ಜಾಗಂಧಿಪಿಚ್ಛಿಲಂ ತಂತುಮದುದಕಪಾತ್ರೇಽವಸೀದತಿ ಶ್ಲೇಷ್ಮವಿಕಾರಾಣಾಂ ಕರ್ತೃ ಶ್ಲೇಷ್ಮೋಪಸೃಷ್ಟಂ ಕ್ಷೀರಮಭಿಜ್ಞೇಯಮ್ ||"

"ಬಹು ಬಿಳುಪು, ಬಹುಮಧುರ, ಸ್ವಲ್ಪ ಲವಣಾಕ್ತ, ತುಪ್ಪ ತೈಲ ಚರ್ಬೀ ಮಜ್ಜಾ ಗಂಧಯುಕ್ತವಾದ, ಪಿಚ್ಛಿಲವರ್ಣದ, ಪಾತ್ರದಲ್ಲಿ ಹಾಕಿದೊಡನೆಯೇ ಜಲದಲ್ಲಿ ಸೇರದಿರುವ, ತಂತು (ಸಣ್ಣ ಸಣ್ಣದಾರ) ಗಳುಳ್ಳ, ಕಫಜ ರೋಗಗಳನ್ನುಂಟುಮಾಡುವ ಸ್ತನ್ಯವು ಕಫಯುಕ್ತವಾದದ್ದೆಂದರಿಯುವದು"

"ತೇಷಾಂ ತು ತ್ರಯಾಣಾಮಪಿ ಕ್ಷೀರದೋಷಾಣಾಂ ಪ್ರಕೃತಿವಿಶೇಷಮಭಿಸಮೀಕ್ಷ್ಯ ಯಥಾಸ್ವಂ ಯಥಾದೋಷಂ ಚ ವಮನವಿರೇಚನಾಸ್ಥಾಪನಾನುವಾಸನಾನಿ ವಿಭಜ್ಯ ಕೃತಾನಿ ಪ್ರಶಮನಾನಿ ಭವಂತಿ ||"

"ಈ ಮೂರುವಿಧವಾದ ಮೊಲೆಹಾಲಿನ ಪ್ರಕೃತಿಯ ವಿಶೇಷತ್ವವನ್ನು ನೋಡಿ, ತಮ್ಮತಮ್ಮ ದೋಷಗಳಿಗನುಸಾರವಾಗಿ ವಿಚಾರಪೂರ್ವಕವಾಗಿ ವಮನ ವಿರೇಚನ ಆಸ್ಥಾಪನ ಅನುವಾಸನ ಕ್ರಿಯೆಗಳಿಂದ ದೋಷಶಾಂತಿಯುಂಟಾಗುವದು."

"ಪಾನಾಪಾನ ವಿಧಿಸ್ತು ದುಷ್ಟಕ್ಷೀರಾಯಾ ಯವಗೋಧೂಮಶಾಲಿಷಷ್ಟಿಕ, ಮುದ್ಗ ಹರೇಣುಕ, ಕುಲತ್ಥ, ಸುರಾಸೌವೀರ ತುಷೋದಕ ಮೈರೇಯ ಮೇದಕಲಶುನ ಕರಂಜ ಪ್ರಾಯಃಸ್ಯಾತ್||"

"ಯಾವ ಸ್ತ್ರೀಯ ಸ್ತನ್ಯವೂ ದೂಷಿತವಾಗಿದೆಯೋ ಅವಳಿಗೆ—ಯವ, ಗೋಧಿ, ಶಾಲಿಧಾನ್ಯ, ಷಷ್ಟಿಕವೆಂಬ ೬೦ ದಿನದ ಬತ್ತ, ನೆಲಗಡಲೆ, ಹೆಸರು, ಹುರಳಿ, ಸುರಾ (ಮದ್ಯ ವಿಶೇಷ) ಸಾವ್ವೀರ (ಮದ್ಯವಿಶೇಷ) ತುಷೋದಕ (ಮದ್ಯವಿಶೇಷ) ಮೈರೇಯ (ಮದ್ಯವಿಶೇಷ) ಮೇದಕ (ಮದ್ಯವಿಶೇಷ) ಬೆಳ್ಳುಳ್ಳಿ, ಕರಂಜ ಇವೇ ವಸ್ತುಗಳು ಪ್ರಾಯಃ ಆಹಾರ ಪಾನಗಳಲ್ಲಿ ವ್ಯವಹಾರ ಮಾಡುವದುತ್ತಮವು ಇದರಿಂದ ಸ್ತನ್ಯ ಶುದ್ಧಿಕರಣವಾಗುವದು."

"ಕ್ಷೀರದೋಷ ವಿಶೇಷಾಂ ಶ್ಚಾವೇಕ್ಷ್ಯಾವೇಕ್ಷ್ಯ ತತ್ತದ್ವಿಧಾನಂ ಕಾರ್ಯಂ ಸ್ಯಾತ್ ||"

"ಸ್ತನ್ಯದ ದೋಷ ವಿಶೇಷಗಳನ್ನು ನೋಡಿನೋಡಿ ಅದರ ಯತ್ನ ಮಾಡಬೇಕಾಗುವದು."

"ಪಾಠಾ ಮಹೌಷಧ—ಸುರದಾರು-ಮುಸ್ತ ಮೂರ್ವಾ ಗುಡೂಚೀ-ವತ್ಸಕಫಲ-ಕಿರಾತತಿಕ್ತ ಕಟುಕರೋಹಿಣೀ ಶಾರಿವಾ ಕಷಾ

ಯಾಣಾಂ ಚ ಪಾನಂಪ್ರಶಸ್ಯತೇ || ತಥಾನ್ಯೇಷಾಂ ತಿಕ್ತಕಷಾಯ ಕಟುಕಮಧುರಾಣಾಂ ಪ್ರಯೋಗಃ|| ಇತಿಕ್ಷೀರೆ ಶೋಧನಾನ್ಯುಕ್ತಾನಿ ಭವಂತಿ || ಕ್ಷೀರವಿಕಾರ ವಿಶೇಷಾನಭಿ ಸಮೀಕ್ಷ್ಯ ಮಾತ್ರಾಕಾಲಂ ಚೇತಿ ಕ್ಷೀರ ವಿಶೋಧನಾನಿ || "

" ಅಗಳುಶೊಂಠಿ, ಶುಂಠಿ, ದೇವದಾರು, ತುಂಗಮುಸ್ತೆ, ಮಯೂರಶಿಖೀ, ಅಮೃತಬಳ್ಳಿ, ಇಂದ್ರಯವ, ಚಿರಾಯಿತಾ, ಕಟುಕರೋಹಿಣಿ ಸೊಗದೆ ಇವುಗಳ ಕಷಾಯವನ್ನು ಕುಡಿಯುವದರಿಂದಲೂ, ಬೇರೆ ರಿಕ್ತ ಕಷಾಯ ರಸ, ಖಾರದ, ಮತ್ತು ಮಧುರ ರಸಗಳನ್ನು ಸೇವಿಸುವದರಿಂದಲೂ ಸ್ತನ್ಯ ಶುದ್ಧವಾಗುವದು. ದುಗ್ಧದ ವಿಕಾರಗಳ ವಿಶೇಷತೆಯನ್ನು ನೋಡಿ ಮಾತ್ರಾ (ಔಷಧ ಪ್ರಮಾಣ) ಮತ್ತು ಕಾಲಕ್ಕೆ ಅನುಸಾರವಾಗಿ ಈ ಔಷಧಗಳ ವ್ಯವಹಾರವನ್ನು ಮಾಡತಕ್ಕದ್ದು. ಈಪ್ರಕಾರ ಸ್ತನ್ಯಶುದ್ಧೀಕರಣ ಔಷಧಗಳನ್ನು ವಿವರಿಸಿದೆವು. "

" ಕ್ಷೀರಜನನಾನಿ ತು ಮದ್ಯಾನಿ ಸೀಧುವರ್ಜ್ಯಾನಿ | ಗ್ರಾಮ್ಯಾನೂಪೌದಕಾನಿ ಚ ಶಾಕಧಾನ್ಯಾನಿ| ದ್ರವಮಧುರಾಮ್ಲ ಭೂಯಿಷ್ಠಾಶ್ಚಾಹಾರಃ || ಕ್ಷೀರಿಣ್ಯಶ್ಚೌಷಧಯಃ|| ಕ್ಷೀರಪಾನಂ ಚಾನಾಯಾಸಶ್ಚೇತಿ || ವೀರಣ ಷಷ್ಠಿಶಾಲಿಕೇಕ್ಷುವಾಲಿಕಾ ದರ್ಭಕುಶ ಕಾಶ ಗುಂದ್ರೋತ್ಕಟಮೂಲ ಕಷಾಯಾಣಾಂ ಚ ಪಾನಮಿತಿ ಕ್ಷೀರ ಜನನಾನ್ಯುಕ್ತಾನಿ || "

" ಸೀಧುವನ್ನು ಹೊರ್ತು ಸಂಪೂರ್ಣ ಮದ್ಯಗಳೂ, ಗ್ರಾಮ್ಯ ಅನೂಪ ದೇಶ ತಥಾ ಜಲದಲ್ಲುತ್ಪನ್ನಗಳಾದ ಶಾಕ, ಅನ್ನಾದಿ ಧಾನ್ಯ, ತಥಾ ಅಧಿಕ ದ್ರವ ಅಧಿಕ ಮಧುರ ತಥಾ ಅಧಿಕ ಹುಳಿ ಭೋಜನ, ಹಾಲುಳ್ಳ ಔಷಧ, ದುಗ್ಧಪಾನ, ಪರಿಶ್ರಮ ಮಾಡದಿರುವಿಕೆ, ವೀರಣ (ಭತ್ತದಲ್ಲಿ ಭೇದ) ಷಷ್ಠಿಕ (ಭತ್ತದ ಭೇದ) ಶಾಲಿಧಾನ್ಯ ಕಬ್ಬು, ಕುಶ, ಕಾಶ, ದರ್ಭ, ತುಂಗಮುಸ್ತೆ, ಉತ್ಕಟ ಇವುಗಳ ಬೇರಿನ ಕಷಾಯವನ್ನು ಕುಡಿಯುವದು. ಇವೆಲ್ಲವೂ ಸ್ತನ್ಯವನ್ನು ತೃಪ್ತಿಮಾಡುವ ವಸ್ತುಗಳು. "

" ಧಾತ್ರೀ ತು ಯದಾ ಸ್ಯಾದು ಬಹುಲ ಶುದ್ಧ ದುಗ್ಧಾಸ್ಯಾತ್ತದಾ ಸ್ನಾತಾನುಲಿಪ್ತಾ ಶುಕ್ಲವಸ್ತ್ರಂ ಪರಿಧಾಯೈಂದ್ರೀಂ ಬ್ರಾಹ್ಮೀಂ ಶತವೀರ್ಯಾಂ ಸಹಸ್ರವೀರ್ಯಾಂ ಮೋಘಾಮಮವ್ಯಥಾಂ ಶಿವಾಮರಿಷ್ಟಾಂ ವಾಟ್ಯೆ ಪುಷ್ಪೀಂ ವಿಷ್ವಕ್ಸೇನಕಾಂತಾ ಮಿತಿಬಿಭ್ರತ್ಯೌಷಧೀಃ ಕುಮಾರಂ ಪ್ರಾಙ್ಮುಖಂ ಪ್ರಥಮಂ ದಕ್ಷಿಣಂ ಸ್ತನಂ ಪಾಯಯೇದಿತಿ ಧಾತ್ರೀಕರ್ಮ || "

" ಯಾವಾಗ ಧಾತ್ರಿಯು ಸ್ತನ್ಯವು ಶುದ್ಧವಾಗಿಯೂ ಮಧುರವಾಗಿಯೂ ಆಗುವದೋ ಆಗಲವಳಿಗೆ ಉವಟಣೆ ಪೂರ್ವಕ ಅಭ್ಯಂಗಸ್ನಾನಮಾಡಿಸಬೇಕು. ಅವಳು ಚಂದನಾದಿ ಸುಗಂಧ ಕಸ್ತೂರೀ ಪಚ್ಚಕರ್ಪೂರಾದಿ ಗಂಧದ ಬಿಲ್ಲೆಯನ್ನು ತೆಯಿದು ಲೇಪಿಸಿಕೊಂಡು, ಶುಭ್ರ ವಸ್ತ್ರಾನ್ವಿತಳಾಗಿ—ಇಂದ್ರಾಯಣಿ, ಬ್ರಾಹ್ಮೀ, ಶ್ವೇತದೂರ್ವಾ, ಶತಾವರೀ, ಅಮೋಘಾ, ಕಪಿಲಾ, ಅಳಲೇಕಾಯಿ, ನಂದಿಬಟ್ಲು, ಬಟ್ಟಗಡಲೆ, ವಾರಾಹೀಕಂದ ಈ ಔಷಧಿಗಳನ್ನು ಧಾರಣೆ ಮಾಡಬೇಕು. ಅನಂತರ ಶುಭ ಮುಹೂರ್ತದಲ್ಲಿ ಶಿಶುವನ್ನು ಪೂರ್ವಮುಖವಾಗಿ ಎತ್ತಿಕೊಂಡು, ತನ್ನ ಬಲಸ್ತನವನ್ನು ಮೊದಲು ಉಣ್ಣಿಸುವದು. ಹೀಗೆ ಧಾತ್ರೀಕರ್ಮವು ಹೇಳಲ್ಪಟ್ಟಿತು. "

## ಕುಮಾರಾಗಾರವಿಧಿಯು.

**" ಅತೋಽನಂತರಂ ಕುಮಾರಾಗಾರವಿಧಿಮನುವ್ಯಾಖ್ಯಾಸ್ಯಾಮಃ॥ ವಾಸ್ತುವಿದ್ಯಾ ಕುಶಲಃ ಪ್ರಶಸ್ತಾಂ ರಮ್ಯಮತಮಸ್ಕಂ ನಿವಾತಂ ಪ್ರವಾತೈಕದೇಶಂ ದೃಢಮಪಗತಶ್ವಾಪದಪಶುದಂಷ್ಟ್ರಿ ಮೂಷಿಕಾಪತಂಗ ಸುಸಂವಿಭಕ್ತ ಸಲಿಲೋದೂಖಲ ಮೂತ್ರವರ್ಚಃ ಸ್ಥಾನಸ್ನಾನಭೂಮಿ ಮಹಾನಸ ಮೃತುಸುಖಮ್॥ ಯಥರ್ತುಶಯನಾಸನಾಸ್ತರಣ ಸಂಪನ್ನಂ ಕುರ್ಯಾತ್॥ ತಥಾಸುವಿಹಿತ ರಕ್ಷಾವಿಧಾನ ಬಲಿಮಂಗಲ ಹೋಮಪ್ರಾಯಶ್ಚಿತ್ತಂ ಶುಚಿವೃದ್ಧ ವೈದ್ಯಾನುರಕ್ತ ಜನಸಂಪೂರ್ಣಮಿತಿ॥ ಕುಮಾರಾಗಾರವಿಧಿಃ॥"**

" ಇದರ ನಂತರ ಸೂತಿಕಾಗೃಹದಿಂದ ಹೊರಟ ಶಿಶುವು ಇರುವದಕ್ಕಾಗಿ " ಕುಮಾರಾಗಾರ " ವನ್ನು ಕಲ್ಪಿಸುವ ವಿಧಿಯನ್ನು ಉಪದೇಶಿಸುವೆವು. ವಾಸ್ತುವಿದ್ಯಾ (ಇಂಜನೀರಿಂಗ್) ದಲ್ಲಿ ನಿಪುಣ ಪುರುಷನು ಪ್ರಶಸ್ತ ರಮಣೀಯ ಅಂಧಕಾರ ರಹಿತಸ್ಥಾನದಲ್ಲಿ ವಾಯು ಸಂಚಾರವಿರುವ, ದೃಢವಾದ, ಹಿಂಸ್ರಪಶು, ಸೂಕರಾದಿಗಳು, ಮೂಷಕಾದಿಗಳೂ, ಪತಂಗಾದಿಗಳೂ ಇಲ್ಲದಿರುವಕಡೆ, ಜಲ, ಉಲೂಖಲ, ಮಲ, ಮೂತ್ರ, ಪಾಕ, ಸ್ನಾನಾದಿಗಳಿಗೆ ಬೇರೆ ಬೇರೆ ಸ್ಥಾನಗಳನ್ನು ವಿಭಜಿಸಿ, ಋತುಧರ್ಮವನ್ನನುಸರಿಸಿದ ಶಯ್ಯಾ, ಆಸನ, ಹಾಸು ಮಂಚಗಳಿಂದೊಪ್ಪುತ್ತಿರುವ ಮನೆಯನ್ನು ನಿರ್ಮಿಸಬೇಕು. ಆ ಗೃಹವನ್ನು—ರಕ್ಷಾವಿಧಿ, ಮಂಗಲ, ಬಲಿ, ಹೋಮ, ಪ್ರಾಯಶ್ಚಿತ್ತ ಮುಂತಾದ್ದರಿಂದ ಪವಿತ್ರೀಕರಿಸಿದ ನಂತರ—ಪವಿತ್ರರೂ, ವೃದ್ಧರೂ, ವೈದ್ಯರೂ, ಪ್ರಿಯಜನರೂ ಅಲ್ಲಿ ವಾಸಿಸುತ್ತಾ ಇರಬೇಕು. ಈಪ್ರಕಾರ ಬಾಲಕನಿಗಾಗಿ ಕುಮಾರಾಗಾರ ವಿಧಿಯು ಹೇಳಲ್ಪಟ್ಟಿತು. "

" ಶಯನಾಸ್ತರಣಪ್ರಾವರಣಾನಿ ಕುಮಾರಸ್ಯ ಮೃದು ಲಘು ಶುಚಿ ಸುಗಂಧೀನಿ ಸ್ಯುಃ || ಸ್ವೇದ ಮಲ ಜಂತುಮಂತಿ ಮೂತ್ರ ಪುರೀಷೋಪಸೃಷ್ಟಾನಿ ಚ ವರ್ಜ್ಯಾನಿ ಸ್ಯುಃ || "

" ಶಿಶುವಿಗಾಗಿ ನೆಲಕ್ಕೆ ಹಾಸುವ ಬಟ್ಟೆಗಳೂ ಶಯ್ಯಾ, ಹೊದಿಕೆ ಇವುಗಳು ಕೋಮಲವಾಗಿಯೂ, ಲಘುವಾಗಿಯೂ, ಶುಚಿಯಾಗಿಯೂ, ಸುಗಂಧಿತವಾಗಿಯೂ ಇರತಕ್ಕದ್ದು. ಬೆವರು, ಮಲ, ಕ್ರಿಮಿದೂಷಿತವಾಗಿ, ಮೂತ್ರ, ಮಲದಿಂದ ತುಂಬಿರತಕ್ಕ ವಸ್ತ್ರಾದಿಗಳು ಶಿಶುವಿಗೆ ಸರ್ವಥಾ ಆರೋಗ್ಯಕಾರಕಗಳಲ್ಲ !! "

" ಅಸತಿ ಸಂಭವೇಽನ್ಯೇಷಾಂ ತಾನ್ಯೇವಚ ಸುಪ್ರಕ್ಷಾಲಿತೋಪಧಾನಾನಿ ಸುಧೂಪಿತಾನಿ ಸುಶುದ್ಧ ಶುಷ್ಕಾಣ್ಯುಪಯೋಗಂ ಗಚ್ಛೇಯುಃ||"

" ಬೇರೆ ಶುದ್ಧವಾದ ವಸ್ತ್ರಗಳಿಲ್ಲದ ದರಿದ್ರರಿಗೆ ಆ ವಸ್ತ್ರಗಳಲ್ಲಿ ಸ್ವೇದಾದಿಗಳಿಂದಮಾತ್ರ ಯುಕ್ತವಾದ ವಸ್ತ್ರಗಳನ್ನು ಬಹು ಪ್ರಯತ್ನದಿಂದ ಮಡಿಮಾಡಿ ಒಗೆದು, ಸುಗಂಧಿತ ಧೂಪದ ಹೊಗೆಯಿಂದ ಅದರಲ್ಲಿರುವ ಕ್ರಿಮಿಕುಲನಾಶವಾಗುವಂತೆ ಮಾಡಿ, ಒಳ್ಳೇ ಬಿಸಿಲಲ್ಲಿ ಒಣಗಿಸಿ, ಅದನ್ನು ಉಪಯೋಗಿಸಬಹುದು. "

" ಧೂಪನಾನಿ ಪುನರ್ವಾಸಸಾಂ ಶಯನಾಸ್ತರಣ ಪ್ರಾವರಣಾನಾಂ ಚ ಯವ ಸರ್ಷಪಾತಸೀ-ಹಿಂಗು-ಗುಗ್ಗುಲ-ವಚಾ ಚೋರಕವಯಃಸ್ಥಾ ಗೋಲೋಮಿಶಾ-ಜಟಿಲಾ-ಪಲಂಕಷಾ ಶೋಕರೋಹಿಣೀಸರ್ಪ ನಿರ್ಮೋಕಾಣಿ ಘೃತ ಸಂಪ್ರಕ್ತಾನಿ ಸ್ಯುಃ || "

" ಯುವ, ಬಿಳೀಸಾಸವೆ, ಅಲಸೀ, ಹಿಂಗು, ಗುಗ್ಗುಲ, ವಚ, ಶಂಖ, ಕವಡೆ, ಅಳಲೇಕಾಯಿ, ದೂರ್ವಾ, ಜಟಾಮಾಂಸೀ, ಆನೆನೆಗ್ಗಿಲು, ಅಶೋಕ, ಕಟುಕರೋಹಿಣೀ, ಹಾವಿನಪ್ರೊರೆ ಇವೆಲ್ಲವನ್ನೂ ಕಲ್ಕಮಾಡಿ ತುಪ್ಪದಲ್ಲಿ ಬೆರಸಿ, ಶಿಶುವಿನ ಹಾಸಿಗೆ, ಹೊದ್ದಿಕೆ, ಕೆಳಗೆ ಹಾಸುವ ಬಟ್ಟೆಗಳು ಇವೆಲ್ಲವನ್ನೂ ಆ ಧೂಪದಿಂದ ಶುದ್ಧೀಕರಿಸುತ್ತಾ ಇರಬೇಕು. "

## ಶಿಶುವಿನ ಆಟಪಾಟಗಳು

"ಕ್ರೀಡನಕಾನಿ ಖಲ್ವಸ್ಯ ತು ವಿಚಿತ್ರಾಣಿ ಘೋಷವಂತ್ಯಭಿರಾಮಾಣಿ ಅಗುರೂಣ್ಯತೀಕ್ಷ್ಣಾಗ್ರಾಣಿ ಅನಾಸ್ಯ ಪ್ರವೇಶೀನಿ ಅಪ್ರಾಣಹರಾಣಿ ಅವಿತ್ರಾಸನಾನಿ ಸ್ಯುಃ ||

" ಶಿಶುವಿನ ಆಟದ ಸಾಮಾನುಗಳು—ವಿಚಿತ್ರಗಳಾಗಿಯೂ, ಶಬ್ದಯುಕ್ತಗಳಾಗಿಯೂ, ಮನೋಹರಗಳಾಗಿಯೂ, ಭಾರವಿಲ್ಲದವಳಾಗಿಯೂ, ತೀಕ್ಷ್ಣಾಗ್ರಭಾಗವಿಲ್ಲದವುಗಳಾಗಿಯೂ, ಶಿಶುವಿನ ಮುಖದೊಳಕ್ಕೆ ಹೋಗದಂತೆ

ಇರುವವುಗಳಾಗಿಯೂ, ಪ್ರಾಣನಾಶಕಕರವಾದ ಕೆಂಪು ಹಸರು ಮುಂತಾದ ವಿಷಾಕ್ತ ಬಣ್ಣಗಳನ್ನು ಹಚ್ಚದೇ ಇರುವವುಗಳಾಗಿಯೂ, ಶಿಶುವು ನೋಡಿದರೆ ಆನಂದಪ್ರದವಾಗಿರಬೇಕಲ್ಲದೆ ಭೀತಿಯನ್ನುಂಟುಮಾಡದಂತಹ ಸುಂದರಾಕಾರವುಳ್ಳವುಗಳಾಗಿಯೂ ಇರತಕ್ಕದ್ದು. ''

" ನಹಿ ಅಸ್ಯ ವಿತ್ರಾಸನಂ ಸಾಧುತಸ್ಮಾತ್ತಸ್ಮಿನ್ ರುದತ್ಯಭುಂಜಾನೋ ವಾ ಅನ್ಯತ್ರ ವಿಧೇಯತಾಮುಗಚ್ಛತಿ । ರಾಕ್ಷಸ ಪಿಶಾಚ ಪೂತನಾದ್ಯಾನಾಂ ನಾಮಾನ್ಯಾಹ್ವಯತಾ । ಕುಮಾರಸ್ಯ ವಿತ್ರಾಸನಾರ್ಥಂ ನಾಮ ಗ್ರಹಣಂ ನ ಕಾರ್ಯಂ ಸ್ಯಾತ್ ॥ "

" ಶಿಶುವನ್ನು ಯಾವವಿಧವಾಗಿಯೂ ಹೆದರಿಸುವದು ನ್ಯಾಯವಾದದ್ದಲ್ಲ; ಶಿಶುವು ಅಳುವಾಗಲೂ, ಆಟದಲ್ಲಿ ಮನಸ್ಸಿಟ್ಟು ಊಟಮಾಡದಿರುವಾಗಲೂ, ಇನ್ನೂ ಬೇರೆ ಅವಶ್ಯಕವಾದ ಕಾರ್ಯವನ್ನು ಮಾಡದಿರುವಾಗಲೂ ಅದನ್ನು ಹೆದರಿಸುತ್ತಾ—ರಾಕ್ಷಸ, ಪಿಶಾಚಿ, ಗುಮ್ಮ ಮುಂತಾದ ಯಾವದೋ ಒಂದು ಭಯಂಕರವಾದ ವಸ್ತುವಿದೆ, ಅದು ಹಿಡದುಕೊಂಡು ಹೋಗುವದು, ಎಂದು ಬೆದರಿಕೆಯ ಹೆಸರುಗಳಿಂದ ಅಂಜಿಸುವಿಕೆಯು ಬಹು ಕೆಟ್ಟದ್ದು. ''

## ಸ್ತನ್ಯವರ್ಧನಕ್ರಿಯಾ.

" ಕಂದಂ ವಿದಾರ್ಯಾಃ ಪಯಸಾ ಪ್ರಪೀತಮ್ ।
ಸ್ತನ್ಯಪ್ರವೃದ್ಧಿಂ ವಿದಧಾತಿ ಸದ್ಯಃ ॥
ಗೋಧೂಮಧೂಪಃ ಸಹ ಗೋಘೃತೇನ ।
ತದ್ವತ್ಪ್ರದಿಷ್ಟಃ ಸಿತಯಾ ಸಮೇತಃ ॥ "

" ನೆಲಗುಂಬಳಗೆಡ್ಡೆ ಚೂರ್ಣ ಅರ್ಧತೊಲೆಯನ್ನು ಗೋವಿನ ಹಾಲಿನೊಂದಿಗೆ ಧಾತ್ರಿಯು ಸೇವಿಸಲು ಕೂಡಲೆ ಸ್ತನ್ಯವೃದ್ಧಿಯಹುದು. ಹಾಗೆಯೇ ಗೋಧಿಯ ರವೆಯಲ್ಲಿ ಮಾಡಿದ ಪೂರಿಯನ್ನು ತುಪ್ಪ ಮತ್ತು ಸಕ್ಕರೆಯೊಂದಿಗೆ ಸೇವಿಸುತ್ತಾ ಬಂದರೂ ಸ್ತನ್ಯವೃದ್ಧಿಕರವು. ''

" ಮಾಗಧಿಕಾಯಾಃ ಕರ್ಷಮ್ ।
ಸಪ್ತಾಹಂ ಯಾ ಪಯಃಪಿಷ್ಟಮ್ ॥
ಸ ಸಿತಂ ಪ್ರಭಾತೇ ಪಿಬತಿ ।
ತಸ್ಯಾಸ್ರವತಃ ಪಯೋಧರೌ ಸತತಮ್ ॥ "

"ಒಂದು ತೊಲೆ ಸಂಣಹಿಪ್ಪಲಿಯ ಚೂರ್ಣವನ್ನು ಆಕಳಹಾಲಿನಲ್ಲರದು ಶೋಧಿಸಿ ಹಾಲು ಕೇರಿಸಿ ಸಕ್ಕರೆವೆರಸಿ ಕುಡಿಯುತ್ತಾ ೭ ದಿನ ಸೇವಿಸಿದರೆ ಅವಳ ಸ್ತನಗಳು ನಿರಂತರವೂ ಸ್ತನ್ಯದಿಂದ ತುಂಬಿ ಸೂಸಾಡುತ್ತಿರುವವು. ''

" ಪಿಪ್ಪಲ್ಯಾಶ್ಚ ರಜೋಭಿಃ ।
ಗೃಹಧೂಮರಜೋ ಯುಕ್ತೈಃ ಕೃತೋ ಯೂಷಃ॥
ಶ್ವೇತ ತಿಲ ತೈಲ ಸಹಿತೋ ।
ಭುಕ್ತಃ ಸ್ತ್ರೀಣಾಂ ಪಯೋ ಜನಕಃ ॥ "

" ಹಿಪ್ಪಲಿ, ಗೃಹಧೂಮ ಇವುಗಳೆರಡನ್ನೂ ಚೂರ್ಣಿಸಿ, ಯೂಷ ವನ್ನು ಮಾಡಿ ಅದರಲ್ಲಿ ಬಿಳೇ ಯಳ್ಳಿನ ತೈಲವನ್ನು ಹಾಕಿ ಸೇವಿಸುತ್ತಾಬಂ ದರೆ ಅವಳ ಸ್ತನದಲ್ಲಿ ಸ್ತನ್ಯವು ತುಂಬಿರುತ್ತದೆ. "

" ಅಜಾಜಿಕರ್ಷಂ ಪಯಸಾ ಪ್ರಪಿಷ್ಟಂ ।
ಯಾ ಸೇವತೇ ಸಪ್ತದಿನಾನಿ ನಾರೀ ॥
ತಸ್ಯಾಃ ಕುಚೌ ಸಂತತದುಗ್ಧಪೂರ್ಣೌ ।
ಕುಮಾರಪುಷ್ಟಿಂ ಕುರುತಃ ಸುಖೇನ ॥ "

" ಬಿಳೇಜೀರಿಗೆ ೧ ತೊಲೆಯನ್ನು ಆಕಳ ಹಾಲಿನಲ್ಲರದು ಹಾಲಿನಲ್ಲಿ ಕದರಿ ಸೇವಿಸುತ್ತಾ ೭ ದಿನ ಮಾಡಿದರೆ ಅವಳ ಸ್ತನಗಳು ದುಗ್ಧಪೂರ್ಣಗಳಾ ಗಿದ್ದುಕೊಂಡು, ಶಿಶುವನ್ನು ಪುಷ್ಟಿಯುಳ್ಳದ್ದನ್ನಾಗಿ ಕಾಪಾಡುವವು. "

" ಕ್ಷೀರಾನ್ನಾಭ್ಯಾಂ ಭವಂ ಕ್ಷೀರಂ ಸುಶ್ವೇತ ಸಿತಯಾ ನ್ವಿತಮ್॥
ಕ್ಷೀರಂ ಸಂಜನಯೇನ್ನಾರ್ಯಾಃ ಪ್ರಯುಕ್ತೇನ ನಿಷೇವಿತಮ್ ॥ "

" ಯಾವ ಸ್ತ್ರೀಯು ನಿರಂತರವಾಗಿ ಬಿಳೇಸಕ್ಕರೆ ಹಾಕಿ ಕ್ಷೀರಾನ್ನ ವನ್ನು ಸೇವಿಸುತ್ತಾ ಇರುವಳೋ ಅವಳ ಸ್ತನದಲ್ಲಿ ಹಾಲು ಸ್ರವಿಸುತ್ತಾ ಇರುವದು. "

" ಪ್ರಸ್ಥತಂಡುಲರಜಃ ಸಪಯಸ್ಕಮ್ ।
ಯಾ ಪಿಬತ್ಯನುದಿನಂ ಸ ಘೃತೇನ ॥
ದುಗ್ಧ ಭಕ್ತಮಶನಂ ವಿದಧಾನಾ ।
ಸಾಕ್ಷರತ್ಯವಿರತಂ ಬಹುದುಗ್ಧಮ್ ॥ "

" ೧ ಶೇರು ಅಕ್ಕಿಯ ಹಿಟ್ಟನ್ನು ತುಪ್ಪ ಮತ್ತು ಹಾಲಿನ ಜತೇಲಿ ಪಕ್ವ ಮಾಡಿ ಸೇವಿಸುತ್ತಾ—ಹಾಲನ್ನವನ್ನು ಪಥ್ಯವಾಗಿ ಭುಜಿಸುವದರಿಂದ, ಅವ ಳಿಗೆ ಬಹು ಸ್ತನ್ಯವುಂಟಾಗುವದು. "

" ವನಕಾರ್ಪಾಸಕೇಕ್ಷೂಣಾಂ ಮೂಲಂ ಸೌವೀರಕೇನ ವಾ ॥
ವಿದಾರೀ ಕಂದ ಸ್ವರಸಂ ಪಿಬೇದ್ವಾ ಸ್ತನ್ಯ ವೃದ್ಧಯೇ ॥ "

" ಕಾಡುಹತ್ತಿಯಬೇರು, ಕಬ್ಬಿನಬೇರು, ಇವನ್ನು ಗಂಜಿಯಲ್ಲಿ ಅರದು ಕುಡಿದವಳಿಗೆ ಅಥವಾ ವಿದಾರೀಕಂದ (ನೆಲಕುಂಬಳದಗೆಡ್ಡೆ)ಯ ಸ್ವರ ಸದಲ್ಲಿ ಸೇವಿಸು[illegible]ಳಿಗೆ ಸಹಾ ಬಹು ಹಾಲು ವೃದ್ಧಿಯಾಗುವದು.

ಇಲ್ಲಿ " ವಿದಾರೀಕಂದಸುರಯಾ " ಎಂದು ಸಹ ಪಾಠವಿದೆ. ಅದಕ್ಕಾಗಿ ನೆಲಗುಂಬಳಗೆಡ್ಡೆಯ ಚೂರ್ಣವನ್ನು ಮದಿರಾದಲ್ಲಿ ಸೇವಿಸುವದು. ಇದರಿಂದ ಹಾಲು ಹೆಚ್ಚುವದು. "

" ಶಾಲಿ ಯಷ್ಟಿಕ ದುಗ್ಧೇಕ್ಷು ಕುಶ ಕಾಶ ಬಲಾನ್ವಿತಾ || ಗುಂ
ದ್ರೇಕ್ಷು ಬಾಲಕಾ ಮೂಲೀ ದಶೈತೇ ಸ್ತನ್ಯವರ್ಧನಾಃ || "

" ಹಳೇಅಕ್ಕಿ, ಷಷ್ಟಿಕಾಅಕ್ಕಿ, ಹಾಲು, ಕಬ್ಬು, ಕುಶದರ್ಭೆಯಬೇರು, ಕಾಶವೆಂಬುದರಬೇರು, ಚಿಟ್ಟಾಮುಟ್ಟಿ, ಗುಂದ್ರವೆಂಬುದರ್ಭೆ, ಕೊಳವಳಿಕೇ ಬೀಜ, ಹಲವುಮಕ್ಕಳಗೆಡ್ಡೆ, ಇವು ಹತ್ತೂ ಸ್ತನ್ಯವೃದ್ಧಿಕರೌಷಧಗಳು ಇವನ್ನು ಹೇಗೆ ಸೇವಿಸಿದರೂ ಮೊಲೇಹಾಲು ಹೆಚ್ಚುವದು. "

ಇಂತು ಶಿಶುಪರಿಚರ್ಯಾನಾಮಕ ಹದಿನಾರನೇ ಆಶಯವು.

---

# ಹದಿನೇಳನೇ ಆಶಯವು.

## ಬಾಲಗ್ರಹ ವಿಷಯ.

ಬಾಲಗ್ರಹರಕ್ಷಾ:—ಸ್ಕಂದಗ್ರಹ, ಸ್ಕಂದಾಪಸ್ಮಾರ, ಶಕುನೀ, ರೇವತೀ, ಪೂತನಾ, ಗಂಧಪೂತನಾ, ಶೀತಪೂತನಾ, ಮುಖಮಂಡಿಕಾ, ನೈಗಮೇಯ ಎಂಬ ೯ ಬಾಲಗ್ರಹಗಳ ರಕ್ಷಣೆಗಾಗಿ ಕಾರ್ತಿಕೇಯನನ್ನು ಮಹಾದೇವನು ಸೃಷ್ಟಿಸಿದ್ದಾನೆ. ಸ್ವಾಮಿ ಕಾರ್ತಿಕೇಯನ ಸಖನಾದ ವಿಶಾಖನು ಅಗ್ನಿಯಿಂದ ಹುಟ್ಟಿರುವನಾದ್ದರಿಂದ ಅಗ್ನಿಸಮಾನವರ್ಣವಿದೆ. ಈ ಬಾಲಗ್ರಹಗಳಲ್ಲಿ ಕೆಲವಕ್ಕೆ ಮಹಾ ಸುಂದರ ಸ್ತ್ರೀಯರ ರೂಪವೂ, ಕೆಲವಕ್ಕೆ ಸುಂದರಪುರುಷರ ಶರೀರವೂ ಇವೆ. ಇವು ಒಂದಾನೊಂದು ಕಾಲದಲ್ಲಿ ಸ್ವಾಮಿ ಕಾರ್ತಿಕೇಯನನ್ನು ವಂದಿಸಿ—" ಮಹಾಸ್ವಾಮಿ! ನಾವು ಹಸಿವೆಯಿಂದ ಬಳಲುತ್ತೇವೆ; ನಮಗೆ ಗತಿ ಏನು ? " ಎಂದು ಕೇಳಿಕೊಳ್ಳಲು, ಈ ಮಾತನ್ನು ಕಾರ್ತಿಕೇಯನು ಮಹಾದೇವನನ್ನು ಕೇಳಿಕೊಂಡನು; ಅದಕ್ಕೆ ಪರಶಿವನು ಉತ್ತರವಾಗಿ—

"ಜಗತ್ತಿನಲ್ಲಿ ಪಶು, ಪಕ್ಷಿ ಮೊದಲಾದ ತಿರ್ಯಗ್ಯೋನಿಗಳೂ, ಮನುಷ್ಯರೂ, ದೇವತೆಗಳೂ ಇರುತ್ತಿದ್ದಾರೆ. ಇವು ಮೂರೂ ಪರಸ್ಪರ ಉಪಕಾರಿಗಳಾಗಿಯೇ ಇರುತ್ತಿವೆ. ಪರಂತು ದೇವತೆಗಳು—ಉಷ್ಣ, ವರ್ಷಾ, ಶೀತ, ವಾಯು ಮುಂತಾದವುಗಳನ್ನೂ ಯಥಾಕಾಲದಲ್ಲಿ ಪ್ರೇರೇಪಿಸಿ ಸರ್ವ ಜಂತುಜಾಲಗಳಿಗೂ ಸುಖವನ್ನುಂಟು ಮಾಡುತ್ತವೆ. ಮನುಷ್ಯರು—ಜಪ, ಹೋಮ, ಪೂಜಾ ಮುಂತಾದವುಗಳಿಂದ ಸಮ್ಯಕ್ಪ್ರಕಾರವಾಗಿ ದೇವತೆಗಳನ್ನು

ಅರ್ಚಿಸಿ ಪ್ರಸನ್ನೀಕರಿಸಿಕೊಳ್ಳುತ್ತಾ ಇದ್ದಾರೆ. ಆದರೆ ಇವರಲ್ಲಿ ಯಾರು ದೇವತಾ, ಬ್ರಾಹ್ಮಣ ಮುಂತಾದವರ ಪೂಜೆಯನ್ನು ಮಾಡದೆ ಪಾಷಂಡರಾಗಿ, ಭೂಭಾರಕರಾಗಿರುವರೋ ಅವರ ಬಾಲಕರನ್ನು ಪೀಡಿತರನ್ನಾಗಿಮಾಡಿ, ಅವುಗಳನ್ನೇ ಭಕ್ಷಿಸಿರಿ '' ಎಂದು ಕಟ್ಟುಮಾಡಿದ್ದಾನೆ.

ಯಾವ ಶಿಶುಗಳಿಗೆ ಈ ಬಾಲಗ್ರಹಗಳು ಸಂಸ್ಪರ್ಶ ಮಾಡುವವೋ ಆ ಬಾಲಕರು—ಕ್ಷಣಕ್ಷಣಕ್ಕೂ ಉದ್ವೇಗವನ್ನು ಪಡಿಯುತ್ತಾ, ಹೆದರುತ್ತಾ, ಹಾಲುಕೊಡುವ ತಾಯಿಯನ್ನು ಪರಚುತ್ತಾ, ಆಕಾಶದಕಡೆಗೆ ನೋಡುತ್ತಾ, ಹಲ್ಲುಕಡಿಯುತ್ತಾ, ಮೈಮುರಿಕಿಸಿಕೊಳ್ಳುತ್ತಾ, ಹುಬ್ಬನ್ನು ಮೇಲಕ್ಕೆ ಏರಿಸಿಕೊಳ್ಳುತ್ತಾ, ತುಟಿಗಳ ಕಡಕೊಳ್ಳುತ್ತಾ, ಬಾಯಿಯಲ್ಲಿ ನೊರೆಯನ್ನು ಕಕ್ಕುತ್ತಾ, ವಮನಮಾಡುತ್ತಾ, ಅತಿಸಾರಗ್ರಸ್ತರಾಗುತ್ತಾ ಇರುವವು. ಆಗ ಇವುಗಳ ಶರೀರ ಕ್ಷೀಣವಾಗುವದು, ರಾತ್ರಿಯಲ್ಲಿ ನಿದ್ರೆಬಾರದಿರುವಿಕೆ, ಶರೀರದಲ್ಲಿ ಬಾವು, ಕಂಠದಸ್ವರ ಘುರ್‌ಘುರ್ ಎನ್ನುವಿಕೆ, ಶರೀರದಲ್ಲಿ ದುರ್ಗಂಧವಿರುವಿಕೆ, ಶರೀರ ದುರ್ಬಲವಾಗುವಿಕೆ, ಗುದದಲ್ಲಿ ರಕ್ತವೂ ಬರುವಿಕೆ, ಶರೀರವು ಸಂಜ್ಞಾಹೀನವಾಗುವಿಕೆ, ಅಳ್ಳೆ ಬಡಕೊಳ್ಳುವಿಕೆ ಈ ಮುಂತಾದ ಲಕ್ಷಣಗಳು ಬಾಲಗ್ರಹದ ಚೇಷ್ಟೆಗಳು.

ಅಂಗ ಶಿಥಿಲವಾಗುವಿಕೆ, ಶರೀರದಲ್ಲಿ ರುಧಿರವಾಸನೆಯುಂಟಾಗುವಿಕೆ, ತಾಯಿಯ ಸ್ತನ್ಯವನ್ನು ಕುಡಿಯದೆ ಇರುವಿಕೆ, ಮುಖವು ವ್ಯತ್ಯಸ್ತವಾಗುವಿಕೆ, ಅರ್ಧ ಶರೀರ ಬಿದ್ದುಹೋಗುವಿಕೆ, ನೇತ್ರಗಳಲ್ಲಿ ನೀರು ಸುರಿಯುತ್ತಿರುವಿಕೆ, ಅಳುವಿಕೆ, ಕೈಮುಷ್ಟಿ ಕಟ್ಟಿರುವಿಕೆ, ಇವು ಸ್ಕಂದಗ್ರಹದ ಲಕ್ಷಣಗಳು.

ಶಿಶುವಿಗೆ ಸಂಜ್ಞೆಯೇ ಇಲ್ಲದಿರುವಿಕೆ, ಮತ್ತೆ ಸಂಜ್ಞೆಯುಂಟಾಗುವಿಕೆ, ಕಾಲುಕೈಗಳನ್ನು ಬಡಕೊಳ್ಳುವಿಕೆ, ಸಂಜ್ಞಾರಾಹಿತ್ಯದಿಂದಲೇ ಮಲಮೂತ್ರಗಳನ್ನೂ ತ್ಯಜಿಸುವಿಕೆ, ಬಹು ಆಕಳಿಸುವಿಕೆ, ಬಾಯಿಯಲ್ಲಿ ನೊರೆ ಸುರಿಯುವಿಕೆ, ಇವು ವಿಶಾಖಗ್ರಹದ ಲಕ್ಷಣಗಳು.

ಅಂಗ ಶಿಥಿಲವಾಗಿರುವಿಕೆ, ಭಯದಿಂದ ಚೀರಿಕೊಳ್ಳುವಿಕೆ, ಮೀನಿನ ನಾತದ ಮೈವಾಸನೆ, ಶರೀರದಲ್ಲಿ ವ್ರಣವುಂಟಾಗುವಿಕೆ, ದಾಹವಿರುವಿಕೆ ಇವು ಶಕುನೀಗ್ರಹದ ಲಕ್ಷಣಗಳು.

ಮುಖ ಕೆಂಪಾಗುವಿಕೆ, ಹಸರಾಗುವಿಕೆ, ಶರೀರ ಹಸಿರಾಗುವಿಕೆ, ಪೀಡೆಯುಂಟಾಗಿರುವಿಕೆ, ಕೈಕಾಲು ಕಪ್ಪಾಗುವಿಕೆ ಇವು ರೇವತೀಗ್ರಹದ ಲಕ್ಷಣಗಳು.

ಶರೀರ ಶಿಥಿಲವಾಗುವಿಕೆ, ರಾತ್ರಿ ಹಗಲೂ ನಿದ್ರಿಸದಿರುವಿಕೆ, ಮಲ ನೀರಾಗಿರುವಿಕೆ, ಶರೀರ ಕೆಟ್ಟವಾಸನೆಯಾಗಿರುವಿಕೆ, ವಾಂತಿಯುಂಟಾಗಿರುವಿಕೆ, ದಾಹವಿರುವಿಕೆ ಇವು ಪೂತನಾಗ್ರಹದ ಲಕ್ಷಣವು.

ಶಿಶು ಸ್ತನ್ಯವನ್ನೇ ಕುಡಿಯದಿರುವಿಕೆ, ಅತಿಸಾರ, ಕೆಮ್ಮು, ಬಿಕ್ಕಳಿಕೆ, ವಾಂತಿ, ಜ್ವರ ಇರುವಿಕೆ, ಶರೀರದ ವರ್ಣವೇ ಬದಲಾಯಿಸುವಿಕೆ, ಶರೀರದಲ್ಲಿ ರಕ್ತದವಾಸನೆಯುಂಟಾಗಿರುವಿಕೆ ಇವು ಗಂಧಪೂತನಾಗ್ರಹದ ಲಕ್ಷಣಗಳು.

ಶಿಶು ಯಾವಾಗಲೂ ಅಳುತ್ತಾ ಇರುವಿಕೆ, ನಡುಗುವಿಕೆ, ಕರಳು ಕೂಗುತ್ತಿರುವಿಕೆ, ಶರೀರ ಶಿಥಿಲವಾಗಿರುವಿಕೆ, ಅತಿಸಾರ ಬಹು ಇರುವಿಕೆ ಇವು ಶೀತಪೂತನಾಗ್ರಹದ ಲಕ್ಷಣಗಳು.

ಶಿಶುವಿನ ಬಾಯಲ್ಲಿ ನೊರೆಸುರಿಯುವಿಕೆ, ಬಹು ನಡುಗುವಿಕೆ, ಮೇಲಕ್ಕೇ ನೋಡುತ್ತಿರುವಿಕೆ, ಬಹಳವಾಗಿ ಅಳುವಿಕೆ, ಗೋಳಾಡುವಿಕೆ, ಶರೀರದಲ್ಲಿ ದುರ್ಗಂಧವಿರುವಿಕೆ, ಸಂಜ್ಞಾಹೀನತೆ ಇವೆಲ್ಲಾ ನೈಗಮೇಯಗ್ರಹದ ಲಕ್ಷಣಗಳು. ಇಂತಹ ಲಕ್ಷಣಗಳೇ ಡಾಕಿನೀಗ್ರಹದ್ದೂ ಇರುತ್ತವೆ.

## ಬಾಲಗ್ರಹ ನಿವೃತ್ತ್ಯುಪಾಯ.

(೧) ಅನಂತನಗೊಂಡೇ ಸಮೂಲ, ಕಸಕಸೆ ಇವುಗಳ ಕಷಾಯ ಮಾಡಿ ಅದರಲ್ಲಿ ಶಿಶುವನ್ನು ಸ್ನಾನಮಾಡಿಸುವದು.

(೨) ಅರಿಶಿನ, ರಕ್ತಚಂದನ, ಕೋಷ್ಟ ಇವುಗಳನ್ನು ಸಮವಾಗಿ ಹಾಕಿ ನೀರಿನಲ್ಲಿ ಅರದು ಶಿಶುವಿನಮೈಗೆ ಲೇಪಿಸಿದರೆ ಗ್ರಹದೋಷ ನಿವೃತ್ತಿಯಾಗುವದು.

(೩) ಸರ್ಪದಪೊರೆ, ಬೆಳ್ಳುಳ್ಳಿ, ಬಿಳೀಸಾಸವೆ, ಬೇವಿನಸೊಪ್ಪು, ಚಿಕ್ಕಿನಮಲ, ಆಡಿನ ಕೂದಲು, ಟಗರಿನ ಕೊಂಬು, ಇವನ್ನು ಕಲ್ಕಮಾಡಿ ಜೇನಿನಲ್ಲಿ ಬೆರಸಿ, ಅದರ ಹೊಗೆಯನ್ನು ಕೊಟ್ಟರೆ ಬಾಲಗ್ರಹ ನಿವೃತ್ತಿಯಾಗುವದು.

(೪) ವಾಯುನಾಶಕ ವೃಕ್ಷಗಳ ಎಲೆಗಳನ್ನು ಕಷಾಯಮಾಡಿ ಅದರಲ್ಲಿ ಆ ಬಾಲಗ್ರಹವಿರುವ ಶಿಶುವಿಗೆ ಸ್ನಾನಮಾಡಿಸುವದು. ಗ್ರಹದೋಷ ದೂರವಹುದು.

(೫) ಬಿಳೀಸಾಸವೆ, ಸರ್ಪದಪೊರೆ, ಬಜೆ ಇವನ್ನು ಕುಟ್ಟಿ ಆಡಿನ ಕೂದಲು ಸೇರಿಸಿ ಜೇನುತುಪ್ಪದಲ್ಲಿ ಕಲಿಸಿ ಹೊಗೆಕೊಡುವದು.

(೬) ಬಿಲ್ವಮರದಬೇರು, ಬಾಗೇಮರದಬೇರು, ಬಿಳೀಗರಿಕೆ, ಬಿಳೀಸಾಸವೆ, ಅಗಳುಶುಂಠಿ, ಗುಲಗಂಜಿ, ಕಟ್ಫಲ, ವಾಯುವಿಳಂಗ, ಆಲ, ಚಿಟ್ಟಾಮುಟ್ಟಿ, ಕರೀತುಲಸಿ, ಗಂಟುಭಾರಂಗಿ ಇವುಗಳ ಕಷಾಯದಲ್ಲಿ ಸ್ನಾನಮಾಡಿಸಿದರೆ ಗ್ರಹದೋಷನಿವೃತ್ತಿಯಾಗುತ್ತದೆ.

(೭) ಹಸು, ಆಡು, ಕುರಿ, ಯಮ್ಮೆ, ಕುದುರೆ, ಕತ್ತೆ ಇವುಗಳ ಮೂತ್ರವನ್ನು ಸೇರಿಸಿ ಯಳ್ಳೆಣ್ಣೆ ತಕ್ಕಷ್ಟು ಹಾಕಿ, ತೈಲಪಾಕವಿಧಿ

ಯಿಂದ ತೈಲವನ್ನು ತಯಾರ್‍ಮಾಡಿ ಆ ತೈಲವನ್ನು ಮರ್ದನಮಾಡುವದರಿಂದ ಬಾಲಗ್ರಹ ನಿವೃತ್ತಿಯುಹುದು.

(೮) ಗೋಮೂತ್ರ, ಆಡಿನಮೂತ್ರ, ತಲೆಕೂದಲು, ಆನೆಯ ಉಗುರು, ಯತ್ತಿನರೋಮ ಇವಕ್ಕೆ ಘೃತವನ್ನು ಶೇರಿಸಿ ಇದರ ಹೊಗೆಕೊಟ್ಟ ಬಾಲಗ್ರಹ ದೂರವಾಗುತ್ತದೆ.

(೯) ಆಡುಸೋಗೆ, ಮಣಿಶಿಲೆ, ಕಸ್ತೂರಿ, ನಸುಗುನ್ನಿಬೇರು ಇವುಗಳ ಸೇರಿಸಿ ಹೊಗೆಯನ್ನು ಕೊಟ್ಟರೆ ಬಾಲಕನ ಬಾಲಗ್ರಹ ನಿವೃತ್ತಿಯಾಗುವದು.

(೧೦) ಬೆತ್ತದತುಂಡು, ಮಾವಿನಬೇರು, ಬ್ಯಾಲದಬೇರು ಇವುಗಳ ಕಲ್ಕದ ಕಷಾಯದಲ್ಲಿ ಸ್ನಾನಮಾಡಿಸಿದರೆ ಶಕುನಿಗ್ರಹ ದೋಷಹರ.

(೧೧) ಇಪ್ಪೇಬೇರು, ಕಸಕಸೆ, ಕಮಲದಗಡ್ಡೆ, ಪದ್ಮಾಕ್ಷ, ಲೋಧ್ರ, ಪ್ರಿಯಂಗು, ಮಂಜಿಷ್ಟ, ಕಾವೀ ಇವುಗಳನ್ನು ಚೂರ್ಣಿಸಿ ಬಾಲಗ್ರಹವಿರುವ ಶಿಶುವಿಗೆ ಉರಟಣಿ (ಚೂರ್ಣವನ್ನು ಮೈಗೆ ತಿಕ್ಕಿ ಸ್ನಾನಮಾಡಿಸಿದರೆ) ಶಕುನೀಗ್ರಹದೋಷ ನಿವೃತ್ತಿಯಾಗುವದು.

(೧೨) ಶತಾವರೀಬೇರು, ಇಂದ್ರವಾರುಣೀಬೇರು, ನೆಲಗುಳ್ಳ, ಸಹದೇವಿ ಇವುಗಳನ್ನು ಪೂಜಿಸಿ ಬಾಲಕನ ಕತ್ತಿನಲ್ಲಿ ಕಟ್ಟದರೆ ಶಕುನೀಗ್ರಹ ನಿವೃತ್ತಿಯುಹುದು.

(೧೩) ಯಳ್ಳು, ಅಕ್ಕಿ, ಪುಷ್ಪಮಾಲಾ, ಹರಿತಾಳ, ಮಣಿಶಿಲೆ ಇವುಗಳನ್ನು ವಿಧಿಪೂರ್ವಕವಾಗಿ ಶಕುನಿಗ್ರಹಕ್ಕೆ ಬಲಿಹಾಕಿದರೆ ಆ ಗ್ರಹದೋಷ ನಿವೃತ್ತಿಯುಹುದು.

(೧೪) ಅಶ್ವಗಂಧಿ, ಶ್ಯಾವಂತಿಗೆಹೂವು, ನೆಲಕುಂಬಳಗಡ್ಡೆ ಇವುಗಳ ಕಷಾಯಮಾಡಿ ಆ ರೋಗವಿರುವ ಬಾಲಕನನ್ನು ಸ್ನಾನಮಾಡಿಸಿದರೆ ರೇವತೀ ಗ್ರಹ ಬಾಧಾ ನಿವೃತ್ತಿಯುಹುದು.

(೧೫) ಕೋಷ್ಟ, ರಾಳ, ಗುಗ್ಗುಲು, ಕಸಕಸೆ, ಅರಿಶಿನ ಇವುಗಳ ಹೊಗೆ ಕೊಟ್ಟರೆ ರೇವತೀಗ್ರಹ ಬಾಧಾ ಹರವಾಗುವದು.

(೧೬) ಸುಗಂಧಿತವಾದ ಬಿಳೀ ಹೂವುಗಳು, ಅಕ್ಕಿಯುಅರಳು, ಹಾಲು, ಬತ್ತಾ, ಸ್ವಲ್ಪ ಮೊಸರು, ಇವುಗಳನ್ನು ಬಾಲಕನಿಗೆ ಇಳೀತೆಗದು ಸ್ನಾನಮಾಡಿಸಿ, ಈ ಪದಾರ್ಥಗಳನ್ನು ಗೋಶಾಲೆಯಲ್ಲಿ ಬಲಿ ಹಾಕಿದರೆ ರೇವತೀಗ್ರಹ ದೋಷ ಹರವಹುದು.

(೧೭) ಬೇವಿನಚಕ್ಕೆ, ವಿಷ್ಣುಕ್ರಾಂತಾ, ಇವುಗಳ ಕಷಾಯದಲ್ಲಿ ಶಿಶುವನ್ನು ಸ್ನಾನಮಾಡಿಸಿದರೆ ಪೂತನಾಗ್ರಹ ದೋಷ ದೂರವಹುದು.

(೧೮) (ವಿದಾರೀಕಂದ) ಹೊಸದಾದ ನೆಲಗುಂಬಳಗಡ್ಡೆ, ಬಿಳೀದ್ರಾಕ್ಷೀಹಣ್ಣು, ಹರಿತಾಳ, ಮಣಿಶಿಲೆ, ಕೋಷ್ಟ, ರಾಲ ಇವುಗಳ ಕಷಾಯುಮಾಡಿಸಿ ಅದರಲ್ಲಿ ಅರ್ಧಭಾಗ ತುಪ್ಪ ಅಥವಾ ತಿಲತೈಲ ಹಾಕಿ ಪಕ್ವಮಾಡಿಸಿ, ಆ ಘೃತ ಅಥವಾ ತೈಲದ ಮರ್ದನೆಮಾಡಿದರೆ ಪೂತನಾಗ್ರಹ ನಿವೃತ್ತಿಯಾಗುವದು.

(೧೯) ಬೇವಿನಯಲೆ, ಬೈಪಡವಲ ಎಲೆ, ನೆಲಗುಳ್ಳದ ಎಲೆ, ಅಮರದಬಳ್ಳಿಯಲೆ, ಆಡುಸೋಗೇಯಲೆ ಇವುಗಳ ಕಷಾಯುಮಾಡಿ, ಅದರಲ್ಲಿ ಶಿಶುವಿಗೆ ಸ್ನಾನಮಾಡಿಸಿದರೆ ಗಂಧಪೂತನಾಗ್ರಹದೋಷ ನಿವೃತ್ತಿಯಾಗುವದು.

(೨೦) ಹಿಪ್ಪಲಿ, ಮೋಡಿ, ೨ ಬಗೆ ಗುಳ್ಳ, ಇವುಗಳ ಕಷಾಯದಲ್ಲಿ ಆಕಳತುಪ್ಪ ಹಾಕಿ ಘೃತಪಾಕ ವಿಧಿಯಂತೆ ಘೃತವನ್ನು ಕಾಶಿ ಅದನ್ನು ಮರ್ದನೆ ಮಾಡಿದರೆ ಗಂಧಪೂತನಾಗ್ರಹದೋಷ ನಾಶವಹುದು.

(೨೧) ಗೋಮೂತ್ರ, ಆಡಿನಮೂತ್ರ, ತುಂಗಮುಸ್ತೆ, ದೇವದಾರು, ಚಂದನ ಮುಂತಾದ ಸುಗಂಧವಸ್ತುಗಳ ತೈಲವನ್ನು ವಿಧಾನದಿಂದ ಮಾಡಿ ಶಿಶುವಿಗೆ ಮರ್ದನಮಾಡಿದರೆ ಶೀತಪೂತನಾಗ್ರಹದೋಷ ನಾಶವಹುದು.

(೨೨) ಕಟುಕರೋಹಿಣಿ, ಬೇವಿನಚಕ್ಕೆ, ಕಾಚು, ಪಲಾಶದಚಕ್ಕೆ, ಇವುಗಳ ಕಷಾಯದಲ್ಲಿ ಘೃತವನ್ನು ಹಾಕಿ ಪಾಕವಿಧಿಯಂತೆ ಪಕ್ವಮಾಡಿ ಅದನ್ನು ಮರ್ದಿಸಲು ಶೀತಪೂತನಾದೋಷ ನಿವಾರಣೆಯಾಗುವದು.

(೨೩) ಬೇವಿನಯೆಲೆಯು ಹೊಗೆಯನ್ನು ಕೊಟ್ಟರೆ ಶೀತಪೂತನಾದೋಷ ನಿವೃತ್ತಿಯಾಗುವದು.

(೨೪) ಗುಲಗಂಜಿಯ ಮಾಲೆಯನ್ನು ಧೂಪವಿಕ್ಕಿ ಬಾಲಕನ ಕೊರಳ್ಳಲ್ಲಿ ಹಾಕಿದರೆ ಶೀತಪೂತನಾದೋಷ ನಿವಾರಣೆಯಾಗುವದು.

(೨೫) ನದೀತಟದಲ್ಲಿ ಹೆಸರು ಅಕ್ಕಿ ಬಲಿಯನ್ನಿಟ್ಟರೆ ಶೀತಪೂತನಾದೋಷ ನಿವೃತ್ತಿಯಾಗುವದು.

(೨೬) ಬ್ಯಾಲ, ಬಿಲ್ವ, ಆಡುಸೋಗೆ, ಬಿಳೀಹರಳು, ಕೋಷ್ಟ ಇವುಗಳ ಕಷಾಯದಲ್ಲಿ ಸ್ನಾನಮಾಡಿಸಿದರೆ ಮುಖಮಂಡಿಕಾದೋಷ ನಿವೃತ್ತಿಯಾಗುವದು.

(೨೭) ಗರುಗದರಸದಲ್ಲಿ ತೈಲವನ್ನು ಅರ್ಧಮಟ್ಟಿಗೆ ಹಾಕಿ, ಘೃತಪಾಕವಿಧಿಯಿಂದ ಪಕ್ವಮಾಡಿ ಅದರಿಂದ ಶಿಶುವನ್ನು ಮರ್ದನಮಾಡಿದರೆ ಮುಖಮಂಡಿಕಾದೋಷ ನಿವೃತ್ತಿಯಾಗುವದು.

(೨೮) ರಾಲ, ಕೋಷ್ಟ ಇವುಗಳ ಕಷಾಯುಮಾಡಿ ಇದರಲ್ಲಿ ಘೃತವನ್ನು ಹಾಕಿ ಪಕ್ವಮಾಡಿ ಅದನ್ನು ಮರ್ದಿಸಿದರೆ ಮುಖಮಂಡಿಕಾದೋಷ ನಾಶವಾಗುವದು.

(೨೯) ಗೋಸ್ಥಾನದಲ್ಲಿ ಬಲಿಕೊಟ್ಟರೆ ಮುಖಮಂಡಿಕಾದೋಷ ನಿವೃತ್ತಿಯಾಗುವದು. ಅಲ್ಲಿಯೇ ಸ್ನಾನಮಾಡಿಸಿದರೆ ಮುಖಮಂಡಿಕಾದೋಷ ಹರವಾಗುವದು.

ಸ್ನಾನಕ್ಕೆ ಮಂತ್ರ.

" ಅಲಂಕೃತಾ ಕಾಮವತೀ ಸುಭಗಾ ಕಾಲರೂಪಿಣೀ ‖ ಗೋಷ್ಠ ಮಧ್ಯಾಲಯರತಾ ಪಾತು ತ್ವಾಂ ಮುಖಮಂಡಿಕಾ ‖ "

ಈ ಮಂತ್ರಪೂತವಾದ ನೀರಿನಿಂದ ಸ್ನಾನಮಾಡಿಸುವದು.

(೩೦) ಬಿಲ್ವಪತ್ರಬೇರಿನತೊಪ್ಪಲು, ಗಜ್ಜುಗದಬೇರು, ಇವುಗಳ ಕಷಾಯದಲ್ಲಿ ಸ್ನಾನಮಾಡಿಸುವದು ನೈಗಮೇಯ ಗ್ರಹಪೀಡಾ ನಿವೃತ್ತಿಯಾಗುವದು.

(೩೧) ಪ್ರಿಯಂಗು, ಆಡಸೋಗೆ, ಸೋಪು, ಚಿತ್ರಮೂಲ, ಇವುಗಳ ಕಷಾಯದಲ್ಲಿ ತೈಲವನ್ನು ಹಾಕಿ ಕ್ರಮವಾಗಿ ಪಕ್ವಮಾಡುತ್ತಾ ಅದಕ್ಕೆ ಗೋಮೂತ್ರ, ಮೊಸರು, ಗಂಜಿ ಇವನ್ನು ಹಾಕಿ ಪಕ್ವಮಾಡಿ ತೈಲಮಾತ್ರವಿರುವಾಗ ಇಳಿಸಿ ಅದರಿಂದ ಬಾಲಕನನ್ನು ಮರ್ದನಮಾಡಿದರೆ ನೈಗಮೇಯ ಗ್ರಹದೋಷ ಶಾಂತಿಯಹುದು.

(೩೨) ತಿಲ, ಅಕ್ಕಿ, ಪುಷ್ಪಮಾಲಾ, ಲಡ್ಡು ಆದಿಮಿತಾಯಿ ಇವನ್ನು ೩ ಸಲ ಶಿಶುವಿಗೆ ಇಳೀತೆಗದು ಒಂದು ಮರದ ಬುಡದಲ್ಲಿಟ್ಟು ಹಿಂದಿರುಗಿ ನೋಡದೆ ಬರುವದು. ನೈಗಮೇಯ ಗ್ರಹ ಶಾಂತಿಯಹುದು.

ಇಳೀ ತೆಗಿಯುವಾಗ ಹೇಳುವ ಮಂತ್ರ—

" ಅಜಾನ ನಶ್ಚಲಾಕ್ಷಿಭ್ರೂಃ ಕಾಮರೂಪೀ ಮಹಾಯಶಾಃ ‖ ಬಾಲಂ ಪಾಲಯ ದೇವ ನೈಗಮೇಯೋಽಭಿರಕ್ಷತು ‖ "



" ಅಥಮಾಸಗೃಹೀತಸ್ಯ ಬಾಲಕಸ್ಯ ವಿಮುಕ್ತಯೇ ‖ ಬಲಿಂ ವಕ್ಷ್ಯಾಮಿ ಸುಖದಂ ಸರ್ವತಂತ್ರೇಷು ಗೋಪಿತಮ್ ‖ "

" ಸರ್ವತಂತ್ರಗಳಲ್ಲಿ ಗೋಪ್ಯವಾಗಿರುವ ಬಾಲರಕ್ಷಾ ವಿಷಯವನ್ನೂ ಬಲಿಯ ವಿಧಾನವನ್ನೂ ಮಾಸಕ್ರಮದಂತೆ ಬಾಲಗ್ರಹದೋಷ ನಿವೃತ್ತಿಗಾಗಿ ಹೇಳುವೆವು. "

" ಪ್ರಥಮೇ ಮಾಸಿ ಗೃಹ್ಣಾತಿ ಕುಮಾರೀ ನಾಮ ಯೋಗಿನೀ ‖ ಉದ್ವೇಗ ಜ್ವರ ಶೋಷಾದಿ ಚೇಷ್ಟಿತಂ ತತ್ರ ಜಾಯತೇ ‖ "

" ಮೊದಲನೇ ತಿಂಗಳ ಶಿಶುವಿಗೆ ಕುಮಾರೀನಾಮಕ ಯೋಗಿನಿಯು ಹಿಡದಿರುವಳು. ಇದರಿಂದ—ಉದ್ವೇಗವೂ, ಜ್ವರವೂ, ಗಾತ್ರ ಶೋಷಣೆಯೂ ಇರುತ್ತದೆ. "

ಇದರ ನಿವೃತ್ತ್ಯುಪಾಯ.

“ ನೈಋತೀಂ ದಿಶಮಾಶ್ರಿತ್ಯ ಸಂಧ್ಯಾಕಾಲೇ ಬಲಿಂ ಹರೇತ್ ॥ ನದೀತಟದ್ವಯಾತ್ಕೃಷ್ಣ ಮೃದಾ ದೇವೀ ಸ್ವರೂಪಕಾಮ್ ॥ ಕೃತ್ವಾ ಪೂಜಾಪ್ರಕರ್ತವ್ಯಾ ಪುಷ್ಪಧೂಪಾದಿಭಿಸ್ತತಃ ॥ ವಟಿಕಾ ಮುಷ್ಟಿಕಾ ಪೂಪಾ ಅಗ್ರಭಕ್ತಂ ಗುಡಂ ದಧಿ ॥ ಚತುರ್ವರ್ಣಪತಾಕಾಶ್ಚ ಪ್ರದೀಪಾಃ ಪುಷ್ಪಚಂದನಮ್ ॥ ಅಪರಾಹ್ಣೇ ಥವಾ ದದ್ಯಾನ್ಮಂತ್ರೇಣಾನೇನ ಮಂತ್ರವಿತ್ ॥ ”

“ ನದಿಯ ಎರಡು ದಡಗಳ ಮಣ್ಣನ್ನು ತಂದು ಅದರಲ್ಲಿ ಸ್ತ್ರೀಮೂರ್ತಿಯನ್ನು ಮಾಡಿ, ಅದನ್ನು ಪೂಜಿಸಿ, ಪುಷ್ಪ, ಧೂಪ, ದೀಪಾದಿಗಳಿಂದ ಅರ್ಚಿಸಿ, ಅದಕ್ಕೆ—೪ವಡೆ, ಮುಷ್ಟಿಕಾಪೂಪವೆಂದರೆ ೪ಸುಕ್ಕಿನ ಉಂಡೆ, ಅನ್ನ, ಪಾನಕ, ಮೊಸರು, ಇವನ್ನು ನೈವೇದ್ಯಮಾಡಿ, ಅವುಗಳೊಡನೆ ೪ ಧ್ವಜ, ೪ ದೀಪ, ಹೂವಿನಮಾಲೆ, ಗಂಧ, ಇವೆಲ್ಲವನ್ನೂ ಆ ಮೂರ್ತಿಯಮುಂದೆ ಮೊರದಲ್ಲಿಟ್ಟು;—“ ಓಂನಮೋಭಗವತೇಚ ರಾವಣಾಯ ಚ ಬಾಲಕಂ ಮುಂಚ ಮುಂಚ ” ಎಂಬ ಮಂತ್ರದಿಂದ ಶಿಶುವಿಗೆ ಇಳೀತೆಗದು ೨೧ ಬಾರಿ ಮಂತ್ರವನ್ನು ಜಪಿಸುತ್ತಾ ಬಲಿಯನ್ನು ಕೊಟ್ಟು, ನೈಋತ್ಯದಿಕ್ಕಿನಲ್ಲಿ ಸಂಧ್ಯಾಸಮಯದಲ್ಲಿ ಬಲಿಯನ್ನು ಇಟ್ಟು ಬರಬೇಕು.” ಇದರಿಂದ ಬಾಲಗ್ರಹ ಚೇಷ್ಟೆಯು ನಿವೃತ್ತಿಯಾಗುವದು.

ಬಾಲತಂತ್ರದಲ್ಲಿ :—

“ ಶಿಶುವಿನ ೧ನೇ ದಿನ, ೧ನೇ ತಿಂಗಳು, ೧ನೇ ವರ್ಷದಲ್ಲಿ ಮಂದಾನಾಮಕ ದೇವತಾಗ್ರಹಣ ಮಾಡಿರುವಳು. ಅವಳ ಬಾಧಾಲಕ್ಷಣವು:—ಶಿಶುವಿಗೆ ಜ್ವರ, ಅಳುವಿಕೆ, ಇತ್ಯಾದಿ ದೋಷಗಳಿರುವವು. ಅದಕ್ಕಾಗಿ ಮೇಲೆ ಹೇಳಿದಂತೆಯೇ ಪ್ರತಿಮೆಮಾಡಿ, ಅಕ್ಕಿ, ೩ ಬಿಳೀಹೂವು, ೩ ಧ್ವಜ, ೩ ವಿಳ್ಳೇದೆಲೆ, ಅಡಕೆ, ಗಂಧ, ಹೂವು, ಧೂಪದೀಪಾದಿಗಳಿಂದರ್ಚಿಸಿ “ ಓಂನಮೋ ಭಗವತೇ ರಾವಣಾಯ ಹನ ಹನ ಮುಂಚ ಮುಂಚ ಸ್ವಾಹಾ ” ಎಂಬ ಮಂತ್ರದಿಂದ ೩ ಸಲ ಇಳೀತೆಗದು ಮಧ್ಯಾಹ್ನದಸಮಯ, ಪೂರ್ವದಿಕ್ಕಿನಲ್ಲಿ ನಾಲ್ಕು ರಸ್ತೆ ಕೂಡಿದಕಡೆ ಬಲಿಯುಸಮೇತ ವಿಗ್ರಹವಿರುವ ಮೊರವನ್ನಿಟ್ಟುಬರುವದು. ಅನಂತರ ಶಿಶುವಿಗೆ ಸ್ನಾನಮಾಡಿಸಬೇಕು. ಹೀಗೆ ೪ ದಿನ ಮಾಡಿ, ಬಿಳೀಸಾಸವೆ, ಬೇವಿನಯಲೆ, ಶಿವನಿರ್ಮಾಲ್ಯ ಇವುಗಳನ್ನು ಧೂಪವಿಡಬೇಕು. ಗುಣವಾಗುವದು ” ಎಂದಿದೆ.

ಬಾಲಕನ ೨ನೇ ದಿನ, ೨ನೇ ತಿಂಗಳು, ೨ನೇ ವರ್ಷದಲ್ಲಿ ಶುಭದಾನಾಮಕ ದೇವತೆಯು ಬಾಲಕನನ್ನು ಪೀಡಿಸುತ್ತಿರುವಳು. ಇದರ ಲಕ್ಷಣ:—

ಮೊದಲು ಜ್ವರಬರುವದು, ನೇತ್ರಗಳನ್ನು ಮುಚ್ಚುವದಿಲ್ಲ; ಶರೀರ ನಡುಗುತ್ತಿಹುದು, ಬಾಯಿಮಾತೇ ಇಲ್ಲ, ಇದರ ನಿವೃತ್ತಿಗಾಗಿ ೧। ಶೇರು ಅಕ್ಕಿ, ಮೊಸರು, ಯಳ್ಳಿನಪುಡಿ, ಇವೆಲ್ಲವನ್ನೂ ಮುಚ್ಚಳದಲ್ಲಿಟ್ಟು ಪಶ್ಚಿಮದಿಕ್ಕಿನಕಡೆಗೆ ನಾಲ್ಕುದಾರಿ ಕೂಡಿದ ಕಡೇಲಿ ಸಂಧ್ಯಾಕಾಲದಲ್ಲಿ ೭ ದಿನ ಇಡುವದು. "ಓಂ **ರಾವಣಾಯ ಹನ ಹನ ಮುಂಚ ಮುಂಚ ಹುಂ ಫಟ್ ಸ್ವಾಹಾ**" ಎಂಬ ಮಂತ್ರದಿಂದ ೨೧ ಸಲ ಜಪಿಸಿ ಇದೇ ಮಂತ್ರದಿಂದ ಶಿಶುವಿಗೆ ೩ ಸಲ ಇಳೀತೆಗಿಯುವದು. ಶಿಶುವಿಗೆ ಸ್ನಾನಮಾಡಿಸಿ, ಶಿವನಿರ್ಮಾಲ್ಯ, ಕಸಕಸೆ, ಚಿಕ್ಕಿನ ಕೂದಲು, ಘೃತ ಇವುಗಳ ಹೊಗೆಯನ್ನು ಕೊಡುವದು. ೮ನೇ ದಿನ ಬ್ರಾಹ್ಮಣ ಸುವಾಸಿನೀಯರು ಹುಡುಗರಿಗೆ ಯಥಾಶಕ್ತಿ ಭೋಜನಮಾಡಿಸುವದು; ಗುಣವಾಗುತ್ತದೆ.

ಶಿಶುವಿನ ೭ನೇ ದಿನ, ೭ನೇ ತಿಂಗಳು, ೭ನೇ ವರ್ಷದಲ್ಲಿ ಪೂತನಾನಾಮಕ ದೇವತೆಯು ಪೀಡಿಸುತ್ತಿಹಳು. ಅದರ ಲಕ್ಷಣ:—ಜ್ವರ, ಶರೀರ ನಡುಗುವದು, ಕೂಗಿಕೊಳ್ಳುವದು, ಆಕಾಶದ ಕಡೆಗೇ ನೋಡುತ್ತಿಹುದು. ಇದರ ನಿವೃತ್ತ್ಯುಪಾಯವು:—ನದಿಯ ೨ ಕಡೇ ಮಣ್ಣಿನಿಂದ ದೇವತೆಯ ಪ್ರತಿಮೆಯನ್ನು ಮಾಡಿ, ಅದನ್ನು ಮುಚ್ಚಳದಲ್ಲಿಟ್ಟು—ತಾಂಬೂಲ, ರಕ್ತಚಂದನ, ೩ ರಕ್ತಪುಷ್ಪ, ೩ ದೀಪ, ಅನ್ನ ಇವೆಲ್ಲವನ್ನು ಒಂದು ಹಳೇ ಮೊರದಲ್ಲಿಟ್ಟು, "**ಓಂನಮೋ ರಾವಣಾಯ ಹನ ಹನ ಮುಂಚ ಮುಂಚ ತ್ರಾಸಯ ತ್ರಾಸಯ ಸ್ವಾಹಾ**" ಎಂಬ ಮಂತ್ರದಿಂದ ೨೧ ಜಪಮಾಡಿ, ೩ ಸಲ ಮೊಗುವಿಗೆ ಇಳೀತೆಗದು, ದಕ್ಷಿಣದಿಕ್ಕಿನಲ್ಲಿ ನಾಲ್ಕು ಬೀದಿ ಕೂಡಿರುವ ಕಡೇ ೭ನೇ ಪ್ರಹರದಲ್ಲಿಟ್ಟು ಬರುವದು:—ಶಿವನಿರ್ಮಾಲ್ಯ, ಗುಗ್ಗುಲು, ಬಿಳೀಸಾಸವೆ, ಬೇವಿನ ಎಲೆ ಇವನ್ನು ಹೊಗೇಹಾಕುವದು. ೭ ದಿನ ಮಾಡಬೇಕು. ೮ನೇ ದಿನ ಬ್ರಾಹ್ಮಣ ಸುವಾಸಿನೀ ಶಿಶುಗಳಿಗೆ ಯಥಾಶಕ್ತಿ ಭೋಜನಮಾಡಿಸುವದು.

ಶಿಶುವಿನ ೮ನೇ ದಿನ, ೮ನೇ ತಿಂಗಳು, ೮ನೇ ವರ್ಷದಲ್ಲಿ ಮುಖಮಂಡಿಕಾ ಎಂಬ ದೇವತೆಯು ಪೀಡಿಸುವಳು. ಇದರ ಲಕ್ಷಣ—ಜ್ವರ, ಕೈಮುಷ್ಟಿಕಟ್ಟುವದು, ಅಳುವದು, ಬಹುನಿದ್ರೆ ಇರುವಿಕೆ. ಇತ್ಯಾದಿ ಇದರ ಪರಿಹಾರಕ್ಕಾಗಿ:—ಪೂರ್ವದಂತೆ ದೇವತೆಯ ವಿಗ್ರಹವನ್ನು ಮಾಡಿ, ಅದನ್ನು ಕಮಲದಹೂವು, ಗಂಧ, ತಾಂಬೂಲ, ಬಿಳೀಹೂವು, ೮ ದೀಪದ ಕಕ್ಕಡ, ೧೭ ಭಕ್ಷ್ಯ, ಇವೆಲ್ಲವನ್ನು ಇಟ್ಟು ಪೂಜಿಸಿ:—"**ಓಂನಮೋ ರಾವಣಾಯ ಹನ ಹನ ಮಥ ಮಥ ಸ್ವಾಹಾ**" ಎಂಬ ಮಂತ್ರವನ್ನು ೨೧ ಸಲ ಜಪಿಸಿ, ೩ ಸಲ ಮಗುವಿಗೆ ಇಳೀತೆಗದು, ಉತ್ತರದಿಕ್ಕಿನಲ್ಲಿ ೮ ರಸ್ತೆ ಕೂಡಿರುವ ಬಳೀಲಿ ಸಾಯಂಕಾಲದ ಹೊತ್ತು ಬಲಿಯನ್ನಿಟ್ಟು ಬರುವದು. ೭ ದಿನ ಮಾಡುವದು. ೮ನೇ ದಿನ ಬ್ರಾಹ್ಮಣ ಭೋಜನಮಾಡಿಸುವದು, ಸೌಖ್ಯವಾಗುವದು.

ಶಿಶುವಿನ ೫ನೇ ದಿನ, ೫ನೇ ತಿಂಗಳು, ೫ನೇ ವರ್ಷದಲ್ಲಿ ಪೂತನಾನಾಮಕ ಮಾತೃಕಾ ಪೀಡಿಸುತ್ತಿರುವಳು. ಇದರ ಲಕ್ಷಣ:—ಜ್ವರ, ಶರೀರ ನಡುಗುವಿಕೆ, ಮಾತಿಲ್ಲ, ಕೈಮುಷ್ಟಿ ಬಿಚ್ಚುವದಿಲ್ಲ, ಇದಕ್ಕೆ ಪ್ರತೀಕಾರ:— ಕುಂಬಾರನ ತಿಗರೀಮಣ್ಣನ್ನು ತಂದು ಅದರಲ್ಲಿ ದೇವತೆಯ ಆಕೃತಿಮಾಡಿ, ಅದನ್ನು ಗಂಧ, ತಾಂಬೂಲ, ಅಕ್ಕಿ, ಬಿಳೀಹೂವು, ೫ ಧ್ವಜ, ೫ ಕಕ್ಕಡ, ವಡೆಗಳು ಇವೆಲ್ಲದರಿಂದರ್ಚಿಸಿ, ಈಶಾನ್ಯದಿಕ್ಕಿನಲ್ಲಿ ಬಲಿಯನ್ನಿತ್ತು, ಶಾಂತಿಯ ಜಲದಲ್ಲಿ ಸ್ನಾನಮಾಡಿಸುವದು. ಜಪಮಂತ್ರ "ಓಂ ನಮೋ ರಾವಣಾಯ ನಮಃ, ಚೂರ್ಣಯ ಚೂರ್ಣಯ ಸ್ವಾಹಾ" ಇದನ್ನು ೨೧ ಸಲ ಜಪಿಸಿ, ಮಗುವಿಗೆ ೩ ಸಲ ಇಳೀತೆಗಿಯುವದು. ೩ ಸಲ ಮಾಡುವದು. ೪ನೇ ದಿನ ಬ್ರಾಹ್ಮಣ ಸುವಾಸಿನಿಯರಿಗೆ ಸಂತರ್ಪಣೆ ಮಾಡುವದು. ಗುಣವಾಗುತ್ತದೆ.

ಶಿಶುವಿನ ೬ನೇ ದಿನ, ೬ನೇ ತಿಂಗಳು, ೬ನೇ ವರ್ಷ ಶಕುನೀನಾಮಕ ದೇವತೆಯು ಪೀಡಿಸುತ್ತಿಹಳು. ಇದರ ಲಕ್ಷಣವೇನೆಂದರೆ:—ಜ್ವರ, ಶರೀರ ನಡುಗುವದು, ಅಳ್ಳೆಹೊಯ್ಯುವದು, ರಾತ್ರಿ ಹಗಲು ವಿಶ್ರಾಂತಿಯಿಲ್ಲದೆ ವ್ಯಥೆ ಪಡುವದು, ಮೇಲಕ್ಕೆ ನೋಡುವದು, ಇದಕ್ಕೆ ಪ್ರತಿಕ್ರಿಯೆ—ಗೋಧೀಹಿಟ್ಟಿನಲ್ಲಿ ದೇವತೆಯ ಮೂರ್ತಿಯನ್ನು ಮಾಡಿ, ಬಿಳೀಹೂವು, ಕೆಂಪುಹೂವು, ಹಳದೀಹೂವು, ೧೦ ಕಕ್ಕಡ, ೧೦ ಪತಾಕೆ, ಹಾಲು, ಹಣ್ಣು, ಇವುಗಳಿಂದರ್ಚಿಸಿ, ನೈವೇದ್ಯಮಾಡಿ, ಆಗ್ನೇಯ ದಿಕ್ಕಿನಲ್ಲಿ ಮಧ್ಯಾಹ್ನ ಸಮಯದಲ್ಲಿ ಬಲಿಯನ್ನೂ ವಿಗ್ರಹವನ್ನೂ ಇಟ್ಟು ಬರುವದು:—"ಓಂ ನಮೋ ಭಗವತೇ ರಾವಣಾಯ ಚೂರ್ಣಯ ಚೂರ್ಣಯ ಹನ ಹನ ಸ್ವಾಹಾ" ೨೧ ಜಪಮಾಡಿ, ೩ ಸಲ ನಿವಾಳೀ ತೆಗದು ಹೀಗೆ ೩ ದಿನ ಮಾಡುವದು, ೪ನೇ ದಿನ ಬ್ರಾಹ್ಮಣ ಭೋಜನ ಮಾಡಿಸುವದು. ಬಲಿ ಕೊಟ್ಟನಂತರ ಸ್ನಾನಮಾಡಿಸಿ, ಶಿವನಿರ್ಮಾಲ್ಯ, ಬೆಳ್ಳುಳ್ಳಿ, ಗುಗ್ಗುಲು, ಬಿಳೀಸಾಸವೆ, ಸರ್ಪದಪೊರೆ, ಬೇವಿನ ಸೊಪ್ಪು, ಇದರ ಕಲ್ಕಮಾಡಿ ತುಪ್ಪದಲ್ಲಿ ಕಲಿಸಿ ಹೊಗೆಕೊಡುವದು. ಗುಣವಾಗುತ್ತದೆ.

ಶಿಶುವಿನ ೭ನೇ ದಿನ, ೭ನೇ ತಿಂಗಳು, ೭ನೇ ವರ್ಷ ಶುಷ್ಕರೇವತೀ ನಾಮಕ ದೇವತೆಯು ಪೀಡಿಸುತ್ತಿರುವಳು. ಇದರ ಲಕ್ಷಣ—ಜ್ವರ, ನಡುಗು, ಮುಷ್ಟಿಕಟ್ಟಿರುವದು, ಅಳುವಿಕೆ, ಇತ್ಯಾದಿ-ಇದರ ಪರಿಹಾರ—ನದೀ ದಡದ ಮಣ್ಣು ತಂದು ದೇವತಾಪ್ರತಿಮೆ ಮಾಡಿ, ಇದನ್ನು ಕೆಂಪುಹೂವು, ತಾಂಬೂಲ, ಕೆಂಪುಬಣ್ಣದ ಕೂಳು, ೧೦ ದೀಪದ ಕಕ್ಕಡ, ೧೩ ಧ್ವಜ (ಪತಾಕೆ) ಇದರಿಂದ ಅರ್ಚಿಸಿ, ಊರಿಂದ ಹೊರಗೆ ಪಶ್ಚಿಮದಿಕ್ಕಿನಲ್ಲಿ ೩ನೇ ಪ್ರಹರದಲ್ಲಿ ಇಟ್ಟು ಬರುವದು.

ಮಂತ್ರ—"ಓಂ ನಮೋ ಭಗವತೇ ರಾವಣಾಯ ತತ್ತೇಜಸೇ ಹನ ಹನ ಮುಂಚ ಮುಂಚ ಸ್ವಾಹಾ" ಎಂಬದರಿಂದ ೨೧ ದಿನ ಜಪಮಾಡಿ, ೩ ಸಲ ಇಳೀತೆಗದು ಇಟ್ಟುಬರುವದು, ೩ ದಿನ ಮಾಡುವದು, ಇಟ್ಟು ಬಂದನಂತರ ಸ್ನಾನಮಾಡಿಸಿ, ಶಿವನಿರ್ಮಾಲ್ಯ, ಬಿಳೀಸಾಸವೆ, ಕಸಕಸೆ, ತುಪ್ಪ ಇವುಗಳ ಧೂಪವನ್ನು ಹಾಕುವದು. ೪ನೇ ದಿನ ಬ್ರಾಹ್ಮಣ ಸುವಾಸಿನಿಯರ ಭೋಜನ ಮಾಡಿಸುವದು. ಗುಣವಾಗುತ್ತದೆ.

ಶಿಶುವಿನ ೯ನೇ ದಿನ, ೯ನೇ ತಿಂಗಳು, ೯ನೇ ವರ್ಷ ಅರ್ಯಮಾ ಎಂಬ ಮಾತೃಕಾ ಪೀಡಿಸುತ್ತಿರುವಳು. ಇದರ ಲಕ್ಷಣವು—ಜ್ವರ, ಶರೀರ ದುರ್ಗಂಧ, ಆಹಾರದ ಇಚ್ಛೆ ಇಲ್ಲ; ಶರೀರ ನಡುಗುವಿಕೆ, ಇತ್ಯಾದಿ-ಇದರ ನಿವೃತ್ತ್ಯುಪಾಯ—ಕೆಂಪುಹೂವು, ಹಳದೀಪತಾಕೆ, ರಕ್ತಚಂದನ, ಪಾಯಿಸ, ಇವುಗಳನ್ನು ನೈವೇದ್ಯಮಾಡಿ "ಓಂ ನಮೋ ರಾವಣಾಯ ತ್ರೈಲೋಕ್ಯವಿದ್ರಾವಣಾಯ ಚತುರ್ದಶಮೋಕ್ಷಣಾಯ ಜ್ವರ ಹನ ಹನ ಹೂಂ ಫಟ್ ಸ್ವಾಹಾ" ಈ ಮಂತ್ರವನ್ನು ೨೧ ಸಲ ಜಪಿಸಿ, ಇದರ ೩ ಸಲ ಇಳೀತೆಗದು ಪ್ರಾತಃಕಾಲದಲ್ಲಿ ಈ ಬಲಿಯನ್ನು ಕೊಡುವದು.

ಶಿಶುವಿನ ೧೦ನೇ ದಿನ, ೧೦ನೇ ತಿಂಗಳು, ೧೦ನೇ ವರ್ಷದಲ್ಲಿ ಸೂತಿಕಾನಾಮ ಮಾತೃಕಾ ಪೀಡಿಸುತ್ತಿರುವಳು. ಇದರ ಲಕ್ಷಣವೇನೆಂದರೆ:—ಜ್ವರ, ಶರೀರದಲ್ಲಿ ಪೀಡಾ, ವಾಂತಿ, ಇತ್ಯಾದಿ—ಇದರ ಸುಖಾರ್ಥವಾಗಿ—ನದಿಯ ೨ ದಡದ ಮಣ್ಣಿನಿಂದ ಗೊಂಬೇಮಾಡಿ, ಬಿಳೀವಸ್ತ್ರವನ್ನುಡಿಸಿ, ಬಿಳೀಹೂವು, ಗಂಧ, ತಾಂಬೂಲ, ೧೩ ಕಕ್ಕಡ, ೧೩ ಪತಾಕೆಗಳಿಂದ ಪೂಜಿಸಿ ಉತ್ತರದಿಕ್ಕಿನಲ್ಲಿ ಗ್ರಾಮದ ಹೊರಗಡೆ ಬಲಿಯೊಂದಿಗೆ ವಿಸರ್ಜಿಸುವದು. ಮಂತ್ರ:—"ಓಂ ನಮೋ ರಾವಣಾಯ ಹನ ಹನ ಸ್ವಾಹಾ" ೨೧ ಸಲ ಜಪಿಸಿ, ೩ ಸಲ ಇಳೀತೆಗದು, ಬಲಿಯನ್ನಿಡುವದು, ೩ ದಿನ ಮಾಡುವದು, ೪ನೇ ದಿನ ಬ್ರಾಹ್ಮಣಸುವಾಸಿನೀ ಭೋಜನಮಾಡಿಸುವದು. ಗುಣವಾಗುತ್ತದೆ.

ಶಿಶುವಿನ ೧೧ನೇ ದಿನ, ೧೧ನೇ ಮಾಸ, ೧೧ನೇ ವರ್ಷ ಕ್ರಿಯಾ ಎಂಬ ಮಾತೃಕಾ ಪೀಡಿಸುತ್ತಿಹಳು—ಅದರ ಲಕ್ಷಣ—ಜ್ವರ, ನಡುಗು, ಅಳುವಿಕೆ, ಮಲಮೂತ್ರವಾಗುತ್ತಿರುವಿಕೆ, ಇತ್ಯಾದಿ, ಅದಕ್ಕಾಗಿ:—ನದಿಯ ೨ ದಡದ ಮಣ್ಣಿನಿಂದ ದೇವತೆಯ ಮೂರ್ತಿಯನ್ನು ಮಾಡಿ, ಗಂಧ, ತಾಂಬೂಲ, ರಕ್ತಪುಷ್ಪ, ರಕ್ತಚಂದನ, ೫ ಪತಾಕೆ, ೫ ಕಕ್ಕಡ, ಭಕ್ಷ್ಯ ಇವುಗಳಿಂದ ಅರ್ಚಿಸಿ:-"ಓಂ ನಮೋ ರಾವಣಾಯ ಚೂರ್ಣಿತ ಹಸ್ತಾಯ ಮುಂಚ ಮುಂಚ ಸ್ವಾಹಾ" ಎಂಬ ಮಂತ್ರವನ್ನು ೨೧ ಸಲ ಜಪಿಸಿ, ೩ ಸಲ ಶಿಶುವಿಗೆ ಇಳೀತೆಗದು ವಾಯುವ್ಯ ಕೋಣದಲ್ಲಿ ಬಲಿಯೊಂದಿಗೆ ವಿಗ್ರಹವನ್ನು ಇಟ್ಟುಬಂದು—ಶಿಶುವಿಗೆ ಸ್ನಾನಮಾಡಿಸಿ, ಶಿವನಿರ್ಮಾಲ್ಯ, ಬಿಳೀಸಾಸವೆ, ಶಿಶುವಿನ ಕೂದಲುಗಳ

ಧೂಪವಿಕ್ಕುವದು. ೩ ದಿನ ಮಾಡುವದು. ೪ನೇ ದಿನ ಬ್ರಾಹ್ಮಣಭೋಜನ ಮಾಡಿಸುವದು. ಸುಖವಾಗುತ್ತದೆ.

ಶಿಶುವಿನ ೧೧ನೇ ದಿನ ೧೧ನೇ ತಿಂಗಳು ೧೧ನೇ ವರ್ಷ ಪಿಪೀಲಿಕಾನಾ ಮಕಮಾತೃಕಾ ಪೀಡಿಸುತ್ತಿಹಳು. ಅದರ ಲಕ್ಷಣ:—ಜ್ವರ, ಆಹಾರದಲ್ಲಿ ಇಚ್ಛೆಯಿಲ್ಲದಿರುವಿಕೆ, ಇತ್ಯಾದಿ—ಅದರ ಸುಖಾರ್ಥವಾಗಿ—ಗೋಧಿಯ ಹಿಟ್ಟಿನಲ್ಲಿ ದೇವತಾಪ್ರತಿಮೆಮಾಡಿ, ಅದರ ಬಾಯಿಯಲ್ಲಿ ಹಾಲನ್ನು ಹಾಕಿ, ರಕ್ತಚಂದನ, ಹಳದೀಹೂವು, ಗಂಧ, ತಾಂಬೂಲ, ೭ ಕಕ್ಕಡ, ೮ ವಡೆ, ಭಕ್ಷ್ಯಗಳು ಇವುಗಳಿಂದರ್ಚಿಸಿ:—"**ಓಂ ನಮೋ ರಾವಣಾಯ ಮುಂಚ ಮುಂಚ ಹನ ಹನ ಸ್ವಾಹಾ**" ಎಂಬ ಮಂತ್ರದಿಂದ ೨೧ ಸಲ ಜಪಮಾಡಿ, ೭ ಸಲ ಶಿಶುವಿಗೆ ಇಳೀತೆಗದು ಪೂರ್ವದಿಕ್ಕಿನಲ್ಲಿಟ್ಟು ಬಂದು, ಶಾಂತಿಜಲದಲ್ಲಿ ಶಿಶುವಿಗೆ ಸ್ನಾನಮಾಡಿಸಿ, ಶಿವನಿರ್ಮಾಲ್ಯ, ಗುಗ್ಗುಲು, ಗೋವಿನ ಕೋಡಿನತುಂಡು, ಹಾವಿನಪೊರೆ, ತುಪ್ಪ ಇವನ್ನು ಬೆರಸಿ ಹೊಗೇಕೊಡುವದು. ೩ ದಿನ ಮಾಡುವದು, ೪ನೇ ದಿನ ಬ್ರಾಹ್ಮಣ ಸುವಾಸಿನೀ ಭೋಜನಮಾಡಿಸುವದು. ಸುಖವಾಗುತ್ತದೆ.

ಶಿಶುವಿನ ೧೨ನೇ ದಿನ, ೧೨ನೇ ಮಾಸ, ೧೨ನೇ ವರ್ಷದಲ್ಲಿ, ಕಾಮುಕಾ ಎಂಬ ದೇವತೆಯು ಪೀಡಿಸುತ್ತಿಹಳು, ಲಕ್ಷಣ—ಜ್ವರ, ನಗುತ್ತಿಹುದು, ಶ್ವಾಸವಿರುವಿಕೆ, ಬಹು ಕೂಗಿಕೊಳ್ಳುವಿಕೆ, ಇತ್ಯಾದಿ ಇದಕ್ಕಾಗಿ—ಒಂದು ದೇವತೆಯ ಗೊಂಬೆಯನ್ನು ಮಾಡಿ—ಗಂಧ, ತಾಂಬೂಲ, ಬಿಳೀಪುಷ್ಪ, ಧ್ವಜ, ೭ ಭಕ್ಷ್ಯ ಇವುಗಳಿಂದ ಅರ್ಚಿಸಿ ಇದನ್ನು ನೀರಿನಬಳೀ ವಿಸರ್ಜಿಸುವದು:—"ಓಂ ನಮೋ ರಾವಣಾಯ ಮುಂಚ ಮುಂಚ ಹನ ಹನ ಸ್ವಾಹಾ" ಈ ಮಂತ್ರದಿಂದ ೨೧ ಜಪಮಾಡಿ, ಮಗುವಿಗೆ ೭ ಬಾರಿ ಇಳೀತೆಗದು ವಿಸರ್ಜಿಸುವದು, ೩ ದಿನ ಮಾಡುವದು, ೪ನೇ ದಿನ ಬ್ರಾಹ್ಮಣರಿಗೂ, ಸುವಾಸಿನಿಯರಿಗೂ ಭೋಜನಮಾಡಿಸುವದು ; ಗುಣವಾಗುವದು.

ಇಂತು ಬಾಲಗ್ರಹ ವಿಷಯವೆಂಬ ಹದಿನೇಳನೇ ಆಶಯವು.

## ಹದಿನೆಂಟನೆಯ ಆಶಯವು.

### ಶಿಶುರೋಗಚಿಕಿತ್ಸಾ.

**ಶಿಶುವಿನ ನಾಭಿ, ಗುದ, ಮುಖಪಾಕ ಚಿಕಿತ್ಸೆ:—**

"ವಾತೇನ ಧ್ಮಾಪಿತಾಂ ನಾಭಿಂ ಸಹಜಾಂ ತುಂಡಸಂಜ್ಞಿತಾ ಮ್ ॥ ಮಾರುತಘ್ನೈಃ ಪ್ರಶಮಯೇತ್ಸ್ನೇಹ ಸ್ವೇದೋ ಪನಾ ಹನೈಃ ॥"

“ವಾಯುವಿನಿಂದ ಶಿಶುವಿನ ನಾಭಿ ಪಕ್ವವಾದರೆ ಅದಕ್ಕೆ “ತುಂಡ” ವೆಂದು ಶಾಸ್ತ್ರಗಳಲ್ಲಿ ಹೇಳುತ್ತಾರೆ. ಇದಕ್ಕಾಗಿ ವಾತಹರವಾದ ಸ್ನೇಹ, ಸ್ವೇದ, ಉಪತಾಪನವಿಧಿಗಳನ್ನು ಮಾಡಿದರೆ ಗುಣವಾಗುತ್ತದೆ.”

“ಮೃತ್ಪಿಂಡೇನಾಗ್ನಿವರ್ಣೇನ ಕ್ಷೀರಸಿಕ್ತೇನ ಸೋಷ್ಮಣಾ ‖ ಸ್ವೇ
ದಯೇದುತ್ಥಿತಾಂ ನಾಭಿಂ ಶೋಫ ಸ್ತೇನೋಪಶಾಮ್ಯತಿ ‖”

“ಒಂದು ಮಣ್ಣಿನ ಹೆಂಟೆಯ ತುಂಡನ್ನು ಅಗ್ನಿಯಲ್ಲಿ ಕೆಂಪಾಗುವಂತೆ ಕಾಯಿಸಿ, ಅಗ್ನಿಯಂತೆ ಅದರ ವರ್ಣವಾದ ಕೂಡಲೆ ಅದನ್ನು ಹಾಲಿನ ಆರಿಸಿ ವಸ್ತ್ರದಲ್ಲಿ ಅದನ್ನು ಸುತ್ತಿ ಶಿಶುವಿನ ನಾಭಿಯಮೇಲೆ ಸೇಕಕೊಡಲು ನಾಭಿಯ ಶೋಭೆಯು ಶಮನವಾಗುವದು.”

“ದುಗ್ಧೇನ ಛಾಗ ಶಕೃತಾ ನಾಭಿಪಾಕೇಽವಗುಂಠನಮ್ ‖ ಲೇ
ಪಂ ಕ್ಷೀರೇಣ ವಾ ಶಸ್ತಂ ಪರ್ಣತ್ವಗ್ರೇಣು ಚಂದನೈಃ ‖”

“ಆಡಿನಹಿಕ್ಕೆಯನ್ನು ಸುಟ್ಟು, ಆ ಭಸ್ಮವನ್ನು ನಾಭಿಯಮೇಲೆ ಹಚ್ಚಿ ಕೈಬೆರಳಿನಿಂದ ದಬಾಯಿಸಿ ಹಿಡಿಯುವದರಿಂದಲೂ ಅಥವಾ ವಿಳ್ಳೆಯದೆಲೆ, ದಾಲಚಿನ್ನಿ, ರೇಣುಕೇಬೀಜ, ಚಂದನ ಇವುಗಳನ್ನು ಹಾಲಿನಿಂದರೆದು ನಾಭಿಯ ವ್ರಣಕ್ಕೆ ಹಚ್ಚುವದರಿಂದಲೂ ನಾಭಿಪಾಕವು ಗುಣವಾಗುವದು.”

“ನಾಭಿ ಪಾಕೇ ನಿಶಾ ಲೋಧ್ರ ಪ್ರಿಯಂಗು ಮಧುಕೈಃ ಕೃತಮ್‖
ತೈಲಮಭ್ಯಂಜನೇ ಶಸ್ತಮೇಭಿರ್ವಾಪ್ಯವಚೂರ್ಣನಮ್ ‖”

“ನಾಭಿಹುಣ್ಣಾದ್ದಕ್ಕೆ—ಅರಿಶಿನ, ಲೋಧ್ರ, ಪ್ರಿಯಂಗು, ಜೇಷ್ಟಮಧು ಈ ಚೂರ್ಣದಿಂದ ತೈಲವನ್ನು ಪಾಕಮಾಡಿ ಹಚ್ಚುವದು, ಅಥವಾ ಈ ಔಷಧಿಗಳ ಚೂರ್ಣವನ್ನೇ ನಾಭಿಗೆ ಹಚ್ಚುವದು ಇದರಿಂದ ಗುಣವಾಗುತ್ತದೆ.”

“ಬಾಲೋ ಯೋಽಚಿರಜಾತಃ ।
ಸ್ತನ್ಯಂ ಗೃಹ್ಣಾತಿ ನೈವ ತಸ್ಯಾಶು ‖
ಸೈಂಧವ ಧಾತ್ರೀ ಮಧು ಘೃತ ।
ಪಥ್ಯಾ ಕಲ್ಕೇನ ಘರ್ಷಯೇಜ್ಜಿಹ್ವಾಮ್ ‖”

“ಯಾವ ಬಾಲಕನು ಹುಟ್ಟಿ ಎಷ್ಟು ದಿನವಾದರೂ ಮೊಲೆಹಾಲನ್ನೇ ಕುಡಿಯದೇ ಇದ್ದಲ್ಲಿ—ಸೈಂಧವಲವಣ, ನೆಲ್ಲೀಚಟ್ಟು, ಜೇನುತುಪ್ಪ, ಘೃತ, ಅಳಲೇಕಾಯಿಶಿಪ್ಪೆ ಈ ದ್ರವ್ಯಗಳ ಕಲ್ಕದಿಂದ ಶಿಶುವಿನ ಜಿಹ್ವೆಯನ್ನು ಉಜ್ಜಬೇಕು.”

“ಗುದಪಾಕೇ ತು ಬಾಲಾನಾಂ ಪಿತ್ತಘ್ನೀಂ ಕಾರಯೇತ್ಕ್ರಿಯಾ
ಮ್‖ [illegible]ಂಜನಂ ವಿಶೇಷೇಣ ಪಾನಾಲೇಪನಯೋ ರ್ಹಿತಮ್‖”

" ಬಾಲಕನಿಗೆ ಗುದಪಾಕವಾದರೆ ಅದಕ್ಕೆ ಪಿತ್ತನಾಶಕವಾದ ಔಷಧಗಳನ್ನು ಮಾಡತಕ್ಕದ್ದು. ರಸಾಂಜನವನ್ನು ಹೊಟ್ಟೆಗೆ ಜೇನಿನೊಡನೆ ಸ್ವಲ್ಪ ಮಾತ್ರ ತಿನ್ನಿಸುವದರಿಂದಲೂ, ಆ ಗುದಪಾಕಕ್ಕೆ ಲೇಪಿಸುವದರಿಂದಲೂ ಹಿತಕರವಹುದು.

" ಜಾತೀ ಪ್ರವಾಲ ಕುಸುಮಾನಿ ಸ ಮಾಕ್ಷಿಕಾಣಿ ।
ಯೋಜ್ಯಾನಿ ಬಾಲಕ ಜನಸ್ಯಮುಖ ಪ್ರಪಾಕೇ ॥
ಪಾಕೇ ಗುದಸ್ಯ ಚ ರಸಾಂಜನ ಲೋಧ್ರ ಚೂರ್ಣಮ್।
ಯೋಜ್ಯಂ ಭಿಷಗ್ಭಿರುಪದಿಷ್ಟಮಿದಂ ಶಿಶೂನಾಮ್ ॥"

" ಮಕ್ಕಳ ಮುಖಪಾಕರೋಗದಲ್ಲಿ ಜಾಜೀಎಲೆ ಮತ್ತು ಹೂವುಗಳನ್ನು ಜೇನುತುಪ್ಪನಲ್ಲಿ ಅರದು ಮುಖಕ್ಕೆ ಹಚ್ಚುವದು. ಇವುಗಳ ಕಲ್ಕವನ್ನು ನೀರಿನಲ್ಲಿ ಕದರಿ ಬಿಸಿಮಾಡಿ ಜೇನುತುಪ್ಪ ಹಾಕಿ ಬಾಯಿಮುಕ್ಕಳಿಸುವಂತೆ ಸ್ವಲ್ಪ ದೊಡ್ಡ ಹುಡುಗರಿಗೆ ಮಾಡಿಸಬಹುದು. ಮಕ್ಕಳ ಗುದಪಾಕದಲ್ಲಿ ರಸಾಂಜನ ಮತ್ತು ಲೋಧ್ರ ಇವನ್ನು ಚೂರ್ಣಿಸಿ ಆ ಪುಡಿಯನ್ನು ಗುದಪಾಕದಮೇಲೆ ಉದರಿಸುವದು, ಸೌಖ್ಯವಹುದು.

" ಆಮ್ರಸಾರ ರಜಸಾ ಸಹ ಸಾಽಸ್ತ್ರಮ್ ।
ಯಾತಿ ನೈತಿ ಚ ಶಿಶೋರ್ಮುಖ ಪಾಕಃ ॥
ಗೈರಿಕೇಣ ಮಧುನಾಽಥ ಚ ಸರ್ವೈಃ ।
ಶ್ವೇತ ಸಾರ ಖದಿರಾಂಜನ ಯೋಗೈಃ ॥ "

" ಮಾವಿನಮೋಟಿನ ಚೂರ್ಣ, ಅಥವಾ ಜಾಜಿಯಲೆಯ ಚೂರ್ಣ, ಅಥವಾ ಕಾವೀಕಲ್ಲು, ಜೇನುತುಪ್ಪ ಕೇರಿಸಿ ಅಥವಾ ಕರ್ಪೂರ, ಕಾಚು, ರಸಾಂಜನ ಈ ೪ ವಿಧವಾದ ಯೋಗಗಳಲ್ಲಿ ಬೇರೆಬೇರೆಯಾಗಿಯಾಗಲೀ ಅಥವಾ ಒಟ್ಟಾಗಿ ಕೇರಿಸಿಯಾಗಲೀ ಉಪಯೋಗಿಸಿದರೆ ಶಿಶುವಿನ ಮುಖಪಾಕವು ನಿವೃತ್ತಿಯಾಗುವದು."

" ಬಾಲಕಸ್ಯಾಪಿ ಸುಸ್ನೇಹೈರಭ್ಯಂಗಂ ಸಮುಪಾಚರೇತ್ ॥ ಕೋಷ್ಣೇನ ಪಯಸಾ ಸ್ನಾನಂ ಪಲನಿತ್ಯಾರಯೇತ್ತತಃ ॥ "

" ಶಿಶುವಿಗೆ—ಚಂದನಾದಿತೈಲ, ಲಾಕ್ಷಾದಿತೈಲ ಮುಂತಾದ ಶ್ರೇಷ್ಠತೈಲಗಳಿಂದ ಅಭ್ಯಂಗನ ಮಾಡಿಸುವದೊಳ್ಳೇದು (ಕೋಷ್ಣೋದಕ) ಸ್ವಲ್ಪಮಾತ್ರ ಬಿಸಿಯಾಗಿರುವ ನೀರಿನಲ್ಲಿ ಶಿಶುವನ್ನು ಸ್ನಾನಮಾಡಿಸಬೇಕು."

ಜ್ವರ ಚಿಕಿತ್ಸಾ:—

" ಮುಸ್ತಾ ಭಯಾ ನಿಂಬ ಪಟೋಲ ಯಷ್ಟೀ ।
ಕ್ವಾಥಃ ಶಿಶೂನಾಂ ಜ್ವರನಾಶಕಾರೀ ॥

ತದ್ವದ್ಘುಡೂಚೀ ನಿಹಿತಶ್ಚ ಸಾರಃ |
ಸುಪ್ರತ್ಯಯೋಽಯಂ ಮಧುನಾ ವಲೀಢಃ ||"

"ತುಂಗಮುಸ್ತೆ, ಅಳಲೇಕಾಯಿಶಿಪ್ಪೆ, ಬೇವಿನಚಕ್ಕೆ, ಕಹಿಪಡುವಲು ಜೇಷ್ಟಮಧು, ಈ ಔಷಧಗಳ ಕಷಾಯವು ಬಾಲಕರ ಜ್ವರವನ್ನು ನಾಶಮಾಡುವದು. ಅಂದರೆ ಜ್ವರವಾರಂಭವಾಗಿದ್ದ ಕಾಲದಲ್ಲಿ ಇವುಗಳಲ್ಲಿ ಒಂದೆರಡರ ಕಷಾಯವನ್ನೇ ಜೇನಿನೊಂದಿಗೆ ಕುಡಿಸುತ್ತಾ ಬರಬೇಕು. ಜ್ವರ ಬಲಿತದ್ದಾದರೆ ಎಲ್ಲವನ್ನೂ ಹಾಕಿ ಕಷಾಯಮಾಡಿ ಜೇನಿನೊಂದಿಗೆ ಕೊಡುವದು. ವ್ಯಾಧಿ ಸುಮಾರಾಗಿರುವಾಗ ಹೆಚ್ಚು ಪದಾರ್ಥಗಳನ್ನು ಉಪಯೋಗಿಸುವದು ನ್ಯಾಯವಲ್ಲ; ಹಾಗೆಯೇ ಅಮೃತಬಳ್ಳಿಯ ಚೂರ್ಣವನ್ನಾಗಲೀ, ಸ್ವರಸವನ್ನಾಗಲೀ, ಜೇನುತುಪ್ಪದಲ್ಲಿ ಕೊಡುವದು; ಇದರಿಂದ ಬಾಲಕರಜ್ವರ ನಾಶವಾಗುತ್ತದೆ. ಪ್ರತ್ಯಕ್ಷ ಸಿದ್ಧಫಲವುಳ್ಳ ಔಷಧವಿದು. "ಇಲ್ಲಿ ಮಕ್ಕಳಿಗೆ ಬಂದೊಂದೇ ಕಾಸುತೂಕ ಔಷಧವನ್ನು ಶೇರಿಸಿ ಕಷಾಯವನ್ನು ೧ ರೂಪಾಯಿತೂಕವನ್ನೂ, ಚೂರ್ಣವನ್ನು ಎರಡಾಣೆತೂಕವನ್ನೂ ವಯಸ್ಸಿನ ಅನುಮಾನದಮೇಲೆ ಕಲ್ಪಿಸತಕ್ಕದ್ದು."

"ಸಿತಾ ಮಧುಭ್ಯಾಂ ಕಟುಕೀ ಚ ಲೀಢಾ |
ಸಾಧ್ಮಾನಮುಗ್ರಂ ಜ್ವರಮಾಶು ಹನ್ಯಾತ್ ||
ತತ್ಕಲ್ಪಲೇಪಶ್ಚ ಕೃತಃ ಶಿಶೂನಾಮ್ |
ಮುಹು ರ್ಮುಹುರ್ದೋಷ ವಿನಾಶಹೇತುಃ ||"

"ಸಕ್ಕರೆ ಜೇನುತುಪ್ಪಗಳಲ್ಲಿ ಎರಡಾಣೆತೂಕ ಕಟುಕರೋಹಿಣೀ ಚೂರ್ಣವನ್ನು ಬೆರಸಿ ಅದನ್ನು ದಿನದ ೩ ಹೊತ್ತು ಪಾಲು ಮಾಡಿಕೊಡುವದು. ಇದು ಆಧ್ಮಾನವೆಂಬ ವಾಯುಯುಕ್ತವಾದ ಜ್ವರವನ್ನು ನಾಶಮಾಡುವದು. ಈ ಕಟುಕರೋಹಿಣಿಯ ಚೂರ್ಣವನ್ನು ನೀರಿನಲ್ಲಿ ಅರದು ಮೈಗೆ ಲೇಪಿಸುವದರಿಂದ ಶಿಶುವಿನ ಜ್ವರವು ನಿವಾರಣೆಯಾಗುವದು. ಇಲ್ಲಿ ಪದೇಪದೇ ಹಚ್ಚಬೇಕೆಂದು ವಿಧಿಸಿದ್ದಾರೆ."

"ಭದ್ರಮುಸ್ತಾ ಭಯಾನಿಂಬ ಪಟೋಲ ಮಧುಕೈಃ ಕೃತಃ ||
ಕ್ವಾಥಃ ಕೋಷ್ಣಃ ಶಿಶೋರೇಷ ನಿಃ ಶೇಷ ಜ್ವರನಾಶನಃ ||"

"ಭದ್ರಮುಸ್ತೆ, ಅಳಲೇಕಾಯಿಶಿಪ್ಪೆ, ಬೇವಿನಚಕ್ಕೆ, ಕಹಿಪಡವಲು, ಜೇಷ್ಟಮಧು ಇವುಗಳಲ್ಲಿ ಒಂದೆರಡರ, ಮೂರರ, ಅಥವಾ ಎಲ್ಲವುಗಳ ಕಷಾಯವನ್ನು ಚತುರ್ಥಾಂಶವಾಗಿಕಾಸಿ, ಸಾಧಾರಣ ಬಿಶಿಯಾಗಿರುವಹಾಗೆ ಶಿಶುವಿಗೆ ದಿನ ೨ ಹೊತ್ತು ಕೊಟ್ಟಲ್ಲಿ ನಿಶ್ಶೇಷವಾಗಿ ಜ್ವರನಾಶನವನ್ನು ಮಾಡುವದು."

"ಕ್ವಾಥಃ ಕೃತಃ ಪದ್ಮಕ ನಿಂಬ ಧಾನ್ಯ।
ಚ್ಛಿನ್ನೋದ್ಭವಾ ಲೋಹಿತ ಚಂದನೋತ್ಥಃ ॥
ಜ್ವರಂ ಜಯೇತ್ಸರ್ವಭವಂ ಕೃಶಾನು।
ಧಾತ್ರೀ ಶಿಶುಭ್ಯಾಂ ಪ್ರಕರೋತಿ ಪೀತಃ ॥"

"ಪದ್ಮಾಕ್ಷ, ಬೇವಿನಚಕ್ಕೆ, ಕೊತ್ತುಂಬರಿ, ಅಮೃತಬಳ್ಳಿ, ಕೆಂಪು ಚಂದನ ಈ ದ್ರವ್ಯಗಳ ಕಷಾಯವು ಶಿಶುವಿನ ಜ್ವರಕ್ಕಾಗಿ ಮೊಲೇಹಾಲು ಕೊಡುವ ತಾಯಿಗೂ, ಶಿಶುವಿಗೂ ಸಹಾ ಕುಡಿಸತಕ್ಕದ್ದು. ಇದರಿಂದ ಶಿಶುವಿನ ಜಠರಾಗ್ನಿ ವೃದ್ಧಿಯಹುದು."

"ಅಮೃತೈಕೋಷಿತಾ ನೀರೇ ಯಾವದ್ಯಾಮಾಷ್ಟಕಂ ಭವೇತ್॥
ಶಿಶೂನಾಂ ಶಮಯತ್ಯಾಶು ಸರ್ವದೋಷ ಭವಂ ಜ್ವರವತ್ ॥"

"ಕೇವಲ ಅಮೃತಬಳ್ಳಿಯನ್ನು ೮ ಪ್ರಹರದವರಿಗೆ ನೀರಿನಲ್ಲಿ ನೆನೆಹಾಕಿದ್ದು ಅದನ್ನು ಅರದು ಶೋಧಿಸಿ ಬಾಲಕನಿಗೆ ಕುಡಿಸಿದರೆ—ವಾತ, ಪಿತ್ತ, ಶ್ಲೇಷ್ಮ, ದ್ವಂದ್ವಜ ಮುಂತಾದ ಸಮಸ್ತ ಜ್ವರಗಳನ್ನೂ ನಾಶಮಾಡುವದು."

"ಯಷ್ಟೀ ಮಧು ತುಗಾಕ್ಷೀರೀ ಲಾಜಾಂಜನ ಸಿತಾ ಕೃತಃ ॥
ಲೇಹಃ ಪ್ರದತ್ತೋ ಬಾಲಾನಾಮಶೇಷ ಜ್ವರನಾಶನಃ ॥"

"ಜೇಷ್ಟಮಧು, ಜೇನುತುಪ್ಪ, ವಂಶಲೋಚನ, ಭತ್ತದರಳು, ರಸಾಂಜನ, ಸಕ್ಕರೆ ಇವುಗಳಲ್ಲಿ ಸಕ್ಕರೆ ಜೇನು ಬಿಟ್ಟುಳಿದವುಗಳನ್ನು ಚೂರ್ಣಿಸಿ ಅವುಗಳನ್ನು ಪಾಕವಿಟ್ಟು ಲೇಹ್ಯಮಾಡಿ, ಕೇವಲಾಲ್ಪ ಕಡಲೆಪ್ರಮಾಣದಲ್ಲಿ ಶಿಶುವಿಗೆ ತಿನ್ನಿಸಲು ಎಲ್ಲಾ ಜ್ವರಗಳನ್ನು ನಾಶಮಾಡುವದು."

"ಕ್ವಾಥಃ ಸ್ಥಿರಾ ಗೋಕ್ಷುರ ವಿಶ್ವ ಬಾಲ।
ಕ್ಷುದ್ರಾದ್ವಯ ಚ್ಛಿನ್ನರುಹಾ ಕಿರಾತೈಃ ॥
ವಾತಜ್ವರಂ ಸಂಶಮಯೇತ್ಪ್ರಪೀತೋ।
ಬಾಲೇನ ಧಾತ್ರ್ಯಾ ಚ ಕೃಶಾನುಕಾರೀ ॥"

"ಶಾಲಪರ್ಣೀ, ಆನೆನೆಗ್ಗಿಲು, ಶುಂಠಿ, ಸೊಗದೆ, ೨ ಬಗೆ ಗುಳ್ಳ, ಅಮೃತಬಳ್ಳಿ, ಚಿರಾಯಿತಾ ಇವುಗಳ ಕಷಾಯವನ್ನು ಶಿಶುವಿಗೂ, ತಾಯಿಗೂ ಕುಡಿಸುವದರಿಂದ ಬಾಲಕನ ವಾತಜ್ವರ ನಿವಾರಣೆಯಾಗಿ ಜಠರಾಗ್ನಿ ಪ್ರದೀಪನವಾಗುವದು."

"ಪಂಚಮೂಲೀ ಕೃತಃ ಕ್ವಾಥಃ ಪೀತೋ ವಾತಜ್ವರಾಪಹಃ ॥
ತದ್ವಚ್ಛಿನ್ನರುಹಾ ದ್ರಾಕ್ಷಾ ಗೋಪಕನ್ಯಾ ಬಲಾ ಭವಃ ॥

"ಲಘು ಪಂಚಮೂಲಗಳೆಂಬ—ಶಾಲಪರ್ಣೀ, ಪೃಶ್ನಪರ್ಣೀ, ೨ ಬಗೆ ಗುಳ್ಳ, ಆನೆನೆಗ್ಗಿಲು, ಇವುಗಳ ಕಷಾಯವು ಶಿಶುವಿನ ವಾತಜ್ವರವನ್ನು ನಾಶಮಾ

ಡುವದು. ಹಾಗೆಯೇ ಅಮೃತಬಳ್ಳಿ, ದ್ರಾಕ್ಷಿ, ಸೊಗದೆ, ಇವುಗಳ ಕಷಾಯವೂ ಶಿಶುಗಳ ವಾತಜ್ವರವನ್ನು ನಿವಾರಣೆಮಾಡುವದು. ''

" ಗುಡೂಚೀ ಸಾರವೋಶೀರ ಚಂದನೋತ್ಪಲ ಪದ್ಮಕೈಃ || ಪ
ರೂಷ ಮಧು ಕಾಶ್ಮರ್ಯ ಧಾನ್ಯಕೈ ರ್ವಿಹಿತಂ ಜಯೇತ್ || "

"ಅಮೃತಬಳ್ಳಿ, ಸೊಗದೆ, ಲಾವಂಚ, ಕೆಂಪುಚಂದನ, ನೀಲೋತ್ಪಲ, ಪದ್ಮಾಕ್ಷ, ಪರೂಷಕ, ಜೇಷ್ಟಮಧು, ಕುಂಬಳ, ಕೊತ್ತುಂಬರಿ ಇವುಗಳ ಕಷಾಯವು ಶಿಶುಗಳ ವಾತಜ್ವರವನ್ನು ನಾಶಮಾಡುವದು. ''

" ಶಾರಿವೋತ್ಪಲ ಕಾಶ್ಮರ್ಯ ಚ್ಛಿನ್ನಾ ಪದ್ಮಕ ಪರ್ಪಟೈಃ || ಕ್ವಾಥಃ
ಶೀತೋ ನಿಹಂತ್ಯಾಶು ಶಿಶೂನಾಂ ಪೈತ್ತಿಕಂ ಜ್ವರಮ್ || "

" ಸೊಗದೆ, ಉತ್ಪಲ, ಕುಂಬಳ, ಅಮೃತಬಳ್ಳಿ, ಪದ್ಮಾಕ್ಷ, ಪರ್ಪಾಷ್ಟಕ ಇವುಗಳ ಕಷಾಯವು ಶಿಶುವಿನ ಪಿತ್ತಜ್ವರವನ್ನು ನಾಶಮಾಡುವದರಲ್ಲಿ ಅಡ್ಡಿಯಿಲ್ಲ. ''

" ಮುಸ್ತಾ ಪರ್ಪಟಕೋಶೀರ ವಾರಿ ಪದ್ಮಕ ಸಾಧಿತಮ್ || ಶೀ
ತಂ ವಾರಿ ನಿಹಂತ್ಯಾಶು ತೃಷ್ಣಾ ದಾಹ ವಮಿ ಜ್ವರಾನ್ || "

"ತುಂಗಮುಸ್ತೆ, ಪರ್ಪಾಷ್ಟಕ, ಲಾವಂಚ, ಮುಡಿವಾಳ, ಪದ್ಮಾಕ್ಷ, ಇವುಗಳನ್ನು ಕುಟ್ಟಿ, ಕಷಾಯಮಾಡಿ, ಅದನ್ನು ಆರಿಸಿದ್ದನ್ನು ಶಿಶುವಿಗೆ ಕುಡಿಸುವದರಿಂದ, ದಾಹ, ವಮನ, ಜ್ವರ, ಬಾಯಾರಿಕೆಗಳನ್ನು ನಾಶ ಮಾಡುವದು. ಇಲ್ಲಿ ದಾಹವೆಂಬುದು ಮೈಯ್ಯಲ್ಲಿರುವ ಉರಿಯುಂದರಿಯುವದು. ''

" ಮಧುಕಂ ಚಂದನಂ ದ್ರಾಕ್ಷಾ ಧಾನ್ಯಕಂ ಸ ದುರಾಲಭಮ್ ||
ಏಭಿಃ ಕ್ವಾಥಃ ಕೃತೋ ಹನ್ಯಾದ್ದಾಹಂ ವಾತಜ್ವರಂ ತಥಾ || "

" ಜೇಷ್ಟಮಧು, ರಕ್ತಚಂದನ, ದ್ರಾಕ್ಷಿ, ಧನಿಯಾ, ಬಳ್ಳಿದುರಚಿ ಇವುಗಳಿಂದ ಮಾಡಿದ ಕಷಾಯವನ್ನು ಕುಡಿಸುವದರಿಂದ—ದಾಹ, ವಾತಜ್ವರ ಇವು ಶಮನಗೊಳ್ಳುವವು. ''

" ಮುಸ್ತಕಂ ಚಂದನಂ ವಾಸಾ ಹ್ರೀಬೇರಂ ಯಷ್ಟಿಕಾ ಮೃತಾ||
ಏಷಾಂ ಕ್ವಾಥೋಽಸೃಪಿತ್ತಘ್ನ ಸ್ತೃಷ್ಣಾ ದಾಹ ಜ್ವರಾಪಹಃ||"

" ತುಂಗಮುಸ್ತೆ, ಕೆಂಪುಚಂದನ, ಬಿದಿರುಯೆಲೆ, ನೆಲವಾಗಳಿ, ಜೇಷ್ಟಮಧು, ಅಮೃತಬಳ್ಳಿ, ಇವುಗಳ ಕಷಾಯವು—ಶಿಶುವಿನ ಪಿತ್ತವನ್ನೂ, ತೃಷೆಯನ್ನೂ, ದಾಹವನ್ನೂ, ಜ್ವರವನ್ನೂ ನಾಶಮಾಡುವದು.''

" ವಾಸಾ ಪರ್ಪಟಕೋ ಶೀರ ನಿಂಬ ಭೂನಿಂಬ ಸಾದಿತಃ || ಕ್ವಾ
ಥೋಹಂತಿ ವಮಿ ಶ್ವಾಸ ಕಾಸ ಪಿತ್ತಜ್ವರಾಂ ಚ್ಛಿಶೋಃ || "

" ಆಡುಸೋಗೆಯಲೆ, ಪರ್ಪಾಷ್ಟಕ, ಲಾಮಂಚ, ಬೇವಿನಚಕ್ಕೆ, ನೆಲಬೇವು ಇವುಗಳಿಂದ ಮಾಡಿದ ಕಷಾಯವು ಶಿಶುಗಳ—ವಮನ, ಶ್ವಾಸ, ಕಾಸ, ಪಿತ್ತಜ್ವರ ಇವುಗಳಿಗೆ ನಾಶನಕಾರಿಯು. "

" ಅಭಯಾ ಮಲಕೀ ಕೃಷ್ಣಾ ಚಿತ್ರಕೋಽಯಂ ಗಣೋ ಮತಃ॥
ದೀಪನಃ ಪಾಚನೋ ಭೇದೀ ಸರ್ವಶ್ಲೇಷ್ಮಜ್ವರಾಪಹಃ ॥ "

" ಅಳಲೆಚಕ್ಕೆ, ನೆಲ್ಲೀಚಟ್ಟು, ಜೀರಿಗೆ, ಚಿತ್ರಮೂಲ ಈ ಯೋಗವು ಕಷಾಯ ಅಥವಾ ಚೂರ್ಣರೂಪವಾಗಿ ಶಿಶುವಿಗೆ ಕೊಟ್ಟರೆ—ದೀಪನ, ಪಾಚನ, ಸೂಕ್ಷ್ಮಭೇಧಿಕಾರಿ, ಎಲ್ಲಾ ಶ್ಲೇಷ್ಮಜ್ವರಗಳಿಗೂ ರಾಮಬಾಣಸದೃಶವಾದದ್ದು. "

" ಕಟ್ಫಲಂ ಪುಷ್ಕರಂ ಶೃಂಗೀ ಪಿಪ್ಪಲೀಮಧುನಾ ಸಹ॥ ಏಷಾಂ
ಲೇಹ್ಯೋ ಜ್ವರಂ ಶ್ವಾಸಂ ಕಾಸಂ ಮಂದಾನಲಂ ಜಯೇತ್ ॥ "

" ಕಟ್ಫಲ, ಪುಷ್ಕರಮೂಲ, ಕರ್ಕಾಟಕಶೃಂಗೀ ಇವನ್ನು ಚೂರ್ಣಿಸಿ ಜೇನಿನೊಂದಿಗೆ ನೆಕ್ಕಿಸಿದರೆ ಶಿಶುವಿನ—ಜ್ವರ, ಶ್ವಾಸ, ಕಾಸ, ಮಂದಾಗ್ನಿ ಇವು ನಾಶನವಹುವು. "

" ಕಟುಕಂ ಕಟ್ಫಲಂ ಶೃಂಗೀ ಪುಷ್ಕರಂ ಪಿಪ್ಪಲೀ ತಥಾ ॥ ಸಮ
ಸ್ತಾನೇಕಶೋ ವಾ ಪಿ ದ್ವಿಶೋವಾ ಪಿ ಭಿಷಗ್ವರಃ॥ ಏಷಾಂ ಚೂ
ರ್ಣೀಕೃತಾನದ್ಯಾತ್ ಮಧ್ವಾದ್ರ್ರಕ ರಸಪ್ಲುತಾ॥ ಕಫಜ್ವರಾರು
ಚಿ ಶ್ವಾಸ ಛರ್ದಿ ಶೂಲಾಪಹಚ್ಛಿಶೋಃ ॥ "

" ಮೆಣಸು, ಕಟ್ಫಲ, (ಕಹಿಪಡವಲು) ಕರ್ಕಾಟಕಶೃಂಗೀ, ಹಿಪ್ಪಲೀ ಇವುಗಳಲ್ಲಿ ಒಂದೊಂದನ್ನೇಯಾಗಲೀ, ಎರಡೆರಡನ್ನಾಗಲೀ, ಮೂರುಮೂರನ್ನಾಗಲೀ, ಎಲ್ಲವನ್ನಾಗಲೀ ಚೂರ್ಣಮಾಡಿ, ಹಸೀಶುಂಠಿರಸ ಮತ್ತು ಜೇನುತುಪ್ಪದ ಅನುಪಾನದಲ್ಲಿ ಶಿಶುವಿಗೆ ನೆಕ್ಕಿಸಲು—ಕಫಜ್ವರ, ಅರುಚಿ, ಶ್ವಾಸ, ಛರ್ದಿ, ಶೂಲಿ ಇವೆಲ್ಲಾ ನಾಶವಾಗುವವು. "

" ಕ್ಷುದ್ರೋಪಕುಲ್ಯಾಃ ಸಂಗಸ್ತು ಶ್ವಾಸ ಕಾಸ ಜ್ವರಾಪಹಃ ॥
ಪ್ಲೀಹಾನಂ ಹಂತಿ ಹಿಕ್ಕಾಂ ಚ ಬಾಲಾನಾಂ ತು ಪ್ರಶಸ್ಯತೇ ॥ "

" ಸಣಹಿಪ್ಪಲಿಯ ಚೂರ್ಣಮಾಡಿ ಜೇನುತುಪ್ಪದಲ್ಲಿ ನೆಕ್ಕಿಸುವದು. ಮಕ್ಕಳ—ಶ್ವಾಸ, ಕಾಸ, ಶೀತಜ್ವರ, ಜ್ವರಗಡ್ಡೆ, ಬಿಕ್ಕಳಿಕೆ ಇವುಗಳನ್ನು ನಿರ್ಮೂಲಮಾಡುವದು. ಈ ಔಷಧವು ಮಕ್ಕಳಿಗೆ ಎಲ್ಲಾ ರೋಗಕ್ಕೂ ಪ್ರಶಸ್ತವಾದದ್ದು. "

"ಮಧುಕಂ ಶಾರಿಬಾ ದ್ರಾಕ್ಷಾ ಮಧೂಕಂ ಚಂದನೋತ್ಪಲಮ್॥
ಕಾಶ್ಮರೀ ಪದ್ಮಕಂ ಲೋಧ್ರಂ, ತ್ರಿಫಲಾ ಪದ್ಮಕೇಸರಮ್ ॥ ಪ

ರೂಷಕಂ ಮೃಣಾಲಂ ಚ ನ್ಯಸೇದುತ್ತಮ ವಾರಿಣಿ || ಮಧು ಲಾಜಾ ಸಿತಾಯುಕ್ತಂ ತತ್ಪೀತಮುಷಿತಂ ನಿಶಿ || ವಾತಪಿತ್ತಜ್ವರಂ ದಾಹಂ ತೃಷ್ಣಾ ಮೂರ್ಛಾ ರುಚಿ ಭ್ರಮಾನ್|| ಶಮಯೇದ್ರಕ್ತ ಪಿತ್ತಂ ಚ ಜೀಮೂತಮಿವ ಮಾರುತಃ || "

" ಜೇಷ್ಟ್ಯಮಧು, ಸೊಗದೆಬೇರು, ದ್ರಾಕ್ಷಾ, ಇಪ್ಪೀಹೂವು, ರಕ್ತಚಂದನ, ನೀಲೋತ್ಪಲ, ಕುಂಬಳ, ಪದ್ಮಕ, ಲೋಧ್ರ, ಅಳಲೆಯುಚಕ್ಕೆ, ತಾರೇಕಾಯಿ, ನೆಲ್ಲೀಚಟ್ಟು, ಕಮಲಗಡ್ಡೆ, ನಾಗಕೇಸರ, ಪದ್ಮಕೇಸರ, ಕಮಲ, ಪರೂಷಕ, ಕಮಲನಾಲ, ಅಕ್ಕಿಯಅರಳು, ಸಕ್ಕರೆ ಈ ದ್ರವ್ಯಗಳನ್ನು ಚೂರ್ಣಿಸಿ ರಾತ್ರಿಯಲ್ಲಿ ಅರ್ಧ ವಳಲೆ ನೀರಿನಲ್ಲಿ ೧ ಕಾಸು ತೂಕ ಚೂರ್ಣವನ್ನೂ ಸಕ್ಕರೆ ೧ ಕಾಸು ತೂಕವನ್ನು ನೆನೆಹಾಕಿಟ್ಟದ್ದು, (ಬಾಯಿ ಮುಚ್ಚಿರಬೇಕು.) ಬೆಳಿಗ್ಗೆ ಚನ್ನಾಗಿ ಕಿವಿಚಿ ಹಿಂಡಿಕೊಂಡು ಸ್ವಲ್ಪ ಜೇನುತುಪ್ಪ ಹಾಕಿ ಮಕ್ಕಳಿಗೆ ಕುಡಿಸಲು—ವಾತಪಿತ್ತ ವಿಕಾರ ಜ್ವರಗಳು, ದಾಹ, ಬಾಯಾರಿಕೆ, ಮೂರ್ಛೆ, ಅರುಚಿ, ಭ್ರಮೆ, ರಕ್ತಪಿತ್ತ ಇವೆಲ್ಲಾ ರೋಗಗಳನ್ನೂ ನಾಶಮಾಡುವದು. "

" ಕೈರಾತೋ ಜಲದಶ್ಛಿನ್ನಾ ಪಂಚ ಮೂಲೀ ಲಘು ಸ್ತಥಾ || ಏಷಾಂ ಕಷಾಯೋ ಹಂತ್ಯಾಶು ವಾತ ಪಿತ್ತೋತ್ತರಂ ಜ್ವರಮ್||"

" ಚಿರಾಯಿತಾ, ತುಂಗಮುಸ್ತೆ, ಅಮೃತಬಳ್ಳಿ, ಶಾಲಪರ್ಣೀ, ಪೃಶ್ನಿಪರ್ಣೀ, ೨ ಬಗೆ ಗುಳ್ಳ, ಆನೆನೆಗ್ಗಿಲು, ಇವುಗಳ ಕಷಾಯವು ಶಿಶುಗಳ ವಾತಪಿತ್ತಾಧಿಕ್ಯವುಳ್ಳ ಜ್ವರವನ್ನು ನಾಶಮಾಡುವದು. "

" ಮುಸ್ತಾ ಪರ್ಪಟಕಂ ಛಿನ್ನಾ ಕಿರಾತಂ ವಿಶ್ವಭೇಷಜಮ್ || ಏಷಾಂ ಕಷಾಯೋ ದಾತವ್ಯೋ ವಾತಪಿತ್ತ ಜ್ವರಾಪಹಃ || "

" ತುಂಗಮುಸ್ತೆ, ಪರ್ಪಾಷ್ಟಕ, ಅಮೃತಬಳ್ಳಿ, ಚಿರಾಯಿತಾ ಇವುಗಳ ಕಷಾಯವು ಮಕ್ಕಳ ವಾತಪಿತ್ತಜ್ವರ ಹರವಾದದ್ದು. "

" ಉಶೀರಂ ಮಧುಕಂ ದ್ರಾಕ್ಷಾ ಕಾಶ್ಮರೀನೀಲಮುತ್ಪಲಂ || ಪರೂಷಕಂ ಪದ್ಮಕಂ ಚ ಮಧೂಕಂ ಮಧುಕಂ ಬಲಾ|| ಏಭಿಃ ಕೃತಃ ಕಷಾಯೋಽಯಂ, ವಾತಪಿತ್ತಜ್ವರಂ ಜಯೇತ್ || ಪ್ರಲಾಪ ಮೂರ್ಛಾ ಸಂಮೋಹ ತೃಷ್ಣಾ ಪಿತ್ತಜ್ವರಾಪಹಃ || "

" ಲಾಮಂಚ, ಜೇಷ್ಟ್ಯಮಧು, ದ್ರಾಕ್ಷಿ, ಕುಂಬಳ, ನೀಲೋತ್ಪಲ, ಪರೂಷಕ, ಪದ್ಮಕ, ಜೇಷ್ಟ್ಯಮಧು (ಇದು ೨ ಸಲ ಬಂದಿದೆ ಅದಕ್ಕಾಗಿ ೨ ಪಾಲು ಹಾಕಬೇಕೆಂದರ್ಥವು.) ಇಪ್ಪೀಹುವ್ವು, ಚಿಟ್ಟಾಮುಟ್ಟಿ, ಈ ದ್ರವ್ಯ

ಗಳಿಂದ ಮಾಡಿದ ಕಷಾಯವನ್ನು ಕುಡಿಯುವದರಿಂದ ಶಿಶುಗಳ ವಾತಪಿತ್ತ ಜ್ವರ, ಪ್ರಲಾಪ, ಮೂರ್ಛಾ, ತೃಷಾ ಪಿತ್ತಜ್ವರ ಇವು ನಿರ್ನಾಮವಾಗುವವು.''

**" ತ್ರಿಫಲಾ ಪಿಚುಮಂದಶ್ಚ ಪಟೋಲಂ ಮಧುಕಂ ಬಲಾ ॥ ಏ
ಭಿಃ ಕ್ವಾಥಃ ಕೃತಃ ಪೀತಃ ಪಿತ್ತಶ್ಲೇಷ್ಮ ಜ್ವರಾಪಹಃ ॥ "**

'' ತ್ರಿಫಲಾ, ಬೇವಿನಚಕ್ಕೆ, ಕಹಿಪಡವಲ, ಜೇಷ್ಟಮಧು, ಚಿಟ್ಟಾಮುಟ್ಟ ಇವುಗಳಿಂದ ಮಾಡಿದ ಕಷಾಯವು ಶಿಶುಗಳ ಪಿತ್ತಶ್ಲೇಷ್ಮ ಜ್ವರಾಪಹವಾದದ್ದು. ''

**"ಅಮೃತೇಂದ್ರಯವೋಽರಿಷ್ಟಂ ಪಟೋಲಂ ಕಟುರೋಹಿಣೀ॥
ನಾಗರಂ ಚಂದನಂ ಮುಸ್ತಂ ಪಿಪ್ಪಲೀ ಚೂರ್ಣ ಸಂಯುತಮ್॥
ಅಮೃತಾಷ್ಟಕಮಿತ್ಯೇತತ್ಪಿತ್ತ ಶ್ಲೇಷ್ಮಜ್ವರಾ ಪಹಮ್ ॥ ಹೃ
ಲ್ಲಾಸ ರೋಚಕ ಚ್ಛರ್ದಿ ತೃಷ್ಣಾ ದಾಹ ವಿನಾಶನಮ್ ॥ "**

'' ಅಮೃತಬಳ್ಳಿ, ಇಂದ್ರಜವೆ, ಬೇವಿನಚಕ್ಕೆ, ಕಹಿಪಡವಲ, ಕಟುಕರೋಹಿಣಿ, ಶುಂಠಿ, ರಕ್ತಚಂದನ, ತುಂಗಮುಸ್ತೆ ಇವುಗಳನ್ನು ಚೂರ್ಣಿಸಿ ಆ ಕಲ್ಕ ಒಂದು ಪಾವಲಿತೂಕವನ್ನು ೨ ರೂಪಾಯಿ ತೂಕದ ನೀರಿನಲ್ಲಿ ಕಷಾಯವಿಕ್ಕಿ ಚತುರ್ಥಾಂಶವನ್ನು ಇಳಿಸಿ ಶೋಧಿಸಿಕೊಂಡು ಶಿಶುವಿಗೆ ಕುಡಿಸುವದು. ಇದರಿಂದ ಪಿತ್ತಶ್ಲೇಷ್ಮಜ್ವರ, ಹೃಲ್ಲಾಸ, ಅರುಚಿ, ಛರ್ದಿ, ತೃಷ್ಣಾ, ದಾಹ (ಮೈಯ್ಯುರಿ) ಇವುಗಳನ್ನು ರಾಮಬಾಣದಂತೆ ಈ ಕಷಾಯವು ಗುಣಪಡಿಸುವದು. ''

**" ಮುಸ್ತಾಽಮೃತಾ ಪರ್ಪಟಿ ಪುಷ್ಕರಾಹ್ವೈಃ।
ಪಟೋಲ ಧನ್ಯಾಕ ಕಿರಾತ ತಿಕ್ತೈಃ ॥
ಸ ಚಂದನೋಶೀರ ಬಲಾ ಜಕಾಖ್ಯೈಃ ।
ಕ್ವಾಥಃ ಪರಂ ಪಿತ್ತಕಫ ಜ್ವರಘ್ನಃ ॥ "**

'' ತುಂಗಮುಸ್ತೆ, ಅಮೃತಬಳ್ಳಿ, ಪರ್ಪಾಷ್ಟಕ, ಪುಷ್ಕರಮೂಲ, ಕಹಿಪಡವಲ, ಧನಿಯಾ, ಚಿರಾಯಿತಾ, ರಕ್ತಚಂದನ, ಲಾಮಂಚ, ಚಿಟ್ಟಾಮುಟ್ಟ, ಸೊಗದೇಬೇರು ಇವುಗಳ ಕಷಾಯವನ್ನು ಕುಡಿಸುವದು. ಶಿಶುಗಳ ಪಿತ್ತ ಕಫಜ್ವರವನ್ನು ನಿರ್ಮೂಲಮಾಡುತ್ತದೆ. ''

**" ಹೃಲ್ಲಾಸ ತೃಷ್ಣಾ ಮೋಹಾಂಶ್ಚಾಽರುಚಿಂ ದಾಹಂ ಚ ಛರ್ದ
ನಮ್ ॥ ಪಾರ್ಶ್ವ ವ್ಯಥಾಂ ಹರೇತ್ಸದ್ಯಃ ಪ್ರಯೋಗೋಽಯಂ
ಸುಶೋಭನಃ ॥ "**

'' ಹೃಲ್ಲಾಸ, ತೃಷ್ಣಾ (ಬಾಯಾರಿಕೆ) ಮೋಹ, ಅರುಚಿ, ದಾಹ (ಮೈಯ್ಯುರಿ) ಛರ್ದಿ, ಪಾರ್ಶ್ವಶೂಲೆ ಇವುಗಳನ್ನು ತತ್‌ಕ್ಷಣವೇ ಗುಣಪಡಿಸುವದರಿಂದ ಶಿಶುಗಳಿಗೆ ಈ ಯೋಗವು ಪರಮೋತ್ತಮವಾದದ್ದೆಂದು ಹೇಳುತ್ತಾರೆ. ''

" ಧಾನ್ಯಕ ಚಂದನ ಪದ್ಮಕ ಮುಸ್ತಾ ।
ಶಕ್ರಯವಾಮಲಕ್ಯೈಃ ಸ ಪಟೋಲ್ಯೈಃ ॥
ಶೀತಕಷಾಯಮಮುಂ ಖಲು ದದ್ಯಾ ।
ದ್ಬಾಲಕೆ ಪಿತ್ತ ಕಫಜ್ವರ ಹೃತ್ಸ್ಯಾತ್ ॥ "

" ಧನಿಯಾ, ರಕ್ತಚಂದನ, ಪದ್ಮಾಕ್ಷ, ತುಂಗಮುಸ್ತೆ, ಇಂದ್ರಜವೆ ನೆಲ್ಲೀಚಟ್ಟು, ಕಹಿಪಡವಲ, ಈ ದ್ರವ್ಯಗಳ ಕಷಾಯವನ್ನು ಚತುರ್ಥಾಂಶವಾಗಿ ಕಾಸಿ ಥಣ್ಣಗೆಮಾಡಿ ಕುಡಿಸಿದರೆ ಶಿಶುವಿನ ಕಫ ಪಿತ್ತಜ್ವರ ನಾಶವಾಗುವದು. "

" ವಾಸಾರಸಃ ಕ್ಷೌದ್ರ ಸಿತಾ ಸಮೇತಃ ।
ಜ್ವರಂ ಹರೇತ್ಪಿತ್ತ ಬಲಾಸ ಜಾತಮ್ ॥
ಶ್ವಾಸಂ ಸಕಾಸಂ ಚ ವಮಿಂ ಸದಾಹಮ್ ।
ಸಕಾಮಲಂ ಹಂತಿ ಸ ರಕ್ತಪಿತ್ತಮ್ ॥ "

" ಆಡುಸೋಗೆಯ ಎಲೆಗಳನ್ನು ಪುಟಪಾಕವಿಟ್ಟು (ಅಂದರೆ ಎಲೆಗಳನ್ನು ಒಟ್ಟು ಸೇರಿಸಿ ಅದರಮೇಲ್ಗಡೆ ಕೆಮ್ಮಣ್ಣು ಮೆತ್ತಿ ಮುಂಬೂದಿಯ ಕೆಂಡದಲ್ಲಿ ಹೊಳಿದ್ದು ಪಕ್ವವಾದನಂತರ) ತೆಗದು ಅರದುಕೊಂಡು ಹಿಂಡಿಕೊಂಡರೆ ಬರುವ ರಸದಲ್ಲಿ ಸ್ವಲ್ಪ ಸಕ್ಕರೆ ಜೇನುತುಪ್ಪ ಸಹಾ ಹಾಕಿ ನೆಕ್ಕಿಸಿದರೆ ಬಾಲಕನ ಪಿತ್ತ, ಕಫಜ್ವರ, ಶ್ವಾಸಕಾಸ, ಛರ್ದಿ, ದಾಹ, ಕಾಮಲಾ, ರಕ್ತಪಿತ್ತ ಇವೆಲ್ಲವೂ ನಾಶನವಹುದು. "

" ಸಾರಗ್ವಧಃ ಸಾತಿವಿಷಃ ಸಮುಸ್ತಃ ।
ಶಿಕ್ತಾಕಷಾಯೋ ಜ್ವರಮಾಶು ಹನ್ಯಾತ್ ॥
ಸಾಮಂ ಸ ಶೂಲಂ ಸ ವಮಿಂ ಸ್ವದಾಹಮ್ ।
ಸಾಧ್ಮಾನಬಂಧಂ ಸ ಕಫಂ ಸವಾತಮ್ ॥ "

" ಕಕ್ಕೆಚಕ್ಕೆ, ಅತಿವಿಷ, ತುಂಗಮುಸ್ತೆ, ಕಟುಕರೋಹಿಣಿ ಇವುಗಳ ಕಷಾಯವನ್ನು ಶಿಶುಗಳ ಶೂಲಿಸಹಿತವಾದ ಜ್ವರಕ್ಕೂ, ವಮನಕ್ಕೂ, ದಾಹಕ್ಕೂ, ಆಮವೃದ್ಧಿಗೂ, ಆಧ್ಮಾನವಾಯುವಿಗೂ, ಮಲಬಂಧಕ್ಕೂ, ಕಫಕ್ಕೂ, ವಾಯುವಿಗೂ ಕೊಡತಕ್ಕದ್ದು. "

" ಕಿರಾತ ತಿಕ್ತಕಂ ಮುಸ್ತಂ ಗುಡೂಚೀ ವಿಶ್ವಭೇಷಜಮ್॥ ಚಾ
ತುರ್ಭದ್ರಕಮಿತ್ಯಾಹುಃ ವಾತಶ್ಲೇಷ್ಮ ಜ್ವರಾಪಹಮ್ ॥ "

" ಚಿರಾಯಿತಾ, ತುಂಗಮುಸ್ತೆ, ಅಮೃತಬಳ್ಳಿ, ಶುಂಠಿ ಇವಕ್ಕೆ ಚಾತುರ್ಭದ್ರವೆನ್ನುವರು. ಇದರ ಕಷಾಯವು ವಾತಶ್ಲೇಷ್ಮ ಜ್ವರಹರವು. "

" ಮುದ್ಗ ತಂಡುಲ ಸಂಸಿದ್ಧಂ ಕೇವಲೈರ್ವಾ ಮುಕುಷ್ಟಕೈಃ ||
ಪಥ್ಯ ಮತ್ರ ಭೀಷಗ್ದದ್ಯಾದ್ಯೂಷಂ ವಾತಕಫಜ್ವರೇ || "

" ಹೆಸರುಬೇಳೆ ಅಕ್ಕಿ ಬೆರಸಿದ್ದರಲ್ಲಿ ಮಾಡಿದ ಯೂಷವನ್ನಾಗಲೀ, (ಮುಕುಷ್ಟಕ) ಕಾಡು ಹೆಸರಿನಬೇಳೆಯಿಂದ ಮಾಡಿದ ಯೂಷವನ್ನಾಗಲೀ ವಾತ ಕಫ ಜ್ವರದಲ್ಲಿ ಕೊಡುವದು ಪಥ್ಯವಾದ್ದರಿಂದ ಶಿಶುವಿನ ವಾತ ಕಫ ಜ್ವರದಲ್ಲಿ ಇದನ್ನೇ ಪಥ್ಯವನ್ನಾಗಿ ಇಡತಕ್ಕದ್ದು. "

" ದಶಮೂಲೀ ಕೃತಃ ಕ್ವಾಥಃ ಪಿಪ್ಪಲೀ ಚೂರ್ಣ ಸಂಯುತಃ||
ಮೋಹಂ ಸಂಶಮಯೇತ್ತದ್ವತ್ಸನ್ನಿಪಾತಂ ಜ್ವರಂ ತಥಾ || "

" ದಶಮೂಲಗಳೆಂದು ವೈದ್ಯಶಾಸ್ತ್ರದಲ್ಲಿ ಪ್ರಸಿದ್ಧ ಮೂಲಿಕೆಗಳ ಕಷಾಯವನ್ನು ಹಿಪ್ಪಲೀ ಚೂರ್ಣದೊಂದಿಗೆ ಶಿಶುವಿಗೆ ಕುಡಿಸಲು—ಮೂರ್ಛಾ, ಸನ್ನಿ, ಜ್ವರ ಇವು ಹರವಹುದು. "

" ಛಿನ್ನಾ ಸಟೀ ಪುಷ್ಕರ ಮೂಲ ತಿಕ್ತಾಃ |
ಶೃಂಗೀ ಸ ಪಾಠಾ ಮೃತ ವಲ್ಲರೀ ಚ ||
ದುರಾಲಭಾ ವಿಶ್ವ ಕಿರಾತ ತಿಕ್ತಾಃ |
ಸಮಸ್ತದೋಷಜ್ವರ ಹೃದ್ಗಣೋऽಯಮ್ || "

" ಅಮೃತಬಳ್ಳಿ, ಕಚೋರ, ಪುಷ್ಕರಮೂಲ, ಕಟುಕರೋಹಿಣಿ, ಕರ್ಕಾಟಕಶೃಂಗಿ ಇವುಗಳ ಕಷಾಯವನ್ನೂ—ಕರ್ಕಾಟಕಶೃಂಗಿ, ಕುಂಬಳ ಬೇರು, ಅಮೃತಬಳ್ಳಿ ಇವುಗಳ ಕಷಾಯವನ್ನೂ—ಬಳ್ಳಿತುರಚಿ, ಶುಂಠಿ, ಚಿರಾಯಿತಾ, ಬೇವಿನಯಲೆ ಅಥವಾ ಚಕ್ಕೆ ಇವುಗಳ ಕಷಾಯವನ್ನೂ, ಅಂದರೆ ಈ ಮೂರು ಕಷಾಯದಲ್ಲಿ ಯಾವದನ್ನಾದರೂ ಶಿಶುವಿಗೆ ಪಾನಮಾಡಿಸುತ್ತಾಬಂದರೆ ಸರ್ವದೋಷಗಳನ್ನೂ, ಸರ್ವಜ್ವರಗಳನ್ನೂ ನಾಶಮಾಡುವದು. "

" ಭೂನಿಂಬ ದಾರು ದಶಮೂಲ ಮಹೌಷದಾಬ್ದ |
ತಿಕ್ತೇಂದ್ರ ಬೀಜ ಧನಿಕೇ ಭಕಣಾ ಕಷಾಯಃ ||
ತಂದ್ರಾ ಪ್ರಲಾಪ ಕ ಸ ನಾ ರುಚಿ ದಾಹಮೋಹ |
ಶ್ವಾಸಾದಿ ಯುಕ್ತಮಖಿಲಂ ಜ್ವರಮಾಶು ಹಂತಿ || "

" ಚಿರಾಯಿತಾ, ದೇವದಾರು, ದಶಮೂಲ, ಶುಂಠಿ, ತುಂಗಮುಸ್ತೆ, ಕಟುಕರೋಹಿಣಿ, ಇಂದ್ರಜವೆ, ಕೊತ್ತುಂಬರಿ, ಗಜಹಿಪ್ಪಲಿ ಇವುಗಳ ಕಷಾಯವು ಶಿಶುಗಳ—ತಂದ್ರಾ, ಪ್ರಲಾಪ, ಕಾಸ, ಅರುಚಿ, ದಾಹ, ಮೂರ್ಛಾ, ಶ್ವಾಸ ಈ ರೋಗಗಳಿಂದ ಕೂಡಿದ ಜ್ವರವನ್ನು ರಾಮಬಾಣದಂತೆ ಸಂಹರಿಸುವದು. "

" ವಾಸಾ ವ್ಯಾಘ್ರೀ ಕಣಾ ಲೇಹಃ ಶೀತಜ್ವರ ವಿನಾಶನಃ ॥ ತದ್ವ ತ್ಕ್ವಾಥಾಮೃತಾಸಂತಾ ತಿಕ್ತ ಭೂನಿಂಬ ಸಾಧಿತಃ ॥ "

" ಆಡುಸೋಗೆ, ನೆಲಗುಳ್ಳದಬೇರು, ಹಿಪ್ಪಲಿ ಇವುಗಳನ್ನು ಚೂರ್ಣಿಸಿ ವಸ್ತ್ರಗಾಳಿತಮಾಡಿ ಸಕ್ಕರೆಪಾಕದಲ್ಲಿ ಹಾಕಿ ಮಾಡಿದ ಅವಲೇಹವನ್ನು ಶಿಶುವಿಗೆ ತಿನ್ನಿಸುತ್ತಾಬಂದರೆ ಶೀತಜ್ವರವನ್ನು ನಾಶಮಾಡುವದು. ಹಾಗೆಯೇ ಗುಳ್ಳದಬೇರು, ಅಮೃತಬಳ್ಳಿ, ಬಳ್ಳಿದುರಚಿ, ಕಟುಕರೋಹಿಣಿ, ಚಿರಾಯಿತಾ ಇವುಗಳನ್ನು ಹಾಕಿ ಕಾಯಿಸಿದ ಕಷಾಯವೂ ಶೀತಜ್ವರವೈರಿಯೆಂದರಿಯುವದು. "

" ಗುಡೂಚೀ ವಿಹಿತಃ ಕ್ವಾಥಃ ಕಣಾ ಚೂರ್ಣಸಮನ್ವಿತಃ॥ ಐಕಾಹಿಕಂ ಜ್ವರಂ ಹಂತಿ ಕಾಸಶ್ವಾಸಾದಿ ದೂಷಿತವತ್ ॥ "

" ಅಮೃತಬಳ್ಳಿಯ ಕಷಾಯ ಕಾಸಿ ಹಿಪ್ಪಲಿಚೂರ್ಣವೆರಸಿ ಕುಡಿಸಲು ಶಿಶುಗಳ ಕಾಸಶ್ವಾಸಾದಿ ದೋಷಯುಕ್ತವಾದ ಏಕಾಹಿಕ ಜ್ವರವನ್ನು ನಾಶಮಾಡುವದು. "

"ದ್ರಾಕ್ಷಾ ಪಟೋಲ ತ್ರಿಫಲಾ ಪಿಚುಮಂದವೃಷ್ಟೈಃ ಕೃತಃ ॥ ಕ್ವಾಥ ಐಕಾಹಿಕಂ ಹಂತಿ ಪರಾರ್ಥಮಿವ ದುರ್ಜನಃ ॥ "

" ದ್ರಾಕ್ಷಿ, ಅಮೃತಬಳ್ಳಿ, ಅಳಲೇಕಾಯಿಶಿಪ್ಪೆ, ತಾರೇಕಾಯಿ, ನೆಲ್ಲೀಚಟ್ಟು ಬೇವಿನಚಕ್ಕೆ ಆಡುಸೋಗೆಯ ಎಲೆ ಇವುಗಳ ಕಲ್ಕದಿಂದ ಮಾಡಿದ ಕಷಾಯವು (ದುರ್ಜನನು ಪರಸ್ವಾಪಹಾರ ಮಾಡುವಂತೆ) ಶಿಶುವಿನ ಏಕಾಹಿಕ ಜ್ವರವನ್ನು ನಾಶಮಾಡುವದು. "

" ಅಮಂತ್ರ್ಯ ಪೂರ್ವಂ ಶುಚಿನಾ ಗೃಹೀತವತ್ ।
ಮಯೂರ ಮೂಲಂ ಕರಕೋಷ್ಟಬದ್ಧವತ್ ॥
ಪ್ರಾತಸ್ತಥಾ ಸೂರ್ಯದಿನೇ ನಿಹನ್ಯಾ ।
ದೈಕಾಹಿಕಂ ಶೋಣಿತ ಸೂತ್ರ ಬದ್ಧವತ್ ॥ "

" ಶನಿವಾರದ ಸಾಯಿಂಕಾಲ ಮಯೂರಶಿಖೀ ಮೂಲಿಕೆಯನ್ನು ಪೂಜಾದಿಗಳಿಂದ ನಿಮಂತ್ರಣವಿತ್ತು ದಾರವನ್ನು ಕಟ್ಟಿಬರುವದು. ಭಾನುವಾರ ಬೆಳಗ್ಗೆ ಪೂಜಾದಿಗಳಿಂದ ಕಿತ್ತುತಂದು ಕೆಂಪುದಾರದಲ್ಲಿ ಅದನ್ನು ಕೈಗೆ ಕಟ್ಟಲು ಈ ವಿಧಿಯಿಂದ ಏಕಾಹಿಕ ಜ್ವರವು ನಾಶವಾಗುವದು. "

" ಊರ್ಣನಾಭ್ಯಾ ಕೃತಂ ಜಾಲಂ ರಕ್ತಸೂತ್ರ ಸಮನ್ವಿತಮ್ ॥
ಮಿಶ್ರ್ಯ ತೈಲವೃತಂ ಕೃತ್ವಾ ಕಜ್ಜಲಂ ತೇನ ಕಾರಯೇತ್ ॥
ತೇನಾಂ ಜಿತಾಕ್ಷಃ ಕ್ಷಿಪ್ರೇಣ ಹನ್ಯಾದೇಕಾಹಕಜ್ವರಾತ್ ॥"

"ಜಾಡಶನ ಹುಳುವಿನ ಗೂಡನ್ನು ತಂದು ಅದರಜತೇಲಿ ಕೆಂಪುದಾರ ವನ್ನೂ ಶೇರಿಸಿ ಯಳ್ಳೆನಯಣ್ಣೇಲಿ ದೀಪವಿಟ್ಟು ಅದರಮೇಲೆ ಕಬ್ಬಿಣದ ತವೆ ಯನ್ನಿಟ್ಟು ಕಾಡಿಗೆಯನ್ನು ನಿರ್ವಾತಸ್ಥಾನದಲ್ಲಿ ಹಿಡಿಯುವದು. ಈ ಕಾಡಿಗೆ ಯನ್ನು ಕಣ್ಣಿಗೆ ಅಂಜನವಿಡುವದರಿಂದ ಏಕಾಹಿಕಜ್ವರ ನಾಶನವಹುದು."

"ಜ್ವರಂ ಭೂತಾಭಿಷಂಗೋತ್ಥಂ ರಕ್ಷಾಮಂತ್ರಾದಿ ಭಿರ್ಜಯೇ
ತ್ ॥ ವಿಷಘ್ನೌಷಧಯೋಗೇನ ವಿಷೋತ್ಥಮಪಿ ಬುದ್ಧಿಮಾನ್॥"

"ಭೂತಾದಿಗಳ ಅಭಿನಿವೇಶದಿಂದ ಜ್ವರವುಂಟಾದರೆ ಅದನ್ನು ಮಂತ್ರಾ ದಿರಕ್ಷಾ ಹಾಕುವದರಿಂದ ನಿವೃತ್ತಿಮಾಡಿಸುವದು. ವಿಷವಸ್ತುವನ್ನು ತಿಂದು ಬಂದ ಜ್ವರಗಳಿಗೆ ವಿಷಹರೌಷಧಗಳನ್ನು ಪ್ರಯೋಗಿಸಿ ವಿಷನಾಶನಪೂರ್ವಕ ಗುಣಪಡಿಸುವದು."

"ನಿಂಬ ಪತ್ರಾಮೃತಾ ನಂತಾಪಟೋಲೇಂದ್ರ ಯವೈಃ ಕೃತಃ॥
ಕ್ವಾಥಃ ಸತತಕಂ ಹನ್ಯಾತ್ಸುಪ್ರಭು ರ್ವ್ಯಸನಂ ಯಥಾ ॥"

"ಬೇವಿನಚಕ್ಕೆ, ಜಾಪತ್ರಿ, ಅಮೃತಬಳ್ಳಿ, ಬಳ್ಳಿದುರಚೆ, ಕಹಿಪಡವಲು, ಇಂದ್ರಯವೆ ಈ ಪದಾರ್ಥಗಳ ಕಷಾಯವು (ಈಶ್ವರನು ಸರ್ವದುಃಖಗ ಳನ್ನೂ ನಾಶಮಾಡಿದಂತೆ) ಶಿಶುಗಳ ಸತತಜ್ವರಕ್ಕೆ ರಾಮಬಾಣದಂತಿದೆ."

"ಗುಡೂಚೀ ಚಂದನೋಶೀರ ಧಾನ್ಯ ನಾಗರ ತೋಯದೈಃ ॥
ಕ್ವಾಥಸ್ತೃತೀಯಕಂ ಹನ್ಯಾಚ್ಛರ್ಕರಾ ಮಧು ಮಿಶ್ರಿತಃ ॥"

"ಅಮೃತಬಳ್ಳಿ, ರಕ್ತಚಂದನ, ಲಾಮಂಚ, ಧನಿಯ, ಶುಂಠಿ, ತುಂಗ ಮುಸ್ತೆ ಇವುಗಳ ಕಷಾಯಕ್ಕೆ ಸಕ್ಕರೆ ಜೇನುತುಪ್ಪ ಶೇರಿಸಿ ಕುಡಿಸಲು ಶಿಶು ಗಳ ಮೂರು ದಿನಕ್ಕೊಂದುಬಾರಿ ಬರುವ ಜ್ವರವನ್ನು ನಾಶಮಾಡುವದು."

"ಪಲಂಕಷಾ ವಚಾ ಕುಷ್ಟಂ ಗಜ ಚರ್ಮಾ ವಿ ಚರ್ಮ ಚ ॥ ನಿಂ
ಬಸ್ಯ ಪತ್ರಂ ಮಾಕ್ಷೀಕಂ ಸರ್ಪಿರ್ಯುಕ್ತಂ ತು ಧೂಪನಮ್ ॥
ಜ್ವರವೇಗಂ ನಿಹಂತ್ಯಾಶು ಬಾಲಾನಾಂ ತು ವಿಶೇಷತಃ ॥"

"ಗುಗ್ಗುಲು, ಭಜೆ, ಕೋಷ್ಟ, ಆನೆಯಚರ್ಮ, ಕುರಿಯಚರ್ಮ, ಬೇವಿ ನಯಲೆ ಈ ದ್ರವ್ಯಗಳನ್ನು ಕುಟ್ಟಿ, ತುಪ್ಪ, ಜೇನುತುಪ್ಪದಲ್ಲಿ ಕಲಿಸಿ ಧೂಪ ಹಾಕಿದರೆ ಜ್ವರವೇಗವನ್ನು ಶೀಘ್ರವಾಗಿ ನಿವೃತ್ತಿಮಾಡುತ್ತದೆ. ಬಾಲಕರ ಜ್ವರವನ್ನು ವಿಶೇಷತಯಾ ನಾಶಮಾಡಿಯೇಬಿಡುವದು, ಇದರಲ್ಲಿ ಸಂದೇಹ ವಿಲ್ಲ."

"ರಸೋನ ಹಿಂಗು ಲವಣೈಃ ಶೃಂಗೀ ಮರಿಚಮಾಕ್ಷಿಕೈಃ ॥ ಧೂ
ಪಃ ಸರ್ವಗ್ರಹಘ್ನೋಽಯಂ ಕುಮಾರಾಣಾಂ ಜ್ವರಾಪಹಃ ॥"

"ಬೆಳ್ಳುಳ್ಳಿ, ಹಿಂಗು, ಉಪ್ಪು, ಕರ್ಕಾಟಕಶೃಂಗಿ, ಮೇಣಸು, ಜೇನು ತುಪ್ಪ ಇವನ್ನು ಕೇರಿಸಿದ ಧೂಪವು ಗ್ರಹಗಳನ್ನು ಸಹಾ ನಾಶಮಾಡುವದು. ಬಾಲಕರ ಜ್ವರಗಳನ್ನು ನಾಶಮಾಡಿಯೇ ಬಿಡುವದು."

"ನಿರ್ಮೋಕಾ ಮರದಾರು ಹಿಂಗು ಮರಿಚಾರಿಷ್ಟ ಚ್ಛದಂ ಮಾಕ್ಷಿಕಮ್।
ನಿರ್ಮಾಲ್ಯಂ ನರಕೇಶ ಸರ್ಷಪ ವಚಾ ಗಂಧಂ ರಸೋನಃ ಶಿಲಾ ॥
ಯಷ್ಟೀ ಗುಗ್ಗುಲು ಕುಷ್ಟ ಪಿಂಛಲವಣಾ ಮಾರ್ಜಾರ ವಿಷ್ಠಾಘೃತಮ್।
ಸಜೀರ್ಣ ರುದ್ರಜಟಾರ್ಕಪತ್ರ ಜಲದಂ ಧೂಪೋ ವರೋऽಯಂಮು
ಹಾ ॥"

"ಹಾವಿನಪೊರೆ, ದೇವದಾರು, ಹಿಂಗು, ಮೆಣಸು, ಬೇವಿನಯೆಲೆ, ಜೇನುತುಪ್ಪ, ಯಕ್ಕದಹೂವು, ಮನುಷ್ಯನ ತಲೇಕೂದಲು, ಸಾಸವೆಕಾಳು, ಬಜೆ, ಗಂಧಕ, ಬೆಳ್ಳುಳ್ಳಿ, ಮಣಿಶಿಲೆ, ಜೇಷ್ಟಮಧು, ಗುಗ್ಗುಲು, ಕೋಷ್ಟ, ನವಿಲುಗರಿ, ಉಪ್ಪು, ಬೆಕ್ಕಿನವಿಷ್ಟಾ, ಘೃತ, ತಾಳ, ಬಾಲಹರಡಾ, ಯಕ್ಕೇಯಲೆ, ತುಂಗಮುಸ್ತೆ ಈ ದ್ರವ್ಯಗಳನ್ನು ಒಟ್ಟು ಕೇರಿಸಿ ಧೂಪವಿಡುವದರಿಂದ ಬಾಲಕರ ಸಮಸ್ತ ರೋಗಗಳೂ ನಾಶನವಹುದು."

"ನಿಂಬ ಕುಷ್ಟ ವಚಾ ಯಷ್ಟಿ ಸಿದ್ಧಾರ್ಥಕ ಪಲಂ ಕಷ್ಯೈಃ ॥ ಸ
ರ್ಪಿರ್ಲವಣಸರ್ಪತ್ವಗ್ಯವೈ ರ್ಧೂಪೋ ಜ್ವರಾಪಹಃ ॥"

"ಬೇವಿನಸೊಪ್ಪು, ಕೋಷ್ಟ, ಬಜೆ, ಜೇಷ್ಟಮಧು, ಸಾಸವೆ, ಗುಗ್ಗುಲ, ಘೃತ, ಉಪ್ಪು, ಸರ್ಪದಪೊರೆ, ಯವ, ಇವುಗಳಿಂದ ಧೂಪಹಾಕುವಿಕೆಯು ಜ್ವರಘ್ನವಾದದ್ದು."

"ನಿರ್ಗುಂಡ್ಯಾಃ ಸಹದೇವ್ಯಾಶ್ಚ ಕಟೌ ಬದ್ಧಂ ಜಟಾದ್ವಯಮ್॥
ಪ್ರಾತರಾದಿತ್ಯವಾರೇ ಚ ಸರ್ವಜ್ವರ ವಿನಾಶಕೃತ್ ॥"

"ರವಿವಾರ ಪ್ರಾತಃಕಾಲದಲ್ಲಿ ನಿರ್ಗುಂಡೀ (ಕರೀಲಕ್ಕಿ) ಬೇರನ್ನೂ, ಹಾಗೆಯೇ ಸಹದೇವೀ ಬೇರನ್ನೂ ಕಿತ್ತು ತಂದು ಧೂಪಹಾಕಿ ಈ ೨ನ್ನೂ ಸೊಂಟದಲ್ಲಿ ಕಟ್ಟುವದರಿಂದ ಸರ್ವಜ್ವರ ನಾಶನವಹುದು."

"ಕನ್ಯಾ ಕಾರ್ತಿತ ಸೂತ್ರೇಣ ಬದ್ಧಾऽಪಾಮಾರ್ಗ ಮೂಲಿಕಾ ॥
ಐಕಾಹಿಕಂ ಜ್ವರಂ ಹಂತಿ ಶಿಖಾಯಾಮಪಿ ವೇಗತಃ ॥"

"ಕನ್ನಿಕೆಯ ಕೈಯ್ಯಿಂದ ದಾರವನ್ನು ಕದಂನಲ್ಲಿ ಮಾಡಿಸಿ, ಅಪಾಮಾರ್ಗ (ಉತ್ತರೇಣಿ) ಬೇರನ್ನು ಕಿತ್ತು ತಂದದ್ದನ್ನು ಅರಿಶಿನಹಚ್ಚಿದ. ಆ ದಾರದಿಂದ ರೋಗಿಯ ಶಿರಸ್ಸಿಗೆ ಧೂಪಹಾಕಿ ಕಟ್ಟಲು ಐಕಾಹಿಕಜ್ವರ ನಾಶನವಹುದು."

" ಕರ್ಣೇ ಬದ್ಧಾ ರವೌ ಶ್ವೇತ ತುರಂಗಾರಿ ಪ್ರಮೂಲಿಕಾ || ಸರ್ವ
ಜ್ವರಹರಾ ಶ್ವೇತ ಮಂದಾರಸ್ಯ ಚ ಮೂಲಿಕಾ || "

" ರವಿವಾರದದಿನ ಬಿಳೀ ಕಣಗಲು ಬೇರನ್ನು ತಂದು ಧೂಪಹಾಕಿ ಕಿವಿಗೆ ಕಟ್ಟಿದರೂ, ಹಾಗೆಯೇ ರವಿವಾರ ಕಿತ್ತುತಂದ ಬಿಳೀಯಕ್ಕೆಯ ಬೇರನ್ನು (ಕಿವಿಯಲ್ಲಿ) ಧೂಪಹಾಕಿ ಕಟ್ಟಿದರೂ ಎಲ್ಲಾ ಜ್ವರಗಳೂ ನಾಶನವಹುದು. "

" ಕಾಕಮಾಚೀ ಶಿಫಾ ಕರ್ಣೇ ಬದ್ಧಾ ರಾತ್ರಿ ಜ್ವರಾಪಹಾ || "

" ಕಾಕೀಗಿಡದ ಬೇರನ್ನು ತಂದು ಕಿವಿಯಲ್ಲಿ ಕಟ್ಟಲು ರಾತ್ರಿಯಲ್ಲಿ ಬರುವ ಜ್ವರ ನಿವೃತ್ತಿಯಾಗುವದು. "

" ಓಂ ನಮೋ ವಾನರಸ್ಯ ಮುಖಂ ಘೋರಮಾದಿತ್ಯ ಸಮ ತೇಜ
ಸಮ್|| ತಸ್ಯ ಸ್ಮರಣ ಮಾತ್ರೇಣ ಜ್ವರಂ ನಶ್ಯತಿ ತತ್ಕ್ಷಣಮ್||"

" ಈ ಮಂತ್ರವನ್ನು ಒಂದು ಹಂಚೀ ಪಿಲಕಿಯಮೇಲೆ ಬರೆದು ಅದನ್ನು ಬೆಂಕಿಯ ಕೆಂಡದಲ್ಲಿಟ್ಟದ್ದು ಶೀತಜ್ವರವಾದರೆ ರೋಗಿಯ ಹಾಸಿಗೆಯ ಕೆಳಕ್ಕೆ ಇಡುವದು, ಉಷ್ಣಜ್ವರದಲ್ಲಿ ಈ ಬರದ ಹಂಚೀಪಿಲಕಿಯನ್ನು ಜಲಪಾತ್ರೇಲಿಟ್ಟದ್ದು ರೋಗಿಯ ಹಾಸಿಗೆಯ ತಳದಲ್ಲಿಡುವದು. ಜ್ವರಬಿಟ್ಟು ಹೋಗುತ್ತೆ. "

## ಶಿಶುಗಳ ಅತಿ ಸಾರದ ಔಷಧ.

" ಲೋಧ್ರಂ ಸಮಂಗಾ ಜಲ ಧಾತಕೀ ಭಿಃ |
ಸಮಾನಿತಾಭಿರ್ವಿಹಿತಃ ಕಷಾಯಃ ||
ಬಾಲಾತಿಸಾರಂ ಸಹಸಾ ನಿಹನ್ಯಾ |
ದೇಕಾsಥ ಮುಸ್ತಾ ಮಧುನಾ ವಲೀಢಾ || "

" ಲೋಧ್ರ, ಮಂಜಿಷ್ಟ್ಠ, ಲಾಮಂಚ, ಧಾತಕೀಕುಸುಮ ಇವನ್ನು ಸಮವಾಗಿಟ್ಟು ಕಷಾಯಮಾಡಿ ಮಕ್ಕಳಿಗೆ ಕುಡಿಸಿದರೆ ಅತಿಸಾರ ಶೀಘ್ರವಾಗಿ ಗುಣವಾಗುವದು. ಅಥವಾ ಕೇವಲ ತುಂಗಮುಸ್ತೆ ಚೂರ್ಣವನ್ನು ಜೇನಿನಲ್ಲಿ ನೆಕ್ಕಿಸಲು ಮಕ್ಕಳ ಅತಿಸಾರಹರವಹುದು. "

" ಬಿಲ್ವಂ ಚ ಪುಷ್ಪಾಣಿ ಚ ಧಾತಕೀನಾಮ್ |
ಜಲಂ ಸಲೋಧ್ರಂ ಗಜಪಿಪ್ಪಲೀಚ ||
ಕ್ವಾಥಾವಲೇಹೌ ಮಧುನಾ ವಿಮಿಶ್ರೌ |
ಬಾಲೇ ತು ಯೋಜ್ಯಾವತಿಸಾರಿತೇತು || "

" ಬಿಲ್ವದಹೀಚು, ಧಾತಕೀಕುಸುಮ, ಸೊಗದೆ, ಲೋಧ್ರ, ಗಜಪಿಪ್ಪಲಿ ಇವುಗಳನ್ನು ಶೋದಿಸಿ ಮಾಡಿದ ಕಷಾಯವಾಗಲೀ, ಅವಲೇಹವಾಗಲೀ

ಜೇನುತುಪ್ಪದೊಂದಿಗೆ ಸೇವಿಸಿದರೆ ಮಕ್ಕಳ ಅತಿಸಾರದಲ್ಲಿ ಬಹು ಗುಣಪ್ರದಗಳಾಗುವವು. ''

" ಮುಸ್ತಾ ವಿಷಾ ಶಕ್ರಯವಾಂಬು ಭಿಕ್ಷಾ ।
ಶಿಶೋ ರತೀಸಾರ ಹರಃ ಕಷಾಯಃ ॥
ಆಮ್ರಾಂಘ್ರಿ ವಲ್ಕ ಸ್ವರಸ ಕ್ಷತದ್ವತ್ ।
ವೃದ್ಧಿದ್ವಯಂ ವಾ ಮಧುನಾ ವಲೀಢಮ್ ॥ "

'' ತುಂಗಮುಸ್ತೆ, ಅತಿಬಜೆ, ಇಂದ್ರಯವ, ಸೊಗದೆ, ಈ ದ್ರವ್ಯಗಳ ಕಷಾಯವು ಶಿಶುಗಳ ಅತಿಸಾರವನ್ನು ನಿರ್ನಾಮ ಮಾಡುವದು. ಅಥವಾ ಮಾವಿನಬೇರಿನ ಸ್ವರಸವೂ, ಋದ್ಧಿ ವೃದ್ಧಿಗಳನ್ನು ಚೂರ್ಣಿಸಿ ಜೇನಿನೊಂದಿಗೆ ಸೇವಿಸುವಿಕೆಯೂ ಮಕ್ಕಳ ಅತಿಸಾರಹರ ಯೋಗಗಳು. ''

" ನಾಗರಾತಿವಿಷಾ ಮುಸ್ತಾ ಕುಟಜೈಃ ಕ್ವಥಿತಂ ಜಲಮ್॥ ಪ್ರಾತಃ ಪೀತಂ ಕುಮಾರಾಣಾಂ ಶೀಘ್ರಂ ಸರ್ವಾತಿಸಾರನುತ್ ॥ "

'' ಶುಂಠಿ, ಅತಿವಿಷ, ತುಂಗಮುಸ್ತೆ, ಕೊಡಚೆಗೆಯಚಕ್ಕೆ ಇವುಗಳ ಕಷಾಯದಿಂದ ಮಕ್ಕಳ ಅತಿಸಾರವು ಪಲಾಯನಮಾಡಿಬಿಡುವದು. ''

"ಪಿಷ್ಟ್ವಾ ಪಟೋಲಮೂಲಂ ಚ ಶೃಂಗಬೇರಂ ವಚಾಮಪಿ॥ ವಿಡಂಗಾ ನ್ಯಜಮೋದಾಂ ಚ ಪಿಪ್ಪಲೀ ತಂಡುಲಾನ್ಯಪಿ ॥ ವಿತಾನ್ಯಾಲೋಡ್ಯ ಸರ್ವಾಣಿ ಸುಖಂ ತಪ್ತೇನ ವಾರಿಣಾ ॥ ಆಮಪ್ರವೃತ್ತೇತೀಸಾರೇ ಕುಮಾರಂ ಪಾಯಯೇದ್ಭಿಷಕ್ ॥ "

'' ಕಹಿಪಟ್ಟಲಬೇರು, ಶುಂಠಿ, ಬಜೆ, ವಾಯುವಿಳಂಗ, ಅಜಮೋದ, ಸಣ್ಣಹಿಪ್ಪಲಿ, ಷಷ್ಟಿಕಅಕ್ಕಿ—ಇವೆಲ್ಲವನ್ನೂ ನೀರಿನಲ್ಲರದು ಸ್ವಲ್ಪ ಬಿಸಿಮಾಡಿ ಶೋಧಿಸಿ ಮಕ್ಕಳಿಗೆ ಕುಡಿಸಲು ಆಮಾತಿಸಾರ ಶಮನವಾಗುವದು. ''

" ನಾಗರಾತಿವಿಷಾ ಮುಸ್ತಾ ಕ್ವಾಥಃ ಸ್ಯಾದಾಮಪಾಚನಃ ॥ ವಿಷಂ ವಾ ಸಗುಡಂ ಲೀಢಂ ಮಧುನಾಮಹರಂ ಪರಮ್ ॥ "

'' ಶುಂಠಿ, ಅತಿಬಜೆ, ತುಂಗಮುಸ್ತೆ ಇವುಗಳ ಕಷಾಯವು ಆಮವನ್ನು ಹರಣಮಾಡುವದು. ಹಾಗೆಯೇ ಅತಿಬಜೆಯ ಚೂರ್ಣ, ಬೆಲ್ಲ, ಇವನ್ನು ಜೇನುತುಪ್ಪದಲ್ಲಿ ಕಲಿಸಿ ತಿನ್ನಿಸಿದರೆ ಶಿಶುಗಳ ಆಮವನ್ನು ನಾಶಮಾಡುವದು.''

" ಮುಸ್ತಂ ಮೋಚರಸಃ ಪಾಠಾ ಬಿಲ್ವಂ ಲೋಧ್ರಂ ಸ ನಾಗರಮ್॥ ತಕ್ರೇಣ ಪೀತಂ ದುರ್ವಾರಂ ಶಿಶೋರ್ಹಂತ್ಯುದರಾಮಯಂ॥"

'' ತುಂಗಮುಸ್ತೆ, ಮೋಚರಸ, ಅಗಳುಶುಂಠಿ, ಬಿಲ್ವದಹೀಚು, ಲೋಧ್ರ, ಶುಂಠಿ ಇವುಗಳ ಚೂರ್ಣವನ್ನು ಮಜ್ಜಿಗೆಯೊಂದಿಗೆ ಕುಡಿಸಲು ಶಿಶುಗಳ ಅಸಾಧ್ಯವಾದ ಅತಿಸಾರವೂ ನಿಂತು ಸುಖವಾಗುವದು. ''

" ಹರಿದ್ರಾದ್ವಯ ಯಷ್ಟ್ಯಾಹ್ವ ಸಿಂಹೀ ಶಕ್ರಯವೈಃ ಕೃತಃ ||
ಶಿಶೋರ್ಜ್ವರಾತಿಸಾರಘ್ನಃ ಕಷಾಯಃ ಸ್ತನ್ಯದೋಷಜಿತ್ || "

" ಅರಶಿನ, ಮರದರಿಶಿನ, ಜೇಷ್ಟ್ಯಮಧು, ನೆಲಗುಳ್ಳದಬೇರು, ಇಂದ್ರಯವೆ ಇವುಗಳ ಕಷಾಯವು ಮಕ್ಕಳ ಜ್ವರಾತಿಸಾರವನ್ನೂ, ಸ್ತನ್ಯದೋಷವನ್ನೂ ನಿವಾರಣೆಮಾಡಿ ಸುಖವನ್ನುಂಟುಮಾಡುವದು. "

" ಘನಕೃಷ್ಣಾರುಣಾಶುಂಠೀ ಚೂರ್ಣಂ ಕ್ಷೌದ್ರೇಣ ಯೋಜಿತಮ್ || ಶಿಶೋರ್ಜ್ವರಾತಿಸಾರಘ್ನಂ ಕಾಸ ಶ್ವಾಸ ವಮಿಾಪಹಂ ಯೇತ್ || "

" ತುಂಗಮುಸ್ತೆ, ಹಿಪ್ಪಲಿ, ಮಂಜಿಷ್ಟ್ಯ, ಶುಂಠಿ ಇವುಗಳ ಚೂರ್ಣವನ್ನು ಜೇನುತುಪ್ಪದಲ್ಲಿ ನೆಕ್ಕಿಸಿದರೆ ಮಕ್ಕಳ ಜ್ವರಾತಿಸಾರ, ಕಾಸ, ಶ್ವಾಸ, ಇವು ನಾಶನವಹುದು. "

" ಧಾತಕೀ ಬಿಲ್ವಧನ್ಯಾಕ ಲೋಧ್ರೇಂ ದ್ರಯವ ವಾಲಕೈಃ|| ಲೇಹಃ ಕ್ಷೌದ್ರೇಣ ಬಾಲಾನಾಂ ಜ್ವರಾತೀಸಾರ ವಾಂತಿಹೃತ್ || "

" ಧಾತಕೀಕುಸುಮ, ಬಿಲ್ವದಹೀಚು, ಧನಿಯಾ, ಲೋಧ್ರ, ಇಂದ್ರಯವೆ, ಸೊಗದೆ ಇವುಗಳ ಚೂರ್ಣವನ್ನು ಜೇನುತುಪ್ಪದಲ್ಲಿ ನೆಕ್ಕಿಸಿದರೆ ಮಕ್ಕಳ ಜ್ವರಾತಿಸಾರ ಮತ್ತು ವಮನ ಇವು ನಾಶನವಹುದು. "

ಗ್ರಹಣೀ ಚಿಕಿತ್ಸಾ:—"ಯವಾನೀ ಜೀರಕಂ ವ್ಯೋಷಂ ಕುಟಜಂ ವಿಶ್ವಭೇಷಜಮ್ || ಏತನ್ಮಧುಯುತಂ ಲೀಢಂ ಬಾಲಾನಾಂ ಗ್ರಹಣೀಂ ಜಯೇತ್ || "

" ಅಜವಾನ, ಜೀರಿಗೆ, ಶುಂಠಿ, ಮೆಣಸು, ಹಿಪ್ಪಲಿ, ಕೊಡಚಿಗೆಚಕ್ಕೆ ಇವುಗಳ ಚೂರ್ಣವನ್ನು ಜೇನಿನೊಂದಿಗೆ ಸೇವಿಸಿದರೆ ಬಾಲಕರ ಗ್ರಹಣಿಯು ನಿರ್ನಾಮವಾಗುವದು. "

" ಪಿಪ್ಪಲೀ ವಿಜಯಾ ಶುಂಠೀ ಚೂರ್ಣಂ ಮಧುಯುತಂ ಭಿಷಕ್|| ದತ್ವಾ ನಿರ್ಜಿತ್ಯಗ್ರಹಣೀಂ ಪೂಜಾಂ ನಿಯತಮಾಪ್ನುಯಾತ್||"

" ಹಿಪ್ಪಲಿ, ಶುದ್ಧಭಂಗೀಸೊಪ್ಪು, ಶುಂಠಿ ಇವುಗಳ ಚೂರ್ಣವನ್ನು ಜೇನಿನೊಂದಿಗೆ ಸೇವಿಸುವದರಿಂದ ಗ್ರಹಣೀ ನಿಶ್ಶೇಷವಾಗುವದು, ಇದರಿಂದ ವೈದ್ಯನು ಕೀರ್ತಿಶಾಲಿಯಹನು. "

" ಕೃಷ್ಣಾ ಮಹೌಷಧಂ ಬಿಲ್ವಂ ಕುಟಜಂ ಸಯವಾನ್ವಿತಮ್ ||
ಮಧುಸರ್ಪಿಯುತಂ ಲೀಢಂ ವಾತಲಾಂ ಗ್ರಹಣೀಂ ಜಯೇತ್||"

" ಹಿಪ್ಪಲಿ, ಶುಂಠಿ, ಬಿಲ್ವ, ಕೊಡಚಿಗೆಚಕ್ಕೆ, ಅಜವಾನ ಇವುಗಳ ಚೂರ್ಣವನ್ನು ತುಪ್ಪದಲ್ಲಿ ಸ್ವಲ್ಪ ಹುರಿದು, ಜೇನುತುಪ್ಪದಲ್ಲಿ ಕಲಿಸಿ ನೆಕ್ಕಲು ವಾಯುವಿನ ಗ್ರಹಣಿಯು ನಾಶವಹುದು. "

" ನಾಗರಂ ಮುಸ್ತಕಂ ಬಿಲ್ವಂ ಚಿತ್ರಕಂ ಗ್ರಂಥಿಕಂ ಶಿವಾ ॥ ಚೂ
ರ್ಣಮೇತನ್ಮಧುಯುತಂ ಕಫಜಾಂ ಗ್ರಹಣೀಂ ಜಯೇತ್ ॥ "

" ಶುಂಠಿ, ತುಂಗಮುಸ್ತೆ, ಬಿಲ್ವ, ಚಿತ್ರಮೂಲ, ಹಿಪ್ಪಲೀಮೂಲ ಅಳಲೆಕಾಯಿ ಇವುಗಳ ಚೂರ್ಣವನ್ನು ಜೇನಿನಲ್ಲಿ ನೆಕ್ಕಲು ಕಫದ ಗ್ರಹಣಿ ನಾಶವಾಗುತ್ತದೆ. "

" ಸಗುಡಂ ನಾಗರಂ ಬಿಲ್ವಂ ಯಃ ಖಾದತಿ ಹಿತಾಶನಃ॥ ತ್ರಿದೋ
ಷಗ್ರಹಣೀರೋಗಾನ್ಮುಚ್ಯತೇ ನಾತ್ರ ಸಂಶಯಃ ॥ "

" ಹಿತವಾದ ಪಥ್ಯದಲ್ಲಿರತಕ್ಕವನು—ಬೆಲ್ಲ, ಶುಂಠಿ, ಬಿಲ್ವ ಇವುಗಳ ಅವಲೇಹವನ್ನು ಸೇವಿಸುತ್ತಾಬಂದರೆ ತ್ರಿದೋಷಜನ್ಯ ಗ್ರಹಣೀರೋಗವನ್ನು ಕಳದುಕೊಳ್ಳುತ್ತಾನೆ. "

" ಮುಸ್ತಕಾತಿವಿಷಾ ಬಿಲ್ವಂ ಚೂರ್ಣಿತಂ ಕೌಟಜಂ ತಥಾ॥ ಕ್ಷೌ
ದ್ರೇಣ ಲೀಢಾ ಗ್ರಹಣೀಂ ಸರ್ವದೋಷೋದ್ಭವಾಂ ಜಯೇತ್॥"

" ತುಂಗಮುಸ್ತೆ, ಅತಿಬಜೆ, ಬಿಲ್ವ, ಇಂದ್ರಜವೆ ಇವುಗಳ ಚೂರ್ಣ ವನ್ನು ಜೇನಿನಲ್ಲಿ ನೆಕ್ಕಿಸುವದರಿಂದ ಮಕ್ಕಳ ತ್ರಿದೋಷಜನ್ಯವಾದ ಗ್ರಹಣಿ ರೋಗವನ್ನು ನಾಶಮಾಡುವದು. "

ಮೊಳೇಜಾಡ್ಯ ಚಿಕಿತ್ಸಾ:—" ಯವಾನೀ ನಾಗರಂ ಪಾಠಾ ದಾ
ಡಿಮಂ ಕುಟಜಂ ತಥಾ ॥ ಚೂರ್ಣೋಽಯಂ ಗುಡ ತಕ್ರಾಭ್ಯಾಂ
ಪೀತೋಽರ್ಶಃ ಶಮನಃ ಪರಃ ॥ "

"ಅಜವಾನ, ಶುಂಠಿ, ಅಗಳುಶುಂಠಿ, ದಾಳಿಂಬೇಚಕ್ಕೆ, ಕೊಡಚಿಗೆಚಕ್ಕೆ ಇವುಗಳನ್ನು ಚೂರ್ಣಿಸಿ ಬೆಲ್ಲದಲ್ಲಿ ಕಲಿಸಿ ಮಜ್ಜಿಗೇಲಿ ಕದರಿ ಕುಡಿಸುವದ ರಿಂದ ಮೊಳೇಜಾಡ್ಯ ನಾಶವಾಗುವದು. "

" ಅಜಾಜೀ ಪೌಷ್ಕರಂ ಪಾಠಾ ತ್ರ್ಯೂಷಣಂ ದಹನಃ ಶಿವಾ ॥ ಗು
ಡೇನ ಗುಟಿಕಾ ಕಾರ್ಯಾ ಸರ್ವಾರ್ಶೋ ನಾಶನೀ ಪರಾ ॥

" ಬಿಳೀಜೀರಿಗೆ, ಪುಷ್ಕರಮೂಲ, ಅಗಳುಶುಂಠಿ, ಶುಂಠಿ, ಮೆಣಸು, ಹಿಪ್ಪಲಿ, ಚಿತ್ರಮೂಲ, ಅಳಲೇಕಾಯಿ ಇವುಗಳ ಚೂರ್ಣವನ್ನು ಬೆಲ್ಲಹಾಕಿ ಅರದು ಗೋಲೀಮಾಡಿ ಸೇವಿಸುವದರಿಂದ ಎಲ್ಲಾ ತರಹದ ಅರ್ಶಸ್ಸು ಶಮನ ವಹುದು. "

" ನವನೀತ ತಿಲಾಭ್ಯಾಸಾತ್ ।
ಕೇಸರ ನವನೀತ ಶರ್ಕರಾಭ್ಯಾಸಾತ್ ॥
ದಧಿ ಸರ ಮಥಿತಾ ಭ್ಯಾಸಾತ್ ।
ಗುದಜಾಃ ಶಾಮ್ಯಂತಿ ರಕ್ತವಹಾಃ ॥ "

"ಬೆಣ್ಣೆ, ಎಳ್ಳು ಇವುಗಳನ್ನರದು ಸೇವನೆಮಾಡುತ್ತಾ ಬರುವಿಕೆ, ಹಾಗೆಯೇ—ನಾಗಕೇಸರ, ಬೆಣ್ಣೆ, ಸಕ್ಕರೆ ಇವುಗಳನ್ನರದು ಸಾಧಿಸುತ್ತಾ ಬರುವಿಕೆ, ಮತ್ತು ಮೊಸರಿನ ಮೇಲಿನ ಕೆನೆಯನ್ನು ಕಡದು ಅದನ್ನು ಕುಡಿಯುತ್ತಾ ಬರುವಿಕೆ ಈ ಮೂರು ವಿಧವಾದ ಸಾಧನೆಗಳಲ್ಲಿ ಯಾವದರಲ್ಲಾದರೂ ಬಹುಕಾಲ ಸೇವಿಸುತ್ತಾ ಬರುವದರಿಂದ ರಕ್ತದ ಮೊಳೇಜಾಡ್ಯವು ನಿವೃತ್ತಿಯಾಗುವದು."

"ಕುಟಜಂ ಕೌಟಜಂ ಬೀಜಂ ಕೇಸರಂ ಪದ್ಮಕೇಸರಮ್ ‖ ಏವಂ
ಮಧುಯುತಂ ಲೀಢಂ ರಕ್ತಾಽರ್ಶೋಽ ನಾಶನಂ ಪರಮ್ ‖"

"ಕೊಡಚಿಗನಚಕ್ಕೆ, ಇಂದ್ರಯವೆ, ನಾಗಕೇಸರ, ಕಮಲಕೇಸರ ಇವುಗಳನ್ನರದು ಜೇನುತುಪ್ಪದಲ್ಲಿ ನೆಕ್ಕುತ್ತಾ ಬರಲು ರಕ್ತದ ಮೊಳೇಜಾಡ್ಯ ನಾಶವಹುದು."

"ಏವಂ ವಾ ಕೌಟಜಂ ಬೀಜಂ ರಕ್ತಾರ್ಶೋಽ ಮಧುನಾ ಹರೇತ್‖
ಏವಂ ಮುಸ್ತಾ ಮೋಚರಸ ಕಪಿತ್ಥಚ್ಛದಜೋ ರಸಃ ‖"

"ಇದೇರೀತಿಯಲ್ಲಿ ಇಂದ್ರಯವೆಯನ್ನು ಅರದು ಜೇನುತುಪ್ಪದಲ್ಲಿ ನೆಕ್ಕುತ್ತಾ ಬರಲು ರಕ್ತದ ಮೊಳೇಜಾಡ್ಯ ನಿವೃತ್ತಿಯಾಗುವದು. ತುಂಗಮುಸ್ತೆ, ಮೋಚರಸ, ಬ್ಯಾಲದಯಲೆ ಇವುಗಳನ್ನು ಚೂರ್ಣಿಸಿ ಜೇನುತುಪ್ಪದಲ್ಲಿ ನೆಕ್ಕುವದೂ ಸಹ ರಕ್ತಾರ್ಶರೋಗಕ್ಕೆ ರಾಮಬಾಣವು."

ಶೂಲಿ ಆಮಾಜೀರ್ಣಕ್ಕೆ:—"ಧಾನ್ಯ ನಾಗರಜಃ ಕ್ವಾಥಃ ಶೂ
ಲಾಮಾಜೀರ್ಣ ನಾಶನಮ್ ‖ ಚೂರ್ಣಂ ತಕ್ರಯುತಂ ಪೀತಂ
ತದ್ವದ್ವ್ಯೋಷಾಗ್ನಿ ಜೀರಕೈಃ ‖".

"ಧನಿಯಾ, ಶುಂಠಿ ಇವುಗಳ ಕಷಾಯು ಮಕ್ಕಳ ಶೂಲಿಯನ್ನೂ, ಆಮಾಜೀರ್ಣವನ್ನೂ ನಿವೃತ್ತಿಪಡಿಸುವದು. ಹಾಗೆಯೇ ಶುಂಠಿ, ಮೆಣಸು, ಹಿಪ್ಪಲಿ, ಚಿತ್ರಮೂಲ, ಬಿಳೀಜೀರಿಗೆ ಇವುಗಳ ಚೂರ್ಣವನ್ನು ಮಜ್ಜಿಗೆಯಲ್ಲಿ ಕುಡಿಯಲು ಮಕ್ಕಳ ಶೂಲಿಯನ್ನೂ, ಆಮಾಜೀರ್ಣವನ್ನೂ ನಿಶ್ಚಯವಾಗಿ ನಾಶಗೊಳಿಸುವದು."

"ಪಿಪ್ಪಲೀ ರುಚಕಂ ಪಥ್ಯಾ ಚೂರ್ಣಂ ಮಸ್ತುಜಲಂ ಪಿಬೇತ್ ‖
ಸರ್ವಾಜೀರ್ಣಹರಂ ಶೂಲ ಗುಲ್ಮಾನಾಹಾಗ್ನಿ ಮಾಂದ್ಯಜಿತ್‖"

"ಹಿಪ್ಪಲಿ, ಕರೀಲವಣ, ಅಳಲೆಕಾಯಿ ಇವುಗಳ ಚೂರ್ಣವನ್ನು ಸೇವಿಸಿ ಮೊಸರಿನ ಮೇಲಿನ ನೀರನ್ನು ಕುಡಿಯುವದರಿಂದ—ಎಲ್ಲಾ ವಿಧವಾದ ಅಜೀರ್ಣ, ಶೂಲಿ, ಗುಲ್ಮ, ಆನಾಹ, ಅಗ್ನಿಮಾಂದ್ಯ ಇವುಗಳನ್ನು ಮೂಲೋತ್ಪಾಟನ ಮಾಡುವದು."

" ತ್ವಕ್ಪತ್ರರಾಸ್ನಾಗರುಶಿಗ್ರುಕುಷ್ಠೈಃ ।
ಅಮ್ಲಪ್ರಪಿಷ್ಟೈಃ ಸವಚಾಶತಾಹ್ವೈಃ ॥
ಉದ್ವರ್ತನಂ ಖಲ್ಲಿವಿಷೂಚಿಕಾಘ್ನಮ್ ।
ತೈಲಂ ವಿಪಕ್ವಂ ಚ ತದರ್ಥಕಾರಿ ॥ "

" ದಾಲಚಿನ್ನಿ, ಲವಂಗಪತ್ರಿ, ರಾಸ್ನಾ, ಅಗರು, ನುಗ್ಗಿಚಕ್ಕೆ, ಕೋಷ್ಟ, ಬಜೆ, ಸೋವು ಇವುಗಳನ್ನು ಗಂಜಿಯಲ್ಲಿ ಅರದು ಉದ್ವರ್ತನ (ಮೈಗೆ ಹಚ್ಚಿ ಮಾಲೀಸು ಮಾಡುವಿಕೆ) ಮಾಡುವದರಿಂದ ಅಥವಾ ಈ ವಸ್ತುಗಳ ಚೂರ್ಣದೊಂದಿಗೆ ಸಾಧಿತವಾದ ತಿಲತೈಲವನ್ನು ಮಾಲಿಸ್ ಮಾಡುವದರಿಂದ ಸಹಾ ಖಲ್ಲಿರೋಗ (ವಾಯುವಿಶೇಷ) ತಥಾ ವಿಷೂಚಿಕಾ (ವಾಂತಿಭೇದಿ) ರೋಗ ಇವು ನಾಶನವಹುವು. "

ಭಸ್ಮಕರೋಗ ಚಿಕಿತ್ಸಾ:—" ಅನ್ನಪಾನೈರ್ಗುರುಸ್ನಿಗ್ಧೈಃ ಮಹತ್ಸಾಂದ್ರಹಿಮಸ್ಥಿರೈಃ ॥ ಶೀತಾದಿರೇಚನೈರ್ಧೀಮಾನ್ ಭಸ್ಮಕಂ ಪ್ರಶಮಂ ನಯೇತ್ ॥ "

" ಗುರುವಾದ, ಸ್ನಿಗ್ಧವಾದ, ಅತಿಸಾಂದ್ರ (ದಟ್ಟ) ವಾದ, ಶೀತಲವಾದ, ಸ್ಥಿರವಾದ ಪದಾರ್ಥಗಳನ್ನು ಸೇವಿಸುವಂತೆ ಮಾಡುವದರಿಂದಲೂ, ವಿರೇಚನಕರ್ಮದಿಂದಲೂ ಬುದ್ಧಿಶಾಲಿಯಾದ ವೈದ್ಯನು ಭಸ್ಮಕರೋಗವನ್ನು ಶಾಂತಿಪಡಿಸಬೇಕು. "

"ಔದುಂಬರತ್ವಚಂ ಪಿಷ್ಟ್ವಾ ನಾರೀಕ್ಷೀರಯುತಾಂ ಪಿಬೇತ್॥ ತಾಭ್ಯಾಂ ಚ ಪಾಯಸಂ ಸಿದ್ಧಂ ಭುಕ್ತಂ ಜಯತಿ ಭಸ್ಮಕಮ್ ॥ "

" ಅತ್ತಿಯಫಲ, ದಾಲಚಿನ್ನಿ ಇವುಗಳನ್ನು ಚೂರ್ಣಿಸಿ ಮೊಲೆಹಾಲಿನೊಡನೆ ಸೇವಿಸುವದರಿಂದಲೂ, ಅಥವಾ ಮೇಲಿನ ಪದಾರ್ಥಗಳೆರಡರ ಚೂರ್ಣದಿಂದ ಹಾಲು ಸಕ್ಕರೆಬೆರಸಿ ಮಾಡಿದ ಖೀರು (ಪಾಯಸ) ಕುಡಿಯುವದರಿಂದ ಸಹಾ ಭಸ್ಮಕರೋಗ ನಿವೃತ್ತಿಯಾಗುವದು. "

" ಮಯೂರತಂಡುಲೈ ಸಿದ್ಧಂ ಪಾಯಸಂ ಭಸ್ಮಕಂ ಜಯೇತ್॥
ವಿದಾರೀಸ್ವರಸಕ್ಷೀರ ಸಿದ್ಧಂ ವಾ ಮಾಹಿಷಂ ಘೃತಮ್ ॥ "

" ಉತ್ತರಣೆಯ ಅಕ್ಕಿ ಹಾಲು ಸಕ್ಕರೆಯಿಂದ ಸಿದ್ಧಮಾಡಿದ ಪಾಯಸವನ್ನು ಸೇವಿಸುವದರಿಂದಲೂ, ಹಾಗೆಯೇ ನೆಲಗುಂಬಳದ ಸ್ವರಸಕ್ಕೆ ಹಾಲು ಸಕ್ಕರೆ ಹಾಕಿ ಕಾಸಿದ ಪಾಯಸದಲ್ಲಿ ಯಮ್ಮೆಯತುಪ್ಪವನ್ನು ಹಾಕಿ ಸೇವಿಸುವದರಿಂದಲೂ ಭಸ್ಮಕರೋಗ ನಿವೃತ್ತಿಯಾಗುವದು. "

ಭಸ್ಮಕರೋಗವೆಂದರೆ ಆ ತೀಕ್ಷ್ಣವಸ್ತುಗಳನ್ನೂ, ಬೂಗಿದ ಅನ್ನವನ್ನೂ, ತಿಂದು ಕಫ ಕ್ಷೀಣವಾದರೆ ವಾತಪಿತ್ತಗಳು ಪ್ರವೃದ್ಧಿಯನ್ನುಹೊಂದಿ—

ವಾತಪ್ರೇರಿತವಾದ ಪಿತ್ತವು ಈ ಭಸ್ಮಕವೆಂಬ ರೋಗವನ್ನುಂಟುಮಾಡು ತ್ತದೆ. ಇದು ಸಾಕ್ಷಾತ್ ಅಗ್ನಿಯೇ! ಈ ಸಮಯದಲ್ಲಿ ಯಾವದನ್ನು ತಿಂದರೂ ತತ್‌ಕ್ಷಣದಲ್ಲಿ ಭಸ್ಮವಾಗುತ್ತಾ ಬರುತ್ತದೆ. ಇದರಲ್ಲಿ—ಬಾಯಾರಿಕೆ, ಮೈಯ್ಯ ಸರ್ವಾಂಗವೂ ಉರಿ, ಮೂರ್ಛಾ ಇವುಗಳಿಂದ ತಿಂದ ಸರ್ವವನ್ನೂ ನಾಶಮಾಡುತ್ತಾ ಕೊನೆಗೆ ರೋಗಿಯನ್ನೇ ಸಂಹಾರಮಾಡುವದು. ಇದೂ ಬಹು ಕ್ರೂರವಾದ ಜಾಡ್ಯವು. ಇದಕ್ಕೆ ಮೇಲಿನ ಚಿಕಿತ್ಸೆಯು ಶಿಶುಗಳಿಗೂ, ದೊಡ್ಡವರಿಗೂ ಕ್ಷೇಮಕರವಾದದ್ದು!!

**ಛರ್ದ್ಯಾದಿ ಚಿಕಿತ್ಸೆ:—" ಕಲ್ಕಃ ಪ್ರಿಯಂಗು ಕೋಲಾಸ್ಥಿ ಮಧು ಮುಸ್ತಾಂಜನೈಃ ಕೃತಃ ॥ ಕ್ಷೌದ್ರಲೀಢಃ ಕುಮಾರಸ್ಯ ಛರ್ದಿ ತೃಷ್ಣಾತಿಸಾರಜಿತ್ ॥ "**

" ಪ್ರಿಯಂಗುಪುಷ್ಪ, ಬಿಲ್ವದಹಣ್ಣಿನ ತಿರುಳು, ಜೇಷ್ಟಮಧು, ತುಂಗಮುಸ್ತೆ, ಶುದ್ಧಮಾಡಿದ ಸುರಮಾ ಇವುಗಳ ಕಲ್ಕವನ್ನುಮಾಡಿ ಜೇನುತುಪ್ಪದಲ್ಲಿ ನೆಕ್ಕುವದರಿಂದ ಮಕ್ಕಳ ಛರ್ದಿ, ಬಾಯಾರಿಕೆ, ಅತಿಸಾರ ಇವು ನಿವೃತ್ತಿಯಾಗುವವು. "

**" ಯವಾನೀ ಕುಟಜಾರಿಷ್ಟ ಸಪ್ತಪರ್ಣ ಪಟೋಲಕೈಃ ॥ ಲೇಹಶ್ಛರ್ದಿಮತೀಸಾರಂ ಜ್ವರಂ ಬಾಲಸ್ಯ ನಾಶಯೇತ್ ॥ "**

" ಅಜವಾನ, ಕೊಡಚಿಗೆಯಚಕ್ಕೆ, ಏಳೆಲೆಹೊನ್ನೆ, ಕಹಿಪಡುವಲು ಇವುಗಳ ಚೂರ್ಣಿಸಿ ಸಕ್ಕರೆಪಾಕದಲ್ಲಿ ಅವಲೇಹಮಾಡಿ ತಿನ್ನಿಸಿದರೆ ಬಾಲಕರ ಛರ್ದಿ, ಅತಿಸಾರ, ಜ್ವರ ಇವು ದಿಕ್ಕಾಬಟ್ಟೆ ಓಡುವವು. "

**" ಶೀತಶ್ಚಂದನ ಚೂರ್ಣೇನ ಮಧುನಾ ಮಲಕೀ ರಸಃ ॥ ಛರ್ದಿಂ ಸದಾಹಂ ಸತೃಷ್ಣಾಂ ಶೀಘ್ರಮೇವ ವಿನಾಶಯೇತ್ ॥ "**

" ಶ್ರೀಗಂಧದ ಧೂಳು, ಜೇನುತುಪ್ಪ, ನೆಲ್ಲೀಕಾಯಿರಸ ಅಥವಾ ನೆಲ್ಲೀಚೆಟ್ಟಿನ ಕಷಾಯ ಇವನ್ನು ಸಣ್ಣಗರದು ನೆಕ್ಕಿಸುವದರಿಂದ ಮಕ್ಕಳ ಛರ್ದಿ, ದಾಹ, ಬಾಯಾರಿಕೆ ಇವು ಬೇಗ ನಿವಾರಣೆಯಾಗುವವು. "

**" ಹರೀತಕ್ಯಾಕೃತಂ ಚೂರ್ಣಂ ಮಧುನಾ ಸಹ ಲೇಹಯೇತ್ ॥ ಅಧಸ್ತಾದ್ವಿಹಿತೇ ದೋಷೇ ಶೀಘ್ರಂ ಛರ್ದಿಂ ಪ್ರಶಾಮ್ಯತಿ ॥ "**

" ಸಣ್ಣ ಅಳಲೇಕಾಯಿ ಕುಟ್ಟಿ ಶೋಧಿಸಿದ ಚೂರ್ಣವನ್ನು ಜೇನುತುಪ್ಪದಲ್ಲಿ ನೆಕ್ಕಲು, ಮಕ್ಕಳ ಎಲ್ಲಾ ದೋಷಗಳನ್ನೂ ಅಧಃಪಾತನಮಾಡಿ ಛರ್ದಿಯನ್ನು ಬೇಗ ಗುಣಪಡಿಸುವದು. "

**" ಪಟೋಲ ನಿಂಬ ತ್ರಿಫಲಾ ಗುಡೂಚೀಭಿಃ ಶೃತಂ ಜಲಮ್ ॥ ಶೀತಂ ಕ್ಷೌದ್ರಯುತಂ ಛರ್ದಿ ಮಮ್ಲಪಿತ್ತ ಭವಾಂ ಹರೇತ್॥"**

" ಕಹಿಪಡವಲು, ಬೇವಿನಚಕ್ಕೆ, ತ್ರಿಫಲಾ, ಅಮೃತಬಳ್ಳಿ ಇವುಗಳಿಂ ಮಾಡಿದ ಕಷಾಯವು ಜೇನಿನಿಂದ ಸೇವಿಸಲ್ಪಟ್ಟರೆ ಮಕ್ಕಳ ಆಮ್ಲಪಿತ್ತಜನಿತ ಛರ್ದಿ ನಿವೃತ್ತಿಯುಹುದು. "

" ಅಶ್ವತ್ಥಕಲ್ಕಂ ಸಂಶುಷ್ಕಂದಗ್ಧಂ ನಿರ್ವಾಪಿತಂ ಜಲೇ ॥ ತಜ್ಜಲಂ ಪಾನಮಾತ್ರೇಣ ಛರ್ದಿಂ ಜಯತಿ ದುರ್ಜಯಮ್ ॥ "

" ಅರಳೀಮರದಚಕ್ಕೆ ಒಣಗಿದ್ದನ್ನು ತಂದು ಸುಟ್ಟು ನೀರಿನಲ್ಲಿ ಆರಿಸುವದು. ಆ ನೀರನ್ನು ಕುಡಿಯುವದರಿಂದ ದುರ್ಜಯವಾದ ಛರ್ದಿಯೂ ನಿವಾರಣೆಯಾಗುವದು. "

ದಾಹ ಚಿಕಿತ್ಸೆ:—ಸಲಾಜಾಂಜನ ಮುಸ್ತಾನಾಂ ಚೂರ್ಣಂ ಪೀತಂ ಸಮಾಕ್ಷಿಕಮ್ ॥ ತೃಷ್ಣಾಂ ಛರ್ದಿಮತೀಸಾರಂ ಶಿಶೂನಾಮುದ್ಧತಾಂ ಹರೇತ್ ॥ "

" ಭತ್ತದ ಅರಳು, ಶುದ್ಧಸುರಮಾ, ತುಂಗಮುಸ್ತೆ ಇವುಗಳ ಚೂರ್ಣ ಮಾಡಿ ನೀರಿನಲ್ಲಿ ನೆನೆಹಾಕಿ ಕಿವಿಚಿ ಶೋಧಿಸಿಕೊಂಡು ಆ ನೀರನ್ನು ಜೇನುತುಪ್ಪ ಹಾಕಿ ಕುಡಿದರೆ ಮಕ್ಕಳ ಅತಿಯಾದ ದಾಹ, ಛರ್ದಿ, ಅತಿಸಾರ ಇವು ನಿವಾರಣೆಯಾಗಿ ಅತ್ಯಂತ ಸುಖವುಂಟಾಗುವದು. "

" ಪಿಪ್ಪಲೀ ಮಧುಕಂ ಜಂಬೂ ರಸಾಲತರುಪಲ್ಲವಾಃ ॥ ಚೂರ್ಣೋಽಯಂ ಮಧುನಾಚೇತಿ ತೃಷ್ಣಾಪ್ರಶಮನಃ ಶಿಶೋಃ ॥ "

" ಹಿಪ್ಪಲಿ, ಜೇಷ್ಟಮಧು, ನೇರಲಚಿಗಿರು, ಮಾವಿನಚಿಗಿರು ಇವುಗಳನ್ನು ಕುಟ್ಟಿದ ಚೂರ್ಣವನ್ನು ಜೇನುತುಪ್ಪದಿಂದ ನೆಕ್ಕಲು ಮಕ್ಕಳ ಬಾಯಾರಿಕೆಯು ನಿಂತುಬಿಡುವದು. "

" ದಾಡಿಮಸ್ಯ ಚ ಬೀಜಾನಿ ಜೀರಕಂ ನಾಗಕೇಸರಮ್ ॥ ಚೂರ್ಣಂ ಸ ಶರ್ಕರಾಕ್ಷೌದ್ರಲೇಹಾತ್ತೃಷ್ಣಾಹರಂ ಶಿಶೋಃ ॥ "

" ಶೀಮೆ ದಾಳಿಂಬರೇಬೀಜ, ಬಿಳೀಜೀರಿಗೆ, ನಾಗಕೇಸರ ಇವುಗಳ ಚೂರ್ಣವನ್ನು ಮಾಡಿ ಸಕ್ಕರೆಬೆರಸಿ ಜೇನುತುಪ್ಪದಲ್ಲಿ ಕಲಿಸಿ ನೆಕ್ಕಿಸಲು ಬಾಲಕರ ಬಾಯಾರಿಕೆ ನಿವೃತ್ತಿಯಾಗುವದು. "

" ಹಿಂಗು ಸೈಂಧವ ಪಾಲಾಶಂ ಚೂರ್ಣಂ ಮಾಕ್ಷಿಕಸಂಯುತಮ್ ॥ ಲೀಢಂ ನಿರ್ವಾಪಯತ್ಯಾಶು ಶಿಶೂನಾಮುದ್ಧತಾಂ ತೃಷಾಮ್ ॥

" ತುಪ್ಪದಲ್ಲಿ ಹುರದ ಹಿಂಗು, ಸೈಂಧವಲವಣ, ಮುತ್ತುಗದಚಕ್ಕೆ ಇವುಗಳ ಚೂರ್ಣವನ್ನು ಜೇನುತುಪ್ಪದಲ್ಲಿ ನೆಕ್ಕಿಸಲು ಶಿಶುಗಳ ಪ್ರವೃದ್ಧವಾದ ದಾಹವನ್ನು ಹರಿಸುವದು. "

ಬಿಕ್ಕಳಿಕೆಯು ಚಿಕಿತ್ಸೆ:—"ಸುವರ್ಣಗೈರಿಕಂ ಪಿಷ್ಟ್ವಾ ಮಧು
ನಾ ಸಹ ಲೇಹಯೇತ್ ॥ ಶೀಘ್ರಂ ಸುಖಮವಾಪ್ನೋತಿ ತೇನ
ಹಿಕ್ಕಾರ್ದಿತಃ ಶಿಶುಃ ॥"

"ಬಂಗಾರ ಬಣ್ಣದ ಕಾವೀಕಲ್ಲು ಚೂರ್ಣಿಸಿ ಅದನ್ನು ಜೇನಿನಲ್ಲಿ ನೆಕ್ಕಿಸಿದರೆ ಮಕ್ಕಳ ಬಿಕ್ಕಳಿಕೆ ನಿವೃತ್ತಿಯಾಗಿ ಸುಖವಾಗುವದು."

"ಶುಂಠೀ ಧಾತ್ರೀ ಕಣಾ ಚೂರ್ಣಂ ಲೇಹಯೇನ್ಮಧುನಾ ಶಿಶುಃ॥
ಹಿಕ್ಕಾನಾಂ ಶಾಂತಯೇತದ್ವದೇಕಂ ವಾ ಮಾಕ್ಷಿಕಂ ಸಕೃತ್ ॥"

"ಶುಂಠಿ, ನೆಲ್ಲೀಚಟ್ಟು, ಹಿಪ್ಪಲಿ ಇವುಗಳ ಚೂರ್ಣವನ್ನು ಜೇನುತುಪ್ಪದಲ್ಲಿ ನೆಕ್ಕಿಸಿದರೆ ಮಕ್ಕಳ ಬಿಕ್ಕಳಿಕೆ ನಿವೃತ್ತಿಯಾಗುವದು. ಹಾಗಿಲ್ಲದಿದ್ದರೆ ಕೇವಲ ಜೇನುತುಪ್ಪವನ್ನೇ ನೆಕ್ಕಿಸಿದರೂ ಬಿಕ್ಕಳಿಕೆ ನಿಲ್ಲುವದು."

"ಪಿಪ್ಪಲೀ ರೇಣುಕಾ ಕ್ವಾಥಃ ಸಹಿಂಗುಃ ಸಮಧು ಸ್ತಥಾ ॥ ಹಿ
ಕ್ಕಾಂ ಬಹುವಿಧಾಂ ಹನ್ಯಾ ದಿದಂ ಧನ್ವಂತರೇ ರ್ವಚಃ ॥"

"ಹಿಪ್ಪಲಿ, ರೇಣುಕೇಬೀಜ ಇವುಗಳನ್ನು ನುಣ್ಣಗೆ ಚೂರ್ಣಿಸಿ ಅದನ್ನು ಕಷಾಯಮಿಕ್ಕಿ ಅದರಲ್ಲಿ ಹುರಿದ ಇಂಗು ಮತ್ತು ಜೇನುತುಪ್ಪ ಬೆರಸಿ ಕುಡಿಸಲು ಮಕ್ಕಳ ಎಲ್ಲಾವಿಧ ದೋಷಗಳ ಬಿಕ್ಕಳಿಕೆಯೂ ನಿವಾರಣೆಯಾಗುವದು. ಇದು ಧನ್ವಂತರಿಯ ವಾಕ್ಯವು."

ಕಾಸಶ್ವಾಸ ಚಿಕಿತ್ಸಾ:—"ಪಿಪ್ಪಲೀ ಪಿಪ್ಪಲೀಮೂಲಂ ನಾಗರಂ
ಮಧುನಾ ಲಿಹನ್ ॥ ಕಾಸಂ ಪಂಚವಿಧಂ ಶ್ವಾಸಂ ಶಿಶೋರಾಶು
ವಿನಾಶಯೇತ್ ॥"

"ಸಣ್ಣಹಿಪ್ಪಲಿ, ಹಿಪ್ಪಲೀಮೂಲ, ಶುಂಠಿ ಈ ದ್ರವ್ಯ ಚೂರ್ಣವನ್ನು ಜೇನಿನಲ್ಲಿ ನೆಕ್ಕಲು ಮಕ್ಕಳ ೫ ವಿಧ ಕಾಸಶ್ವಾಸ ಮಾಣ್ಗು."

"ವಿಹಿತೋ ಮಧುನಾ ಲೇಹ್ಯೋ ವ್ಯಾಘ್ರೀ ಕುಸುಮಕೇ ಸರೈಃ॥
ಲೀಢೋ ವಿನಾಶಯತ್ಯಾಶು ಕಾಸಂ ಪಂಚವಿಧಂ ಶಿಶೋಃ ॥"

"ನೆಲಗುಂಬಳಹೂವಿನ ಕೇಸರ ಚೂರ್ಣವನ್ನು ಜೇನಿನಲ್ಲಿ ಅವಲೇಹವನ್ನು ಮಾಡಿ ತಿನ್ನಿಸಲು ಮಕ್ಕಳ ೫ ವಿಧ ಕಾಸವೂ ನಿರ್ಮೂಲವಾಗುವದು."

"ಕ್ವಾಪಿ ದ್ರಯುಕ್ತಾ ತುಗಾ ಕ್ಷೀರೀ ಕಾಸ ಶ್ವಾಸೌ ವ್ಯಪೋಹತಿ ॥
ಬಾಲಸ್ಯ ನಿಯತಂ ಕೃಷ್ಣಾ ಶೃಂಗೀ ವಾ ಮೂಲ ಸಂಯುತಾ॥"

"ವಂಶಲೋಚನದ ಚೂರ್ಣವನ್ನು ಜೇನಿನಲ್ಲಿ ನೆಕ್ಕಿಸಲು ಬಾಲಕರ ಕಾಸಶ್ವಾಸ ನಿರ್ಮೂಲವಹುದು. ಹಾಗೆಯೇ ಹಿಪ್ಪಲಿ, ಕರ್ಕಾಟಕಶೃಂಗಿ, ಮುಲ್ಲಂಗೀಬೀಜ ಇವುಗಳ ಚೂರ್ಣವೂ ಜೇನಿನಲ್ಲಿ ನೆಕ್ಕಿಸಲು ಬಾಲಕನ ಕಾಸಶ್ವಾಸ ಮಾಣ್ಗು."

" ಹಿಪ್ಪಲಿ, ಹಿಪ್ಪಲೀಮೂಲ, ಶುಂಠಿ, ಮೆಣಸು ಇವುಗಳ ಚೂರ್ಣ ವನ್ನು ಜೇನುತುಪ್ಪದಲ್ಲಿ ನೆಕ್ಕಿಸುತ್ತಾ ಬರಲು ಕಫಸಹಿತ ಸ್ವರಭಂಗ ಜಾಡ್ಯ ನಿವೃತ್ತಿಯಹುದು."

**" ಯಷ್ಟ್ಯಾಹ್ವಾ ಜೀವನೀ ಮೂರ್ವಾ ಕಾಕೋಲೀ ದ್ವಯ ಸಾಧಿ ತಮ್ ॥ ಪಯಃ ಪಿತ್ತೋದ್ಭವಂ ಹಂತಿ ಸ್ವರಭೇದಂ ಸುದಾರುಣಮ್॥"**

" ಜೇಷ್ಟಮಧು, ಅಳಲೇಕಾಯಿ, ಮಯೂರಶಿಖಿ, ಕಾಕೋಲೀ ಕ್ಷೀರಕಾಕೋಲೀ ಇವುಗಳ ಕಲ್ಕದಿಂದ ಕಾಸಿದ ಹಾಲನ್ನು ಕುಡಿಸಿದ ಮಕ್ಕಳ ಪಿತ್ತಪ್ರಕೋಪಜನ್ಯ ದಾರುಣವಾದ ಸ್ವರಭಂಗ ಜಾಡ್ಯವನ್ನು ನಿವೃತ್ತಿಮಾಡಿ ಸುಖವನ್ನೀಯುವದು."

**ಅರುಚಿ ಜಾಡ್ಯಕ್ಕೆ:**—" ಜೀರಕದ್ವಯಮಮ್ಲೀಕಾ ವೃಕ್ಷಾಮ್ಲಂ ದಾಡಿಮಾನ್ವಿತಮ್ ॥ ಚಿತ್ರಕಾರ್ದ್ರಕ ಸಂಯುಕ್ತಂ ಅರುಚಿಂ ಹಂತಿ ದುಷ್ಕರಮ್ ॥"

" ಸ್ಯಾಹಜೀರಿಗೆ, ಬಿಳೀಜೀರಿಗೆ, ಪುಳ್ಳಂಪುರಚಿ, ಹುಣಸೇಹಣ್ಣು, ಶೀಮೆ ಅನಾರದಾನಾ (ದಾಳಿಂಬರೇಬೀಜ) ಚಿತ್ರಮೂಲ ಇವುಗಳ ಚೂರ್ಣ ವನ್ನು ಹಶೀಶುಂಠೀರಸದಲ್ಲಿ ಸೇವಿಸಿದರೆ ದಾರುಣವಾದ ಅರುಚಿರೋಗವೂ ಪರಿಹಾರವಾಗುವದು."

"ದ್ವೇಪಲೇ ದಾಡಿಮಾದಷ್ಟೌ ಖಂಡಾದ್ವ್ಯೋಷ ಫಲತ್ರಯಮ್॥ ತ್ರಿಸುಗಂಧಿ ಪಲಂ ಚೈಕಂ ಚೂರ್ಣಮೇಕತ್ರ ಕಾರಯೇತ್॥ ದೀಪನಂ ರೋಚನಂ ಪಥ್ಯಂ ಪೀನಸ ಜ್ವರ ಕಾಸಜಿತ್ ॥ ವಿಚಾರ್ಯೈವಂ ತು ಮತಿಮಾನ್ ಔಷಧಂ ಚ ಪ್ರಯೋಜಯೇತ್ ॥"

" ಶೀಮೆ ದಾಳಿಂಬರೇಬೀಜ ೮ ತೊಲೆ, ಸಕ್ಕರೆ ೬೪ ತೊಲೆ, ಶುಂಠಿ ೪ ತೊಲೆ, ಮೆಣಸು ೪ ತೊಲೆ, ಹಿಪ್ಪಲಿ ೪ ತೊಲೆ, ದಾಲಚಿನ್ನಿ, ಯಾಲಕ್ಕಿ, ಲವಂಗಪತ್ರಿ ಇವು ಎಲ್ಲಾ ಸೇರಿ ೪ ತೊಲೆ, ಹೀಗೆ ಒಟ್ಟುಗೂಡಿಸಿ, ಚೂರ್ಣಿಸಿ ಸೇವಿಸುತ್ತಾ ಬರಲು ಇದು ದೀಪನ, ರೋಚನಕರವಾದದ್ದು. ಮಕ್ಕಳ ಪೀನಸರೋಗ, ಜ್ವರ, ಕಾಸ ಇವುಗಳಿಗೆ ರಾಮಬಾಣದಂತಿರುವದು."

ಮೂರ್ಛಾ ಚಿಕಿತ್ಸೆ:—"ಕೋಲಾಸ್ಥಿ ಪದ್ಮಕೋಶೀರಂ ಚಂದನಂ ನಾಗಕೇಸರಮ್ ॥ ಲೀಢಂ ಕ್ಷೌದ್ರೇಣ ಬಾಲಾನಾಂ ಮೂರ್ಛಾನಾಶನ ಮುತ್ತಮಮ್ ॥"

" ಬಿಲ್ವಫಲದ ತಿರಳು, ಪದ್ಮಾಕ್ಷ, ಲಾಮಂಚ, ಶ್ರೀಗಂಧ, ನಾಗಕೇಸರ ಇವುಗಳ ಚೂರ್ಣವನ್ನು ಜೇನಿನಲ್ಲಿ ನೆಕ್ಕಿಸಲು ಶಿಶುಗಳ ಮೂರ್ಛಾಜಾಡ್ಯವು ನಿರ್ನಾಮವಹುದು."

"ದ್ರಾಕ್ಷಾಮಾಮಲಕೀ ಸ್ವಿನ್ನಂ ಪಿಷ್ಟ್ವಾ ಕ್ಷೌದ್ರೇಣ ಸಂಯುತಃ॥ ಸರ್ವದೋಷಭವಾಂ ಮೂರ್ಛಾಂ ಸಜ್ವರಾಂ ನಾಶಯೇದ್ಧ್ರುವಮ್॥"

"ದ್ರಾಕ್ಷಿ, ನೆಲ್ಲಿಚಟ್ಟು ಇವುಗಳನ್ನು ಜೇನಿನಲ್ಲಿ ನುಣ್ಣಗರದು ಸ್ವಲ್ಪ ಸ್ವಲ್ಪ ಸೇವಿಸುತ್ತಾಬಂದರೆ ವಾತ ಪಿತ್ತ ಕಫ, ಸನ್ನಿಪಾತಗಳಿಂದುಂಟಾದ ಎಲ್ಲಾ ಮೂರ್ಛೆಜಾಡ್ಯ ಮತ್ತು ಜ್ವರ ಇವುಗಳಿಗೆ ರಾಮಬಾಣದಂತೆ ಗುಣ ಪಡಿಸಿ ಮಗುವನ್ನು ಆರೋಗ್ಯಕ್ಕೆ ತರುವದು."

"ಶೀತಾಃ ಪ್ರದೇಹಾ ಮಣಯಃ ಸಹಾರಾಃ।
ಸೇಕಾವಗಾಹಾ ವ್ಯಜನಸ್ಯ ವಾತಾಃ॥
ಲೇಹ್ಯಾನ್ನಪಾನಾದಿ ಸುಗಂಧಿ ಶೀತಮ್।
ಮೂರ್ಛಾಸು ಸರ್ವಾಸು ಪರಂ ಪ್ರಶಸ್ತಮ್॥"

"ಶೀತಲ ಲೇಪನಾದಿಗಳೂ, ಮಣಿಗಳನ್ನು ಧರಿಸುವಿಕೆ, ಶೀತಲವಾದ ಸೇಕಗಳನ್ನು ಉಪಯೋಗಿಸುವಿಕೆ, ಶೀತಲವಾದ ಸ್ನಾನಾದಿಗಳು, ಬೀಸಣಿಗೆಯ ಗಾಳಿ, ಇನ್ನೂ ಉಪವನಾದಿಗಳ ಶೀತಲ ಮಂದಮಾರುತ ಸೇವನೆ, ನೆಕ್ಕುಂದಕ್ಕೆ ಹಿತವಾದ ಔಷಧಿಗಳು, ಸುಖವಾದ ಅನ್ನಪಾನಾದಿಗಳು, ಸುಗಂಧ ವಸ್ತುಗಳನ್ನು ಮೈಗೆ ಹಚ್ಚಿಕೊಳ್ಳುವಿಕೆ ಇತ್ಯಾದಿ ಶೀತಲೋಪಚಾರದಿಂದ ಮೂರ್ಛಾಜಾಡ್ಯವು ಹೆಸರಿಲ್ಲದಂತಾಗುತ್ತದೆ. ಅಂದರೆ ಇದಕ್ಕೆ ಸರ್ವೋಪಚಾರವೂ ಶೀತಲವಾಗಿಯೇ ಇರತಕ್ಕದ್ದು."

ದಾಹ ಚಿಕಿತ್ಸಾ:—"ಪದ್ಮಕಂ ಚಂದನಂ ತೋಯಮುಶೀರಂ ಶ್ಲಕ್ಷ್ಣ ಚೂರ್ಣಿತಮ್॥ ಕ್ಷೀರೇಣ ಪೀತಂ ಬಾಲಾನಾಂ ದಾಹಂ ನಾಶಯತಿ ಧ್ರುವಮ್॥"

"ಪದ್ಮಕ, ಶ್ರೀಗಂಧ, ಮುಡಿವಾಳ, ಲಾವಂಚ ಇವುಗಳ ಬಾರೀಕ್ ಚೂರ್ಣಮಾಡಿ ಹಾಲಿನೊಂದಿಗೆ ಸೇವಿಸಲು ಶಿಶುಗಳ ದಾಹವನ್ನು ನಿಶ್ಚಯವಾಗಿಯೂ ನಾಶಗೊಳಿಸುವದು."

"ಕರ್ಪೂರ ಚಂದನೋಶೀರ ಲಿಪ್ತಾಂಗಂ ಕದಲೀ ದಲೈಃ॥ ಪ್ರಶಸ್ತೇ ಸಂಸ್ತರೇದ್ಧೀಮಾನ್ ಸ್ವಾಪಯೇದ್ದಾಹ ಪೀಡಿತಮ್॥"

"ಪಚ್ಚಕರ್ಪೂರ, ಶ್ರೀಗಂಧ, ಲಾವಂಚ ಇವುಗಳನ್ನು ಅರದು ಮೈಗೆ ಲೇಪಿಸಿ, ಬಾಳೆಯ ಯಲೆಯಲ್ಲಿ ರೋಗಿಯನ್ನು ಮಲಗಿಸಲು ಅತ್ಯುತ್ಕಟವಾದ ದಾಹವು ನಿವೃತ್ತಿಯಾಗಿ ಸುಖವಾಗುವದು."

"ಪರಿಷೇಕಾವಗಾಹಾದಿ ವ್ಯಂಜನಾನಾಂ ಚ ಸೇವನಮ್॥ ಶಸ್ಯತೇ ಶಿಶಿರಂ ತೋಯಂ ತೃಷಾ ದಾಹೋಪಶಾಂತಯೇ॥"

" ಶೀತಲ ಜಲದಿಂದ ಸ್ನಾನಮಾಡುವಿಕೆ, ಶೀತಲ ಜಲದಿಂದ ಅವಗಾಹನ (ತಲೆಯಿಂದ ಸ್ನಾನ) ಮಾಡುವಿಕೆ, ಶೀತಲವಾಯು ಸೇವನಮಾಡುವಿಕೆ, ಶೀತಲವಾದ ಜನಪಾನ, ಇವುಗಳನ್ನು ಸೇವಿಸುವಿಕೆಯು ತೃಷೆಯನ್ನೂ, ಮೈಯ್ಯುರಿಯನ್ನೂ ಶಾಂತಿಪಡಿಸುವದು. ''

ಉನ್ಮಾದ ಚಿಕಿತ್ಸಾ:—" ಶಿರೀಷನಕ್ತಮಾಲಾನಾಂ ಬೀಜೈ ರಂಜಿತಲೋಚನಃ || ಚೇತೋವಿಕಾರಂ ಹಂತ್ಯಾಶು ಸಾಪಸ್ಮಾರಾಪತಂತ್ರಿಕಮ್ || "

" ಬಾಗೇಬೀಜ, ಹೊಂಗೇಬೀಜ ಇವನ್ನು ನೀರಿನಲ್ಲರದು ಅಂಜನವಿಡುವದರಿಂದ ಚಿತ್ತವಿಕಾರ, ಉನ್ಮಾದ, ಅಪಸ್ಮಾರ, ಅಪತಂತ್ರಿಕ ಇವು ನಾಶನವಹುವು. ''

" ಸಿದ್ಧಾರ್ಥಕ ವಚಾ ಹಿಂಗು ಶಿವನಿರ್ಮಾಲ್ಯ ಗಂಧಕೈಃ|| ನಿರ್ಮೋಕ ಪಿಂಛಲವಣೈಃ ನೃಕೇಶೈಃ ಕುಷ್ಠಸಂಯುತೈಃ || ಗೃಹಸೂಕರ ಮಾರ್ಜಾರ ವಿಷ್ಠಾರಿಷ್ಟಕ ಪತ್ರಕೈಃ || ಏತೈರ್ಘೃತ ಪ್ಲುತೈ ರ್ಧೂಪಃ ಸರ್ವೋನ್ಮಾದ ಗ್ರಹಾಪಹಃ || "

" ಸಾಸವೆ, ಭಜೆ, ಇಂಗು, ಯಕ್ಕೆಯಹೂವು, ಹವಳಸರಗಂಧಕ, ಹಾವಿನಪೊರೆ, ನವಿಲಗರಿ, ಲವಣ, ಮನುಷ್ಯನ ತಲೆಕೂದಲು, ಸಾಕಿದ ಹಂದಿಯವಿಷ್ಟಾ, ಕೋಷ್ಟ, ಬೆಕ್ಕಿನವಿಷ್ಟಾ, ಬೇವಿನಯಲೆ ಇವುಗಳ ಕಲ್ಕಮಾಡಿ ಸ್ವಲ್ಪ ಸಾಂಬ್ರಾಣಿ ಮತ್ತು ತುಪ್ಪ ಬೆರಸಿ ಧೂಪವಿಡಲು ಬಾಲಕರ ಉನ್ಮಾದ, ಗ್ರಹವಿಕಾರ ಇವು ನಾಶನವಹುದು. ''

ಅಪಸ್ಮಾರ ಚಿಕಿತ್ಸಾ:—" ಕೂಷ್ಮಾಂಡಕರಸಂ ದತ್ವಾ ಮಧುಕಂ ಪರಿಪೇಷಯೇತ್ || ಅಪಸ್ಮಾರ ವಿನಾಶಾಯ ತತ್ಪಿಬೇತ್ಸಪ್ತವಾಸರವ್ || "

" ಹಳೇ ಬಲಿತ ಬೂದಗುಂಬಳರಸದಲ್ಲಿ ಜೇಷ್ಟಮಧುವನ್ನರದು ಆ ರಸದಲ್ಲಿ ಕದರಿ ೭ ದಿನ ದಿನವೂ ೨ ಹೊತ್ತಿನಂತೆ ಕುಡಿಸುತ್ತಾ ಕ್ಷೀರಾನ್ನ ಪಥ್ಯದಲ್ಲಿಡಲು ಅಪಸ್ಮಾರ (ಮಲರೋಗ) ನಿವೃತ್ತಿಯಾಗುವದು. ''

" ಗೋಸರ್ಪಿಃ ಸಾಧಿತಂ ಮೂತ್ರ ದಧಿ ಕ್ಷೀರ ಶಕೃದ್ರಸೈಃ || ಚಾತುರ್ಥಿಕ ಜ್ವರೋನ್ಮಾದ ಸರ್ವಾಪಸ್ಮಾರ ನಾಶನವತ್ || "

" ಗೋವಿನಮೂತ್ರ, ಮೊಸರು, ಹಾಲು, ಸಗಣಿಯರಸ ಇವುಗಳಲ್ಲಿ ಗೋಘೃತವನ್ನು ಹಾಕಿ ಘೃತವಿಧಿಯಿಂದ ಪಾಕಮಾಡಿ ಅದನ್ನು ಸೇವನೆಮಾಡುವದರಿಂದ ಚಾತುರ್ಥಿಕಜ್ವರ, ಉನ್ಮಾದ, ಅಪಸ್ಮಾರ ಇವೆಲ್ಲಾ ನಾಶನವಹುದು. ''

ವಾತಪೀಡಾ ಚಿಕಿತ್ಸಾ:—

" ಪುನರ್ನವೈರಂಡ ಯವಾತಸೀಭಿಃ |
ಕಾರ್ಪಾಸಪಜ್ಜೈರಸ್ಥಿಭಿರಾರನಾಳೈಃ ||
ಸ್ವಿನ್ನೈರವಿಮಾಭಿಸ್ತ್ರಿಭಿಷಡ್ಭಿರೇವ ವಾ |
ಸ್ವೇದಃ ಸಮೀರಾರ್ತಿಹರೋ ನರಾಣಾಮ್ ||"

" ಬಿಳೀಕೊಮ್ಮೆ, ಹರಳುಬೇರು, ಯವ, ಅಲಸೀ, ಹತ್ತಿಯಬೀಜದ ಪೊಪ್ಪು, ಇವೆಲ್ಲವನ್ನೂ ಗಂಜಿಯಲ್ಲಿ ಅರದು ಶಿಶುವಿಗೆ ಎಲ್ಲಿ ವಾತವ್ಯಾಧಿಯಿದೆಯೋ ಆ ಅಂಗಕ್ಕೆ ಲೇಪಿಸಿ ಹೀಗೆ ೪ ದಿನ ಮಾಡಿದರೆ ಆ ವಾಯುವು ನಿವೃತ್ತಿಯಾಗುವದು. ''

ರಕ್ತಪಿತ್ತ ಚಿಕಿತ್ಸೆ:—" ವಾಸಾಯಾಃ ಸ್ವರಸಃ ಪೀತಃ ಸಿತಾ ಮಧು ಸಮನ್ವಿತಃ || ತಥಾ ವಟಪ್ರರೋಹಾಣಾಂ ರಕ್ತಪಿತ್ತಂ ವಿನಾಶಯೇತ್ || "

" ಆಡುಸೋಗೆಯ ಎಲೆಯನ್ನರದು ರಸವನ್ನು ಹಿಂಡಿಕೊಂಡು ಅದರೊಂದಿಗೆ ಸಕ್ಕರೆ, ಜೇನುತುಪ್ಪ ಹಾಕಿ ಕುಡಿಸಿದರೂ, ಅಥವಾ ವಟವೃಕ್ಷದ ಬಿಳಲು ಚಿಗರನ್ನು ಕುಟ್ಟಿತೆಗದ ರಸಕ್ಕೂ, ಸಕ್ಕರೆ ಜೇನುಬೆರಸಿ ಪಾನಮಾಡಿಸಿದರೂ ಶಿಶುಗಳ ರಕ್ತಪಿತ್ತವು ನಾಶನವಾಗಿ ಸುಖವಾಗುವದು. ''

" ಪಾಲಾಶ ಪುಷ್ಪ ಕ್ವಾಥೇನ ವಾಸಾಯಾಃ ಸ್ವರಸೇನ ಚ || ಚತುರ್ಗುಣೇನ ಸಂಸಿದ್ಧಂ ರಕ್ತಪಿತ್ತಹರಂ ಘೃತಮ್ || "

" ಮುತ್ತುಗದಹೂವಿನ ಕಷಾಯ ಅಥವಾ ಆಡುಸೋಗೆಯ ಎಲೆಗಳ ಸ್ವರಸ ಇವುಗಳಲ್ಲಿ ಒಂದಕ್ಕೆ ಘೃತವನ್ನು ಚತುರ್ಥಾಂಶ ಬೆರಸಿ ಘೃತಪಾಕವಿಧಿಯಂತೆ ಅಟ್ಟ ಘೃತವನ್ನು ಶಿಶುವಿಗೆ ಸೇವನೆಮಾಡಿಸಲು ಈ ಎರಡು ಪ್ರಯೋಗದಿಂದಲೂ ರಕ್ತಪಿತ್ತ ನಿವೃತ್ತಿಯಾಗುವದು. ''

"ರಸೋ ದಾಡಿಮಪುಷ್ಪಾಣಾಂ ದೂರ್ವಾಯಾಃ ಸ್ವರಸೋಽಥವಾ||
ನಸ್ಯೇನ ನಾಶಯೇತ್ತೂರ್ಣಂ ನಾಸಿಕಾರಕ್ತಮುದ್ಧೃತಮ್ || "

" ದಾಳಿಂಬದಹೂವಿನರಸ ಅಥವಾ ದೂರ್ವಾಸ್ವರಸ ಇವೆರಡರಲ್ಲಿ ಒಂದನ್ನು ಮೂಗಿನಲ್ಲಿ ನಸ್ಯಮಾಡುವದರಿಂದ ಶಿಶುಗಳ ರಕ್ತಪಿತ್ತವು ನಾಶನವಹುದು. ''

ಉದಾವರ್ತರೋಗ ಚಿಕಿತ್ಸಾ:—" ಹಿಂಗು ಮಾಕ್ಷಿಕ ಸಿಂಧೂತ್ಥೈಃ ಕೃತಾವರ್ತಿಂ ಸುವರ್ತ್ತಿತಾಮ್|| ಘೃತಾಭ್ಯಕ್ತಾಂ ಗುದೇ ದದ್ಯಾದುದಾವರ್ತ್ತ ವಿನಾಶಿನೀಮ್ || "

" ಇಂಗು, ಜೇನುತುಪ್ಪ, ಸೈಂಧವಲವಣ ಇವುಗಳಿಂದ ದೊಡ್ಡದಾದ ಬತ್ತಿಯನ್ನು ಹೊಸೆದು ಒಣಗಿಸಿ ಅದಕ್ಕೆ ತುಪ್ಪವನ್ನು ಸವರಿ ಬಾಲಕನ ಗುದದಲ್ಲಿ ಏರಿಸಲು ಉದಾವರ್ತವೆಂಬ ಆನಾಹ ಕೋಷ್ಠವಾತ ಗುಣವಾಗುವದು."

**ವಾತಗುಲ್ಮ ಚಿಕಿತ್ಸಾ:—**

" ತ್ರಿಕಟುಕಮಜಮೋದಾ ಸೈಂಧವಂ ಜೀರಕೇದ್ವೇ।
ಸಮಧರಣಧೃತಾನಾಮಷ್ಟಮೋ ಹಿಂಗುಭಾಗಃ ॥
ಪ್ರಥಮಕಬಲಭುಕ್ತಂ ಸರ್ಪಿಷಾ ಚೂರ್ಣಮೇತ ।
ಜ್ಜನಯತಿ ಜಠರಾಗ್ನಿಂ ವಾತಗುಲ್ಮಂ ನಿಹಂತಿ ॥ "

" ಶುಂಠಿ, ಮೆಣಸು, ಹಿಪ್ಪಲಿ, ಅಜವಾನ, ಸೈಂಧವಲವಣ, ಜೀರಿಗೆ, ಸ್ಯಾಹಜೀರಿಗೆ, ಇವೆಲ್ಲ ವಸ್ತುಗಳನ್ನೂ ಸಮವಾಗಿ ಕೇರಿಸಿ ಹಿಂಗನ್ನು ೮ ರಲ್ಲಿ ೧ ಭಾಗ ಹಾಕಬೇಕು. ಇದು ಹಿಂಗ್ವಾಷ್ಟಕ ಚೂರ್ಣವು. ಇದನ್ನು ಒಂದು ಪೊಟ್ಟಣ ೨ ಆಣೆತೂಕವನ್ನು ತುಪ್ಪ ಕಾಸಿ ಅದರಲ್ಲಿ ಹಾಕಿ ಸ್ವಲ್ಪ ಬಿಸಿಮಾಡಿ ಮೊದಲನೇ ಅನ್ನಕ್ಕೆ ಹಾಕಿ ಕಲಿಸಿ ಊಟಮಾಡಿ ಆ ಹಿಂದೆ ಭೋಜನಮಾಡುತ್ತಾ ಬಂದರೆ ಜಠರಾಗ್ನಿಯನ್ನು ತೇಜವನ್ನಾಗಿ ಮಾಡುವದಲ್ಲದೆ, ವಾತಗುಲ್ಮ (ಗೆಡ್ಡೆ) ಯನ್ನು ನಾಶಮಾಡುತ್ತದೆ. "

**ಹೃದ್ರೋಗ ಚಿಕಿತ್ಸಾ:—**

" ಶುಂಠೀ ಕಣಾ ಪುಷ್ಕರ ಕೇತಕೀನಾಮ್ ।
ನಿಧಾಯ ಚೂರ್ಣಂ ಕಕುಭಸ್ತ್ವಚೋವಾ ॥
ರಾಸ್ನಾನ್ವಿತಮ್ ವಾ ಮಧುನಾವಲೀಢಮ್ ।
ಹೃದ್ರೋಗಮೇತಚ್ಛಮಯತ್ಯುದಗ್ರಮ್ ॥ "

" ಶುಂಠಿ, ಹಿಪ್ಪಲಿ, ಪುಷ್ಕರಮೂಲ, ಕೇತಕೀಬೇರು, ಇವುಗಳ ಚೂರ್ಣವೊಂದು, ತೊರೆಮತ್ತೀಮರದಚಕ್ಕೆಯ ಚೂರ್ಣವೊಂದು, ಸಣ್ಣ ರಾಸ್ಮೆಯಚೂರ್ಣವೊಂದು ಈ ಮೂರರಲ್ಲಿ ಯಾವದನ್ನಾದರೂ ಸರಿಯ ಜೇನು ತುಪ್ಪದಲ್ಲಿ ಬೆರಸಿ ಸೇವಿಸುತ್ತಾಬಂದರೆ ಹೃದ್ರೋಗವು ನಾಶವಾಗುವದು. "

**ಮೂತ್ರಕೃಚ್ಛ್ರ ಚಿಕಿತ್ಸಾ:—**

" ಮೋಘಾ ಮೃತಾ ನಾಗರ ವಾಜಿಗಂಧಾ ।
ಧಾತ್ರೀ ತ್ರಿಕಂಟೈರ್ವಿಹಿತಃ ಕಷಾಯಃ ॥
ಕ್ಷೌದ್ರೇಣ ಪೀತಃ ಶಮಯತ್ಯವಶ್ಯಮ್ ।
ಮೂತ್ರಸ್ಯಕೃಚ್ಛ್ರಂ ಪವನಪ್ರಸೂತಮ್ ॥ "

" ತುಂಗಮುಸ್ತೆ, ಅಮೃತಬಳ್ಳಿ, ಶುಂಠಿ, ಅಶ್ವಗಂಧ, ನೆಲ್ಲಿಚಟ್ಟು, ಆನೆನೆಗ್ಗಿಲು ಇವುಗಳಿಂದ ಸಿದ್ಧಮಾಡಿದ ಕಷಾಯದಲ್ಲಿ ಜೇನುತುಪ್ಪವೆರಸಿ

ಕುಡಿಸುವದರಿಂದ ವಾಯುವಿನಿಂದ ಉತ್ಪನ್ನವಾದ ಮೂತ್ರಕೃಚ್ಛ್ರಬಾಧ್ಯವು ನಿವೃತ್ತಿಯಾಗುವದು. ''

" ಕುಶೇಕ್ಷುಂ ಕಾಶಾಃ ಶರದರ್ಭೇ ಯುಕ್ತಾಃ ।
ಪ್ರಕ್ಷುಣ್ಣಾಮೇತತ್ತೃಣಪಂಚಮೂಲಮ್ ॥
ನಿಷ್ಕ್ವಾಥ್ಯ ಪೀತಂ ಸೇಧಿನಾವಿ ಮಿಶ್ರಮ್ ।
ಕೃಚ್ಛ್ರಂ ಸದಾಹಂ ಸರುಜಂ ನಿಹಂತಿ ॥ "

" ದರ್ಭೆಯಬೇರು, ಕಬ್ಬಿನಬೇರು, ಜಂಬುಹುಲ್ಲಿನಬೇರು, ಶರವೆಂಬ ಹುಲ್ಲಿನಬೇರು, ಮುಂಜವೆಂಬ ಹುಲ್ಲಿನಬೇರು ಇವು ಐದೂ ತೃಣಪಂಚ ಮೂಲಗಳು, ಇವುಗಳನ್ನು ಶೇರಿಸಿ ಕುಟ್ಟಿ ಕಷಾಯಕಾಸಿ ಜೇನುತುಪ್ಪದೊಂದಿಗೆ ಕುಡಿಯಲು ಶಿಶುಗಳ ದಾಹ (ಮೈಯ್ಯುರಿ) ವೂ, ಪೀಡಾಯುಕ್ತ ಮೂತ್ರಕೃಚ್ಛ್ರವೂ ನಷ್ಟವಾಗುವವು. ''

" ಯವಕ್ಷಾರ ಯುತಃ ಕ್ವಾಥಃ ಸ್ವಾದುಕಂಟಕ ಸಂಭವಃ ॥ ಪೀತಃ ಪ್ರಣಾಶಯತ್ಯಾಶು ಮೂತ್ರಕೃಚ್ಛ್ರಂ ಕಫೋದ್ಭವಮ್ ॥ "

" ವಿಲಾಯಿತೀ ನೆಗ್ಗಿಲು ಹಾಕಿ ಸಿದ್ಧಮಾಡಿದ ಕಷಾಯದಲ್ಲಿ ಯವಕ್ಷಾರವನ್ನು ಹಾಕಿ ಕುಡಿಸಲು ಕಫೋದ್ಭವವಾದ ಮೂತ್ರಕೃಚ್ಛ್ರವನ್ನು ನಿರ್ನಾಮ ಮಾಡುವದು. ''

" ಶ್ವದಂಷ್ಟ್ರಾ ವಿಹಿತಃ ಕ್ವಾಥಃ ಶಿಲಾಜತು ಸಮನ್ವಿತಃ ॥ ಸರ್ವ ದೋಷೋದ್ಭವಂ ಹಂತಿ ಕೃಚ್ಛ್ರಂ ನಾಸ್ತ್ಯತ್ರಸಂಶಯಃ ॥ "

" ನೆಲಗುಳ್ಳದ ಕಷಾಯದಲ್ಲಿ ಶಿಲಾಜತುವನ್ನು ಹಾಕಿ ಸೇವಿಸುವದರಿಂದ ತ್ರಿದೋಷೋತ್ಪನ್ನವಾದ ಮೂತ್ರಕೃಚ್ಛ್ರ ನಿವಾರಣೆಯಹುದು. ''

" ಕಷಾಯೋಽತಿ ಬಲಾಮೂಲತ್ರಪುಷೀ ಬೀಜ ಸಾಧಿತಃ॥ ಶಿಲಾ ಜತು ಯುತಃ ಪೀತೋ ಮೂತ್ರಕೃಚ್ಛ್ರಂ ವಿನಾಶಯೇತ್ ॥ "

" ಪೆರಾಮುಟ್ಟಿಬೇರು, ಸೌತೇಬೀಜ ಇವೆರಡನ್ನೂ ಶೇರಿಸಿ ಕಷಾಯ ಕಾಸಿ, ಶಿಲಾಜತು ಬೆರಸಿ ಸೇವಿಸಲು ಮೂತ್ರಕೃಚ್ಛ್ರ ನಿವಾರಣೆಯಾಗುವದು. ''

ಮೂತ್ರಾಘಾತ ಚಿಕಿತ್ಸಾ:—" ಪೀತ್ವಾ ದಾಡಿಮತೋಯೇನ ವಿಶ್ವೇಲಾ ಬೀಜಜಂ ರಸಮ್॥ ಮೂತ್ರಾಘಾತಾತ್ಪ್ರಮುಚ್ಯೇತ ವರಾಂ ವಾ ಲವಣಾನ್ವಿತಾಮ್ ॥ "

" ಶುಂಠಿ, ಸಣ್ಣಯಾಲಕ್ಕಿ, ದಾಳಿಂಬಬೀಜಸಮೇತ ಅರದು ನೀರಲ್ಲಿ ಕದರಿ ಶೋಧಿಸಿಕೊಂಡು ಕುಡಿಯುವದರಿಂದ ಮೂತ್ರಾಘಾತರೋಗ ನಿವಾರಣವು. ಅಥವಾ ತ್ರಿಫಲೆಯಚೂರ್ಣ, ಲವಣ ಇವನ್ನರದು ಆ ಪುಡಿಯನ್ನು

ತಿಂದು ಮೇಲೆ ದಾಳಿಂಬದ ಷರಬತ್ ಕುಡಿಯುವದರಿಂದಲೂ ಮೂತ್ರಾಘಾತ ರೋಗಹರವು. ''

" ಕರ್ಪೂರವರ್ತಿ ಮೃದುನಾ ಲಿಂಗಚ್ಛಿದ್ರೇ ನಿಧಾಪಯೇತ್॥ ಶೀಘ್ರಮೇವ ಮಹಾಘೋರಾನ್ಮೂತ್ರಬಂಧಾತ್ಪ್ರಮುಚ್ಯತೇ ॥ "

" ಕರ್ಪೂರವನ್ನು ಜಲದಲ್ಲಿ ಅರದು ಬಾರೀಕಾದ ಕೋಮಲವಸ್ತ್ರ ಅಥವಾ ಹತ್ತಿಯ ತುಂಡನ್ನು ಅದರಲ್ಲಿ ಅದ್ದಿ ಬತ್ತಿಯನ್ನುಮಾಡಿ ಲಿಂಗದ ಛಿದ್ರದಲ್ಲಿ ತುರಕುವದರಿಂದ ಬಹು ತೀವ್ರವಾಗಿ ಮೂತ್ರಬಂಧನವು ನಿವೃತ್ತಿಯಾಗುವದು. ''

" ಕ್ವಾಥೈಃ ಶಿಂಶುಕಷಾಯಜಾಂ ಸೇಕಸ್ತೈರೇವ ನಿರ್ಮಿತಃ ॥ ಉಪನಾಹೋಥವಾ ಹಂತಿ ಮೂತ್ರಕೃಚ್ಛ್ರಂ ಸುದಾರುಣಮ್ ॥"

" ಶಿಂಶುಕವೃಕ್ಷದ ಹೂವುಗಳ ಕ್ವಾಥದ ಸೇಕವನ್ನು ಮಾಡುವದರಿಂದ ಅಥವಾ ಆ ಕಲ್ಕವನ್ನೇ ವಸ್ತಿಪ್ರದೇಶದ ಮೇಲ್ಗಡೆ ಕಟ್ಟುವದರಿಂದ ಅತಿದುಃಖಕರವಾದ ಮೂತ್ರಕೃಚ್ಛ್ರ ನಿವಾರಣೆಯಾಗುವದು. ''

**ಅಂತ್ರವೃದ್ಧಿ ಚಿಕಿತ್ಸಾ:—**

" ಏರಂಡತೈಲಂ ಸಪಯಃ ಪಿಬೇದ್ಯೋ ।
ಗವ್ಯೇನ ಮೂತ್ರೇಣ ತದೇವವಾಪಿ ॥
ಸಗುಗ್ಗುಲು ಪ್ರೌಢರುಜಂ ಪ್ರವೃದ್ಧಾಮ್ ।
ಸರ್ವಾಂತ್ರವೃದ್ಧಿಂ ಸಹಸಾ ನಿಹಂತಿ ॥ "

" ಚಿಟ್ಟಹರಳೆಣ್ಣೆಯನ್ನು ಹಾಲಿನಲ್ಲಿ ಹಾಕಿ ಕುಡಿಯುವದರಿಂದಲೂ, ಅಥವಾ ಗೋಮೂತ್ರದಲ್ಲಿ ಚಿಟ್ಟಹರಳೆಣ್ಣೆ ಮತ್ತು ಗುಗ್ಗುಲವನ್ನು ಹಾಕಿ ಕುಡಿಯುವದರಿಂದಲೂ ಪೀಡಾಯುಕ್ತವಾದ ದುಸ್ತರವಾದ ಅಂತ್ರವೃದ್ಧಿಯು ಶಮನವಹುದು. ''

**ಗಂಡಮಾಲಾ ಚಿಕಿತ್ಸಾ:—** " ವನಕಾರ್ಪಾಸಿಕಾಮೂಲಂ ತಂಡುಲೈಃ ಸಹ ಯೋಜಿತಮ್ ॥ ಪಕ್ವಾಂ ಪೂಪಲಿಕಾಂ ಖಾದೇದಪಚೀ ನಾಶಹೇತವೇ ॥ "

" ಅರಣ್ಯದಲ್ಲಿ ತನ್ನಷ್ಟಕ್ಕೆತಾನೇ ಹುಟ್ಟುವ ಹತ್ತೀಗಿಡದ ಬೇರನ್ನೂ ಅಕ್ಕಿಯಹಿಟ್ಟನ್ನೂ ಬೆರಸಿ ಅರದು ತುಪ್ಪದಲ್ಲಿ ಪೂರೀಮಾಡಿ ಸೇವಿಸುವದರಿಂದ ಪರಿಪಕ್ವ ಗಂಡಮಾಲಾರೋಗವು ನಿವೃತ್ತಿಯಾಗುವದು. ''

**ಶೀತಲಾ ಚಿಕಿತ್ಸಾ:—** " ಕಾಂಚನಾರ ತ್ವಚಃ ಕ್ವಾಥಃ ತಾಪ್ಯಚೂರ್ಣಾವಚೂರ್ಣಿತಃ॥ ನಿರ್ಗತ್ಯಂತಃ ಪ್ರವಿಷ್ಟಾಂ ತು ಮಸೂರೀಂ ಬಾಹ್ಯತೋ ನಯೇತ್ ॥ "

“ ಕಂಚವಾಳದಚಕ್ಕೆ ಕಷಾಯದಲ್ಲಿ ಸುವರ್ಣಮಾಕ್ಷಿಕ ಭಸ್ಮವನ್ನು ಸ್ವಲ್ಪಮಾತ್ರ ಉದರಿಸಿ ಬಾಲಕನಿಗೆ ಕುಡಿಸಿದರೆ ಒಳಗೇ ಇದ್ದ ಶಿಡುಬು ಮೇಲಕ್ಕೆ ಉಬ್ಬಿಬರುವದು. ”

“ ಗರ್ದಭೀ ದುಗ್ಧಪಾನೇನ ತುಲಸೀಪತ್ರಭಕ್ಷಣಾತ್ ॥ ಮಸೂರೀ ಬಹಿರನ್ವೇತಿ ತತ್ಕ್ಷಣಾನ್ನಾತ್ರ ಸಂಶಯಃ ॥ ”

“ ಹೆಣ್ಣು ಕತ್ತೆಯಹಾಲನ್ನು ಕುಡಿಸುವದರಿಂದಲೂ, ಅಥವಾ ತುಲಸಿ ಎಲೆಗಳನ್ನರದು ಆ ಕಲ್ಕವನ್ನು ತಿನ್ನಿಸುವದರಿಂದಲೂ ಒಳಸರದಿರುವ ಶಿಡುಬು ಹೊರಕ್ಕೆ ಬಂದುಬಿಡುವದು. ”

“ ಶೀತಲೇನ ಜಲೇನೈವ ಚಿಂಚಯಾ ಚ ಸಮನ್ವಿತಾಮ್ ॥ ಹರಿದ್ರಾಂ ಯಃಪಿಬೇತ್ಪಿಷ್ಟ್ವಾ ನ ದೋಷಃ ಶೀತಲಾ ಭವಃ ॥ ”

“ ಥಣ್ಣೀರಿನಲ್ಲಿ ಅರಿಶಿನ ಮತ್ತು ಹುಣಸೇಬೀಜ ಇವನ್ನರದು ಕದರಿ ಶೋಧಿಸಿ ಕುಡಿಸಿದರೆ (ಶೀತಲಾ) ಶಿಡಬಿನಿಂದ ಉಂಟಾದ ವಿಕಾರ ಶಮನವಹುದು. ”

“ ಚಂದನಂ ವಾಸಕಂ ಮುಸ್ತಂ ಗುಡೂಚೀ ದ್ರಾಕ್ಷಯಾ ಸಹ ॥ ಏಷಾಂ ಶೀತಕಷಾಯಸ್ತು ಶೀತಲಾ ಜ್ವರನಾಶನಃ ॥ ”

“ ರಕ್ತಚಂದನ, ಆಡುಸೋಗೆಯಯಲೆ, ತುಂಗಮುಸ್ತೆ, ಅಮೃತಬಳ್ಳಿ, ದ್ರಾಕ್ಷಿ ಇವುಗಳನ್ನು ಕಷಾಯಮಿಕ್ಕಿ ಅದನ್ನು ಆರಿಸಿ ಥಣ್ಣಗಾದಮೇಲೆ ಕುಡಿಸುವದು (ಶೀತಲಾ) ಶಿಡಬಿನ ಜ್ವರ ಶಮನವಹುದು. ”

**ನೇತ್ರಚಿಕಿತ್ಸಾ:—**

“ ಮನಃಶಿಲಾ ಚಂದನ ಲೋಧ್ರ ಪಥ್ಯಾ ।
ರಸಾಂಜನೈರ್ಮುಸ್ತ ನಿಶಾ ಮಯೂಕ್ಷೈಃ ॥
ಸಗೈರಿಕಾಹ್ವೈ ರ್ವಿಹಿತಃ ಪ್ರಲೇಪೋ ।
ಬಹಿಃ ಪ್ರಸನ್ನೇ ನಯನೇ ಕರೋತಿ ॥ ”

“ ಮಣಿಶಿಲೆ, ಕೆಂಪುಚಂದನ, ಲೋಧ್ರ, ಅಳಲೇಕಾಯಿ, ರಸಾಂಜನ, ತುಂಗಮುಸ್ತೆ, ಅರಿಶಿನ, ಕೋಷ್ಟ, ತಾರೇಕಾಯಿ, ಕಾವಿಕಲ್ಲು ಈ ದ್ರವ್ಯಗಳನ್ನು ಸರಿಯಾಗಿ ಕೂಡಿಸಿ ಕುಟ್ಟಿ, ವಸ್ತ್ರಗಾಳಿತಮಾಡಿ, ಅದರಲ್ಲಿ ಸ್ವಲ್ಪವನ್ನು ನೀರಿನಲ್ಲಿ ಸಣ್ಣಗೆ ಮೇಣದಂತೆ ಅರದು ಕಣ್ಣುಗಳ ಹೊರಭಾಗದಲ್ಲಿ ಲೇಪಿಸಲು ಶಿಶುಗಳ ನೇತ್ರವಿಕಾರ ನಾಶವಾಗಿ ಕಣ್ಣುಗಳು ಸುಂದರವಾಗುವವು. ”

“ ಸಸೈಂಧವಂ ಲೋಧ್ರ ಮಥಾಜ್ಯ ಭೃಷ್ಟಂ ।
ಸೌವೀರ ಪಿಷ್ಟಂ ಸಿತವಸ್ತ್ರ ಬದ್ಧಮ್ ॥

ಆಶ್ಚೋತನಂ ತನ್ನಯನಸ್ಯ ಕುರ್ಯಾ ।
ತೃಂಡೂಂ ಚ ದಾಹಂ ಚ ರುಜಂ ಚ ಹನ್ಯಾತ್‌॥"

" ಸೈಂಧವಲವಣ, ತುಪ್ಪದಲ್ಲಿ ಹುರದ ಲೋಧ್ರದಪುಡಿ ಇವೆರಡನ್ನೂ ಗಂಜಿಯನೀರಿನಲ್ಲಿ ಅರದು ಉಂಡೇಮಾಡಿ ಬಿಳೀವಸ್ತ್ರದ ತುಂಡಿನಲ್ಲಿ ಕಟ್ಟಿಕ್ಕೊಂಡು ಕಣ್ಣಿನಮೇಲೆ ಒತ್ತುತ್ತಾ ಬಿಸೀ ಗಂಜೀನೀರಿನಲ್ಲಿ ಅದ್ದುತ್ತಾ ಒತ್ತುತ್ತಾ ಹೀಗೆ ಆಶ್ಚೋತನ ಮಾಡುವದರಿಂದ ನೇತ್ರಗಳ ನವೆ, ನೇತ್ರದ ಉರಿ, ಪೀಡಾ ಇವೆಲ್ಲಾ ನಾಶವಾಗಿ ಕಣ್ಣುಗಳು ಶುಭ್ರವಾಗುವವು. "

" ಚಂದನಂ ಮಧುಕಂ ಲೋಧ್ರಂ ಜಾತಿಪುಷ್ಪಾಣಿ ಗೈರಿಕಮ್ ॥
ಪ್ರಲೇಪೀ ದಾಹರೋಗಘ್ನ ಸ್ತೋಯಾಭಿಷ್ಯಂದನಾಶನಮ್‌॥"

" ರಕ್ತಚಂದನ, ಜೇಷ್ಟಮಧು, ಲೋಧ್ರ, ಜಾಜೀಹೂವು, ಕಾವೀಕಲ್ಲು ಇವುಗಳನ್ನು ಸುಣ್ಣಗರದು ನೇತ್ರಗಳಮೇಲೆ ಲೇಪಮಾಡುವದರಿಂದ-- ಕಣ್ಣುಗಳ ಉರಿ, ನೇತ್ರಗಳಲ್ಲಿ ನೀರುಸುರಿಯುವಿಕೆ, ನೇತ್ರದಪೀಡಾ, ರಸಿಕೆ ಸುರಿಯುವಿಕೆ ಇವೆಲ್ಲಾ ನಿವಾರಣೆಯಾಗುವವು. "

" ಶಂಖಸ್ಯ ಭಾಗಾಶ್ಚತ್ವಾರಸ್ತದರ್ಧಾ ಚ ಮನಶ್ಶಿಲಾ ॥ ಮನಶ್ಶಿಲಾರ್ಧಂ ಮರಿಚಂ ಮರಿಚಾರ್ಧಾ ಚ ಪಿಪ್ಪಲೀ ॥ ವಾರಿಣಾ ತಿಮಿರಂ ಹಂತಿ ಹ್ಯರ್ಬುದಂ ಹಂತಿಮಸ್ತುನಾ ॥ ಚಿಪಿಟಂ ಮಧುನಾ ಹಂತಿ ಸ್ತ್ರೀಕ್ಷೀರೇಣ ತದುನ್ನತಮ್ ॥ "

" ಶಂಖದ ನಾಭಿಭಾಗವು ೪ ಭಾಗ, ಮಣಿಶಿಲೆ ೨ ಭಾಗ, ಮೆಣಸು ೧ ಭಾಗ, ಹಿಪ್ಪಲಿ ಅರ್ಧಭಾಗ, ಇವೆಲ್ಲವನ್ನೂ ಜಲದಲ್ಲಿ ಮೇಣದಂತರದು ಇಟ್ಟುಕ್ಕೊಳ್ಳುವದು. ಈ ಮಾತ್ರೆಯನ್ನು ನೀರಿನಲ್ಲರದು ಕಣ್ಣಿಗೆ ಹಚ್ಚಲು ಕಣ್ಣಿನ ತಿಮಿರ ಹರವಾಗುವದು, ಮೊಸರಿನ ಮೇಲಿನ ನೀರಿನಲ್ಲಿ ಅರದು ಲೇಪಿಸಿದರೆ ಕಣ್ಣಿನ ಅರ್ಬುದ ನಾಶನವಹುದು. ಜೇನಿನಲ್ಲಿ ತೆಯಿದು ಹಚ್ಚಲು ಕವಡೆಗಣ್ಣು ನಾಶನವಹುದು, ಮೊಲೇಹಾಲಿನಲ್ಲಿ ಅರದು ಹಚ್ಚಲು ದುರ್ಮಾಂಸ ಬೆಳದಿರುವದು ನಾಶವಾಗುವದು. "

" ಧತ್ತೂರಫಲ ಕರ್ಪೂರೇ ನಿಘೃಷ್ಯ ಮಧುನಾಂಜಯೇತ್ ॥ ನೇತ್ರರೋಗಾ ಪ್ರಣಶ್ಯಂತಿ ಸಿಂಹತ್ರಸ್ತಾ ಮೃಗಾ ಇವ ॥ "

" ಶುದ್ಧವಾದ ಉಮ್ಮತ್ತಿನಬೀಜ ಮತ್ತು ಪಚ್ಚಕರ್ಪೂರ ಇವೆರಡನ್ನೂ ಬಹು ನುಣ್ಣಗರದು ಇಟ್ಟುಕ್ಕೊಂಡು ಈ ಮಾತ್ರೆಯನ್ನು ಜೇನಿನಲ್ಲಿ ಅರದು ಅಂಜನವಿಡುವದರಿಂದ, ನೇತ್ರಸಂಬಂಧಿಯಾದ ಸಮಸ್ತ ರೋಗಗಳೂ—ಸಿಂಹಕ್ಕೆ ಹೆದರಿಕ್ಕೊಂಡು ಓಡುವ ಮೃಗಗಳಂತೆ—ಪಲಾಯನಮಾಡುವವು. "

ನಾಸಿಕಾರೋಗ ಚಿಕಿತ್ಸಾ:—

" ಹಿಂಗು ವ್ಯೋಷ ವಿಡಂಗ ಕಟ್ಫಲ ವಚಾ ರುಕ್ ತೀಕ್ಷ್ಣಗಂಧಾ ಯುತೈಃ ।
ಲಾಕ್ಷಾ ಶ್ವೇತಪುನರ್ನವಾ ಕುಟಜಕೈಃ ಪುಷ್ಪೋದ್ಭವೈಃ ಸೌರಸೈಃ ॥
ಇತ್ಯೇಭಿಃ ಕಟುತೈಲಮೇತದನಲೇ ಮಂದೇ ಸಮೂತ್ರಂ ಶೃತಮ್ ।
ಪೀತಂ ನಾಸಿಕಯಾ ಯಥಾ ವಿಧಿ ಭವೇನ್ನಾಸಾಮಯಭ್ಯೋ ಹಿತಮ್ ॥"

" ಹಿಂಗು, ತ್ರ್ಯೂಷಣ, ವಾಯುವಿಳಂಗ, ಕಟ್ಫಲ, ಭಜೆ, ಕೋಷ್ಟ, ನಕ್ಕಿಕನೀ, ಅರಗು, ಬಿಳೀಕೊಮ್ಮೆ, ಕೊಡಚಿಗೆ, ಲವಂಗ ಇವುಗಳ ಕಷಾಯಮಾಡಿ ಕಲ್ಕಮಾಡಿ, ಗೋಮೂತ್ರಸಹಿತವಾಗಿ ಕಟುತೈಲವನ್ನು ಹಾಕಿ ತೈಲಪಾಕದಂತೆ ಪಕ್ವಮಾಡಿ ಆ ತೈಲವನ್ನು ಇಟ್ಟುಕೊಂಡು ನಾಸಿಕಾದಲ್ಲಿ ಆ ತೈಲವನ್ನು ಹಾಕುವದರಿಂದ ನಾಸಿಕದ ಸಮಸ್ತ ರೋಗಗಳೂ ನಿರ್ನಾಮವಾಗುವವು."

ಕರ್ಣರೋಗ ಚಿಕಿತ್ಸಾ:—" ಕಂಪಿಲ್ಲ ಮಾತುಲುಂಗಾಮ್ಲ ಶೃಂಗಬೇರರಸೈಃ ಶುಭೈಃ ॥ ಸುಖೋಷ್ಣೈಃ ಪೂರಯೇತ್ಕರ್ಣಂ ಕರ್ಣಶೂಲೋಪಶಾಂತಯೇ ॥ "

" ಕಬೀಲಾ, ಮಾದಲಹಣ್ಣಿನಹುಳಿ, ನಿಂಬೇಹುಳಿ, ಹಶೀಶುಂಠಿರಸ ಇವೆಲ್ಲವನ್ನೂ ಶೇರಿಸಿ ಬಿಶಿಮಾಡಿ ಕಿವಿಗೆ ಹಾಕಲು ಶಿಶುಗಳ ಕರ್ಣಶೂಲಿ ನಿವೃತ್ತಿಯಾಗುವದು."

" ಅರ್ಕಸ್ಯ ಪತ್ರಂ ಪರಿಣಾಮಪೀತಮ್ ।
ತೈಲೇನ ಲಿಪ್ತಂ ಶಿಖಿನಾ ಚ ತಪ್ತಮ್ ॥
ಆಪೀಡ್ಯ ತೋಯಂ ಶ್ರವಣೇ ನಿಷಿಕ್ತಮ್ ।
ನಿಹಂತಿ ಶೂಲಂ ಬಹು ವೇದನಾ ಚ ॥ "

" ಯಕ್ಕದ ಹಣ್ಣೆಲೆಗಳನ್ನು ಎಣ್ಣೆ ಸವರಿ ಬೆಂಕಿಯಲ್ಲಿ ಕಾಸಿಕಾಸಿ ಕಿವಿಗೆ ಹಿಂಡುವದರಿಂದ ಕರ್ಣಶೂಲಿಯೂ, ಕಿವಿಯ ಬಹು ವೇದನೆಯೂ ಮಾಣುವವು."

" ಘೃಷ್ಟಂ ರಸಾಂಜನಂ ನಾರ್ಯಾಃ ಕ್ಷೀರೇಣ ಕ್ಷೌದ್ರ ಸಂಯುತಮ್ ॥ ಪ್ರಶಸ್ಯತೇ ಶಿರೋರೋಗೇ ಪ್ರಸ್ರಾವೇ ಪೂತಿಕರ್ಣಕೇ॥"

" ಮೊಲೆಹಾಲಿನಲ್ಲಿ ರಸಾಂಜನವನ್ನು ಅರದು ಅದಕ್ಕೆ ಸ್ವಲ್ಪ ಜೇನುತುಪ್ಪವನ್ನು ಬೆರಸಿ ಕಿವಿಯಲ್ಲಿ ಹಾಕುವದರಿಂದ ಮಕ್ಕಳಿಗೆ ಉಂಟಾಗುವ ಕಿವಿಯ ಕೆಟ್ಟವಾಸನೆಯು ಕೀವೂ, ಶೂಲಿಯೂ, ತಲೆಯಶೂಲಿ ಸಹಾ ಶಮನವಹುದು."

**ಶಿರೋರೋಗ ಚಿಕಿತ್ಸಾ:—**

**" ಗುಡೇನ ಶುಂಠೀ ಸಹ ಸೈಂಧವೇನ ।**
**ಕೃಷ್ಣಾಥವಾ ಕೇವಲಮಚ್ಛಮಂಭಃ ॥**
**ಪಯೋಘೃತಂ ವಾ ವಿನಿಹಂತಿ ಶೀಘ್ರಮ್ ।**
**ಶಿರೋ ವಿರೇಕೇಣ ಶಿರೋ ವಿಕಾರಾನ್ ॥ "**

" ಬೆಲ್ಲದಲ್ಲಿ ಶುಂಠೀಹುಡಿ ಬೆರಸಿ ಅರದು ಗೋಲಿಯನ್ನುಮಾಡಿ ತಿನ್ನುವದರಿಂದ ಶಿರೋರೋಗ ನಷ್ಟವಾಗುವದು. ಅಥವಾ ಸೈಂಧವಲವಣ ಹಿಪ್ಪಲಿ ಇವುಗಳನ್ನು ಅರದು ಸೇವಿಸುವದರಿಂದಲಾಗಲೀ, ಕೇವಲ ನಿರ್ಮಲಜಲವನ್ನು ನಾಸಿಕಾದ್ವಾರದಿಂದ ನಸ್ಯಮಾಡುವದರಿಂದಲೂ ಶಿರೋವಿರೇಚನ ಮಾಡಿಸುವದರಿಂದಲೂ ಮಕ್ಕಳ ಶಿರೋರೋಗಗಳು ಶಮನವಾಗುವವು. "

**ಮುಖರೋಗ ಚಿಕಿತ್ಸಾ:—" ಮಂದೋಷ್ಣಂ ಧಾರಯೇಚ್ಛುದ್ಧಂ ಹಿಂಗು ದಂತಾಂತರೇ ಸ್ಥಿತಮ್ ॥ ತೇನ ಪ್ರಣಾಶಯೇತ್ಯಾಶು ಕ್ರಿಮಿದಂಶಂ ಮಹಾಗದಮ್ ॥ "**

" ಇಂಗನ್ನು ಅಗ್ನಿಯಮೂಲಕ ಸಾಧಾರಣ ಬಿಸಿಮಾಡಿ ಹಲ್ಲಿಗೆ ಉಜ್ಜುವದರಿಂದ ಮಕ್ಕಳ (ಹಲ್ಲುಗಳಲ್ಲಿ ಆಗುವ) ಹುಳಕುಹಲ್ಲು ಶೀಘ್ರವಾಗಿ ನಾಶಿಯಾಗುವದು. "

**" ಓಷ್ಠಪ್ರಕೋಪೇ ಸಂಜಾತೇ ರಕ್ತಮೋಕ್ಷಂ ಚ ಕಾರಯೇತ್ ॥**
**ತ್ರಿಫಲಾ ಖದಿರಕ್ವಾಥೈಃ ಧಾವನಂ ಲೇಪನಂ ತಥಾ ॥ "**

" ತುಟಿಯು ಪ್ರಕೋಪವಾಗಿ ಬಾತರೆ ಅಲ್ಲಿಂದ ರಕ್ತಮೋಕ್ಷಣವು ಹಿತವಾದದ್ದು; ತ್ರಿಫಲಾ, ಕಾಚು ಇವುಗಳ ಕಷಾಯವನ್ನು ಮಾಡಿ ತುಟಿಗಳನ್ನು ತೊಳಿಯುವದು, ಅದನ್ನು ಗಟ್ಟಿಯಾಗರದು ಹಚ್ಚುವದು ಇದು ಓಷ್ಠರೋಗಶಾಮ್ಯಕವಾದದ್ದು. "

**" ಜಾತಿಪತ್ರಾಮೃತಾ ದ್ರಾಕ್ಷಾ ಪಾಠಾ ದಾರ್ವೀ ಫಲತ್ರಿಕೈಃ ॥**
**ಕ್ವಾಥಃ ಕ್ಷೌದ್ರಯುತಃ ಶೀತೋ ಗಂಡೂಷಾನ್ಮುಖಪಾಕಜಿತ್ ॥ "**

" ಜಾಪತ್ರಿ, ಲವಂಗಪತ್ರಿ, ಅಮೃತವಳ್ಳಿ, ದ್ರಾಕ್ಷಿ, ಅಗಳುಶೊಂಠಿ, ಮರದರಿಶಿನ, ತ್ರಿಫಲಾ, ಇವುಗಳ ಕಲ್ಕದಿಂದ ಕಷಾಯಮಾಡಿ ಅದು ಆರಿದನಂತರ ಶೀತಲ ಕಷಾಯಕ್ಕೆ ಜೇನುಬೆರಸಿ ಗಂಡೂಷಮಾಡುವದರಿಂದ ಮುಖಪಾಕ ನಿವೃತ್ತಿಯಹುದು. "

**" ಪಂಚವಲ್ಕ ಕಷಾಯೋ ವಾ, ತ್ರಿಫಲಾ ಕ್ವಾಥ ಏವ ವಾ ॥ ಸಕ್ಷೌದ್ರ ಶಮಯತ್ಯಾಶು ಗಂಡೂಷೈಃ ಪಾಕಮಾಸ್ಯಜಮ್ ॥ "**

"ಆಲ ಜಂಬೂ ಮುಂತಾದ ೫ ಬಗೆ ಚಕ್ಕೆಯ ಕಷಾಯವಾಗಲೀ, ತ್ರಿಫಲೆಯ ಕಷಾಯವಾಗಲೀ ಆರಿದನಂತರ ಜೇನುತುಪ್ಪವೆರಸಿ ಬಾಯಿಮುಕ್ಕಳಿಸುವದರಿಂದ ಮುಖಪಾಕವು ಶೀಘ್ರವಾಗಿ ನಾಶನವಹುದು. (ಮಾವಿನ ಚಕ್ಕೆ, ಅರಳೀಚಕ್ಕೆ, ಆಲದಚಕ್ಕೆ, ಜಗನ್ನಾಥೀ ಆಲದಚಕ್ಕೆ, ಅತ್ತಿಯಚಕ್ಕೆ ಇವೇ ಪಂಚವಲ್ಕಗಳು.)

**"ಪಟೋಲ ನಿಂಬ ಜಂಬ್ವಾಮ್ರ ಮಾಲತೀ ನವ ಪಲ್ಲವೈಃ ‖ ಪಂಚವಲ್ಕ ಲ ಜಃ ಕ್ವಾಥೋ ಗಂಡೂಷೈರ್ಮುಖಪಾಕಜಿತ್ ‖"**

"ಕಹಿಪಡವಲ ಎಲೆ, ಬೇವಿನ ಎಲೆ, ನೇರಲ ಎಲೆ, ಮಾವಿನ ಎಲೆ, ಜಾಜಿಯ ಎಲೆ ಇವುಗಳ ಕಷಾಯದಿಂದ ಬಾಯಿಮುಕ್ಕಳಿಸುವದು ಮುಖಪಾಕ ಹರವು."

**"ದಾರ್ವೀ ಗುಡೂಚೀ ಸುಮನಃ ಪ್ರವಾಲ ।**
**ದ್ರಾಕ್ಷಾಯವಾ ಸತ್ರಿಫಲಾ ಕಷಾಯಃ ‖**
**ಕ್ಷೌದ್ರೇಣ ಯುಕ್ತಃ ಕಬಲಗ್ರಹೋಽಯಮ್ ।**
**ಮುಖಸ್ಯ ಪಾಕಂ ಶಮಯೇತ್ಸುದೀರ್ಣಮ್ ‖"**

"ಮರದರಿಶಿನ, ಅಮೃತಬಳಿ, ಜಾಜೀ ಎಲೆ, ದ್ರಾಕ್ಷಿ, ಬಳ್ಳಿದುರಚಿ, ತ್ರಿಫಲಾ ಇವುಗಳ ಕಷಾಯವನ್ನು ಕಾಸಿ ಆರಿಸಿದನಂತರ ಜೇನುತುಪ್ಪ ಹಾಕಿ ಬಾಯಿಯಲ್ಲಿ ಗಂಡೂಷಮಾಡಿದರೆ ಆಸ್ಯಪಾಕವು ನಿವೃತ್ತಿಯಹುದು."

**ವಿಷ ಚಿಕಿತ್ಸಾ:—"ವಂಧ್ಯಾ ಕರ್ಕೋಟಕೀ ಮೂಲಂ ತಂಡುಲೀಯಕ ಸಂಯುತಮ್ ‖ ಅಗದೋಽಯಂ ಮಹಾವೀರ್ಯಃ, ಪೀತಃ ಸರ್ವವಿಷಾಪಹಃ ‖"**

"ಬಂಜೆಹಾಗಲಬೇರು, ಚಕ್ಕೋತನಬೇರು ಇವೆರಡನ್ನೂ ಕೂಡಿ ಅರದರೆ ಅದಕ್ಕೆ ಅಗದವೆಂದು ಹೆಸರು. ಮಹಾಪರಾಕ್ರಮದಿಂದ ಸರ್ಪಾದಿ ಸರ್ವ ವಿಷಯುಗಳನ್ನೂ ನಾಶಮಾಡುವದು. ಅಂದರೆ ಇದನ್ನು ನೀರಿನಲ್ಲರದು ಕುಡಿಸುವದು.

**"ಬಲಾಂ ಶಿಫಾಂ ಬಾಣಪುಂಖಾಂ, ಶಿಖಾಂ ವಾಸವವಾರಣೀಮ್‖**
**ಲೀಢ್ವಾ ಘೃತೇನ ಸರ್ವಾಣಿ ವಿಷಾಣಿ ಕ್ಷಪಯೇನ್ನರಃ ‖"**

"ಚಿಟ್ಟಾಮುಟ್ಟಬೇರು, ಮುಳ್ಳುಕೊಗ್ಗಿಬೇರು ಇವೆರಡನ್ನೂ ಚನ್ನಾಗರದು ತುಪ್ಪದೊಡನೆ ನೆಕ್ಕಲು ಸಂಪೂರ್ಣ ವಿಷನಾಶನವಹುದು."

**ವೃಶ್ಚಿಕವಿಷ ಚಿಕಿತ್ಸಾ:—"ಶಿಖಿ ಕುಕ್ಕುಟ ಬರ್ಹಾಣಿ ಸೈಂಧವಂ ತೈಲಸಾರ್ಷಪಮ್ ‖ ಧೂಪೋ ಹಂತಿ ಪ್ರಯುಕ್ತೋಽಯಂ ಕೀಟವೃಶ್ಚಿಕಜಂ ವಿಷಮ್ ‖"**

" ನವಿಲುಗರಿ, ಕೋಳೀಗರಿ, ಸೈಂಧವಲವಣ, ತೈಲ, ಸಾಸವೆಯೆಣ್ಣೆ, ಇವೆಲ್ಲವನ್ನೂ ಕೂಡಿಸಿ ಅರದು ಧೂಪವಿಡುವದರಿಂದ ಕೀಟವಿಷ, ವೃಶ್ಚಿಕ ವಿಷ ಇವು ಇಳಿಯುತ್ತವೆ. "

" ಪಲಾಶಬೀಜಂ ರವಿದುಗ್ಧ ಪಿಷ್ಟವತ್ ।
ಘೃತೇನ ಪಿಷ್ಟ್ವಾ ಸ ಶಿರೀಷಬೀಜಾ ॥
ಕೃಷ್ಣಾಥವಾ ಹಂತಿ ಕೃಶೋಽಗ್ರಪೀಡಾಮ್ ।
ವಿಷಪ್ರಲೇಪಾದ್ಭುವಿ ವೃಶ್ಚಿಕಸ್ಯ ॥ "

" ಮುತ್ತುಗದಬೀಜವನ್ನು ಯಕ್ಕೆಯ ಹಾಲಲ್ಲಿ ಅರದು ಲೇಪವಮಾಡಿದರೂ, ಅಥವಾ ಬಾಗೇಬೀಜವನ್ನು ಸಣ್ಣಹಿಪ್ಪಲಿಯೊಡನೆ ತುಪ್ಪದಲ್ಲಿ ಅರದು ಲೇಪವಮಾಡಿದರೂ ಸಹ ವೃಶ್ಚಿಕದ ಕ್ರೂರವಾದ ವಿಷವು ನಿವಾರಣೆಯಾಗುವದು. "

" ಅಜಾಂಘ್ರಿಕಲ್ಕಃ ಸಹ ಸೈಂಧವೇನ ।
ಮಧ್ವಾಜ್ಯಮಿಶ್ರೋ ವಿಹಿತಃ ಕದುಷ್ಣಃ ॥
ದಂಶೇ ಪ್ರಲಿಪ್ತೋ ದಹನೇನ ತುಲ್ಯಾಮ್ ।
ಪೀಡಾಂ ಕ್ಷಣಾತ್ಕೃಂತತಿ ವೃಶ್ಚಿಕಸ್ಯ ॥ "

" ಆಡಿನಕಾಲು ಗೊರಸು, ಸೈಂಧವಲವಣ ಇವೆರಡನ್ನೂ ಜೇನುತುಪ್ಪ ಮತ್ತು ಘೃತದಲ್ಲಿ ನುಣ್ಣಗರದು ಸ್ವಲ್ಪ ಬಿಸಿಮಾಡಿ ಲೇಪಿಸಿದರೆ, ವೃಶ್ಚಿಕವಿಷವು ಅಗ್ನಿಯಂತೆ ಉರಿಯುತ್ತಾ ಇದ್ದರೂ ತತ್ಕ್ಷಣವೇ ನಾಶವಾಗಿ ಶಾಂತಿಯಹುದು. "

ನಾಯಿ ಕಡದ ವಿಷ ಚಿಕಿತ್ಸೆ:—

" ಕರ್ಷೋನ್ಮಿತಂ ಹಾಟಕ ಬಾಲಪುಂಖಾ ।
ಮೂಲಂ ಪಿಬೇತ್ತಂಡುಲ ತೋಯಮಿಶ್ರಮ್॥
ಶಿಫಾ ಮಥೈಕಾಂ ಕನಕಸ್ಯ ಯುಕ್ತಾಮ್ ।
ದುಗ್ಧೇನ ನಾಶಾಯ ಶುನಾಂ ವಿಷಸ್ಯ ॥ "

" ಕೆಂಪು ಕಂಚವಾಳದಬೇರು, ಕೆಂಪುಕೊಗ್ಗಿ ಎಂಬ ಗ್ರಂಥಿಕದ್ರವ್ಯದ ಬೇರು ಇವೆರಡನ್ನೂ ೧-೧ ತೊಲಾ ಅಕ್ಕಿಕಚ್ಚಿನಲ್ಲಿ ಅರದು ಅದರಲ್ಲಿಯೇ ಕದರಿ ಶೋಧಿಸಿ ಕುಡಿದರೆ ಹುಚ್ಚುನಾಯಿ ಕಡಿದ ವಿಷನಾಶನವಹುದು. ಬಂದೇ ಕಂಚವಾಳದ ಬೇರನ್ನು ಹಾಲಿನಲ್ಲಿ ಅರದು ಕುಡಿದರೂ ಹುಚ್ಚುನಾಯಿಯ ವಿಷಹರವಹುದು. "

ಮಕ್ಕಳಿಗೆ ರಸಾಯನ ಔಷಧಿಯು:—

" ಅಸಿತತಿಲಸಮೇತೈ ಭೃಂಗರಾಜಸ್ಯ ಪತ್ರೈಃ ।
ಪ್ರತಿದಿನಮುಪಿಯುಕ್ತೈ ಸ್ಯಾನ್ನರಃ ಕಾಮರೂಪಃ॥

ಅಮೃತಫಲಸಿತಾದ್ಯೈ ಶ್ಚೂರ್ಣೈಸ್ತ್ರೈ ದ್ವಿರ್ಣವಾಸಾ।
ತ್ಪ್ರಹತಗದ ಸಮೂಹಃ ಕೃಷ್ಣಕೇಶಾಶ್ಚಿರಾಯುಃ ॥"

"ಕರೀ ಎಳ್ಳು, ಗರಗದ ಎಲೆ ಇವನ್ನರದು ನಿತ್ಯವೂ ಸೇವಿಸುತ್ತಾ ಬರುವದರಿಂದಲೂ ಅಥವಾ ಅಮೃತಫಲ ಸಕ್ಕರೆ ಇವನ್ನು ೨ ತಿಂಗಳಹರಿಗೂ ಸೇವಿಸುತ್ತಾ ಬರುವದರಿಂದಲೂ ಸರ್ವರೋಗಗಳೂ ನಿವೃತ್ತಿಯಾಗಿ, ಕರೀ ಕೂದಲುಳ್ಳವರಾಗಿ ಕಾಮಸದೃಶ ಶರೀರಿಗಳಾಗುವರು."

"ಪೀತಾಶ್ವ ಗಂಧಾ ಪಯಸಾರ್ಧ್ವಮಾಸಮ್ ।
ಘೃತೇನ ತೈಲೇನ ಸುಖಾಂಬುನಾ ವಾ ॥
ಕೃಶಸ್ಯ ಪುಷ್ಟಿಂ ವಪುಷೋ ವಿಧತ್ತೆ ।
ಬಾಲಸ್ಯ ಸಸ್ಯಸ್ಯ ಯಥಾಂಬು ವೃಷ್ಟಿಃ ॥"

"ಹದಿನೈದು ದಿನದವರಿಗೆ ಅಶ್ವಗಂಧಿಯನ್ನು ಆಕಳಹಾಲಿನಲ್ಲಿ ಅಥವಾ-ಹಾಲಿನೊಂದಿಗಾಗಲೀ, ಜಲದಲ್ಲಿ ಅರದಾಗಲೀ, ತುಪ್ಪದಿಂದಲಾಗಲೀ, ತೈಲದಿಂದಲಾಗಲೀ ಸೇವಿಸುತ್ತಾ ಬಂದರೆ ಮಕ್ಕಳು ಕುಣಕಲುಮೈಯುಳ್ಳವರಾಗಿದ್ದರೂ ಬಲ ಪುಷ್ಟಿಯನ್ನು (ವೃಕ್ಷಕ್ಕೆಮಳೆಯನೀರೆರದಂತೆ) ಈ ಔಷಧದಿಂದ ಹೊಂದುವರು."

"ಧಾನ್ಯಂ ಶರ್ಕರಯಾ ಯುಕ್ತಂ ತಂಡುಲೋದಕ ಸಂಯುತಮ್॥ ಪಾನಮೇತತ್ಪ್ರದಾತವ್ಯಂ ಕಾಸ ಶ್ವಾಸಾಪಹಂ ಶಿಶೋಃ॥"

"ಕೊತ್ತುಂಬರೀಬೀಜಕ್ಕೆ ಸಕ್ಕರೆವೆರಸಿ ಅಕ್ಕಿಕಚ್ಚಿನಲ್ಲಿ ಅರದು ಕುಡಿಸಲು ಶಿಶುಗಳ ಕಾಸಶ್ವಾಸಗಳು ನಾಶನವಹುದು."

"ದ್ರಾಕ್ಷಾ ವಾಸಾ ಭಯಾ ಕೃಷ್ಣಾಚೂರ್ಣಂ ಕ್ಷೌದ್ರೇಣ ಸರ್ಪಿಷಾ॥ ಲೀಢಂ ಶ್ವಾಸಂ ನಿಹಂತ್ಯಾಶು ಕಾಸಂ ಚ ತಮಕಂ ತಥಾ॥"

"ದ್ರಾಕ್ಷಿ, ಆಡುಸೋಗೆ, ಅಳಲೇಕಾಯಿಶಿಪ್ಪೆ, ಜೀರಿಗೆ ಇವುಗಳನ್ನು ಸಣ್ಣಗೆ ಕುಟ್ಟಿ ವಸ್ತ್ರಗಾಳಿತಮಾಡಿ ದ್ರಾಕ್ಷಿಹಣ್ಣು ಹಾಕಿ ತುಪ್ಪ-ಜೇನುತುಪ್ಪಗಳನ್ನು ವಿಷಮವಾಗಿ ಹಾಕಿ ಅರದು ನೆಕ್ಕಿಸಿದರೆ ಮಕ್ಕಳ ಕಾಸ, ಶ್ವಾಸ, ತಮಕಶ್ವಾಸ ಇವುಗಳಿಗೆ ರಾಮಬಾಣೌಷಧವು!!"

"ದುರಾಲಭಾ ಕಣಾ ದ್ರಾಕ್ಷಾ ಪಥ್ಯಾಃ ಕ್ಷೌದ್ರೇಣ ಲೇಹಯೇತ್॥ ತ್ರಿರಾತ್ರಂ ಪಂಚರಾತ್ರಂ ವಾ ಕಾಸ ಶ್ವಾಸ ಹರಃ ಶಿಶೋಃ॥"

"ಬಳ್ಳಿದುರಚಿ, ಹಿಪ್ಪಲಿ, ದ್ರಾಕ್ಷಿ, ಅಳಲೇಕಾಯಿಚೂರ್ಣ ಇವೆಲ್ಲವನ್ನೂ ಜೇನುತುಪ್ಪದಲ್ಲಿ ಸ್ವಲ್ಪ ಸಕ್ಕರೆ ಬೆರಸಿ ಲೇಹ್ಯಮಾಡಿ ತಿನ್ನಿಸಿದರೆ ಮಕ್ಕಳಿಗೆ ೩ ದಿನ ೫ ದಿನ ಕೊಟ್ಟರೆ ಕಾಸಶ್ವಾಸಗಳಿಗೆ ಕುಠಾರದಂತೆ ಧ್ವಂಸ ಮಾಡುವದು."

"ಚೂರ್ಣಂ ಕಟುಕರೋಹಿಣ್ಯಾ ಮಧುನಾ ಸಹ ಯೋಜಯೇತ್ ||
ಹಿಕ್ಕಾಂ ಪ್ರಶಮಯೇತ್ಕ್ಷಿಪ್ರಂ ಛರ್ದಿಂ ಚಾಪಿ ಚಿರೋತ್ಥಿತಾಮ್||"

"ಕಟುಕರೋಹಿಣಿಯ ಚೂರ್ಣವನ್ನು ಜೇನುತುಪ್ಪದಲ್ಲಿ ನೆಕ್ಕಿಸಿದರೆ ಶಿಶುಗಳ ಬಿಕ್ಕಳಿಕೆಯನ್ನೂ, ಬಹುಕಾಲದಿಂದಿರುವ ಛರ್ದಿಯನ್ನೂ ನಾಶ ಮಾಡುವದು."

"ಘೃತೇನ ಸಿಂಧು ವಿಶ್ವೈಲಾ ಹಿಂಗು ಭಾರ್ಙ್ಗೀ ರಜೋ ಲಿಹೇ ||
ಆನಾಹಂ ವಾತಿಕಂ ಶೂಲಂ ಹನ್ಯಾತ್ತೋಯೇನ ವಾ ಶಿಶೋಃ||"

"ಸೈಂಧವಲವಣ, ಶುಂಠಿ, ಸಣ್ಣಯಾಲಕ್ಕಿ, ಗಂಟುಭಾರಂಗಿ, ಹಿಂಗು ಇವುಗಳ ಚೂರ್ಣವನ್ನು ತುಪ್ಪದಲ್ಲಿ ಮರ್ದಿಸಿ ನೆಕ್ಕಿಸಿದರೂ, ಅಥವಾ ಈ ಪದಾರ್ಥಗಳ ಕಷಾಯವನ್ನು ಕಾಶಿ ಘೃತವನ್ನು ಹಾಕಿ ಕುಡಿಸಿದರೂ ಮಕ್ಕಳ ಆನಾಹವಾತ, ವಾತಶೂಲೆ ಇವು ನಿರ್ನಾಮವಾಗುವವು."

"ಪಿಷ್ಟ್ವಾತ್ತ ಗಂಧರ್ವ ಬೀಜಾನಿ ತ್ವಾಖುವಿಣ್ನಿಂಬು ವಾರಿಣಾ|| ನಾ
ಭೌ ಗುದೇ ವಾ ಲೇಪೇನ ಶಿಶೂನಾಂ ರೋಚನಂ ಪರಮ್ || "

"ಹರಳುಬೀಜದಪ್ಪೊಪ್ಪು, ಇಲಿಯ ಹಿಕ್ಕೆ, ಇವನ್ನು ನಿಂಬೇಹುಳಿಯುಳ್ಳರದು ಎಳೇಮಕ್ಕಳ ನಾಭಿಗೂ ಗುದಕ್ಕೂ ಲೇಪಿಸಲು ವಿರೇಚನವಾಗುವದು."

## ಧನ್ವಂತರಿ ಪ್ರೋಕ್ತ ಚಿಕಿತ್ಸೆ.

"ಶಾರ್ಙ್ಗೇಷ್ಟಾ ಸಪ್ತಪರ್ಣತ್ವಗಶ್ವಗಂಧಾ ಶೃತಂ ಜಲಮ್|| ಪಾ
ಯಯೇದಥವಾ ಸ್ತನ್ಯಶುದ್ಧಯೇ ಕಟುರೋಹಿಣೀಮ್ || "

"ಹೊಂಗೇಬೀಜ, ಏಳೆಲೆಹೊನ್ನೆಯಚಕ್ಕೆ, ಅಶ್ವಗಂಧಿ ಇವುಗಳ ಕಷಾಯವನ್ನೂ, ಕಟುಕರೋಹಿಣಿಯ ಕಷಾಯವನ್ನೂ, ಧಾಯಿ ಅಥವಾ ತಾಯಿಯ ಸ್ತನ್ಯ ಶುಧ್ಯರ್ಥವಾಗಿ ಕುಡಿಸತಕ್ಕದ್ದು."

"ಅಮೃತಾ ಸಪ್ತಪರ್ಣತ್ವಕ್ಕ್ವಾಥಂ ಚೈವ ಸನಾಗರಮ್ || ಕಿರಾ
ತ ತಿಕ್ತಕಂ ಕ್ವಾಥಂ ಶ್ಲೋಕಪಾದೇರಿತಾ ಪಿಬೇತ್ || "

"ಅಮೃತಬಳ್ಳಿ, ಏಳೆಲೆಹೊನ್ನೆ, ಶುಂಠಿ ಇವುಗಳ ಕಷಾಯವನ್ನೂ, ಚಿರಾಯತದ ಕಷಾಯವನ್ನೂ, ಸ್ತನ್ಯ ಶುದ್ಧೀಕರಣಾರ್ಥವಾಗಿ ತಾಯಿಗೂ, ಧಾತ್ರಿಗೂ ಕುಡಿಸತಕ್ಕದ್ದು."

ಲೇಪವಿಧಿ:—"ಪ್ರಪಿಬೇದ್ವಿರಸಕ್ಷೀರಾ ದ್ರಾಕ್ಷಾ ಮಧುಕ ಸಾರಿ
ವಾಃ|| ಶ್ಲಕ್ಷ್ಣ ಪಿಷ್ಟಾಂ ಪಯಸ್ಯಾಂ ಚ ಸಮಾಲೋಡ್ಯ ಸುಖಾಂ

ಬುನಾ || ಪಂಚಕೋಲ ಕುಲಕ್ಕೈಶ್ಚ ಪಿಷ್ಟ್ವಾ ರಾಲೇಪಯೇತ್ಸ್ತ
ನೌ|| ಶುಷ್ಕೌ ಪ್ರಕ್ಷಾಲ್ಯ ತೌ ದುಗ್ಧ್ವಾ ತಥಾ ಸ್ತನ್ಯಂ ವಿಶುದ್ಧ್ಯತಿ ||"

"ಯಾವಳ ಸ್ತನ್ಯವು ನೀರಸವಾಗಿದೆಯೋ ಅವಳಿಗೆ—ದ್ರಾಕ್ಷಿ, ಜೇಷ್ಟ ಮಧು, ಸೊಗದೆ ಇವುಗಳ ಕಷಾಯವನ್ನು ಕುಡಿಸಬೇಕು. ಹೀಗೆಯೇ ವೃದ್ಧೀ (ಹಾಲುನೆಲಗುಂಬಳ ಕರೀದು) ಯನ್ನು ಅರದು ಮಂದೋಷ್ಣವಾದ ಜಲದಲ್ಲಿ ಸೇವಿಸಲು ಸ್ತನ್ಯ ಶುದ್ಧಿಯಹುದು. ಹಿಪ್ಪಲಿ, ಮೋಡಿ, ಚೆವ್ಯ, ಚಿತ್ರಮೂಲ, ಶುಂಠಿಗಳೆಂಬ ಪಂಚಕೋಲ ಮತ್ತು ಹುರಳಿಗಳನ್ನು ನೀರಿನಲ್ಲಿ ಅರದು ಸ್ತನಗಳ ಮೇಲ್ಗಡೆ ಪ್ರಲೇಪಮಾಡಬೇಕು. ಈ ಹಚ್ಚಿದ ಔಷಧ ಒಣಗಿದನಂತರ ಬಿಸಿನೀರಿನಿಂದ ತೊಳೆದು ಅದರಲ್ಲಿರುವ ಸ್ತನ್ಯವನ್ನು ಕರದು ಬಿಟ್ಟರೆ ಆಗ ಬರುವ ಸ್ತನ್ಯ ಶುದ್ಧವಾಗುತ್ತದೆ."

"ಫೇನ ಸಂಘಾತವತ್ಕ್ಷೀರಂ ಯಸ್ಯಾಸ್ತಾಂ ಪಾಯಯೇತ ಚ ||
ಪಾಠಾ ನಾಗರ ಶಾಙ್ಗ೯ಷ್ಟಾ ಮೂರ್ವಾ ಪಿಷ್ಟಾಃ ಸುಖಾಂಬುನಾ||
ಅಂಜನಂ ತಗರಂ ದಾರು ಬಿಲ್ವಮೂಲಂ ಪ್ರಿಯಂಗವಃ || ಸ್ತನ
ಯೋಃ ಪೂರ್ವವತ್ಕಾರ್ಯಂ ಲೇಪನಂ ಕ್ಷೀರಶೋಧನಮ್ ||"

"ಸ್ತನ್ಯದಲ್ಲಿ ಅತಿಯಾಗಿ ನೊರೆಯಿದ್ದಲ್ಲಿ ಅವಳಿಗೆ ಅಗಳುಶುಂಠಿ, ಶುಂಠಿ, ಹೊಂಗಬೀಜ, ಮೂರ್ವಾ ಇವುಗಳನ್ನು ಮಂದೋಷ್ಣ ಜಲದಲ್ಲಿ ಅರದು ಪಾನಮಾಡಿಸಬೇಕು. ರಸಾಂಜನ, ತಗರ, ದೇವದಾರು, ಬಿಲ್ವದ ಬೇರು, ಕಟುಕರೋಹಿಣಿ ಇವುಗಳನ್ನು ಒಂದಾಗಿ ನೀರಿನಲ್ಲಿ ಅರದು ಸ್ತನಗಳ ಮೇಲೆ ಲೇಪಿಸಿ ಮೇಲಿನಂತೆ ಪಟ್ಟುಹಾಕಿದ್ದು ಒಣಗಿದನಂತರ ತೊಳೆದು ಹಾಲು ಹಿಂಡಿದರೆ ಸ್ತನ್ಯ ಶುದ್ಧಿಯಾಗುವದು."

"ಷಡ್ವಿರೇಕಾಶ್ರಿತೀಯೋಕ್ತೈಃ ಔಷಧೈಃ ಸ್ತನ್ಯಶೋಧನೈಃ || ರೂ
ಕ್ಷ ಕ್ಷೀರಾ ಪಿಬೇತ್ಕ್ಷೀರಂ ತೈರ್ವಾ ಸಿದ್ಧಂ ಘೃತಂ ಪಿಬೇತ್ ||"

"ಯಾವಳಿಗೆ ಸ್ತನ್ಯ ಒಣಕಲಾಗಿರುವಲ್ಲಿ ಷಡ್ವಿರೇಕಾಶ್ರಿತೀಯ ಅಧ್ಯಾಯದಲ್ಲಿ ಉಕ್ತವಾಗಿರುವ—ಅಗಳುಶುಂಠಿ, ಶುಂಠಿ, ದೇವದಾರು, ತುಂಗಮುಸ್ತೆ, ಮೂರ್ವಾ, ಅಮೃತಬಳ್ಳಿ, ಇಂದ್ರಜವೆ, ಚಿರಾಯಿತ, ಕಟುಕರೋಹಿಣಿ ಮತ್ತು ಸೊಗದೆ ಇವುಗಳ ಕಲ್ಕವನ್ನು ಆಕಳಹಾಲಿನಲ್ಲಿ ಚನ್ನಾಗಿ ಬತ್ತಿಸಿ ಪಾನಮಾಡಿಸಬೇಕು, ಅಥವಾ ಈ ಔಷಧಿಗಳ ಕಲ್ಕ ಸಂಯೋಜನದಿಂದ ಘೃತವನ್ನು ಸಿದ್ಧಮಾಡಿ ಸೇವಿಸಿದರೆ ಸ್ತನ್ಯ ಶುದ್ಧವಾಗುವದು."

"ಪೂರ್ವವಜ್ಜೀವಕಾದ್ಯಂ ಚ ಪಂಚಮೂಲಂ ಪ್ರಲೇಪನಮ್ ||
ಸ್ತನ್ಯಯೋಃ ಸಂವಿಧಾತವ್ಯಂ ಸುಖೋಷ್ಣಂ ಸ್ತನ್ಯಶೋಧನಮ್||

ಯಷ್ಟೀಮಧುಕ ಮೃದ್ವೀಕೇ ಪಯಸ್ಯಾ ಸಿಂಧುವಾರಿಕಾ ॥ ಶೀ ತಾಂಬು ಸಾ ಪಿಬೇತ್ಕಲ್ಕಂ ಕ್ಷೀರವೈವರ್ಣ್ಯ ನಾಶನಮ್ ॥ "

" ಈ ಹಿಂದೆ ಸ್ತನ್ಯ ಶುದ್ಧೀಕರಣಾರ್ಥವಾಗಿ ಸ್ತನಗಳಮೇಲೆ ಪ್ರಲೇಪಿಸಲು ಹೇಳಿದೆಯಷ್ಟೆ. ಅದರಂತೆಯೇ ಜೀವಕಾದಿಗಣೋಕ್ತ ಸಂಪೂರ್ಣ ಮಹೌಷಧಿಗಳನ್ನೂ ಹಾಗೆಯೇ ಪಂಚಮೂಲದ ಔಷಧಗಳನ್ನೂ ಅರೆದುಕೊಂಡು ಸ್ತನಗಳಮೇಲೆ ಲೇಪಮಾಡುವದರಿಂದ ಸ್ತನ್ಯ ಶುದ್ಧವಾಗುವದು. ಯಾವಳ ಸ್ತನ್ಯವು ವಿವರ್ಣತ್ವವನ್ನು ಪಡದಿದೆಯೋ ಅವಳು—ಜೇಷ್ಟಮಧು, ದ್ರಾಕ್ಷಿ, ಕ್ಷೀರಕಾಕೋಳೀ, ಸಿವನಿ ಇವುಗಳನ್ನು ತಣ್ಣೀರಿನಲ್ಲಿ ಅರದು ಕುಡಿಯುವದರಿಂದ ಆ ಸ್ತನ್ಯ ವಿವರ್ಣತ್ವವು ನಿವೃತ್ತಿಯಾಗುವದು. "

" ದ್ರಾಕ್ಷಾ ಮಧುಕ ಕಲ್ಕೇನ ಸ್ತನೌ ಚಾಸ್ಯಾಃ ಪ್ರಲೇಪನಮ್॥"

" ಹಾಗೆಯೇ ದ್ರಾಕ್ಷಿ, ಜೇಷ್ಟಮಧು ಇವುಗಳನ್ನು ನೀರಿನಲ್ಲಿ ಅರದು ಸ್ತನಗಳಿಗೆ ಲೇಪಿಸುವದು ಸ್ತನ್ಯದ ವೈವರ್ಣ್ಯ ನಾಶನವಹುದು. "

" ಸ್ನಿಗ್ಧಕ್ಷೀರಾ ದಾರುಮುಸ್ತ ಪಾಠಾಃ ಪಿಷ್ಟ್ವಾ ಸುಖಾಂಬುನಾ॥
ಪೀತ್ವಾ ಸ ಸಥವಾಃ ಕ್ಷಿಪ್ರಂ ಕ್ಷೀರಶುದ್ಧಿಮವಾಪ್ನುಯಾತ್ ॥
ಕಿರಾತ ತಿಕ್ತಕಂ ವಾಪಿ ಸಾಮೃತಂ ಕ್ವಥಿತಂ ಪಿಬೇತ್ ॥ ಸ್ತನೌ
ಚಾಲೇಪಯೇತ್ಪಿಷ್ಟೈಃ ಯವ ಗೋಧೂಮ ಸರ್ಷಪೈಃ ॥ "

" ಯಾವಳ ಸ್ತನ್ಯವು ಸ್ನಿಗ್ಧ (ಹೆಚ್ಚು ಜಿಡ್ಡುಳ್ಳದ್ದೇ) ವಾಗಿದೆಯೋ ಅವಳು—ದೇವದಾರು, ತುಂಗಮುಸ್ತೆ, ಅಗಳುಶುಂಠಿ ಇವುಗಳನ್ನು ಬಿಸಿನೀರಿನಲ್ಲಿ ಅರದು ಸೈಂಧವಲವಣವನ್ನು ಶೇರಿಸಿ ಪಾನಮಾಡಬೇಕು. ಅಥವಾ ಚಿರಾಯಿತ, ಅಮೃತಬಳ್ಳಿ ಇವುಗಳ ಕಷಾಯವನ್ನು ಕುಡಿಯಬೇಕು. ಯವ, ಗೋಧೂಮ, ಬಿಳೀಸಾಸವೆಗಳನ್ನು ಜಲದಲ್ಲಿ ಅರದು ಸ್ತನಗಳಮೇಲೆ ಲೇಪಿಸಿದರೆ ಸ್ತನ್ಯವು ಶುದ್ಧವಹುದು. "

" ಪ್ರಪಿಬೇತ್ಪಿಚ್ಛಿಲ ಕ್ಷೀರಾಶಾರ್ಙ್ಗ್ಯಷ್ಟ್ಯಾಮಭಯಾ ವಚಾಮ್॥
ಮುಸ್ತಾ ನಾಗರ ಪಾಠಾಶ್ಚ ಪೀತಾಃ ಸ್ತನ್ಯವಿಶೋಧನಾಃ ॥ ವಿದಾ
ರೀ ಬಿಲ್ವ ಮಧುಕೈಃ ಸ್ತನೌಚಾಸ್ಯಾಃ ಪ್ರಲೇಪನಮ್ ॥ "

" ಯಾವಳ ಸ್ತನ್ಯವು ಪಿಚ್ಛಿಲ (ಜಿಗಟು) ವಾಗಿದೆಯೋ ಅವಳು—ಹೊಂಗೆಬೀಜ, ಅಳಲೇಕಾಯಿ, ಬಜೆ, ತುಂಗಮುಸ್ತೆ, ಶುಂಠಿ, ಅಗಳುಶುಂಠಿಗಳನ್ನು ಕಷಾಯ ಕಾಸಿ ಕುಡಿಯುತ್ತಾ ಬರುವದು. ಇದರಿಂದ ಸ್ತನ್ಯವು ಶುದ್ಧವಾಗುವದು. ಹಾಗೆಯೇ ನೆಲಗುಂಬಳಗೆಡ್ಡೆ, ಬಿಲ್ವದಬೇರು, ಜೇಷ್ಟಮಧು ಇವುಗಳನ್ನು ನೀರಿನಲ್ಲರದು ಸ್ತನಗಳಮೇಲೆ ಲೇಪಿಸಿದರೆ ಸ್ತನ್ಯವು ಶುದ್ಧವಹುದು. "

## ಬಾಲಕರಿಗೆ ಔಷಧಗಳ ಪ್ರಮಾಣ.

"ಭೇಷಜಂ ಪೂರ್ವಮುದ್ದಿಷ್ಟಂ ನರಾಣಾಂ ಯಜ್ವರಾದಿಷು ॥ ಕಾರ್ಯಂ ತದೇವ ಬಾಲಾನಾಂ ಮಾತ್ರಾಚಾತ್ರ ಕನೀಯಸೀ ॥ ಪ್ರಥಮೇ ಮಾಸಿ ಜಾತಸ್ಯ ಶಿಶೋರ್ಭೇಷಜ ರಕ್ತಿಕಾ॥ ಅವಲೇಹ್ಯಾತು ಕರ್ತ್ತವ್ಯಾ ಮಧು ಕ್ಷೀರ ಸಿತಾ ಘೃತೈಃ ॥ ಏಕೈಕಾಂ ವರ್ಧತೇ ಯಾವದ್ಯಾವತ್ಸಂವತ್ಸರೋ ಭವೇತ್ ॥ ತದೂರ್ಧ್ವಂ ಮಾಷವೃದ್ಧಿಃ ಸ್ಯಾತ್ ಯಾವತ್ ಷೋಡಶವತ್ಸರಾಃ॥ ತತಃ ಸ್ಥಿರಾ ಭವೇತ್ತಾವತ್ ಯಾವದ್ವರ್ಷಾಣಿ ಸಪ್ತತಿಃ ॥ ತತೋ ಬಾಲಕವನ್ಮಾತ್ರಾ ಹ್ರಾಸನೀಯಾ ಶನೈ ಶ್ಶನೈಃ ॥ ಚೂರ್ಣಕಲ್ಕಾವಲೇಹಾನಾಮಿಯಂ ಮಾತ್ರಾ ಪ್ರಕೀರ್ತಿತಾ ॥ ಕಷಾಯಸ್ಯ ಪುನಃ ಸೈವ ವಿಜ್ಞಾತವ್ಯಾ ಚತುರ್ಗುಣಾ ॥ ರಸ ಲೋಹಾದಿಕಂ ಸರ್ವಂ ಮಹತಾಂ ಯಜ್ಜ್ವರಾದಿಷು ॥ ಯುಂಜ್ಯಾತ್ತದೇವ ಬಾಲಾನಾಂ ಬುದ್ಧ್ಯಾ ಮಾತ್ರಾ ಕನೀಯಸೀ ॥ "

"ಈ ವೈದ್ಯಶಾಸ್ತ್ರಚಿಕಿತ್ಸಾ ಪ್ರಕರಣದಲ್ಲಿ ಜ್ವರಾದಿಗಳಿಗೆ ಹೇಳಿರುವ ಔಷಧಗಳೇ ಬಾಲಕರಿಗೂ ಸಂಪೂರ್ಣ ಜ್ವರಾದಿಗಳಲ್ಲಿ ಕೊಡಬೇಕು. ಕೊಡತಕ್ಕ ಪ್ರಮಾಣವನ್ನು ಕಡಮೆಮಾಡಿ ಕೊಡತಕ್ಕದ್ದು. ಮೊದಲನೇ ತಿಂಗಳ ಶಿಶುವಿಗೆ ಒಂದು ರತ್ತೀ (ಅಕ್ಕೀಕಾಳು) ತೂಕವನ್ನು ಕೊಡುವದು. ಅದಕ್ಕೆ ಜೇನುತುಪ್ಪ, ಹಾಲು, ಘೃತ, ಸಕ್ಕರೆ ಇವುಗಳ ಜತೇಲಿ ಅವಲೇಹವನ್ನು ಮಾಡತಕ್ಕದ್ದು. ಅಲ್ಲಿಂದ ವರ್ಷತುಂಬುವವರಿಗೂ ತಿಂಗಳಿಗೆ ಒಂದೊಂದು ರತ್ತಿಯಂತೆ ವೃದ್ಧಿಮಾಡುತ್ತಾ ಬರುವದು. ಒಂದು ವರ್ಷದಿಂದ ೧೬ ವರ್ಷದವರಿಗೂ ವರ್ಷಕ್ಕೆ೧-೧ ಮಾಷತೂಕ ವೃದ್ಧಿಮಾಡುತ್ತಾ ಬರುವದು. ಅಂದರೆ ೧೬ನೇ ವರ್ಷದ ಸಮಯಕ್ಕೆ ೧೬ ಮಾಷತೂಕ ಚೂರ್ಣಾದಿಕ ಔಷಧಗಳನ್ನು ಕೊಡುವದು. ೧೬ನೇ ವರ್ಷದಿಂದ ೭೦ನೇ ವರ್ಷದವರಿಗೆ ಒಂದೇಸಮನಾಗಿ ಔಷಧಿಯ ಪ್ರಮಾಣವು !! ೭೦ನೇ ವರ್ಷದ ಅವಸ್ಥೆಯಿಂದ ಆ ಮುಂದಿನ ವೃದ್ಧಾವಸ್ಥೆಯಲ್ಲಿ ಎಳೇಶಿಶುಗಳಿಗೆ ಕೊಟ್ಟಂತೆ ಅಲ್ಪಮಾತ್ರಕ್ಕೆ ಇಳಿಸುತ್ತಾ ಬರಬೇಕು. ಈಮಾತ್ರಾ ಪ್ರಮಾಣವು—ಚೂರ್ಣ, ಕಲ್ಕ, ಅವಲೇಹ ಇವುಗಳಿಗೆ ಅನ್ವಯಿಸುತ್ತದೆ. ಕಷಾಯದಲ್ಲಿ ಮೇಲೆ ಹೇಳಿದ್ದರ ೪ ರಷ್ಟು ಹೆಚ್ಚಾಗಿ ಮಾತ್ರಾ ಕಲ್ಪಿಸತಕ್ಕದ್ದು. ರಸ, ಭಸ್ಮ, ಸಿಂಧೂರ ಮುಂತಾದವುಗಳ ಪ್ರಮಾಣವನ್ನು ಬುದ್ಧಿಯಿಂದೂಹಿಸಿ ಕಡಮೆಮಾಡಿಕೊಳ್ಳತಕ್ಕದ್ದು."

"ತೈಲಸ್ಯ ಭಾಗಮೇಕಮ್ |
ಮೂತ್ರಂ ತು ದ್ವೌ ದ್ವೌ ಚ ಶಿಂಬಿದಲರಸಸ್ಯ ||
ತೈಲಾಭ್ಯಂಗೈಃ ಸತತಮ್ |
ರೋಗಮನಾಸ ಕಾಖ್ಯ ಮುಪಹರತಿ ||"

"ತಿಲತೈಲ ೧ ಭಾಗ, ಗೋಮೂತ್ರ ೨ ಭಾಗ, ಬೂರಗದ ಎಲೆಯು ರಸ ೨ ಭಾಗ, ಆಡಿನಹಾಲು ೪ ಭಾಗ ಇವೆಲ್ಲವನ್ನೂ ಹಾಕಿ ತೈಲ ಪಕ್ವದಂತೆ ಕಾಯಿಸಿದ ತೈಲವನ್ನು ಶಿಶುಗಳಿಗೆ ಮಾಲೀಸ್ ಮಾಡುವದರಿಂದ ಬಾಲಕರ ಅನಾಸಕವೆಂಬ ರೋಗನಿವೃತ್ತಿಯಾಗುವದು."

"ಅರ್ಕಜ ದುಗ್ಧಕ ಮಾವಿಕ |
ರೋಮಾಣ್ಯಾದಾಯ ಕೇಶರಾಜಸ್ಯ ||
ಸ್ವರಸೇನಾಕ್ತವಸ್ತ್ರೇ |
ಕೃತ್ವಾ ವರ್ತಿಂ ಚ ತೈಲಾಕ್ತಮ್ ||
ತಜ್ಜಾತ ಕಜ್ಜಲಲಾಂಛಿತ |
ಲೋಚನಯುಗಲೋಪ್ಯಲಂ ಕೃತೋ ಬಾಲಃ ||
ನಷ್ಟಮನಾಸಕರೋಗಮ್ |
ಭೂತಾದಿಕಂ ಚಾಪಿ ||"

"ಯಕ್ಕೆಯ ಹಾಲು, ಕುರಿಯ ಕೂದಲು, ಗರಗದರಸದಲ್ಲಿ ಕೇರಿಸಿ ಅರದು ವಸ್ತ್ರದ ತುಂಡಿನಮೇಲೆ ಲೇಪಿಸುವದು. ಅನಂತರ ಆ ವಸ್ತ್ರದ ತುಂಡನ್ನು ಬತ್ತಿಯನ್ನುಮಾಡಿ ತಿಲತೈಲದಲ್ಲಿ ನೆನಯಿಸಿ ಅದರಿಂದ ಕಾಡಿಗೆಯನ್ನು ಹಿಡಿದು, ಎಳೇಮಕ್ಕಳ ಕಣ್ಣಿಗೆ ಹಚ್ಚುವದರಿಂದ ಅನಾಸಕರೋಗವು ದೂರವಹುದು. ಭೂತಾದಿ ಸರ್ವದೋಷಗಳೂ ನಿವೃತ್ತಿಯಾಗುವವು."

"ಲಾಜಾಂ ಜನ ಸಿತಾ ಬ್ರಹ್ಮೀ ಮಧು ಶ್ಲಕ್ಷ್ಣವಿ ಚೂರ್ಣಿತೈಃ ||
ಬಾಲಸ್ಯ ಲೇಹೋ ಮಧುನಾ ದೇಯಃ ಸರ್ವಜ್ವರಾಪಹಃ ||"

"ಭತ್ತದ ಅರಳು, ರಸಾಂಜನ, ಸಕ್ಕರೆ, (ಬ್ರಹ್ಮೀ) ಒಂದೆಲಗದ ಚೂರ್ಣ ಇವೆಲ್ಲವನ್ನೂ ಸಮಗೊಂಡು ೨ ಪಾಲು ಸಕ್ಕರೆ ಪಾಕವಿಕ್ಕಿ ಚೂರ್ಣವನ್ನು ಹಾಕಿ ಲೇಹ್ಯವನ್ನು ಮಾಡಿ ಜೇನುತುಪ್ಪ ಬೆರಸಿ ಎಳೇಮಕ್ಕಳಿಗೆ ನೆಕ್ಕಿಸಿದರೆ ಸರ್ವಜ್ವರಗಳು ನಿವೃತ್ತಿಯಾಗುವವು."

"ಭದ್ರಮುಸ್ತಾ ಭಯಾನಿಂಬ ಪಟೋಲಾ ಮಲಕೈಃ ಕೃತಃ ||
ಕ್ವಾಥಃ ಸೋಷ್ಣೋಂಬು ಬಾಲಾನಾಮಶೇಷಜ್ವರನಾಶನಃ ||"

"ಭದ್ರಮುಸ್ತೆ, ಅಳಲೇಕಾಯಿಶಿಪ್ಪೆ, ಬೇವಿನಚಕ್ಕೆ, ಕಹಿಪಡುವಲು, ನೆಲ್ಲೀಚಟ್ಟು ಇವುಗಳ ಕಷಾಯಮಾಡಿ ಬಿಶಿಬಿಶಿಯಾಗಿ ಕುಡಿಸಿದರೆ ಬಾಲಕರ ಸರ್ವಪ್ರಕಾರದ ಜ್ವರಗಳೂ ದೂರವಾಗುವವು."

"ಯಷ್ಟೀಮಧು ತುಗಾ ಕ್ಷೀರೀ ಲಾಜಾಂಜನ ಸಿತಾ ಕೃತಃ ||
ಲೇಹಃ ಪ್ರದತ್ತೋ ಬಾಲಾನಾಮಶೇಷ ಜ್ವರನಾಶನಃ ||"

"ಜೇಷ್ಟಮಧು, ವಂಶಲೋಚನ, ಅರಳು, ರಸಾಂಜನ ಇವುಗಳನ್ನು ಚೂರ್ನಿಸಿ, ಶೋಧಿಸಿ ಅದರಸಮ ಸಕ್ಕರೆ ಪಾಕವಿಟ್ಟು ಅದರಲ್ಲಿ ಚೂರ್ನವನ್ನು ಹಾಕಿ ಮಾಡಿದ ಅವಲೇಹವನ್ನು ಚಣಕಪ್ರಮಾಣ ನೆಕ್ಕಿಸುತ್ತಾಬಂದರೆ ಶಿಶುಗಳ ಸಮಸ್ತ ಜ್ವರಗಳೂ ಶಮನವಹುವು."

"ಕಾಕೋಲೀ ಗಜಕೃಷ್ಣಾ ಚ ಲೋಧ್ರ ಮೇಷಾಂ ಸಮಾಂಶತಃ||
ಕ್ವಾಥೋ ಮಧ್ವನ್ವಿತಃ ಪೀತೋ ಬಾಲಾತೀಸಾರ ಹೃನ್ಮತಃ ||"

"ಕಾಕೋಲೀ, ಗಜಹಿಪ್ಪಲಿ, ಲೋಧ್ರಚಕ್ಕೆ ಇವು ಸಮತೂಕವಾಗಿ ಕಷಾಯಮಾಡಿ ಜೇನುತುಪ್ಪವೆರಸಿ ಕುಡಿಸಲು ಶಿಶುಗಳ ಅತಿಸಾರ ದೂರವಹುದು."

"ಲಾಜಾಃ ಸೈಂಧವಮಾಮ್ರಾಸ್ಥಿ ಚೂರ್ಣಮೇಷಾಂ ಸಮಾಂಶತಃ || ಹಂತಿ ಛರ್ದಿಮತೀಸಾರಂ ಮಧುನಾ ಸಹ ಭಕ್ಷಿತಮ್ ||"

"ಭತ್ತದ ಅರಳು, ಸೈಂಧವಲವಣ, ಮಾವಿನವಾಟೆಯಪ್ರೊಪ್ಪು ಇವು ಸಮತೂಕವಾಗಿ ಚೂರ್ನಿಸಿ ವಸ್ತ್ರಗಾಳಿತಮಾಡಿ ಜೇನಿನಲ್ಲಿ ನೆಕ್ಕಿಸಲು ಶಿಶುಗಳ ಛರ್ದಿಯೂ, ಅತಿಸಾರವೂ ನಿಶ್ಚಯವಾಗಿ ನಿಲ್ಲುವವು."

"ಆಮ್ರಬೀಜಂ ತಥಾಲೋಧ್ರಂ ಧಾತ್ರೀಫಲರಸಂ ತಥಾ || ಪೀತ್ವಾ ಮಾಹಿಷತಕ್ರೇಣ ಬಾಲಾತೀಸಾರ ನಾಶನಮ್ ||"

"ಮಾವಿನವಾಟೆಯಪ್ರೊಪ್ಪು, ಲೋಧ್ರಚಕ್ಕೆ, ಇವುಗಳನ್ನು ಚೂರ್ನಿಸಿ ನೆಲ್ಲಿಕಾಯಿರಸದಲ್ಲಿ ನುಣ್ಣಗರಿಯುವದು. ಅದು ಶಿಕ್ಕದಿದ್ದರೆ ನೆಲ್ಲಿಚಟ್ಟು ಕಷಾಯದಲ್ಲಿ ನುಣ್ಣಗೆ ಅರಿಯುವದು. ಇದನ್ನು ಯಮ್ಮೆಯ ಮಜ್ಜಿಗೆಯಲ್ಲಿ ಕದರಿ ಕುಡಿಸಲು ಬಾಲಕರ ಅತಿಸಾರರೋಗ ನಿವೃತ್ತಿಯಾಗುವದು."

"ಫಲಿನ್ಯಂಜನ ಮುಸ್ತಾನಾಂ ಚೂರ್ಣಂ ಪೀತಂ ಸಮಾಕ್ಷಿಕಮ್||
ತೃಷ್ಣಾಂ ಛರ್ದಿಮತೀಸಾರಂ ಬಾಲಾನಾಂ ತತ್ವತೋ ಹರೇತ್||"

"ಪ್ರಿಯಂಗುಪುಷ್ಪ, ರಸಾಂಜನ, ತುಂಗಮುಸ್ತೆ ಇವುಗಳನ್ನು ಸಮವಾಗಿ ಶೇರಿಸಿ ಕುಟ್ಟಿ ಚೂರ್ಣಿಸಿ ಶೋಧಿಸಿ ಅದರಲ್ಲಿ ಸ್ವಲ್ಪವನ್ನು ಜೇನಿನಲ್ಲಿ ನೆಕ್ಕಿಸಲು ಶಿಶುಗಳ ಬಾಯಾರಿಕೆ, ಛರ್ದಿ, ಅತಿಸಾರ ಇತ್ಯಾದಿ ರೋಗಗಳನ್ನು ಹರಿಸುವದು."

"ಶ್ಯಾಮಾ ರಸಾಂಜನಂ ಚೂತ ಫಲಾಸ್ಥಿ ಸಮ ಚೂರ್ಣಿತಮ್||
ಹಂತಿ ಛರ್ದಿ ಮತೀಸಾರಂ ಬಾಲಾನಾಂ ಮಧುನಾಶಿತಮ್ ||"

" ಹಿಪ್ಪಲಿ, ರಸಾಂಜನ, ಮಾವಿನವಾಟೆಯುಪ್ಪೊಪ್ಪು ಇವು ಸಮತೂಕವಾಗಿ ಚೂರ್ಣಿಸಿ ಜೇನಿನಲ್ಲಿ ನೆಕ್ಕಿಸಲು ಶಿಶುಗಳ ವಾಂತಿ, ಅತಿಸಾರ ಇವು ನಶಿಸುತ್ತವೆ. "

**ಲೋಧ್ರೇಣ ಪಿಪ್ಪಲೀ ಬಾಲೋ ವಾಲಕಾತಿಸೃತೌ ಹಿತಃ ॥ ಶ್ರೀರಸೋ ಮಾಕ್ಷಿಕಯುತೋ ಧಾತಕೀಕುಸುಮೈಃ ಸಮಃ ॥ ವಿಡಂಗಾನ್ಯಜಮೋದಾ ಚ ಪಿಪ್ಪಲೀ ಚೂರ್ಣಕಾನಿ ಚ ॥ ವಿಷಾಮಾಲಿಹ್ಯ ಚೂರ್ಣಾನಿ ಸುಖಂ ತಪ್ತೇನ ವಾರಿಣಾ ॥ ಆಮೇಪ್ರವೃತ್ತೇಽತೀಸಾರೇ ಕುಮಾರಂ ಪಾಯಯೇದ್ಭಿಷಕ್ ॥ "**

" ಲೋಧ್ರ, ಹಿಪ್ಪಲಿ, ಸೊಗದೆಬೇರು ಇವುಗಳ ಚೂರ್ಣ ಅಥವಾ ಗಂಧಪಿರೋಜಾಜತೇಲಿ ಧಾತಕೀಕುಸುಮಗಳ ಚೂರ್ಣ ಸೇರಿಸಿ ಜೇನಿನೊಂದಿಗೆ ನೆಕ್ಕಿಸಿದರೆ ಮಕ್ಕಳ ಅತಿಸಾರ ದೂರವಾಗುವದು. ವಾಯುವಿಳಂಗ, ಅಜಮೋದಾ, ಹಿಪ್ಪಲಿ ಇವುಗಳ ಚೂರ್ಣವನ್ನು ಮಂದೋಷ್ಣವಾದ ನೀರಿನಲ್ಲಿ ಕುಡಿಸಿದರೆ ಮಕ್ಕಳ ಆಮಾತಿಸಾರ ನಾಶನವಹುದು. "

**" ಕೃಷ್ಣಾ ಮಹೌಷಧಂ ಬಿಲ್ವಂ ನಾಗರಃ ಸಯವಾನಿಕಃ ॥ ಮಧುಸರ್ಪಿಯುತಂ ಲೀಢಂ ಬಾಲಾನಾಂ ಗ್ರಹಣೀಂ ಹರೇತ್ ॥ "**

" ಹಿಪ್ಪಲಿ, ಶುಂಠಿ, ಬಿಲ್ವದಬೇರು, ತುಂಗಮುಸ್ತೆ, ಅಜವಾನ ಇವುಗಳನ್ನು ಚೂರ್ಣಿಸಿ ಜೇನು ಮತ್ತು ಸ್ವಲ್ಪ ಹೆಚ್ಚುಕಡಮೆ ತುಪ್ಪಗಳಲ್ಲಿ ನೆಕ್ಕಿಸುವದು. ಮಕ್ಕಳುಗಳ ಸಂಗ್ರಹಣೀರೋಗ ನಿವಾರಣೆಯಾಗುವದು. "

**" ಮೋಚರಸಂ ಸಮಂಗಾ ಚ ಧಾತಕೀ ಪದ್ಮ ಕೇಶರಮ್ ॥ ಪಿಷ್ಟೈರೇತೈರ್ಯವಾಗೂ ಸ್ಯಾದ್ರಕ್ತಾತೀಸಾರನಾಶನೀ ॥**

" ಮೋಚರಸ (ಬೂರಗದಬಂಕಿ) ಕೆಂಪು ಮುಟ್ಟಿದರೆ ಮುನಿಯುನಬೇರು, ಧಾತಕೀಕುಸುಮ, ಕಮಲದಕೇಸರ ಇವನ್ನು ನುಣ್ಣಗರದು ಹಾಲು ಸಕ್ಕರೆವೆರಸಿ ಗಂಜಿಮಾಡಿ ಕುಡಿಸಿದರೆ ಮಕ್ಕಳ ರಕ್ತಾತಿಸಾರ ನಾಶನವು. "

**" ನಾಗರಾತಿವಿಷಾ ಮುಸ್ತಾ ವಾಲಕೇಂದ್ರಯವೈಃ ಕೃತಮ್ ॥ ಕುಮಾರಂ ಪಾಯಯೇತ್ಪ್ರಾತಃ ಸರ್ವಾತೀಸಾರ ನಾಶನಮ್॥"**

" ಶುಂಠಿ, ಅತಿಬಜೆ, ತುಂಗಮುಸ್ತೆ, ಸೊಗದೆ, ಇಂದ್ರಯವೆ ಇವುಗಳನ್ನು ಕಷಾಯಮಿಟ್ಟು ಶಿಶುಗಳಿಗೆ ಪ್ರಾತಃಕಾಲದಲ್ಲಿ ಕುಡಿಸುವದರಿಂದ ಸರ್ವಪ್ರಕಾರದ ಅತಿಸಾರವೂ ದೂರವಾಗುವದು. "

**" ಲಾಜಾ ಸಯಷ್ಟಿಮಧುಕಾ ಶರ್ಕರಾ ಕ್ಷೌದ್ರಮೇವ ಚ॥ ತಂಡುಲೋದಕ ಯೋಗೇನ ಕ್ಷಿಪ್ರಂ ಹಂತಿ ಪ್ರವಾಹಿಕಾಮ್ ॥ "**

" ಭತ್ತದ ಅರಳು, ಜೇಷ್ಟಮಧು, ಸಕ್ಕರೆ ಇವುಗಳನ್ನು ಚೂರ್ಣಿಸಿ ಜೇನುತುಪ್ಪದಲ್ಲಿ ಕಲಿಸಿ, ಅಕ್ಕಿಕಚ್ಚಿನಲ್ಲಿ ಕದರಿ ಕುಡಿಸಿದರೆ ಮಕ್ಕಳ ಪ್ರವಾಹಿಕಾರೋಗ ನಿವೃತ್ತಿಯಹುದು. "

" ಲೋಧ್ರೇಂದ್ರಯವ ಧನ್ಯಾಕ ಧಾತ್ರೀ ಹ್ರೀಬೇರ ಮುಸ್ತಕಮ್|| ಮಧುನಾ ಲೇಹಯೇದ್ಬಾಲಂ ಜ್ವರಾತೀಸಾರ ನಾಶನಮ್||"

" ಲೋಧ್ರ, ಇಂದ್ರಯವೆ, ಧನಿಯಾ, ನೆಲ್ಲೀಚಟ್ಟು, ಸೊಗದೆ, ತುಂಗಮುಸ್ತೆ ಇವುಗಳ ಚೂರ್ಣವನ್ನು ಜೇನಿನಲ್ಲಿ ನೆಕ್ಕಿಸಲು ಶಿಶುಗಳ ಜ್ವರಾತಿಸಾರರೋಗ ನಿವೃತ್ತಿಯಾಗುವದು. "

" ರಜನೀ ಸರಲೋ ದಾರು ಬೃಹತೀ ಗಜಪಿಪ್ಪಲೀ || ಪೃಶ್ನಿಪರ್ಣೀ ಶತಾಹ್ವಾ ಚ ಲೀಢಾ ಮಾಕ್ಷಿಕ ಸರ್ಪಿಷಾ || ದೀಪನಂ ಗ್ರಹಣೀಂ ಹಂತಿ ಮಾರುತಾರ್ತಿಂ ಸಕಾಮಲಾಮ್|| ಜ್ವರಾತೀಸಾರ ಪಾಂಡುತ್ವಂ ಬಾಲಾನಾಂ ಸರ್ವರೋಗನುತ್ || "

" ಅರಿಶಿನ, ಸರಳದೇವದಾರು, ನೆಲಗುಳ್ಳ, ಗಜಹಿಪ್ಪಲಿ, ಪೃಶ್ನಪರ್ಣೀ, ಸೋಪು, ಇವುಗಳ ಚೂರ್ಣವನ್ನು ಜೇನಿನಲ್ಲಿ ನೆಕ್ಕಿಸಲು ಶಿಶುಗಳಿಗೆ ಅಗ್ನಿದೀಪನವಾಗುತ್ತದೆ. ಅವರ ಸಂಗ್ರಹಣೀ, ವಾತಪೀಡಾ, ಕಾಮಲ, ಜ್ವರಾತಿಸಾರ, ಪಾಂಡು ಇವುಗಳು ನಿಶ್ಶೇಷವಾಗುವವು. "

" ಹ್ರೀಬೇರಂ ಶರ್ಕರಾಕ್ಷೌದ್ರಂ ಪೀತಂ ತಂಡುಲವಾರಿಣಾ || ಶಿಶೋಃ ರಕ್ತಾತಿಸಾರಘ್ನಂ ಕಾಸ ಶ್ವಾಸವಮಿಂ ಹರೇತ್ || "

" ಸೊಗದೆಬೇರು, ಸಕ್ಕರೆ ಇವುಗಳನ್ನು ಚೂರ್ಣಿಸಿ ಜೇನುತುಪ್ಪವೆರಸಿ ಅಕ್ಕಿಕಚ್ಚಿನಲ್ಲಿ ಕುಡಿಸಿದರೆ ಮಕ್ಕಳ ರಕ್ತಾತಿಸಾರವೂ, ಕಾಸ, ಶ್ವಾಸ, ವಮನ ಇವು ದೂರವಾಗುವವು. "

" ಏವಂ ವಾ ಕೌಟಜಂ ಬೀಜಂ ರಕ್ತಾರ್ಶೋ ಮಧುನಾ ಹರೇತ್ || ತದ್ವನ್ಮುಸ್ತಾ ಮೋಚರಸಃ ಕಪಿಕಚ್ಛೂಭವಂ ರಜಃ || "

" ಇಂದ್ರಜವೆಯ ಚೂರ್ಣವನ್ನು ಜೇನಿನಲ್ಲಿ ನೆಕ್ಕಿದರೂ, ಅಥವಾ ತುಂಗಮುಸ್ತೆ, ಮೋಚರಸ, ನಸುಗುನ್ನಿಬೀಜ ಇವುಗಳ ಚೂರ್ಣವನ್ನು ಜೇನಿನಲ್ಲಿ ಸೇವಿಸಿದರೂ ರುಧಿರಯುಕ್ತ ಮೊಳೇಜಾಡ್ಯವನ್ನು ಹರಿಸುವದು. "

" ತ್ವಕ್ಪತ್ರರಾಸ್ನಾ ಗರುಶಿಗ್ರುಕುಷ್ಟೈಃ |
ಆಮ್ಲಪ್ರಪಿಷ್ಟೈಃ ಸಬಲಾ ಸಿತಾಹ್ವೈಃ ||
ಅಜೀರ್ಣಕಘ್ನಂ ಚ ವಿಷೂಚಿಕಾಘ್ನಮ್ |
ತೈಲಂ ವಿಪಕ್ವಂ ಚ ತದರ್ಥಕಾರಿ || "

“ ದಾಲಚಿನ್ನಿ, ಲವಂಗಪತ್ರಿ, ರಾಸ್ನಾ, ಅಗರು, ನುಗ್ಗಿಬೇರು, ಚಿಟ್ಟಾ ಮುಟ್ಟಿ, ಸಕ್ಕರೆ ಇವು ಸಮಭಾಗವಾಗಿ ಚೂರ್ಣಿಸಿ ಗಂಜಿಯುಲ್ಲಾಗಲೀ, ಸಿಂಬೇಹುಳಿಯಲ್ಲಾಗಲೀ ಅರೆದು ಸೇವಿಸುವದರಿಂದಲೂ ಹಾಗೆಯೇ ಈ ಔಷಧಗಳ ಸಮ್ಮೇಲನದಿಂದ ತಿಲತೈಲವನ್ನು ಪಕ್ವಮಾಡಿ ಸೇವಿಸುವದರಿಂದಲೂ ಅಜೀರ್ಣರೋಗವೂ, ವಿಶೂಚಿಕಾರೋಗವೂ ನಿವಾರಣೆಯಾಗುವವು. ”

“ ಧನ್ಯಾಕಂ ಶರ್ಕರಾ ಯುಕ್ತಂ ತಂಡುಲೋದಕ ಸಂಯುತಮ್॥
ಪಾನಮೇತತ್ಪ್ರದಾತವ್ಯಂ ಕಾಸ ಶ್ವಾಸಾ ಪಹಂ ಶಿಶೋಃ ॥ ”

“ ಧನಿಯಾ ಅಕ್ಕಿಕಚ್ಚಿನಲ್ಲಿ ನುಣ್ಣಗರದು ಸಕ್ಕರೆಬೆರಸಿ ಅಕ್ಕಿಕಚ್ಚಿನಲ್ಲಿ ಕುಡಿಸಿದರೆ ಮಕ್ಕಳ ಕಾಸ, ಶ್ವಾಸರೋಗ ಹರವಾಗುವದು. ”

“ ದುರಾಲಭಾ ಕಣಾ ದ್ರಾಕ್ಷಾ ಪಥ್ಯಾ ಕ್ಷೌದ್ರೇಣ ಲೇಹಯೇತ್॥
ತ್ರಿರಾತ್ರಂ ಪಂಚರಾತ್ರಂ ವಾ ಕಾಸ ಶ್ವಾಸ ಹರಃ ಶಿಶೋಃ ॥ ”

“ ಬಳ್ಳಿತುರಚಿ, ಹಿಪ್ಪಲಿ, ದ್ರಾಕ್ಷಿ, ಅಳಲೇಕಾಯಿಶಿಪ್ಪೆ ಇವುಗಳನ್ನು ಚೂರ್ಣಿಸಿ ಜೇನಿನಲ್ಲಿ ನೆಕ್ಕಿಸಲು ಬಾಲಕರ ಕಾಸಶ್ವಾಸ ದೂರವಹುದು. ”

“ ಹಿಂಗು ಕರ್ಕಟಶೃಂಗೀ ಚ ಗೈರಿಕಂ ಮಧುಯಷ್ಟಿಕಾ ॥ ತ್ರುಟಿ
ಕ್ಷೌದ್ರಂ ನಾಗರಂ ಚ ಹಿಕ್ಕಾ ಶ್ವಾಸ ನಿವಾರಣಮ್ ॥ ”

“ ಇಂಗು, ಕರ್ಕಾಟಕಶೃಂಗಿ, ಕಾವೀಕಲ್ಲು, ಜೇಷ್ಟಮಧು, ಯಾಲಕ್ಕಿ, ಶುಂಠಿ ಇವುಗಳ ಚೂರ್ಣವನ್ನು ಜೇನಿನಲ್ಲಿ ನೆಕ್ಕಿಸಲು ಬಾಲಕರ ಬಿಕ್ಕಳಿಕೆ, ಶ್ವಾಸರೋಗ ಹರವಾಗುವವು. ”

“ ಕೃಷ್ಣಾ ದುರಾಲಭಾ ದ್ರಾಕ್ಷಾ ಕರ್ಕಟಾಖ್ಯಾ ಗಜಾಹ್ವಯಾ॥
ಚೂರ್ಣಿತಾ ಮಧುಸರ್ಪಿರ್ಭ್ಯಾಂ ಲೀಢ್ವಾ ಹಂತಿ ಶಿಶೋರ್ಗದಾನ್॥
ಕಾಸಃ ಶ್ವಾಸಶ್ಚ ತಮಕೋ ಜ್ವರೋ ವಾಪಿ ವಿನಂಕ್ಷ್ಯತಿ ॥ ”

“ ಹಿಪ್ಪಲಿ, ಬಳ್ಳಿದುರಚಿ, ದ್ರಾಕ್ಷಿ, ಕರ್ಕಾಟಕಶೃಂಗಿ, ಗಜಹಿಪ್ಪಲಿ ಇವುಗಳ ಚೂರ್ಣವನ್ನು ತುಪ್ಪ ಮತ್ತು ಜೇನುತುಪ್ಪಗಳನ್ನು ವಿಷಮವಾಗಿ ಕೇರಿಸಿ ಅದರಲ್ಲಿ ಕಲಸಿ ನೆಕ್ಕಿಸಲು ಮಕ್ಕಳ ಕಾಸ, ಶ್ವಾಸ, ತಮಕಶ್ವಾಸ, ಜ್ವರ ಹರವಾಗುವವು. ”

“ ಶೃಂಗೀ ಸಮುಸ್ತಾತಿವಿಷಂ ವಿಚೂರ್ಣ್ಯ ।
ಲೇಹಂ ವಿದಧ್ಯಾನ್ಮಧುನಾ ಶಿಶೂನಾಮ್ ॥
ಕಾಸ ಜ್ವರ ಚ್ಛರ್ದಿ ಸಮನ್ವಿತಾನಾಮ್ ।
ಸಮಾಕ್ಷಿಕಂ ವಾತಿವಿಷಾ ಸಮೇತಮ್ ॥ ”

“ ಕರ್ಕಾಟಕಶೃಂಗಿ, ತುಂಗಮುಸ್ತೆ, ಅತಿಬಜೆ, ಇವುಗಳ ಚೂರ್ಣವನ್ನು ಜೇನಿನೊಂದಿಗೆ ನೆಕ್ಕಿಸಿದರೆ ಶಿಶುಗಳ ಕಾಸ, ಜ್ವರ, ಛರ್ದಿ ಇವುಗಳು

ನಾಶವಾಗುವವು. ಹಾಗೆಯೇ ಕೇವಲ ಅತಿಬಜೆಯ ಚೂರ್ಣವನ್ನು ಜೇನಿನೊಂದಿಗೆ ಸೇವಿಸಿದರೂ ಆ ರೋಗಗಳು ನಾಶವಾಗುವವು. ''

"ಗುಡೋದಕಂ ವಾ ಕ್ವಥಿತಂ ವ್ಯೋಷ ಸೈಂಧವ ಸಂಯುತಮ್॥
ಸುಖೋಷ್ಣಂ ಪಾಯಯೇದ್ಬಾಲಂ ಕಾಸರೋಗೋಪಶಾಂತಯೇ॥"

" ಶುಂಠಿ, ಮೆಣಸು, ಹಿಪ್ಪಲಿ, ಸೈಂಧವಲವಣ ಇವನ್ನು ಚೂರ್ಣಿಸಿ ಬೆಲ್ಲಹಾಕಿ ಕಷಾಯವನ್ನು ಕಾಯಿಸಿ ಆರಿಸುತ್ತಾ ಸುಖೋಷ್ಣವಾಗಿ ಮಕ್ಕಳಿಗೆ ಕುಡಿಸಿದರೆ ಕಾಸ ಬಿಟ್ಟೋಡುವದು. ''

" ತುಂಗಾ ಚ ಕ್ಷೌದ್ರೈಃ ಸಂಲಿಹ್ಯಾತ್ ಶ್ವಾಸಕಾಸೌ ಶಿಶೋರ್ಜಯೇತ್ ॥ ವಿಡಂಗಂ ಮಧುನಾಲೀಢಂ ಪುಷ್ಕರಂ ಬಾಲಶಿಗ್ರುಕಮ್॥ ಆಖುಪರ್ಣೀ ತಥೈಕಾ ವಾ ಕೃಮಿಭ್ಯೋ ಮುಚ್ಯತೇ ಶಿಶುಃ ॥"

" ವಂಶಲೋಚನವನ್ನು ಅರದು ಜೇನಿನಲ್ಲಿ ನೆಕ್ಕಿಸಿದರೆ ಮಕ್ಕಳ ಶ್ವಾಸ, ಕಾಸ ಬಿಟ್ಟೋಡುವವು. ವಾಯುವಿಳಂಗ, ಪುಷ್ಕರಮೂಲ, ನುಗ್ಗಿಯ ಚಿಗುರು, ಇಲಿಕಿವಿಗಿಡದ ಸಮೂಲ ಇವುಗಳಲ್ಲಿ ಯಾವದಾದರೊಂದರ ಚೂರ್ಣವನ್ನು ಜೇನಿನಲ್ಲಿ ನೆಕ್ಕಿಸಿದರೆ ಮಕ್ಕಳ ಕ್ರಿಮಿವಿಕಾರವು ದೂರವಾಗುವದು. ''

" ಪೌಷ್ಕರಾತಿವಿಷಾ ಶೃಂಗೀ ಮಾಗಧೀ ಧನ್ವಯಾಸಕೈಃ ॥ ಕೃತಂ ಚೂರ್ಣಂ ತು ಸಕ್ಷೌದ್ರಂ ಶಿಶೂನಾಂ ಪಂಚಕಾಸಜಿತ್ ॥ "

" ಪುಷ್ಕರಮೂಲ, ಅತಿಬಜೆ, ಕರ್ಕಾಟಕಶೃಂಗಿ, ಹಿಪ್ಪಲಿ, ಬಳ್ಳದುರಚೆ ಇವೆಲ್ಲವನ್ನೂ ಚೂರ್ಣಿಸಿ ಜೇನಿನಲ್ಲಿ ನೆಕ್ಕಿಸಲು ಶಿಶುಗಳ ಪಂಚಕಾಸಗಳೂ ವಿಲಯವನ್ನು ಪಡಿಯುವವು. ''

" ಮುಸ್ತಕಾತಿವಿಷಾ ವಾಸಾ ಕಣಾ ಶೃಂಗೀ ರಸಂ ಲಿಹನ್ ॥ ಮಧುನಾ ಮುಚ್ಯತೇ ಬಾಲಃ ಕಾಸೈಃ ಪಂಚಭಿರುಚ್ಛ್ರಿತೈಃ ॥ "

" ತುಂಗಮುಸ್ತೆ, ಅತಿಬಜೆ, ಆಡುಸೋಗೆ, ಹಿಪ್ಪಲಿ ಮತ್ತು ಕರ್ಕಾಟಕಶೃಂಗಿ ಇವುಗಳ ಕಷಾಯದಲ್ಲಿ ಜೇನುಬೆರಸಿ ಕುಡಿಸುವದರಿಂದ ಶಿಶುಗಳ ಪಂಚವಿಧ ಕಾಸಗಳೂ ನಾಶನವಾಗುವವು. ''

"ಚೂರ್ಣಂ ಕಟುಕರೋಹಿಣ್ಯಾ ಮಧುನಾ ಸಹ ಯೋಜಯೇತ್॥
ಹಿಕ್ಕಾಂ ಪ್ರಶಮಯೇತ್ಕ್ಷಿಪ್ರಂ ಛರ್ದಿಂ ಚಾಪಿ ಚಿರೋತ್ಥಿತಾಮ್॥"

" ಕಟುಕರೋಹಿಣೀ ಚೂರ್ಣವನ್ನು ಜೇನಿನಲ್ಲಿ ನೆಕ್ಕಿಸುವದರಿಂದ ಮಕ್ಕಳ ಬಿಕ್ಕಳಿಕೆಯೂ, ಹಾಗೆಯೇ ಬಹುಕಾಲದಿಂದ ಬಾಧೆಪಡಿಸುತ್ತಿರುವ ಛರ್ದಿಯೂ ನಿರ್ನಾಮವಾಗುವವು. ''

"ಆಮ್ರಾಸ್ಥಿ ಲಾಜಾ ಸಿಂಧೂತ್ಥಂ ಸಕ್ಷೌದ್ರಂ ಛರ್ದಿನುದ್ಭವೇತ್||
ಘನ ಶೃಂಗೀ ವಿಷಾಣಾಂ ಚ ಚೂರ್ಣಂ ಹಂತಿ ಸಮಾಕ್ಷಿಕಮ್||"

"ಮಾವಿನವಾಟೆಯುಪ್ಪೊಪ್ಪು, ಛತ್ತದರಳು ಮತ್ತು ಸೈಂಧವಲವಣ ಇವುಗಳನ್ನು ಚೂರ್ಣಿಸಿ ಜೇನಿನಲ್ಲಿ ನೆಕ್ಕಿಸಲು ಬಾಲಕರ ಛರ್ದಿಯು ದೂರವಾಗುವದು. ಹಾಗೆಯೇ ತುಂಗಮುಸ್ತೆ, ಕರ್ಕಾಟಕಶೃಂಗಿ, ಅತಿಬಜೆ ಇವುಗಳ ಚೂರ್ಣವನ್ನು ಜೇನಿನಲ್ಲಿ ನೆಕ್ಕಿಸಿದರೆ ಬಾಲಕರ ವಾಂತಿಯೂ, ಜ್ವರವೂ ನಿವಾರಣೆಯಾಗುವದು."

"ವಾಂತಿ ಜ್ವರಂ ತಥಾ.ಯೋಗೋಮಧುನಾತಿವಿಷಾ ರಜಃ ||"

"ಹಾಗೆಯೇ ಕೇವಲ ಅತಿಬಜೆಯಚೂರ್ಣವೊಂದೇ ಜೇನಿನಲ್ಲಿ ನೆಕ್ಕಲು ಜ್ವರ ಮತ್ತು ವಾಂತಿಗಳನ್ನು ಜೈಸುವದು.

"ಪೀತಂ ಪೀತಂ ವಮೇದ್ಯಸ್ತು ಸ್ತನ್ಯಂ ತಂ ಮಧುಸರ್ಪಿಷಾ ||
ದ್ವಿವಾರ್ತಾಕೀ ಫಲರಸಂ ಪಂಚಕೋಲಂ ಚ ಲೇಹಯೇತ್ ||"

"ಯಾವ ಶಿಶುವು ತಾಯಿಯ ಸ್ತನ್ಯವನ್ನು ಕುಡಿದು ಕುಡಿದಹಾಗೆಯೇ ವಮನಮಾಡುವದೋ ಅದಕ್ಕೆ ೨ ಬಗೆ ಗುಳ್ಳಗಳ ಸಮೂಲ ರಸವನ್ನು ಅಥವಾ ಎಲೆಯರಸವನ್ನು ಪಂಚಕೋಲಗಳ ಚೂರ್ಣವನ್ನು ಶೇರಿಸಿ ಜೇನುತುಪ್ಪ ಮತ್ತು ಸ್ವಲ್ಪ ಕಡಮೆ ತುಪ್ಪ ಬೆರಸಿ ಕುಡಿಸುವದರಿಂದ ಶಮನವಾಗಿ ಸುಖವಹುದು."

ಪಂಚಕೋಲಗಳು ಯಾವವೆಂದರೆ:—

"ಪಿಪ್ಪಲೀ ಪಿಪ್ಪಲೀಮೂಲಂ ಚವ್ಯಂ ಚಿತ್ರಕ ನಾಗರಮ್ || ಏಕತ್ರಮಿಶ್ರಿತೈರೇಭಿಃ ಪಂಚಕೋಲಕಮುಚ್ಯತೇ ||"

"ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶುಂಠಿ ಇವುಗಳು ಸಮವಾಗಿ ಒಂದುಕಡೆ ಶೇರಿದರೆ ಅವಕ್ಕೆ ಪಂಚಕ್ಕೋಲವೆಂದು ಹೆಸರು."

ಇದರ ಗುಣ:—"ತೀಕ್ಷ್ಣೋಷ್ಣಂ ಪಾಚನಂ ಶ್ರೇಷ್ಠಂ ದೀಪನಂ ಕಫ ವಾತನುತ್ || ಗುಲ್ಮ ಪ್ಲೀಹೋದರಾನಾಹಶೂಲಘ್ನಂ ಪಿತ್ತಕೋಪನಮ್ ||"

"ಇವು ಶೇರಿದರೆ ತೀಕ್ಷ್ಣವೂ, ಉಷ್ಣವೂ, ಪಾಚನವೂ, ಕಫವಾತನಾಶನವೂ, ಗುಲ್ಮ, ಪ್ಲೀಹ, ಉದರರೋಗ, ಆನಾಹ, ಶೂಲಿ ಇವುಗಳ ನಿರ್ಮೂಲನೆಯೂ ಉಂಟಾಗುವದು. ಪಿತ್ತವೃದ್ಧಿಯೂ ಆಗುವದು."

"ಪಿಪ್ಪಲೀ ಮಧುಕಾನಾಂ ಚ ಚೂರ್ಣಂ ಸಮಧುಶರ್ಕರಮ್ ||
ಮಾತಲುಂಗ ರಸೇನೈವ ಹಿಕ್ಕಾ ಛರ್ದಿ ನಿವಾರಣಮ್ ||"

" ಹಿಪ್ಪಲಿ, ಜೇಷ್ಟಮಧು ಚೂರ್ಣವನ್ನು ಜೇನುತುಪ್ಪ ಮತ್ತು ತುಪ್ಪಗಳೊಡನೆ ಕಲಿಸಿ ಮಾದಲಹಣ್ಣಿನ ರಸದೊಡನೆ ನೆಕ್ಕಿಸಲು ಶಿಶುಗಳ ಬಿಕ್ಕಳಿಕೆಯೂ, ವಾಂತಿಯು ನಿಲ್ಲುವದು. "

" ಘೃತೇನ ಸಿಂದುವಿಶ್ವೈಲಾ ಹಿಂಗು ಭಾರ್ಙ್ಗೀ ರಜೋ ಲಿಹ॥
ಆನಾಹ ವಾತಿಕಂ ಶೂಲಂ ಹನ್ಯಾತ್ತೋಯೇನ ವಾ ಶಿಶೋಃ ॥ "

" ಸೈಂಧವಲವಣ, ಶುಂಠಿ, ಯಾಲಕ್ಕಿ, ಇಂಗು, ಭಾರಂಗಿ ಇವುಗಳ ಚೂರ್ಣವನ್ನು ತುಪ್ಪದಲ್ಲಾದರೂ, ನೀರಿನಲ್ಲಾದರೂ ನೆಕ್ಕಿಸುವದರಿಂದ ಶಿಶುಗಳ ಆನಾಹವಾಯು, ವಾತಜಶೂಲಿ ಇವು ನಾಶವಾಗುವವು. "

" ಪಿಪ್ಪಲೀ ತ್ರಿಫಲಾ ಚೂರ್ಣಂ ಘೃತಕ್ಷೌದ್ರಂ ಪರಿಪ್ಲುತಮ್ ॥
ಬಾಲೋ ರೋದಿತಿ ಯಸ್ತಸ್ಮೈ ಲೇಢುಂ ದದ್ಯಾತ್ಸುಖಾವಹಮ್॥"

" ಯಾವ ಮಗುವು ವಿಶೇಷವಾಗಿ ಯಾವಾಗಲೂ ಅಳುತ್ತಾ ಇರುವದೋ ಅದಕ್ಕೆ—ಹಿಪ್ಪಲಿ, ತ್ರಿಫಲಾ ಇವುಗಳನ್ನು ಚೂರ್ಣಿಸಿ ತುಪ್ಪ ಮತ್ತು ಜೇನುತುಪ್ಪಗಳನ್ನು ಹೆಚ್ಚುಕಡಮೆ ಬೆರಸಿದ್ದರಲ್ಲಿ ಕಲಿಸಿ ನೆಕ್ಕಿಸಿದರೆ ಸುಖವಾಗುವದು. "

ಮಕ್ಕಳ ಭೇದಿ ಔಷಧ.

" ಪಿಷ್ಟ್ವಾ ಗಂಧರ್ವಬೀಜಾನಿ ತ್ವಾಖುವಿಣ್ನಿಂಬವಾರಿಣಾ ॥ ನಾಭೌ ಗುದೇ ವಾ ಲೇಪೇನ ಶಿಶೂನಾಂ ರೇಚನಂ ಪರಮ್ ॥ "

" ಹರಳುಕಾಳುಪ್ರೊಪ್ಪು, ಇಲಿಯಹಿಕ್ಕೆ ಇವುಗಳನ್ನು ಸಮವಾಗಿ ಬೆರಸಿ ಬೇವಿನಚಕ್ಕೆ ಅಥವಾ ಬೇವಿನಸೊಪ್ಪಿನರಸದಲ್ಲಿ ಅರದು ಶಿಶುವಿನ ನಾಭಿ, ಗುದಗಳಲ್ಲಿ ಲೇಪಿಸಿದರೆ ಒಳ್ಳೇ ಭೇದಿಯಾಗುವದು. "

" ತೃಟಿ ಗಂಧಕ ಕಂಕುಷ್ಠ ಶತಪುಷ್ಪಾ ವಿಚೂರ್ಣಿತಾಃ ॥ ಮಾಷದ್ವಯಂ ಗವಾಂ ದುಗ್ಧೈಃ ಸೇವಯೇದ್ದಿನಪಂಚಕಮ್ ॥ ರೇಚಯೇನ್ಮೃತ್ತಿಕಾಂ ಶುದ್ಧಾಂ ಶಿಶೂನಾಂ ಹಿತಮೌಷಧಮ್ ॥ "

" ಸಣ್ಣ ಯಾಲಕ್ಕಿ, ಶುದ್ಧಗಂಧಕ, ಚಂಗಲಕೋಷ್ಟ, ಸೋಪು ಇವುಗಳು ಸಮ ಅಂದರೆ ಗಂಧಕವನ್ನು ಬಹು ಕಡಮೆ ಪ್ರಮಾಣ ಬೆರಸಬೇಕು. ಇವನ್ನು ಚೂರ್ಣಿಸಿ ಇದರಲ್ಲಿ ಸ್ವಲ್ಪವನ್ನು ಆಕಳಹಾಲಲ್ಲಿ ದಿನವೂ ಬೆಳಗಿನ ಹೊತ್ತು ನೆಕ್ಕಿಸುತ್ತಾ ೫ ದಿನ ಮಾಡಿದರೆ ಮಕ್ಕಳ ಹೊಟ್ಟೆ ಉಬ್ಬರಿಸಿಕೊಂಡು ಇರುವಿಕೆ, ಮುಂತಾದ ಉದರ ವಿಕಾರವೆಲ್ಲಾ ಭೇದಿಯಲ್ಲಿ ಹೋಗಿ ಮಗು ಸುಖವಾಗುವದು. "

ಮಕ್ಕಳ ಚೋರಕರೋಗ ಚಿಕಿತ್ಸೆ:—

" ದುಷ್ಟೈರ್ವಮಿಾಭಿ ರತಿಸಾರಕ ಘೂರ್ಣಕೈರ್ವಾ ।
ಆಧ್ಮಾನಕಾದಿ ಸಹಿತೋ ಯದಿ ಬಾಲಕಸ್ಯ ॥

ಶ್ವಾಸೈಕಮಾತ್ರ ಪರಿರಕ್ಷಿತ ಜೀವಯೋಗೋ ।
ರೋಗೋ ವಧೂಭಿ ರುದಿತಃ ಖಲು ಚೋರನಾಮಾ ॥ "

" ಮಕ್ಕಳಿಗೆ ಬಂದೇಸಮವಾಗಿ ಅತಿಸಾರ, ವಮನ, ಆಧ್ಮಾನವೆಂಬ ಹೊಟ್ಟೆ ಗುಡುಗುಡುಗುಟ್ಟುವ ಮುಂತಾದ ವಾಯುವಿಕಾರ, ಘೂರ್ಣರೋಗ ವೆಂದರೆ ಜ್ಞಾನವಿಲ್ಲದೆ ಶಿಕ್ಕಿದಹಾಗೆ ಹೊರಳುವಿಕೆ ಇವೆಲ್ಲಾ ಪ್ರಾಪ್ತವಾಗಿ ಜಡತ್ವವನ್ನು ಪಡೆದು, ಕೇವಲ ಶ್ವಾಸಮಾತ್ರ ಆಡುತ್ತಾ—ಮೃತಕಸದೃ ಶವಾಗಿ ಬಿದ್ದಿರುವ ರೋಗವನ್ನು ತಿಳಿದ ಸ್ತ್ರೀಯರು ಚೋರಕರೋಗವೆಂದೆ ನ್ನುವರು. "

" ಶೀರ್ಷಾಂಘ್ರಿ ಹಸ್ತ ತಲಯೋಃ ಸಿತ ಕುಕ್ಕುಟಾಂಡ ।
ಮಜ್ಜಾಘೃತೋ ಹರತಿ ಚೋರಕರೋಗಮಾಶು ॥
ಏವಂ ನ ಶಾಮ್ಯತಿ ಶಿಶುಂ ಪರಿಪಾಲಯೇತ್ತ್ವಮ್ ।
ಪೂತಾತ್ಮನಾ ಕಿಲ ವಿಧೇಯಮಿದಂ ಜಲೇನ ॥ "

" ಈ ಚೋರಕ ರೋಗವಿರುವ ಶಿಶುವಿನ—ತಲೆ, ಎರಡು ಕಾಲು ಗಳು, ಅಂಗಾಲು, ಕೈಗಳು, ಅಂಗೈಗಳು ಇವುಗಳಲ್ಲಿ ಕೇವಲ ಬಿಳೀಬಣ್ಣ ದ್ದಾಗಿರುವ ಕೋಳಿಯ ತಾಜಾ ಅಂಡವನ್ನು ತಂದು ಅದರಲ್ಲಿರುವ ಮಜ್ಜಾ ದಿಂದ ಚೆನ್ನಾಗಿ ತಿಕ್ಕುವದು. ಇದರಿಂದ ನಿಶ್ಚಯವಾಗಿಯೂ ಈ ಚೋರಕ ರೋಗವು ನಿವಾರಣೆಯಾಗುವದು. "

## ಬಡಕಲಾದ ಮಕ್ಕಳಿಗೆ ಔಷಧ.

" ಯಥಾ ಸು ದುರ್ಬಲೋ ಬಾಲಃ ಖಾದನ್ನಪಿ ಚ ವಹ್ನಿಮಾನ್ ॥
ವಿದಾರೀ ಕಂದ ಗೋಧೂಮ ಯವ ಚೂರ್ಣಂ ಘೃತಪ್ಲುತಮ್ ॥
ಖಾದಯೇತ್ತದನುಕ್ಷೀರಂ ಶೃತಂ ಸಮಧು ಶರ್ಕರಮ್ ॥ "

" ಯಾವ ಬಾಲಕನು ಊಟಮಾಡುತ್ತಾ ಅಗ್ನಿದೀಪನವೂ ಇದ್ದಾಗ್ಯೂ, ದಿನೇದಿನೇ ಬಡಕಲಾಗುತ್ತಾ ಬರುವನೋ ಅವನಿಗೆ—ನೆಲಗುಂಬಳಬೇರು, ಗೋಧಿ, ಯವ ಇವುಗಳನ್ನು ಸಣ್ಣಗೆ ಚೂರ್ಣಿಸಿ ವಸ್ತ್ರಗಾಳತಮಾಡಿ, ಚೂ ರ್ಣದಲ್ಲಿ ಸ್ವಲ್ಪಮಾತ್ರ ದಿನವೂ ತುಪ್ಪದಲ್ಲಿ ಕಲಿಸಿ ನೆಕ್ಕಿಸಿ, ಮೇಲೆ ಸಕ್ಕರೆ ಹಾಕಿ ಕಾಯಿಸಿದ ಹಾಲಿನಲ್ಲಿ ಸ್ವಲ್ಪ ಜೇನುತುಪ್ಪ ಹಾಕಿ ಕುಡಿಸುತ್ತಾ ಬಂದರೆ ಹೃಷ್ಟಪುಷ್ಟನಾಗುವನು. "

## ಅಶ್ವಗಂಧಾಘೃತ.

"ಪಾದಕಲ್ಕೇಽಶ್ವಗಂಧಾಯಾಃ ಕ್ಷೀರೇಽಷ್ಟಗುಣಿತೇ ಪಚೇತ್ ॥
ಘೃತಂ ದೇಯಂ ಕುಮಾರಾಣಾಂ ಪುಷ್ಟಿಕೃದ್ಬಲವರ್ಧನಮ್ ॥"

" ಆಕಳತುಪ್ಪ ೨೦ ತೊಲಾ, ಅಶ್ವಗಂಧಿ ಚೂರ್ಣಿಸಿದ್ದು ೨೦ ತೊಲಾ, ಆಕಳಹಾಲು ೧೬೦ ತೊಲಾ, ಇದರಲ್ಲಿ ಚೂರ್ಣ ಮತ್ತು ತುಪ್ಪ ಹಾಕಿ ಘೃತ ಪಾಕವಿಧಿಯಂತೆ ಪಾಕಮಾಡಿ ಘೃತವನ್ನು ತಯಾರ್ಮಾಡಿಟ್ಟುಕೊಂಡು ಬಡಕಲಾದ ಶಿಶುವಿಗೆ ನೆಕ್ಕಿಸುತ್ತಾಬರಲು ಪುಷ್ಟಿಯೂ, ಬಲವೂ ಬರುವದು. "

## ಕುಮಾರಕಲ್ಯಾಣಘೃತ.

" ದ್ರಾಕ್ಷಾ ಸಶರ್ಕರಂ ಶುಂಠೀ ಜೀವಂತೀ ಜೀರಕಂ ಬಲಾ ॥ ಶಟೀ ದುರಾಲಭಾ ಬಿಲ್ವಂ ದಾಡಿಮಂ ಸುರಸಃ ಸ್ಥಿರಾ ॥ ಮುಸ್ತಂ ಪುಷ್ಕರಮೂಲಂ ಚ ಸೂಕ್ಷ್ಮೈಲಾ ಗಜಪಿಪ್ಪಲೀ ॥ ಏಷಾಂ ಕರ್ಷ ಸಮೈರ್ಭಾಗೈಃ ಘೃತಪ್ರಸ್ಥಂ ವಿಪಾಚಯೇತ್ ॥ ಕಷಾಯೇ ಕಂಟಕಾರ್ಯಾಸ್ತು ಕ್ಷೀರೇ ತಸ್ಮಾಚ್ಚತುರ್ಗುಣೇ ॥ ಏತತ್ಕುಮಾರಕಲ್ಯಾಣಂ ಘೃತರತ್ನಂ ಸುಖಪ್ರದಮ್ ॥ "

" ಆಕಳತುಪ್ಪ ೮೦ ತೊಲಾ, ನೆಲಗುಳ್ಳದ ಸ್ವರಸ ೧೬೦ ತೊಲಾ, ಆಕಳಹಾಲು ೮ ಶೇರು; ದ್ರಾಕ್ಷಿ, ಸಕ್ಕರೆ, ಶುಂಠಿ, ಜೀವಂತಿ (ಹಾಲೇ) ಜೀರಿಗೆ, ಚಿಟ್ಟಾಮುಟ್ಟಿ (ಕಳ್ಳಂಗಡಲೆ), ಕಚೂರ, ಬಳ್ಳಿದುರಚಿ, ಬಿಲ್ವದಚಕ್ಕೆ, ದಾಳಿಂಬಿಯಚಕ್ಕೆ, ತುಲಸಿ, ಶಾಲಪರ್ಣೀ, ತುಂಗಮುಸ್ತೆ, ಪುಷ್ಕರಮೂಲ, ಸಣ್ಣ ಯಾಲಕ್ಕಿ, ಗಜಹಿಪ್ಪಲಿ ಇವೆಲ್ಲಾ ೧-೧ ತೊಲಾ, ಈ ಕಲ್ಕವನ್ನು ಹಾಕಿ ಯಥಾವಿಧಿಯಾಗಿ ಘೃತವನ್ನು ಪಾಕಮಾಡುವದು. ಇದು ಕುಮಾರಕಲ್ಯಾಣಘೃತವೆಂದು ಪ್ರಸಿದ್ಧವಾದದ್ದು. ಇದನ್ನು ಸೇವಿಸುವ ಮಕ್ಕಳ ಸಕಲ ರೋಗಗಳು ನಿರ್ಮೂಲವಾಗಿ ಸುಖವುಂಟಾಗುವದು. "

## ಅಷ್ಟಮಂಗಲಘೃತ.

" ವಚಾ ಕುಷ್ಟಂ ತಥಾ ಬ್ರಹ್ಮೀ ಸಿದ್ಧಾರ್ಥಕಮಥಾಪಿ ವಾ ॥ ಶಾರಿಬಾ ಸೈಂಧವಂ ಚೈವ ಪಿಪ್ಪಲೀ ವೆಲ್ಲ ಮುಸ್ತಕಮ್ ॥ ಮೇಧ್ಯಂ ಘೃತಮಿದಂ ಸಿದ್ಧಂ ಪ್ರಾಶವ್ಯಂ ಚ ದಿನೇದಿನೇ॥ ದೃಢಸ್ಮೃತಿಃ ಕ್ಷಿಪ್ರಮೇಧಾ ಕುಮಾರೋ ಬುದ್ಧಿಮಾನ್ ಭವೇತ್ ॥ "

" ಉತ್ತಮ ಆಕಳತುಪ್ಪ ೧೬೦ ತೊಲಾ, ನೀರು ೬೪೦ ತೊಲಾ, ಕಲ್ಕಕ್ಕಾಗಿ ಬಜೆ, ಕೋಷ್ಟ, ಒಂದೆಲಗ, ಬಿಳೀಸಾಸವೆ, ಸೊಗದೆ, ಸೈಂಧವಲವಣ, ಹಿಪ್ಪಲಿ, ವಾಯುವಿಳಂಗ, ತುಂಗಮುಸ್ತೆ, ಇವುಗಳನ್ನು ಸಮಾಂಶವಾಗಿ ಚೂರ್ಣಿಸಿ ಯಥಾವಿಧಿಯಾಗಿ ಘೃತವನ್ನು ಪಕ್ವಮಾಡಿ ಈ ಅಷ್ಟಮಂಗಲ ಘೃತವನ್ನು ಬಾಲಕರಿಗೆ ಪ್ರತಿದಿನವೂ ಕುಡಿಸುತ್ತಾ ಬಂದರೆ—ಮೇಧಾ (ತೀಕ್ಷ್ಣಬುದ್ಧಿ) ವೃದ್ಧಿಯಾಗುವದು, ಸ್ಮರಣಶಕ್ತಿ ದೃಢವಾಗಿರುವದು. ಆ ಶಿಶುವು ಬುದ್ಧಿವಂತನಾಗುವನು. "

## ಲಾಕ್ಷಾದಿತೈಲ.

" ಲಾಕ್ಷಾ ರಸ ಸಮಂ ಸಿದ್ಧಂ ತೈಲಮಸ್ತು ಚತುರ್ಗುಣಮ್ ||
ರಾಸ್ನಾ ಚಂದನ ಕೃಷ್ಣಾಬ್ದ ವಾಜಿಗಂಧಾ ನಿಶಾ ಯುಗೈಃ || ಶ
ತಾಹ್ವಾ ದಾರು ಯಷ್ಟ್ಯಾಹ್ವ ಮೂರ್ವಾ ತಿಕ್ತ ಹರೇಣುಭಿಃ ||
ಬಾಲಾನಾಂ ಜ್ವರ ರಕ್ಷೋಘ್ನಮಭ್ಯಂಗಾದ್ಬಲವರ್ಣಕೃತ್ || "

" ತಿಲತೈಲ ೧೬೦ ತೊಲಾ, ಅರಗಿನ ಕಷಾಯ ೧೬೦ ತೊಲಾ, ಮೊಸರಿನ ಕೆನೆ ೪೮೦ ತೊಲಾ; ಇನ್ನು—ರಾಸ್ನಾ, ಕೆಂಪು ಚಂದನ, ಹಿಪ್ಪಲಿ, ತುಂಗಮುಸ್ತೆ, ಅಶ್ವಗಂಧಿ, ಅರಿಶಿನ, ಮರದರಿಶಿನ, ಸೋಪು, ದೇವದಾರು, ಜೇಷ್ಟ್ಯಮಧು, ಮೂರ್ವಾ, ಕಟುಕರೋಹಿಣಿ, ರೇಣುಕಾ ಇವು ೨-೨ ತೊಲಾ, ಈ ಎಲ್ಲದರ ಚೂರ್ಣವನ್ನು ಹಾಕಿ ಯಥಾವಿಧಿಯಾಗಿ ಪಾಕಮಾಡಿದ ತೈಲವನ್ನು ಶಿಶುವಿಗೆ ಅಭ್ಯಂಗನ ಮಾಡಿಸುವದರಿಂದ ಜ್ವರಾದಿ ರೋಗಗಳು ನಾಶವಾಗುವವು. ಹಾಗೆಯೇ ಬಲವೂ, ವರ್ಣವೂ ವೃದ್ಧಿಯಾಗುವವು. "

## ಶೋಥಹರಲೇಪ.

" ಮುಸ್ತಾ ಕೂಷ್ಮಾಂಡ ಬೀಜಾನಿ ಭದ್ರದಾರು ಕಲಿಂಗಕಾಃ ||
ಪಿಷ್ಟ್ವಾ ತೋಯೇನ ಸಂಲಿಂಪೇದಯಂ ಶೋಥ ಹರಶ್ಶಿಶೋಃ || "

" ತುಂಗಮುಸ್ತೆ, ಬೂದಗುಂಬಳಕಾಯಿಬೀಜ, ದೇವದಾರು, ಇಂದ್ರಜವೆ ಇವನ್ನು ಏಕತ್ರಮಾಡಿ ನೀರಿನಲ್ಲಿ ಅರದು ಲೇಪಿಸುವದರಿಂದ ಬಾಲಕರ ಶೋಭೆ ನಾಶನವಹುದು. "

" ದಂತಪಾಲೀಂ ತು ಮಧುನಾ ಚೂರ್ಣೇನ ಪ್ರತಿಸಾರಯೇತ್ ||
ಧಾತಕೀಂ ಪಿಪ್ಪಲೀಂ ಚೈವ ಧಾತ್ರೀಫಲರಸೇನ ವಾ || ದಂತೋ
ತ್ಥಾನ ಭವಾ ರೋಗಾಃ ಪೀಡಯಂತಿ ನ ಬಾಲಕಮ್ || "

" ಮಕ್ಕಳಿಗೆ ಹಲ್ಲು ಹುಟ್ಟುವಾಗ ರೋಗಗಳುಂಟಾಗುತ್ತವೆಯಷ್ಟೆ ? ಅವಕ್ಕೆ—ಧಾತಕೀಕುಸುಮ ಮತ್ತು ಹಿಪ್ಪಲಿ ಇವುಗಳ ಚೂರ್ಣವನ್ನು ಜೇನಿನಲ್ಲಿ ಕಲಿಸಿ, ಅಥವಾ ನೆಲ್ಲೀಚಟ್ಟನ್ನು ಅದರ ರಸದಲ್ಲಿ ಅರದು ಅದನ್ನೂ ಹಲ್ಲು ಹುಟ್ಟುವ ಜಾಗಾದಲ್ಲಿ ಉಜ್ಜುವದರಿಂದ ಆ ರೋಗವು ಶಮನವಹುದು. "

## ಮೂತ್ರಕಟ್ಟಿನಲ್ಲಿ ಲೇಹ.

" ಕಣಾಷಣ ಸಿತಾ ಕ್ಷೌದ್ರ ಸೂಕ್ಷ್ಮೈಲಾ ಸೈಂಧವೈಃ ಕೃತಃ ||
ಮೂತ್ರಗ್ರಹೇ ಪ್ರಯೋಕ್ತವ್ಯಂ ಶಿಶೂನಾಂ ಲೇಹ ಉತ್ತಮಃ ||"

" ಹಿಪ್ಪಲಿ, ಮೆಣಸು, ಸಕ್ಕರೆ, ಸಣ್ಣಯಾಲಕ್ಕಿ, ಸೈಂಧವಲವಣ ಇವುಗಳನ್ನು ಸಮತೂಕವಾಗಿ ಚೂರ್ಣಿಸಿ ಜೇನಿನಲ್ಲಿ ಕಲಿಸಿ ನಕ್ಕಿಸಲು ಬಾಲಕರ ಮೂತ್ರಕಟ್ಟು ನಿವೃತ್ತಿಯಾಗುವದು. "

" ವ್ಯೋಷಂ ಚ ಶೃಂಗಂ ಚ ಮನಶ್ಶಿಲಾಂಚ ।
ಕರಂಜಬೀಜಂ ಚ ಸುಪಿಷ್ಟಮೇತತ್ ॥
ಕಂಡ್ವರ್ದಿತಾನಾಮಥ ವರ್ತ್ಮಗಾನಾಂ ತು ।
ಶ್ರೇಷ್ಠಂ ಶಿಶೂನಾಂ ನಯನೇ ವಿದಧ್ಯಾತ್ ॥ "

" ತ್ರಿಕಟುಕ, ಶೃಂಗ, ಮಣಿಶಿಲೆ, ಹೊಂಗೆಬೀಜ ಇವುಗಳನ್ನು ಶುದ್ಧೀಕರಿಸಿಕೊಂಡು ಸಮಗೂಡಿ ಅರದು ನೇತ್ರದಲ್ಲಿ ಅಂಜನವಿಡುವದರಿಂದ ನೇತ್ರದ ಕಡತವೂ, ಅರ್ದಿತ, ರೆಪ್ಪೆಯುದುರುವಿಕೆ ಇವು ನಿರ್ಮೂಲವಾಗುವವು. "

## ಶಿಶುಗಳಿಗೆ ಶೀಯೊದ ಪ್ರವೃತ್ತಿಮಾತ್ರೆ.

ದ್ರಾಕ್ಷಿಹಣ್ಣು ೫ ಪಲ, ಕಲ್ಲುಸಕ್ಕರೆ ೫ ಪಲ, ಶುಂಠಿ ೧ ವರಾತೂಕ, ಓಮ ೧ ವರಾತೂಕ, ಮೆಣಸು ೧ ವರಾತೂಕ, ಕಟುಕರೋಹಿಣಿ ೩ ಪಲ, ಶುದ್ಧಜಾಪಾಳ ೫ ಪಲ, ಇವೆಲ್ಲವನ್ನೂ ಖಲ್ವದಲ್ಲಿ ೨ ಪಲ ಆಕಳತುಪ್ಪದಿಂದ ಅರದು, ಜೇನುತುಪ್ಪ ೩॥ ಪಲವನ್ನು ಸ್ವಲ್ಪಸ್ವಲ್ಪವಾಗಿ ಬಿಟ್ಟುಕೊಂಡು ೪ ಝಾವ ಮರ್ದಿಸಿ ಜಾಡಿಯಲ್ಲಿ ತುಂಬಿಡುವದು. ಎಳೇಮಕ್ಕಳಿಗೆ ಒಂದು ಕಾಸುತೂಕ ಔಷಧವನ್ನು ಅಕ್ಕಿಯ ರೊಟ್ಟಿಯಲ್ಲಿ ಹಾಕಿ ತಿನ್ನಿಸುವದು, ಭೇದಿಯಾಗುವದು. ದೊಡ್ಡವರಿಗೆ ಮೂರುಕಾಸು ತೂಕ ಕೊಡಬಹುದು. ಇಚ್ಛಾಪಥ್ಯವು.

## ಶಿಶುಗಳ ಮಂದಮಾತ್ರೆ.

ಶುಂಠಿ, ಹಿಪ್ಪಲಿ, ಮೆಣಸು, ಓಮ, ಕಟುಕರೋಹಿಣಿ, ವಾಯುವಿಳಂಗ, ಇಂಗು ಶುದ್ಧಿಮಾಡಿದ್ದು, ಪೆಟ್ಲುಪ್ಪು, ಆಮೆಯಚಿಪ್ಪು, ಶುದ್ಧಿಮಾಡಿದ ಜಾಪಾಳ ಇವು ದಿನಸು ೧ಕ್ಕೆ ೧-೧ ತೊಲೆಯಂತೆ ತಂದು ಖಲ್ವದಲ್ಲಿ ಹಾಕಿ ಗರುಗದಸೊಪ್ಪಿನರಸದ ಮೇಣದಂತೆ ಅರದು ಗುಲಗಂಜಿಯಂತೆ ಮಾತ್ರೆಗಳನ್ನು ಮಾಡಿ ನೆರಳಿನಲ್ಲಿ ಒಣಗಿಸಿಟ್ಟುಕೊಳ್ಳುವದು. ಅಗಸೆಯಸೊಪ್ಪಿನರಸವನ್ನು ಹಿಂಡಿಕೊಂಡು ಅದರಲ್ಲಿ ಮಕ್ಕಳಿಗೆ ಅರ್ಧಮಾತ್ರೆ ಅಥವಾ ೧ ಮಾತ್ರೆ, ದೊಡ್ಡವರಿಗೆ ೧ ಮಾತ್ರೆ ಅಥವಾ ೧॥ ಮಾತ್ರೆ ಕೊಟ್ಟರೆ ಅನಾಯಾಸವಾಗಿ ಭೇದಿಯಾಗುವದು. ಇದರಿಂದ ಅಗ್ನಿಮಾಂದ್ಯ, ಹುಳಿದೇಗು, ಜ್ವರ ಇವು ನಿವರ್ತಿಸುವವು. ೨ ಸಲ ಮಲವಿಸರ್ಜನೆಯಾಗುವದು. ಹುಳಿಯನ್ನು ಆ ದಿನ ಬಿಡಬೇಕು. ☞ ಮೇಲೆ ಹೇಳಿದ ಆಮೆಯಚಿಪ್ಪನ್ನು ಗರಗದರಸದಲ್ಲಿ ಒಂದು ದಿನ ನೆನೆಹಾಕಿದರೆ ಶುದ್ಧಿಯಾಗುವದು. ಅನಂತರ ಔಷಧಕ್ಕೆ ಸೇರಿಸಬೇಕು.

## ಸನ್ನಿಪಾತಹರ ಮಾತ್ರೆಗಳು.

ದಾಲಚಿನ್ನಿ ೨॥ ವರಾತೂಕ, ಯಾಲಕ್ಕಿ ೨॥ ವರಾತೂಕ, ಶುಂಠಿ ೫ ವರಾತೂಕ, ರಸಕರ್ಪೂರ ಶುದ್ಧವಾದದ್ದು ೨॥ ವರಾತೂಕ, ಶುದ್ಧ ಇಂಗ

ಲೀಕ ೨॥ ವರಾತೂಕ, ಶುದ್ಧ ಜಾಪಾಳ ೨॥ ವರಾತೂಕ, ಇವನ್ನು ಸಣ್ಣಗೆ ಚೂರ್ಣಿಸಿ ಖಲ್ವದಲ್ಲಿ ಬಿಸಿನೀರಿನಲ್ಲಿ ಮೇಣದಂತೆ ಅರದು ಮೆಣಶಿನಪ್ರಮಾಣ ಮಾತ್ರೆಮಾಡಿ, ನೆರಳಲ್ಲಿ ಒಣಗಿಸಿಟ್ಟುಕೊಳ್ಳುವದು. ಶುಂಠಿ ಕಷಾಯ, ಮೊಲೆಹಾಲು, ಜೇನುತುಪ್ಪ ಈ ಮೂರರಲ್ಲಿ ಯಾವದರಲ್ಲಾದರೂ ಒಂದು ಮಾತ್ರೆ ಅಥವಾ ೨ ಮಾತ್ರೆ ದೇಹಪ್ರಕೃತಿಯರಿತು ಕೊಡುವದು. ಇಚ್ಛಾಪಥ್ಯ, ಶೀತಪದಾರ್ಥ ವರ್ಜ್ಯವು.

## ಭೈರವಿಮಾತ್ರೆ.

ಶುಂಠಿ, ಮೆಣಸು, ಹಿಪ್ಪಲಿ, ಹವಳಸರ ಗಂಧಕ, ಬೆಳಿಗಾರ, ಶುದ್ಧ ಇಂಗಲೀಕ, ಶುದ್ಧ ವತ್ಸನಾಭಿ ಇವು ತಲಾ ೧-೧ ವರಾತೂಕದಂತೆ ಶೇರಿಸಿ, ಮೊದಲು ಇಂಗಲೀಕವನ್ನು ಕರೀವಿಳ್ಯದೆಲೆಯರಸದಲ್ಲಿ ೩ ದಿನ ನನೇ ಇಟ್ಟಿದ್ದು ಆಮೇಲೆ ಅದೇ ರಸದಲ್ಲಿ ೧೦ ನಿಮಿಷದವರಿಗೆ ಚುರುಕು ಕೊಡುವದು. ವತ್ಸನಾಭಿಯನ್ನು ಹಸುವಿನ ಗಂಜಲದಲ್ಲಿ ೩ ದಿನ ನೆನೆಯಿಕ್ಕಿ ಆಮೇಲೆ ನೀರಿನಲ್ಲಿ ಚೆನ್ನಾಗಿ ತೊಳೆದು ಮೇಲಿನ ಶಿಪ್ಪೆಯನ್ನು ಒಂದು ಚೂರಿಯಲ್ಲಿ ಉಪಾವಾಗಿ ತೆಗಿಯಬೇಕು. ಅನಂತರ ಇದನ್ನು ಸಣ್ಣಗೆ ತುಂಡುಮಾಡಿ ಒಣಗಿಸಬೇಕು. ಆಮೇಲೆ ಎಲ್ಲವನ್ನೂ ನುಣ್ಣಗೆ ಚೂರ್ಣಮಾಡಿ, ಖಲ್ವದಲ್ಲಿ ಹಾಕಿಕೊಂಡು ೧೫೦ ನಿಂಬೇಹಣ್ಣಿನಹುಳಿ ಇಮುರುವವರಿಗೆ ಅರದರದು ಸೂರ್ಯಪುಟದಿಂದಾರಿಸುತ್ತಾ ಅರಿಯುವದು. ಅನಂತರ ಮೆಣಶಿನಕಾಳುಪ್ರಮಾಣ ಮಾತ್ರೆಮಾಡಿ, ಮೆಣಶಿನಕಾಳು ಚೂರ್ಣವಾಗಲೀ, ವಿಳ್ಳೆಯದೆಲೆರಸದಲ್ಲಾಗಲೀ ೧ ಮಾತ್ರೆಯನ್ನು ಸಾಮಾನ್ಯ ಕಾಹಿಲೆಯಲ್ಲಿ ಕೊಡುವದು. ಕಂಠನೋವು, ತಲೆನೋವು, ಸನ್ನಿ, ಜ್ವರ, ಪಿತ್ತಜ್ವರ, ವಾತಜ್ವರ, ಶೀತಜ್ವರ ಇವು ನಿವೃತ್ತಿಯಾಗುವವು. ಇದುಹೊರ್ತು ಮೊಲೇಹಾಲು, ತುಳಸೀಸೊಪ್ಪಿನರಸ, ವಿಷ್ಣುಕ್ರಾಂತಿರಸ, ಆಡುಸೋಗೆರಸ ಇತ್ಯಾದಿಗಳಲ್ಲಿ ಜೇನಿನಲ್ಲಿ ದೇಹಧರ್ಮವರಿತು ಕೊಡುವದು. ಕಣ್ಣಿಗೆ ಅಂಜನಹಾಕುವದರಿಂದ ಶೀತಜ್ವರ, ಸನ್ನಿ ಸಹ ನಿವೃತ್ತಿಯಾಗುವವು.

## ಜ್ವರಕ್ಕೆ ಕೇಸರಿಮಾತ್ರೆ.

ಕೇಸರಿ, ಅಳಲೇಕಾಯಿ, ಮೆಣಸು, ದೇವದಾರು, ಯಾಲಕ್ಕಿ, ಶ್ರೀಗಂಧಚಕ್ಕೆ, ಹಿಪ್ಪಲಿ, ನೆಲ್ಲೀಚೆಟ್ಟು, ಲವಂಗ, ಗೋರೋಜನ, ಶುಂಠಿ, ತಾರೆಕಾಯಿ, ಜಾಕಾಯಿ, ಕಟುಕರೋಹಿಣಿ, ಇವುಗಳಲ್ಲಿ ಕೇಸರಿ, ಗೋರೋಜನ ೧-೧ ಪಲ, ಉಳದವು ತಲಾ ಅರ್ಧಅರ್ಧ ಪಲ, ಎಲ್ಲವನ್ನೂ ನುಣ್ಣಗೆ ಚೂರ್ಣಿಸಿ ಖಲ್ವದಲ್ಲಿ ಹಾಕಿ ನಿಂಬೇಹುಳಿಯಲ್ಲಿ ೬ ಝಾಮ ಮರ್ದಿಸಿ, ಹಶೀಶುಂಠೀರಸದಲ್ಲಿ, ನೆಲಗುಳ್ಳದರಸದಲ್ಲಿ ಸಹಾ ೨-೨ ಝಾಮ ಮರ್ದಿಸಿ ಹೆಸರು

ಬೇಳೆಯಂತೆ ಸಣ್ಣಗೆ ಮಾತ್ರೆಮಾಡಿ ನೆರಳಲ್ಲಿ ಒಣಗಿಸಿಡುವದು. ಜ್ವರಕ್ಕೆ ಮೊಲೇಹಾಲಲ್ಲಿ ಅರದು ಜೇನುತುಪ್ಪ ಬೆರಸಿ ಕೊಡುವದು. ಶೀತಜ್ವರಹರ.

## ಗೋರೋಜನಮಾತ್ರೆ.

ಗೋರೋಜನ, ಜಾಪತ್ರಿ, ಕರೀಜೀರಿಗೆ, ಹಿಪ್ಪಲಿ, ಜೇಷ್ಟಮಧು, ಸೊಗದೆಬೇರು, ಪಚ್ಚಕರ್ಪೂರ, ಓಮ, ಕೋಷ್ಟ, ಮೆಣಸು, ಜಾಕಾಯಿ, ಲವಂಗ, ಆಕಲಕರೆ; ಇವುಗಳಲ್ಲಿ ಗೋರೋಜನಮಾತ್ರ ಕಾಲುಪಲ ಉಳಿದವು ೧। ಪಲದಂತೆ ಚೂರ್ಣಿಸಿ ವಸ್ತ್ರಗಾಳಿತಮಾಡಿ, ಖಲ್ವದಲ್ಲಿ ಹಾಕಿ ಕಾಚೀಸೊಪ್ಪಿನರಸದಲ್ಲಿ ೧ ಝಾವ ಮರ್ದಿಸಿ ಹೆಸರುಕಾಳಿನಂತೆ ಮಾತ್ರೆಮಾಡಿ, ಜೇನುತುಪ್ಪದಲ್ಲಿ ೧ ಮಾತ್ರ ಕೊಡಲು ಜ್ವರ, ಛಳಿಹರ, ಇಚ್ಛಾಪಥ್ಯ.

## ಕಸ್ತೂರಿಮಾತ್ರೆ.

ಕಸ್ತೂರಿ, ಪಚ್ಚಕರ್ಪೂರ, ಮೆಣಸು, ಜಾಪತ್ರಿ, ಯಾಲಕ್ಕಿ, ಗೋರೋಜನ, ಬಾಲಮೆಣಸು, ಹಿಪ್ಪಲಿ, ಕೇಸರಿ, ಜಾಕಾಯಿ, ಲವಂಗ ಎಲ್ಲಾ ವರಹಾತೂಕ, ಲವಂಗದ ಕಷಾಯದಲ್ಲಿ ಕಾಡಿಗೆಯಂತೆ ಅರದು ಹೆಸರುಕಾಳಿನಂತೆ ಮಾತ್ರೆಮಾಡಿ, ನೆರಳಲ್ಲಿ ಒಣಗಿಸಿಡುವದು. ಮೊಲೆಹಾಲಲ್ಲಿ ಕೊಟ್ಟರೆ ಜ್ವರದೋಷಗಳು ನಾಶನವಾಗುವವು.

## ಬಾಲಸಂಜೀವನೀಮಾತ್ರೆ.

ಗೋರೋಜನ, ಬೆಳಗಾರ, ಕಟುಕರೋಹಿಣಿ, ಶುದ್ಧಿಜಾಪಾಳ, ಸಮತೂಕ ಖಲ್ವದಲ್ಲಿ ಮೊಲೆಹಾಲಲ್ಲಿ ಮೇಣದಂತೆ ಅರದು ಸಾಸವೆಯಂತೆ ಮಾತ್ರೆ ಮಾಡಿ, ೧ ಮಾತ್ರ ಅನುಪಾನದಿಂದ ಕೊಡಲು ಸಕಲ ಜ್ವರ, ಮಂದ ಸಹ ಹರವಾಗುವದು. ಇಚ್ಛಾಪಥ್ಯ.

## ಮೇಹಹರಯಣ್ಣೆ.

ಕಾಚೀಸೊಪ್ಪು, ತುಲಶೀಸೊಪ್ಪು, ತುತ್ತಿಸೊಪ್ಪು, ಸಾಂಬ್ರಾಣಿಯಲೆ, ಬಿಲ್ವದಪತ್ರೆ, ಬಂದೆಲಗ, ಗರಗ, ಹೊಂಗೆಸೊಪ್ಪು, ಬಿಳೀ ಉಪ್ಪಿಯಲೆ ಇವೆಲ್ಲ ಸಮತೂಕವಾಗಿ ರಸತೆಗೆದದ್ದು ೧-೧ ಶೇರು, ಚಿಟ್ಟಹರಳುಯಣ್ಣೆ ೧ ಶೇರು ಬಂದಾಗಿ ಶೇರಿಸಿ ಯಥಾವಿಧಿಯಾಗಿ ಪಾಕಮಾಡುತ್ತಾ— ಹಿಪ್ಪಲಿ, ಸಣ್ಣರಾಷ್ಮೆ, ಓಮ, ಬಜೆ, ಕಸ್ತೂರಿ ಅರಿಶಿನ ಇವು ೧-೧ ತೊಲಾ, ಜಾಕಾಯಿ ಅರ್ಧತೊಲಾ ಚೂರ್ಣಿಸಿ ವಸ್ತ್ರಗಾಳಿತಮಾಡಿ ಮೇಲಿನ ತೈಲ ಪಾಕವಾಗುವಾಗ ಈ ಕಲ್ಕವನ್ನು ಹಾಕಿ ಕ್ರಮವಾಗಿ ಇಳಿಸಿಕೊಂಡ ತೈಲವನ್ನು ಮಕ್ಕಳಿಗೆ ೧ ಉದ್ದರಣೆ, ದೊಡ್ಡವರಿಗೆ ಅರ್ಧತೊಲಾದಂತೆ ಕೊಡಲು ೩ ದಿನಕ್ಕೆ ಮೇಹಚಟ್ಟೆ ಮೊದಲಾದ ಉಷ್ಣಕಾರಕ ವ್ಯಾಧಿಗಳು ಹರವಾಗುವವು. ಇಚ್ಛಾಪಥ್ಯ.

## ಮಕ್ಕಳಿಗೆ ಮಂದದ ಯೆಣ್ಣೆ.

ಜುಟ್ಟುವೇ (ಕುರುಟಗ) ಸೊಪ್ಪುರಸ ೭॥ ಪಲ, ಚಿಟ್ಟಹರಳೆಣ್ಣೆ ೭॥ ಪಲ, ಇವೆರಡನ್ನೂ ಯಥಾವಿಧಿಯಾಗಿ ಪಕ್ವಮಾಡಿ ಇಳಿಸಿಕೊಂಡು ಅದಕ್ಕೆ ರಸಕರ್ಪೂರ ಶುದ್ಧಿಯಾದದ್ದು, ಯಾಲಕ್ಕಿ, ದಾಲಚಿನ್ನಿ, ಶುಂಠಿ ಇವು ತಲಾ ೧-೧ ತೊಲಾ, ಕಟುಕರೋಹಿಣಿ ಅರ್ಧತೊಲಾ ಚೂರ್ಣಿಸಿ, ಆ ಯಣ್ಣೆ ಪಕ್ವವಾಗುವಾಗ ಕೂಡಿಸಿಟ್ಟುಕೊಂಡು ಹೊತ್ತಿಗೆ ೧ ಉದ್ಧರಣೆಯಷ್ಟು ಕೊಟ್ಟು ಉಪ್ಪಿಲ್ಲದ ಪಥ್ಯದಿಂದಿಡುವದು; ಶಿಶುವಿನ ತಾಯಿಯೂ ಪಥ್ಯದಿಂದಿರಬೇಕು. ಮಂದನಾಶವಹುದು.

## ಯೆಳವಿನ ಯೆಣ್ಣೆ.

ಗೋರಂಟೆಯಸೊಪ್ಪಿನರಸ, ಬಿಳೀಉಪ್ಪಿಸೊಪ್ಪಿನ, ತುಲಸೀಸೊಪ್ಪಿನ ರಸ, ಲಕ್ಕೀಸೊಪ್ಪಿನರಸ, ಜುಟ್ಟುವೆ (ಕುರಟಗ) ಸೊಪ್ಪಿನರಸ, ನಾಯಿತೊಳಸಿಯುಲೆಯರಸ ಇವು ತಲಾ ಅರ್ಧಅರ್ಧಶೇರು, ಚಿಟ್ಟಹರಳೆಣ್ಣೆ ೧ ಶೇರು— ಬೆಳಗಾರ, ಓಮ, ಪೆಟ್ಲುಪ್ಪು, ಬಜೆ, ಸಣ್ಣರಾಶ್ಮೆ, ಕಟುಕರೋಹಿಣಿ, ಕರೀಜೀರಿಗೆ, ಇವೆಲ್ಲಾ ೧-೧ ತೊಲಾ, ಇವೆಲ್ಲಾ ಚೂರ್ಣಿಸಿ ವಸ್ತ್ರಗಾಳತ ಮಾಡಿ ಮೇಲಿನ ರಸಗಳು ಯಣ್ಣೆಯನ್ನು ಯಥಾವಿಧಿಯಾಗಿ ಪಾಕಮಾಡುತ್ತಾ ಈ ಕಲ್ಕವನ್ನೂ ಶೇರಿಸಿ ತೈಲವನಿಳಿಸಿಕೊಂಡು ಮಕ್ಕಳಿಗೆ ಒಂದು ಉದ್ಧರಣೆಯಷ್ಟು ಕೊಡುವದು. ಇಚ್ಛಾಪಥ್ಯ. ಯಳವು, ಶೀತ, ಅಳ್ಳೆಹೊಡಕೊಳ್ಳುವಹು ಮುಂತಾದ ಯಳೇಮಕ್ಕಳ ಸಕಲರೋಗಹರ.

## ಮಕ್ಕಳಿಗೆ ಹೊಟ್ಟೆಯುಬ್ಬರಿಸಿದ ಮಂದವಿಕಾರಕ್ಕೆ.

ಶುದ್ಧ ನೆಲ್ಲಿಕಾಯಿಗಂಧಕ ಕಾಲುವರಾತೂಕ, ಶುದ್ಧ ಪಾದರಸ ಕಾಲು ವರಾತೂಕ, ಬೆಳಿಗಾರ ಕಾಲುವರಾತೂಕ, ಶುದ್ಧ ಜಾಪಾಳ ೧ ವರಾತೂಕ, ಇವೆಲ್ಲವನ್ನೂ ಥಣ್ಣೀರಿನಲ್ಲಿ ಅರದು ಹೆಸರುಕಾಳಷ್ಟು ಮಾತ್ರೆಮಾಡಿ, ನೆರಳಲ್ಲಿ ಒಣಗಿಸಿಡುವದು. ೧ ಮಾತ್ರೆ ನೀರಿನಲ್ಲರದು ಕೊಡುವದು. ಬಾಲಕರ ಶೀತ ವಿಕಾರದ ಎಲ್ಲಾ ವ್ಯಾಧಿಗಳನ್ನೂ ಹರಿಸುವದು. ಭೇದಿಯಾಗುವದು. ಉಬ್ಬುವಾತ, ಹೊಟ್ಟೆಯ ಇತರ ವಿಕಾರಗಳೂ ಹರವಾಗುವವು.

## ಬಾಲಭೇದಿಮಾತ್ರೆ.

ಮೆಣಸು ೫ ವರಾತೂಕ, ಜಾಪಾಳ ಶುದ್ಧಿಯಾದದ್ದು ೫ ವರಾತೂಕ, ಶುಂಠಿ, ಓಮ, ಕಟುಕರೋಹಿಣಿ, ಆಮೆಯಚಿಪ್ಪು ಶುದ್ಧಿಯಾದದ್ದು, ಕೋಷ್ಟ ಇವು ೧-೧ ವರಾತೂಕ, ಇವೆಲ್ಲವನ್ನೂ ನುಣ್ಣಗೆ ಚೂರ್ಣಿಸಿ, ಖಲ್ವದಲ್ಲಿ ನಿಂಬೇಹುಳೀಲಿ ಅರದು ಮೆಣಸಿನಂತೆ ಮಾತ್ರೆಮಾಡಿಡುವದು. ೧ ಮಾತ್ರೆ

ಯನ್ನು ಮೊಲೆಹಾಲಲ್ಲಿ ಅರದು ಕುಡಿಸಲು ಶಿಶುಗಳಿಗೆ ಸುಖವಾಗಿ ಭೇದಿಯು ಹುದು. ಸನ್ನಿ, ಜ್ವರ, ಶೀತಜ್ವರ ನಾಶನವಹುದು. ಭೇದಿ ಹೆಚ್ಚಾದರೆ ಕೆಮ್ಮಣ್ಣು ಮೊಲೆಹಾಲನ್ನು ಕಲಸಿ ಕುಡಿಸಿದರೆ ನಿಲ್ಲುವದು.

## ಗೋರೋಜನ ಗುಳಿಗೆ.

ಗೋರೋಜನ, ಕೇಸರ, ಪಚ್ಚಕರ್ಪೂರ, ರಸಶಿಂಧೂರ ಶುದ್ಧವಾದದ್ದು, ಶುದ್ಧವಾದ ಅಭ್ರಕಭಸ್ಮ, ಯಾಲಕ್ಕಿ, ಕೋಷ್ಟ, ಲವಂಗ, ಅಕಳಕರೆ, ಇವೆಲ್ಲಾ ಸಮವಾಗಿ ಶೇರಿಸಿ ಭಸ್ಮಗಳನ್ನು ಸ್ವಲ್ಪಮಾತ್ರ ಹಾಕಿ ಶ್ರೀಗಂಧದ ಕಷಾಯದಲ್ಲಿ ೪ ಝಾವ ಮರ್ದಿಸುವದು, ಲವಂಗದ ಕಷಾಯದಲ್ಲಿ ೨ ಝಾವ ಅರಿಯುವದು. ಗುಲಗಂಜಿಪ್ರಮಾಣ ಮಾತ್ರೆಮಾಡಿ ನೆರಳಲ್ಲಿ ಒಣಗಿಸಿ ತಾಂಬ್ರದ ಭರಣಿಯಲ್ಲಿಟ್ಟುಕೊಳ್ಳುವದು. ಮೊಲೇಹಾಲಿನಲ್ಲಿ ೧ ಮಾತ್ರೆ ಅರದು ಕುಡಿಸಲು ಶ್ಲೇಷ್ಮ, ಶೀತವಿಕಾರ, ಜ್ವರ, ಕೆಮ್ಮು, ಶ್ವಾಸ, ವಾತಜ್ವರ, ಸನ್ನಿ, ಇವು ನಿವೃತ್ತಿಯಾಗುವದು. ಎಳೇಮಕ್ಕಳಿಗೆ ಅರ್ಧಮಾತ್ರೆ ಕೊಡುವದು.

## ಇಂಗಲೀಕಮಾತ್ರೆ.

ಇಂಗಲೀಕ ಶುದ್ಧಿಮಾಡಿದ್ದು ೨ ತೊಲಾ, ಇದನ್ನು ಮೊಲೆಹಾಲಿನಲ್ಲಿ ೩ ಝಾವ ಅರದು ಹೆಸರುಕಾಳಷ್ಟು ಮಾತ್ರೆಮಾಡಿ ನೆರಳಲ್ಲಿ ಒಣಗಿಸಿಟ್ಟುಕೊಳ್ಳುವದು. ಮೊಲೆಹಾಲಿನ ಅನುಪಾನದಲ್ಲಿ ಸನ್ನಿ, ಶೀತಜ್ವರ, ಶೀತವಿಕಾರ, ಶ್ಲೇಷ್ಮಪ್ರಕೋಪ ಇವು ಹರವಾಗುವವು. ಆಡುಸೋಗೆಸೊಪ್ಪಿನರಸದಲ್ಲಿ ಮಂದಜ್ವರಹರ, ಲಕ್ಕಿಲಿಸೊಪ್ಪಿನರಸದಲ್ಲಿ ವಾತಜ್ವರಹರ, ಕುಪ್ಪಿಸೊಪ್ಪಿನರಸದಲ್ಲಿ ಕೊಡಲು ಶ್ಲೇಷ್ಮಜ್ವರಹರ, ಮಲಜಲ ಕಟ್ಟಿದರೆ ಅಳಲೇಕಾಯಿಕಷಾಯದಲ್ಲಿ ೧ ಮಾತ್ರೆ ಅರದು ಕುಡಿಸುವದು. ಉಪ್ಪು, ಹುಳಿ ವರ್ಜ್ಯ.

## ಪಚ್ಚಕರ್ಪೂರಮಾತ್ರೆ.

ಪಚ್ಚಕರ್ಪೂರ, ದಾಲ್ಚಿನ್ನಿ, ಜಾಕಾಯಿ, ಇವೆಲ್ಲಾದರ ಸಮತೂಕ ಶುದ್ಧಜಾಪಾಳ, ಇವೆಲ್ಲವನ್ನೂ ಲೋಳಿಸರದತಿರಳಿನ ರಸದಲ್ಲಿ ಅರದು ಉದ್ದಿನಂತೆ ಮಾತ್ರೆಮಾಡಿಟ್ಟುಕೊಂಡು ೩ ಚಿಟಕಿ ಸಕ್ಕರೆಯಲ್ಲಿ ೧ ಮಾತ್ರೆ ಚೂರ್ಣಿಸಿ ಶೇರಿಸಿಕೊಡುವದು. ೪-೫ ಭೇದಿಯಾಗಿ ಜ್ವರಹರವಹುದು. ಇಚ್ಛಾಪಥ್ಯ. ಎಳೇಮಕ್ಕಳಿಗೆ ಅರ್ಧಮಾತ್ರೆ ಮಾತ್ರ ಕೊಡುವದು.

## ಮಕ್ಕಳಿಗೆ ಅದ್ಭುತ ಕರ್ಪೂರಮಾತ್ರೆ.

ಪಚ್ಚಕರ್ಪೂರ ॥ ತೊಲಾ, ಪೆಟ್ಲುಪ್ಪು ೧ ತೊಲಾ, ಜಾಕಾಯಿ ೧ ತೊಲಾ, ಗ್ರಂಧಿಕತಗರ ೧ ತೊಲಾ, ಲವಂಗ ೧॥ ತೊಲಾ, ಜಾಪತ್ರಿ ೧

ತೊಲಾ, ಇವೆಲ್ಲವನ್ನೂ ನುಣ್ಣಗೆ ಕುಟ್ಟಿ ಖಲ್ವದಲ್ಲಿ ನಿಂಬೆಹುಳಿಯಲ್ಲಿ ೧ ಝಾವ ಅರದು ಉದ್ದಿನಪ್ರಮಾಣ ಮಾತ್ರೆಮಾಡಿ ನೆರಳಲ್ಲಿ ಒಣಗಿಸುವದು. ಹಸೀಶುಂಠಿಯನ್ನು ನುಣ್ಣಗರದದ್ದು ೧ ಗಜ್ಜಿಗದಷ್ಟರಲ್ಲಿ ೧ ಮಾತ್ರೆಯನ್ನು ಪುಡಿಮಾಡಿಟ್ಟು ಶಿಶುಗಳಿಗೆ ತಿನ್ನಿಸುವದು. ಹಾಗಿಲ್ಲದಿದ್ದರೆ ಸಕ್ಕರೆಯಲ್ಲಿ ಕೊಡಬಹುದು. ಸಕಲ ಜ್ವರಹರ, ಇಚ್ಛಾಪಥ್ಯ.

## ಅಗ್ನಿಮಾಂದ್ಯಹರ ಗುಟಿಕೆ.

ರಸಕರ್ಪೂರ ಶುದ್ಧಿಯಾದದ್ದು ಅರ್ಧತೊಲೆ, ಯಾಲಕ್ಕಿ ಕಾಲುತೊಲೆ, ಜೀರಿಗೆ ಕಾಲುತೊಲೆ, ಅತಿಬಜೆ ಕಾಲುತೊಲೆ, ಲವಂಗ ಕಾಲುತೊಲೆ, ಬಜೆ ಕಾಲುತೊಲೆ, ಮಾಜೂಫಲ ಕಾಲುತೊಲೆ, ಇವೆಲ್ಲವನ್ನೂ ನುಣ್ಣಗರದು ವಿಷ್ಣುಕ್ರಾಂತಸಮೂಲರಸದಲ್ಲಿ ೧ ಝಾವ ಮರ್ದಿಸಿ ಕೊತ್ತುಂಬರಿಬೀಜದಂತೆ ಮಾತ್ರೆಮಾಡಿ, ನೆರಳಲ್ಲಿ ಒಣಗಿಸುವದು. ಲಾಮಂಚ, ಶುಂಠಿ, ಬಜೆ, ಮೆಂತಯ, ಓಮ ಇವುಗಳ ಕಷಾಯದಲ್ಲಿ ೧ ಮಾತ್ರೆಯನ್ನರದು ಕುಡಿಸಿದರೆ ಮಕ್ಕಳ ಸಕಲ ಶೀತ ಮಂದಹರ, ಇಚ್ಛಾಪಥ್ಯ.

## ಮಕ್ಕಳ ಯುಳವುರೋಗ ಚಿಕಿತ್ಸೆ.

ಚಿಲ್ಲದಬೀಜ ಪ್ರಸಿದ್ಧವಾದದ್ದು. ಇದು ಮಲೆನಾಡು ಪ್ರಾಂತ್ಯದಲ್ಲಿ ಪುಷ್ಕಳ ದೊರಿಯುತ್ತದೆ. ಅದರಮೇಲ್ಗಡೆ ಒಂದು ಹುಳಿಯಾದ ಹಣ್ಣಿರುತ್ತದೆ. ಆ ಹಣ್ಣುಗಳನ್ನು ೨ ಶೇರಿನಷ್ಟು ತಂದು ವರಳಲ್ಲಿ ವನಿಕೆಯಿಂದ ಇಡಿದರೆ ಗೊಜ್ಜಿನಂತೆ ಬರುವ ರಸವನ್ನು ಒಂದು ಥಲೋ ಶುಭ್ರವಾದ ಮುಖಮುಲ್‌ಬಟ್ಟೆಗೆ ೭ ಆವರ್ತಿ ೨ ಕಡೆಗೂ ಲೇಪಿಸಿ ನೆರಳಲ್ಲಿ ಒಣಗಿಸಿಟ್ಟುಕೊಳ್ಳುವದು. ಯುಳವು ಬಂದಾಗ ಈ ಬಟ್ಟೆಯು ೧॥ ಅಂಗುಲ ಅಗಲ ೨ ಅಂಗುಲ ಉದ್ದವನ್ನು ಕತ್ತರಿಸಿ ಮೊಲೇಹಾಲು ಅಥವಾ ಬಿಸಿನೀರಿನಲ್ಲಿ ಆ ಬಟ್ಟೆಯನ್ನು ಚೆನ್ನಾಗಿ ಕಿವಿಚಿ ರಸವೆಲ್ಲಾ ಹಾಲಿಗೆ ಅಥವಾ ನೀರಿಗೆ ಬಂದು ಬಿಟ್ಟು, ಬಟ್ಟೆ ಮಾತ್ರ ನಿಲ್ಲುವವರಿಗೂ ಹಿಂಡಿಕೊಂಡು ಒಳಲೆಯಿಂದ ಕುಡಿಸಿದರೆ ಔಷಧಿಯನ್ನು ಕೊಟ್ಟ ೧೦ ನಿಮಿಷದೊಳಗಾಗಿ ೨ ಸಲ ವಾಂತಿ ಮತ್ತು ಭೇದಿಯಾಗಿ ಸುಖವಾಗುವದು. ಅನುಭವಸಿದ್ಧವಾದದ್ದು.

ಇಂತು ಶಿಶುರೋಗ ಚಿಕಿತ್ಸೆಯೆಂಬ ಹದಿನೆಂಟನೇ ಆಶಯವು.

ಇತಿ ತೃತೀಯಭಾಗ ಸಮಾಪ್ತಃ.

## ಸಮಾಪ್ತೋಽಯಂ ಗ್ರಂಥಃ.



ಸ್ವಲ್ಪ ಭಂಡವಾಳದಲ್ಲಿಯೇ ಐಶ್ವರ್ಯವಂತರಾಗುವ ಉಪಾಯ.

## ಸಚಿತ್ರ

# ಕಲಾತರಂಗ.

ಈ ಪುಸ್ತಕದಲ್ಲಿ ಕಪ್ಪು, ಕೆಂಪು, ಊದಾ, ನೀಲಿ ಇಂಕಿ ಮಾಡತಕ್ಕ ಕ್ರಮ, ಬೆಂಕಿಕಡ್ಡಿ, ಪೆನ್ಸಿಲು, ಕಲ್ಸಕ್ಕರೆ, ಮಂಜಿನಗಡ್ಡೆ, ಮೇಣದಬತ್ತಿ, ತರಹೇವಾರಿ ಸಾಬೂನು, ಪನ್ನೀರು, ಅತ್ತರು, ತಾಂಬೂಲವಿನೋದಪಾತ್ರೆ, ಪರಿಮಳ ಸ್ನಾನಚೂರ್ಣ, ಮಲ್ಲಿಗೆಯೆಣ್ಣೆ, ಸಂಪಿಗೆಯೆಣ್ಣೆ, ರಬ್ಬರು ಸ್ಟಾಂಪು, ಬೆಳ್ಳಿಕಲಾಯಿ, ಮರದ ಸಾಮಾನುಗಳ ವಾರ್ನೀಷ್, ಸೆಂಟ್ ಪೌಡರು, ದಂತ ಮಂಜನ, ಮೊಹರುಮಾಡುವ ಕಪ್ಪು, ನೀಲಿ, ಕೆಂಪು ಅರಗು ಇವುಗಳನ್ನು ಮಾಡುವ ಕ್ರಮ, ಜಿಂಜರ್‌ಬೀರ್, ಲೆಮನೆಡ್, ಕಾಪಿ ಇಂಕಿಪೇಪರ್, ಸ್ಮೆಲ್ಲಿಂಗ್‌ಸಾಲ್ಟು, ವಸ್ತ್ರಗಳಿಗೆ ಬಣ್ಣಹಾಕುವರೀತಿ, ಮರ ಗಿಡಗಳಲ್ಲಿ ಹುಳುಗಳನ್ನು ಹೋಗಲಾಡಿಸುವರೀತಿ, ಪಠದಿಂದ ಪ್ರತಿಛಾಯಾ ತೆಗೆಯುವರೀತಿ, ಬೆಳ್ಳಿ ಬಂಗಾರಗಳ ಕಲಾಬತ್ತಿನ ಕೊಳೆ ತೆಗೆಯುವದು, ಬಟ್ಟೆ ಅಥವಾ ನೂಲುಗಳಿಗೆ ಶೀಮೆಯ ಬಣ್ಣಹಾಕುವುದು, ಒಡೆದ ಪಿಂಗಾನಿ ಅಥವಾ ಗಾಜಿನ ಸಾಮಾನುಗಳನ್ನು ಅಂಟಿಸುವಿಕೆ, ಹೆಚ್ಚಾಗಿ ಬೆಣ್ಣೆ ತೆಗೆಯುವರೀತಿ, ಆಳವಾದ ನೀರಿನಲ್ಲಿ ವಸ್ತುಗಳನ್ನು ನೋಡುವಬಗೆ, ಕನ್ನಡಿಗಳಿಗೆ ಗಾಜಿನ ಗ್ಲಾಸಿಗೆ ಗಿಲ್ಟುಮಾಡುವಿಕೆ, ಎಲ್ಲಾವಿಧವಾದ ಗಿಲೀಟು ಕೆಲಸಮಾಡುವಿಕೆ, ಗೆದ್ದಲು ಹಿಡಿಯದಂತೆ ಮಾಡುವದು, ಹಣ್ಣುಗಳನ್ನು ವೃದ್ಧಿಮಾಡುವಿಕೆ, ಗಿಡದಲ್ಲಿನ ಹೂವುಗಳ ಬಣ್ಣಗಳನ್ನು ಬದಲಾಯಿಸುವದು, ಇನ್ನೂ ಅನೇಕ ಅಸಂಖ್ಯಾತವಾದ ಕೈಗಾರಿಕೆ ಮುಂತಾದ ಅನೇಕ ವಿಷಯಗಳೊಡನೆ ವಿವರಿಸಲ್ಪಟ್ಟಿದೆ. ಇದರಲ್ಲಿ ೮ ಭಾಗಗಳಿವೆ. ವರ್ತಮಾನಕಾಲದ ವಿವಿಧ ವ್ಯಾಪಾರಗಳ ಮಾಹಿತಿಯನ್ನೂ, ಅಂತರಿಕ್ಷದ ವಿಶೇಷಗಳನ್ನೂ, ಯಂತ್ರ ಸಾಮಗ್ರಿಯ ಪ್ರಯೋಜನಗಳನ್ನೂ, ಲೋಹ ತೈಲಗಳ ಉತ್ಪತ್ತಿಯನ್ನೂ, ರತ್ನಪರೀಕ್ಷೆ, ವೈದ್ಯಶಾಸ್ತ್ರ ಮೊದಲಾದ ಅತ್ಯಾಶ್ಚರ್ಯಕರ ವಿಷಯಗಳನ್ನೂ, ಕೇಳಿದವರಿಗೆ ಸುಲಭವಾಗಿ ಹೇಳುತ್ತದೆ! ಕನ್ನಡಿಗರಿಗೆ ಕೈಪಿಡಿ !! ಪ್ರತಿಯೊಬ್ಬರೂ ಇದರಲ್ಲಿರುವ ವಿಷಯಗಳನ್ನು ಅನುಸರಿಸಿ ಸ್ವತಂತ್ರ ಜೀವನವನ್ನು ಮಾಡಿಕೊಂಡು ಐಶ್ವರ್ಯವಂತರಾಗಬಹುದು.

ಕ್ರಯ ಪುಸ್ತಕ ೧ಕ್ಕೆ ೧—೪—೦.

ನಮ್ಮ ವಿಳಾಸ:— ಟಿ. ಕೆ. ಕೃಷ್ಣಸ್ವಾಮಿಶೆಟ್ಟಿ,

ಕಳಾನಿಧಿ ಬುಕ್‌ಡಿಪೊ ಪ್ರೊಪ್ರೈಟರ್, ಚಿಕ್ಕಪೇಟೆ, ಬೆಂಗಳೂರು ಸಿಟಿ.